# ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಮಹಾಪ್ರಬಂಧ


ಸಂಶೋಧಕರು

ಜೈರಾಜ

ಮಾರ್ಗದರ್ಶಕರು

ಪ್ರೊ. ಎಸ್. ಸಿ. ಪಾಟೀಲ







ದೃಶ್ಯಕಲಾ ವಿಭಾಗ

ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ


೨೦೧೨

# ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕರು

**ಜೈರಾಜ**

ಮಾರ್ಗದರ್ಶಕರು

**ಪ್ರೊ. ಎಸ್. ಸಿ. ಪಾಟೀಲ**

ಪ್ರಾಧ್ಯಾಪಕರು, ದೃಶ್ಯಕಲಾ ವಿಭಾಗ
ಮತ್ತು
ವಿಶೇಷಾಧಿಕಾರಿಗಳು
ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ,
ಪ್ರಾದೇಶಿಕ ಕಛೇರಿ : ಬೆಂಗಳೂರು



**ಲಲಿತಕಲಾ ನಿಕಾಯ**
ದೃಶ್ಯಕಲಾ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ - ೫೮೩ ೨೭೬
೨೦೧೨

# ಪ್ರಮಾಣ ಪತ್ರ

**ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಪ್ರೊ. ಎಸ್.ಸಿ. ಪಾಟೀಲ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 13/3/17

ಸ್ಥಳ : ಹಂಪಿ

**(ಜೈರಾಜ)**
ಸಂಶೋಧನ ವಿದ್ಯಾರ್ಥಿ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣ ಪತ್ರ

**ಜೈರಾಜ** ಇವರು ಸಾದರಪಡಿಸಿದ **ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ** ಎಂಬ ಶೀರ್ಷಿಕೆಯ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 13/3/17

ಸ್ಥಳ : ಹಂಪಿ

**(ಪ್ರೊ. ಎಸ್. ಸಿ. ಪಾಟೀಲ)**

ಪ್ರಾಧ್ಯಾಪಕರು, ದೃಶ್ಯಕಲಾ ವಿಭಾಗ, ಕನ್ನಡ ವಿ.ವಿ. ಹಂಪಿ

ಮತ್ತು

ವಿಶೇಷಾಧಿಕಾರಿಗಳು

ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ, ಬೆಂಗಳೂರು

# ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

## ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಸ್ವರೂಪ ವ್ಯಾಪ್ತಿ ಮತ್ತು ವೈಧಾನಿಕತೆ

'ಮಾನವನ ಸಾಂಸ್ಕೃತಿಕ ವಿಕಾಸದಲ್ಲಿ ಬರವಣಿಗೆಯ ಉಗಮ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಮನುಷ್ಯನು ತನ್ನ ಮನಸ್ಸಿನಲ್ಲಿರುವ ಭಾವನೆಗಳನ್ನು ಬೇರೆಯವರಿಗೆ ತಿಳಿಸಲು ಭಾಷೆಯನ್ನು ಸೃಷ್ಟಿಸಿಕೊಂಡನು. ತಾನು ನುಡಿದ ಮಾತುಗಳ ಮೂಲಕ ತನ್ನ ಮನಸ್ಸಿನ ಭಾವನೆಗಳನ್ನು ದಾಖಲಿಸುವ ಪ್ರಯತ್ನ ಮಾಡಿದನು. ಆ ಪ್ರಯತ್ನದ ಫಲವಾಗಿ ಬರವಣಿಗೆಯ ಸೃಷ್ಟಿಯಾಯಿತು'. ಅವನ ಭಾವನೆ, ಆಲೋಚನೆ, ಚಿಂತನೆ, ಭಯ, ಆಸೆ, ಅಭಿರುಚಿ ಇತ್ಯಾದಿಗಳು ಇನ್ನೊಬ್ಬರಿಗೆ ತಿಳಿಸಲು ಸಾಧ್ಯವಿರಬಹುದಾದ ಎಲ್ಲಾ ರೀತಿಯ ಪ್ರಯತ್ನಗಳನ್ನು ಉದಾ: – ಚಿಹ್ನೆಗಳು, ಸಂಕೇತಗಳು, ಗುರುತುಗಳು, ರೇಖೆಗಳು, ಚಿತ್ರಗಳು ಮತ್ತು ಬರವಣಿಗೆ ಮುಂತಾದವುಗಳನ್ನು ಬಳಸಲಾರಂಭಿಸಿದನು. ಹೀಗೆ ಮಾನವನ ಭಾವನೆಗಳು ಲಿಪಿಕರಣಗೊಂಡು ಅವು ಬರಹವಾಯಿತು. ಈ ಬರಹಗಳು ದಾಖಲೀಕರಣಗೊಳ್ಳಬೇಕಾದ ಅನಿವಾರ್ಯತೆ ಉಂಟಾದಾಗ ಕಡತಗಳು, ಪುಸ್ತಕಗಳು, ಗ್ರಂಥಗಳು, ಸಾಹಿತ್ಯಗಳ ಉಗಮವಾಗಿರಬೇಕೆನಿಸುತ್ತದೆ. ಹೀಗೆ ರಚನೆಗೊಂಡ ಸಮಗ್ರ ಮಾಹಿತಿಯ ಹಾಳೆಗಳು / ಕಾಗದದ ಮೇಲಿನ ಬರಹಗಳು ಸಂರಕ್ಷಿಸುವ ದೃಷ್ಟಿಯಿಂದ ಕಡತಗಳಿಗೆ, ಪುಸ್ತಕಗಳಿಗೆ, ಗ್ರಂಥಗಳಿಗೆ ಕವಚ ಹಾಕುತ್ತಿದ್ದ ವಿಧಾನವೇ ಇಂದಿನ ರಕ್ಷಾಕವಚ ಅಥವಾ ಮುಖಪುಟದ ಪ್ರಾರಂಭಿಕ ಹಂತವೆಂದು ಗುರುತಿಸಬಹುದು.

ಆದಿ ಮಾನವನಿಂದ ಪ್ರಾರಂಭಗೊಂಡ ಚಿತ್ರಕಲೆ ಆಧುನಿಕ ಮಾನವನವರೆಗೂ ಅನೇಕ ರೂಪಗಳನ್ನು ಆಕಾರಗಳನ್ನು ಪಡೆದುಕೊಂಡು ಬೆಳೆಯುತ್ತ ಬಂದಿದೆ. ಈ ಹಂತಗಳಲ್ಲಿ ಚಿತ್ರಕಲೆ ಅನೇಕ ಹೊಸ ಹೊಸ ಪ್ರಯೋಗಕ್ಕೂ ಒಳಪಟ್ಟಿದೆ ಪ್ರಸ್ತುತ ಚಿತ್ರಕಲೆಯೂ ಪ್ರಯೋಗಶೀಲ ಸೃಜನಶೀಲ ಮತ್ತು ಸಂವೇದನಶೀಲವಾಗಿ

ತನ್ನ ಅಸ್ಥಿತ್ವವನ್ನು ಅಥವಾ ತನ್ನ ಜೀವಂತಿಕೆಯ ಲಕ್ಷಣಗಳನ್ನು ಅನಾವರಣ ಗೊಳಿಸುತ್ತಿದೆ. ಇದಕ್ಕೆ ಕಾರಣ ಆಧುನಿಕ ಜಗತ್ತು ಮತ್ತು ಸ್ಪರ್ಧಾತ್ಮಕ ಮನೋಭಾವನೆ. ಇದು ಇಂದು ಎಲ್ಲಾ ಕ್ಷೇತ್ರಗಳಿಗೂ ಆವರಿಸಿಕೊಂಡಿದೆ. ಚಿತ್ರಕಲಾ ಪ್ರಪಂಚದಲ್ಲಿ ಹೆಚ್ಚು ಕಾಲ್ಪನಿಕ ಚಿಂತನೆಗಳು ಪ್ರಾಯೋಗಿಕ ಕೃತಿಗಳ (ಭೌತಿಕ) ಮೂಲಕ ಅಭಿವ್ಯಕ್ತಿಸುವ ಕ್ರಿಯೆ ಇದೆ. ಆದರೆ ಸಾಹಿತ್ಯ ಕ್ಷೇತ್ರದಲ್ಲಿ ಕಲ್ಪನೆ, ಚಿಂತನೆ, ಯೋಜನೆ, ಭಾವನೆ ಇತ್ಯಾದಿ ವಿಷಯಗಳು ಬರವಣೆಗೆಯ ಮೂಲಕ ಅಭಿವ್ಯಕ್ತಿಯಾಗುತ್ತವೆ. ಎಲ್ಲಾ ಸಾಹಿತ್ಯ ರಚನೆ ಅಥವಾ ಬರವಣಿಗೆಯ ಒಟ್ಟು ಸಾರಾಂಶವನ್ನು ಮತ್ತು ವಿಷಯದ ಕೇಂದ್ರ ಬಿಂಧುವನ್ನು ಯಾವುದಾದರೂ ಚಿತ್ರಕಲೆಯ ಮುಖಾಂತರವೇ ರಕ್ಷಾಕವಚದ ಮೇಲೆ ಅಥವಾ ಮುಖಪುಟದಲ್ಲಿ ಅಭಿವ್ಯಕ್ತಿಸುತ್ತಾರೆ. ಇದು ಅನಾದಿ ಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿದೆ.

ಋಷಿ ಮುನಿಗಳು ರಚಿಸಿದ ತಾಡೋಲೆ, ಭೂರ್ಜ ಪತ್ರ, ಕಡತ ಇತ್ಯಾದಿ ಸಾಹಿತ್ಯ ಗ್ರಂಥಗಳಲ್ಲಿ ಆ ವಿಷಯಕ್ಕೆ ಸಂಬಂಧಿಸಿದ ಚಿತ್ರಗಳನ್ನು ಬಿಡಿಸಿ ಸುಂದರಗೊಳಿಸುತ್ತ ಹೋದಂತೆ ಗ್ರಂಥಗಳು ಸುಲಭವಾಗಿ ಗುರುತಿಸಲು ಸಹಾಯಕವಾಯಿತು ಮತ್ತು ದೇವರು ದೇವಾಲಯಗಳ ಚಿತ್ರವನ್ನು ಮುಖಪುಟದಲ್ಲಿ ತೋರಿಸಿ ಇದು ಯಾವ ದೇವರ, ಅಥವಾ–ದೇವಾಲಯ, ಯಾವ ರಾಜವಂಶಸ್ಥರು ಮನೆತನಕ್ಕೆ ಸೇರಿದೆ ಎಂಬುದನ್ನು ಸುಲಭವಾಗಿ ತಿಳಿಯುತ್ತಿದ್ದರು. ಹಾಗೂ ಗ್ರಂಥಗಳನ್ನು ಸುರಕ್ಷಿತವಾಗಿ ಇಡಲು ಸಹ ಈ ಪದ್ಧತಿ ಅನುಕೂಲವಾಯಿತು. ರಕ್ಷಾಪುಟ ಚಿತ್ರಕಲೆಯು ಮುಂದೆ ಬೆಳೆಯುತ್ತ ಹೋದಂತೆ ಆಕರ್ಷಣೆಯ ಸೌಂದರ್ಯಾತ್ಮಕ, ವಿಷಯಗಳ ಕಡೆಗೂ ಗಮನಹರಿಸಲಾಯಿತು. ಇಂತಹ ಪರಂಪರೆಯಿಂದ ಪ್ರಾರಂಭಗೊಂಡ ರಕ್ಷಾಪುಟ ಚಿತ್ರಕಲೆ ಇಂದು ಆಧುನಿಕ ಗ್ರಂಥಗಳ ಆಧಾರ ಬಿಂಧುವಾಗಿದೆ ಮತ್ತು ಆಕರ್ಷಣೆಯ ವಿಷಯವಾಗಿದೆ. ರಕ್ಷಾಪುಟ ಚಿತ್ರಕಲೆ ಇಲ್ಲದೆ ಯಾವೊಂದು ಗ್ರಂಥವು ಹೆಚ್ಚು ಮಾರಾಟವಾಗುವುದಿಲ್ಲ ಅಥವಾ ಓದುಗರು ನೋಡುಗರು ಅದನ್ನು ಗಮನಿಸುವುದಿಲ್ಲ. ಈ ಎರಡು ಕ್ರಿಯೆ ಇಲ್ಲದೆ ಆ ಗ್ರಂಥವು ಓದುಗ/ನೋಡುಗನ ಪ್ರತಿಕ್ರಿಯೆ ಇಲ್ಲದೆ ಕೃತಿ ಮತ್ತು ಕರ್ತೃ ಯಾರಿಗೂ ಪರಿಚಯವಾಗದೆ ಉಳಿಯುವ ಸಾಧ್ಯತೆಯೂ ಇದೆ. ಹೀಗಾಗಿ ಯಾವುದೇ ಗ್ರಂಥಕ್ಕೆ ಆಕರ್ಷಣೆ, ಕಲಾತ್ಮಕ ಮುಖಪುಟ ಇರುವಂತೆ ಪ್ರತಿಯೊಬ್ಬ ಬರಹಗಾರರು ಗಮನಹರಿಸುವುದು ಇಂದು ಸಹಜಕ್ರಿಯೆಯಾಗಿದೆ. ಅಲ್ಲದೆ ಯಾವುದೇ ಒಂದು ಕೃತಿ–ಕರ್ತೃವನ್ನು ಈ ಮೂಲಕ ಪರಿಚಯಿಸುವ ವಿಧಾನವು ಸಹ ಈ ಮುಖಪುಟವಿನ್ಯಾಸದ ಮೂಲಕ ಮಾಡಬಹುದಾಗಿದೆ. ಮೇಲೆ ತಿಳಿಸಿರುವ ಎಲ್ಲಾ ಅಂಶಗಳ ಹಿನ್ನೆಲೆಯ ಉದ್ದೇಶದಿಂದ ಈ ಅಧ್ಯಯನವನ್ನು ಆಯ್ಕೆಮಾಡಿಕೊಳ್ಳಲಾಗಿದೆ.

**ಉದ್ದೇಶಗಳು**

- ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ ಬೆಳವಣಿಗೆಯ ನೆಲೆ–ಹಿನ್ನೆಲೆಯನ್ನು ಅಧ್ಯಯನಕ್ಕೊಳಪಡಿಸುವ ಉದ್ದೇಶ ಹೊಂದಲಾಗಿದೆ.
- ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿನ ವೈವಿಧ್ಯತೆಗಳನ್ನು ಗುರುತಿಸಿ ಅಧ್ಯಯನ ಮಾಡುವ ಉದ್ದೇಶ ಇಲ್ಲಿ ಈ ಮಹಾಪ್ರಬಂಧ ಹೊಂದಿದೆ.

- ರಕ್ಷಾಪುಟ ಚಿತ್ರಕಲೆಯಲ್ಲಿ ರೇಖೆ, ವಿನ್ಯಾಸ, ವರ್ಣ, ಸಂಯೋಜನೆ, ಸ್ಥಳಾವಕಾಶ, ವಿನ್ಯಾಸ, ಇತ್ಯಾದಿ ದೃಶ್ಯಕಲಾ ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶ ಹೊಂದಲಾಗಿದೆ.
- ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ ಶೀರ್ಷಿಕೆಯಲ್ಲಿ ಅಕ್ಷರ ಕಲೆಯ (ಲಿಪಿಶಾಸ್ತ್ರ) ಗಾತ್ರ, ಅಳತೆ, ಪ್ರಮಾಣ, ವರ್ಣ ಹಾಗೂ ವಿನ್ಯಾಸದ ಸೂಕ್ಷ್ಮತೆಗಳನ್ನು ಗಮನಿಸುವ ಉದ್ದೇಶ ಹೊಂದಿದೆ.
- ದೃಶ್ಯಕಲಾ ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿ ವಿವಿಧ ಕಲಾಕೃತಿಗಳ ಬಳಕೆಯ ಹಿನ್ನೆಲೆ, ಅವುಗಳ ಸಂಯೋಜನೆಯ ತಾತ್ವಿಕ, ಸೈದ್ಧಾಂತಿಕ ನೆಲೆಯ ಆಶಯಗಳನ್ನು ಅಧ್ಯಯನ ಮಾಡುವ ಉದ್ದೇಶವು ಇಲ್ಲಿದೆ.
- ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ ರಚನೆಯಲ್ಲಾದ ಬದಲಾವಣೆ ಮತ್ತು ವಿವಿಧ ಘಟ್ಟಗಳನ್ನು ಗುರುತಿಸಿ ಅವುಗಳನ್ನು ವಿಶ್ಲೇಷಿಸುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ.
- ಕನ್ನಡ ಗ್ರಂಥಗಳ ರಚನೆಯಲ್ಲಿ ಹೊಸ ತಂತ್ರಜ್ಞಾನ, ಮುದ್ರಣ, ಅವಿಷ್ಕಾರಗಳ ಉಪಯೋಗಗಳು ಮತ್ತು ರಕ್ಷಾಪುಟ ಚಿತ್ರಕಲೆಯಲ್ಲಿ ಅವುಗಳ ಪರಿಣಾಮಗಳನ್ನು ಅಧ್ಯಯನ ಮಾಡುವ ಆಲೋಚನೆಯು ಇಲ್ಲಿದೆ.
- ಸಮಕಾಲೀನ ಸಂದರ್ಭದ ರಕ್ಷಾಪುಟ ಚಿತ್ರಕಲೆಯ ಶೈಲಿ, ತಾಂತ್ರಿಕತೆಯ ವಿನ್ಯಾಸ, ವೈವಿಧ್ಯತೆ ಮುಂತಾದವುಗಳ ಬಗ್ಗೆ ಅರಿತುಕೊಳ್ಳುವ ಉದ್ದೇಶವು ಈ ಅಧ್ಯಯನದಲ್ಲಿ ರೂಪಿಸಲಾಗುವುದು.
- ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ ಮತ್ತು ವಾಣಿಜ್ಯೀಕರಣದ ಅವಶ್ಯಕತೆಗಳ ಕುರಿತು ಅಧ್ಯಯನ ಮಾಡುವ ಉದ್ದೇಶವಿದೆ.

ರೇಖೆಚಿತ್ರವು ಕಲೆಯ ತಾಯಿ (Line Drawing is Mother of Visual Art) ಕಲಾವಿದ ನೋಡಿದ್ದು, ಅನುಭವಿಸಿದ್ದು, ಆಲೋಚಿಸಿದ್ದು ಅಭಿವ್ಯಕ್ತಿಗೊಳಿಸಬೇಕಾದರೆ ಮೊದಲ ರೇಖೆಗಳನ್ನು ಉಪಯೋಗಿಸುತ್ತಾನೆ. ನಂತರವೇ ಎಲ್ಲಾ ವಿಧಾನಕ್ಕೆ ಮೊರೆ ಹೋಗುತ್ತಾನೆ. ರೇಖೆಗಳು ಚಿತ್ರಕಲೆಯ ಆಧಾರ ಸ್ತಂಭ ಮತ್ತು ಪ್ರಾರಂಭದ ಹಂತ. ಅತಿ ಸರಳ ಮತ್ತು ಕಡಿಮೆ ರೇಖೆಗಳನ್ನು ಬಳಸಿ ಶ್ರೇಷ್ಠ ಕಲಾ ಕೃತಿಗಳು ರಚನೆಗೊಂಡಿವೆ. ಇಂತಹ ಹಿನ್ನೆಲೆಯಲ್ಲಿ ರಚನೆಗೊಂಡ ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಗಳನ್ನು ಸಂಗ್ರಹಿಸಿಕೊಂಡು ಅವುಗಳನ್ನು ವರ್ಗೀಕರಿಸಿ ಸಂಯೋಜನೆ, ಮತ್ತು ಸೌಂದರ್ಯಾತ್ಮಕ ನೆಲೆಯಲ್ಲಿ ವಿಶ್ಲೇಷಿಸಲಾಗುವುದು.

ಕನ್ನಡ ಭಾಷೆಯಲ್ಲಿ ಪ್ರಕಟಗೊಂಡ ಲಲಿತಕಲಾ ಗ್ರಂಥಗಳು ಚಿತ್ರಕಲೆಯ ಹತ್ತು ಹಲವು/ವಿವಿಧ ಪ್ರಕಾರಗಳನ್ನು ತನ್ನ ಮುಖಪುಟಕ್ಕೆ ಬಳಸಿಕೊಂಡಿದೆ. ಕನ್ನಡ ಗ್ರಂಥಗಳ ಮುಖಪುಟದಲ್ಲಿ ಚಿತ್ರಕಲೆ ಬಳಸಿಕೊಂಡ ಉದ್ದೇಶ, ಅರ್ಥ, ಮಹತ್ವ ಮತ್ತು ಅದರ ಪರಿಣಾಮಗಳು ಹಾಗೂ ಅದೊಂದು ಕಲೆ ಹಿನ್ನೆಲೆಯಲ್ಲಿ ಆಯ್ಕೆ ಮಾಡಿಕೊಂಡು ಕಲಾ ಶೈಲಿ ವರ್ಣಗಾರಿಕೆ, ಸಂಯೋಜನೆ, ಕಲಾತ್ಮಕ ಮೌಲ್ಯ

ಇತ್ಯಾದಿ ವಿಷಯಗಳು ವಿಮರ್ಶೆಗೆ ಒಳಪಡಿಸಲಾಗುವುದು. ಕಲೆಯು ಹಂತ ಹಂತವಾಗಿ ಬೆಳೆಯುತ್ತ ತನ್ನ ಹಳೆಯ ರೆಕ್ಕೆ ಪುಕ್ಕಗಳನ್ನು ಕಳಚಿಕೊಂಡು ಹೊಸರೆಕ್ಕೆ ಪುಕ್ಕಗಳನ್ನು ಹಚ್ಚಿಕೊಂಡು ಬೆಳೆಯುತ್ತಲಿದೆ. ಹಳೆಯ ವಿಧಾನಗಳನ್ನು ದೂರತಳ್ಳಿ ಹೊಸ ಹೊಸ ವಿಧಾನಕ್ಕೆ ತನ್ನನ್ನು ತಾನು ಚಾಚಿಕೊಳ್ಳುತ್ತಲಿದೆ ಮತ್ತು ಹೊಸವಿಧಾನವು ಬಾಚಿಕೊಳ್ಳುತ್ತಲಿದೆ. ಈ ಆಧುನಿಕತೆ ಇಂದು ಕಲೆಯ ಎಲ್ಲಾ ಮಾಧ್ಯಮಗಳಲ್ಲಿ ಪಸರಿಸಿಕೊಂಡಿದೆ. ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿ ಕಂಡು ಬರುವ ಅಮೂರ್ತಕಲೆ ಮತ್ತು ಆಧುನಿಕಕಲೆ ಒಂದೆಡೆ ಸೇರಿಸಿ ಅವುಗಳ ಮಾಧ್ಯಮಗಳು ವಸ್ತು ವಿಷಯ ವಿನ್ಯಾಸದ ಹಿನ್ನೆಲೆ ಉದ್ದೇಶ, ಅರ್ಥ, ವ್ಯಾಪ್ತಿ ಅದರ ಸೂಕ್ಷ್ಮತೆ ಹಾಗೂ ಸಾಧಕ ಬಾಧಕಗಳ ಬಗ್ಗೆ ವಿವೇಚಿಸಲಾಗುವುದು.

**ಅಧ್ಯಯನದ ಸ್ವರೂಪ**

ಕಲಾವಿದನ ಕೈಚಳಕದಿಂದ ರಚನೆಗೊಂಡ ಒಂದು ರಕ್ಷಾಪುಟ ಚಿತ್ರ ಪ್ರತಿಯೊಬ್ಬ ಓದುಗನಿಗೆ ಅಥವಾ ನೋಡುಗನಿಗೆ ಹೊಸ ಕಲ್ಪನೆಯೊಂದನ್ನು ಮೂಡಿಸುತ್ತದೆ, ಆಧುನಿಕ ಪುಸ್ತಕ/ಗ್ರಂಥಗಳು ರಕ್ಷಾಪುಟ ಚಿತ್ರ ಆಧಾರವಿಲ್ಲದೆ ಏನನ್ನೂ ಹೇಳಲು ಸಾಧ್ಯವಿಲ್ಲ. ಆಧುನಿಕ ಮಾರುಕಟ್ಟೆಯಲ್ಲಿ ರಕ್ಷಾಪುಟ ಚಿತ್ರಕಲೆಯೂ ಗ್ರಂಥಕ್ಕೆ ಆಧಾರಸ್ಥಂಭವಿದ್ದಂತೆ, ಒಂದರ್ಥದಲ್ಲಿ ಅದು ಗ್ರಂಥದ ಕನ್ನಡಿ ಹಾಗೆಂದು ಗ್ರಂಥದ ಒಳಗಡೆ ಏನಿದೆಯೋ ಆದನ್ನೆಲ್ಲವನ್ನೂ ತೋರಿಸುವುದಿಲ್ಲ/ತೋರಿಸುವುದೂ ಅಲ್ಲ. ಒಟ್ಟಾರೆ ಗ್ರಂಥದ ಒಳಗಡೆ ಅಡಗಿರುವ ಮೂಲಾಂಶವನ್ನು ಅಥವಾ ಗ್ರಂಥದ ಸಾರಾಂಶವನ್ನು ಅತ್ಯಂತ ಕಡಿಮೆ ರೇಖೆಗಳ ಮೂಲಕ ಚಿತ್ರಿಸಿ, ವರ್ಣಸಂಯೋಜಿಸಿ ರಕ್ಷಾಪುಟ ಚಿತ್ರ ಒಂದು ಸಿದ್ಧಗೊಳಿಸುತ್ತಾರೆ, ಈ ಹಿನ್ನೆಲೆಯಲ್ಲಿ ರಚನೆಗೊಂಡ ಕನ್ನಡ ಗ್ರಂಥಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಂಡು ಅವುಗಳ ರಕ್ಷಾಪುಟ ಚಿತ್ರಕಲೆ ವರ್ಣ ವಿನ್ಯಾಸ, ಸಂಯೋಜನಾದೃಷ್ಟಿ ಸ್ಥಳಾವಕಾಶ ಇತ್ಯಾದಿ ಅಂಶಗಳನ್ನು ಸಂಶೋಧಿಸುವ ಕಾರ್ಯಕ್ಕಾಗಿ ಮತ್ತು ಅಧ್ಯಯನದ ಅನುಕೂಲತೆಗಾಗಿ ಒಂಬತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗುವುದು ಹಾಗೂ ಪ್ರತಿಯೊಂದು ಅಧ್ಯಾಯದ ವಿಷಯ ಕುರಿತಂತೆ ಆದರ ಸಂಕ್ಷಿಪ್ತ ರೂಪುರೇಷಗಳ ವಿವರವನ್ನು ಈ ಕೆಳಗೆ ನೋಡಬಹುದು.

**ಅಧ್ಯಾಯ – ಒಂದು : ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ**

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆ ಕುರಿತಾದ ವಿವರಣೆಯನ್ನು ಮಾಡಲಾಗುವುದು.

**ಅಧ್ಯಾಯ – ಎರಡು : ರಕ್ಷಾಪುಟ ಚಿತ್ರಕಲೆಯ ನೆಲೆ–ಹಿನ್ನೆಲೆ ಮತ್ತು ಬೆಳವಣಿಗೆ**

ಮುಖಪುಟವು ಗ್ರಂಥದ ಒಂದು ಕವಚವಾಗಿದ್ದು, ಹಲವಾರು ವಿಷಯಗಳ ಸಮಗ್ರ ಹೊದಿಕೆಯಾಗಿ ರೂಪುಗೊಂಡಿದೆ, ಪ್ರಾಚೀನ ಕಾಲದಿಂದಲೂ ಋಷಿಮುನಿಗಳು ತಾವು ಬರೆದಿರುವ ಗ್ರಂಥಗಳನ್ನು ಜೋಪಾನವಾಗಿಡಲು ತಾಳೇಗರಿ ಅಥವಾ ಬಟ್ಟೆಯಿಂದ ಕಟ್ಟುತ್ತಿದ್ದರು/ಸುತ್ತುತ್ತಿದ್ದರು. ಇಂತಹ ಪರಂಪರೆಯಿಂದ

ಹುಟ್ಟಿಕೊಂಡ ಮುಖಪುಟ ಚಿತ್ರಕಲೆಯ ಇತಿಹಾಸ ಅದರ ನೆಲೆ-ಹಿನ್ನೆಲೆ ಹಾಗೂ ಬೆಳವಣಿಗೆ ಇತ್ಯಾದಿ ಮಹತ್ವದ ಈ ಕೆಳಗಿನ ಅಂಶಗಳನ್ನು ಈ ಅಧ್ಯಾಯದಲ್ಲಿ ಬೆಳಕಿಗೆ ತರಲಾಗುವುದು.

೧) ವಿವಿಧ ದೇಶಗಳಲ್ಲಿನ ಮುಖಪುಟದ ಪರಿಕಲ್ಪನೆ/ನೆಲೆ-ಹಿನ್ನೆಲೆ. ೨) ಭಾರತದಲ್ಲಿ ಮುಖಪುಟದ ಪರಿಕಲ್ಪನೆ ಮತ್ತು ವಿಕಾಸ. ೩) ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ (೧೮೦೦ ರಿಂದ ೧೯೫೦ ರವರೆಗೆ) ರಕ್ಷಾಪುಟವಿನ್ಯಾಸ ಪರಿಕಲ್ಪನೆ ಮತ್ತು ಬೆಳವಣಿಗೆಯ ಸ್ಥೂಲನೋಟ. ೪) ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ (೧೯೫೧ ರಿಂದ) ಪುಸ್ತಕ ಮುಖಪುಟಗಳ ವಿನ್ಯಾಸ/ ರಚನೆ. ೫) ಪುಸ್ತಕ ಕಟ್ಟುಗ(ಬೈಂಡಿಂಗ್)ಳಲ್ಲಿ ವಿವಿಧ ಪ್ರಕಾರಗಳು. ೬) ವಿವಿಧ ಆಕಾರಗಳಲ್ಲಿ/ ನಮೂನೆಯಲ್ಲಿನ ರಕ್ಷಾಪುಟಗಳು. ೭) ಜಾಗತೀಕರಣದ ಮಾದರಿಯ ಪುಸ್ತಕ ಮುಖಪುಟಗಳು/ ಕಟ್ಟುಗಳು.

**ಅಧ್ಯಾಯ – ಮೂರು : ಚಿತ್ರಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಕನ್ನಡದಲ್ಲಿ ಚಿತ್ರಕಲಾ ಗ್ರಂಥಗಳು ಅನೇಕ ಪ್ರಕಾರಗಳಲ್ಲಿ ಹಾಗೂ ನೂರಾರು ಸಂಖ್ಯೆಯಲ್ಲಿ ಪ್ರಕಟವಾಗಿವೆ. ಹೀಗೆ ಪ್ರಕಟಗೊಂಡ ಹಲವು ಪ್ರಾತಿನಿಧಿಕ ಗ್ರಂಥಗಳನ್ನು ಆಯ್ಕೆಮಾಡಿಕೊಂಡು ದಶಕಗಳಾಗಿ (ಕಾಲಾವಧಿಯಪರಿಧಿಯೊಳಗೆ) ವಿಂಗಡಿಸಿಕೊಂಡು ಅವುಗಳ ಮುಖಪುಟ ಚಿತ್ರಕಲೆಯಲ್ಲಿ ಬಳಸಲಾಗಿದ್ದ ಚಿಹ್ನೆ, ಚಿತ್ರ ಮತ್ತು ಸಂಕೇತಕ್ಕೆ ಪ್ರಾಮುಖ್ಯತೆಕೊಟ್ಟು ಅವುಗಳಲ್ಲಿರುವ ವಸ್ತು, ವಿಷಯ, ವರ್ಣವಿನ್ಯಾಸ, ಸಂಯೋಜನೆ ಇತ್ಯಾದಿ ವಿಷಯಗಳ ಬಗ್ಗೆ ವಿವರವಾಗಿ ಚರ್ಚೆಗೆ ಒಳಪಡಿಸಲಾಗುವುದು ಮತ್ತು ಚಿತ್ರಕಲಾ ಗ್ರಂಥಗಳ ಮುಖಪುಟ ವಿನ್ಯಾಸದಲ್ಲಿ ಅಕ್ಷರಕಲೆಯನ್ನು ಬಳಸಿಕೊಂಡಿದ್ದು ಆ ಗ್ರಂಥಕ್ಕೆ ಹೆಚ್ಚು ಆಕರ್ಷಣೆ ಮತ್ತು ಕಲಾತ್ಮಕತೆಯ ದೃಷ್ಟಿಕೋನವನ್ನು ನೀಡಿ ಓದುಗನಿಗೆ ಅದು ಸರಳವಾಗಿ ಅರ್ಥವಾಗುವಂತೆ ಮತ್ತು ಇತರೆ ಮುಖಪುಟಗಳಿಗಿಂತ ಇಂತಹ ಮುಖಪುಟವು ಹೇಗೆ ಭಿನ್ನವಾಗಿ ನಿಲ್ಲುತ್ತದೆ. ಅದಕ್ಕೆ ಕಾರಣಗಳು ಯಾವುವು ಮತ್ತು ಮಹತ್ವಗಳು ಹಾಗೂ ಅದರ ಪ್ರಯೋಜನಗಳು ಇತ್ಯಾದಿ ವಿಷಯಗಳು ಈ ಅಧ್ಯಾಯದಲ್ಲಿ ತಾತ್ವಿಕ ಮತ್ತು ತಾಂತ್ರಿಕ ಪರಿಕಲ್ಪನೆ ನೆಲೆಯಲ್ಲಿ ಚರ್ಚಿಸಲಾಗುವುದು.

**ಅಧ್ಯಾಯ – ನಾಲ್ಕು : ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಶಿಲ್ಪಕಲಾ ಕ್ಷೇತ್ರವು ಆಯಾ ಕಾಲಘಟ್ಟದಲ್ಲಿ ಕಂಡು ಬಂದ ತಾಂತ್ರಿಕ ಮಾಧ್ಯಮವು ಹೆಚ್ಚು ಪಾಲು ಪ್ರಯೋಗಕ್ಕೆ ಒಳಪಡಿಸಿಕೊಂಡಿದೆ ಎಂಬುದು ಅನೇಕ ಅಧ್ಯಯನದಿಂದ ತಿಳಿದುಬಂದಿದೆ. (ಪ್ರಾಚೀನ ಕಲಾ ಮಾಧ್ಯಮದಿಂದ ಹಿಡಿದ ಪ್ರಸ್ತುತ ಕಲಾ ಮಾಧ್ಯಮದವರೆಗೆ) ಆದಿಮಾನವನ ಕಲಾ ಮಾಧ್ಯಮದಿಂದ ಆಧುನಿಕ ಕಲಾ ಮಾಧ್ಯಮದವರೆಗೆ ಕಾಲಕಾಲಕ್ಕೆ ಬಂದ ತಾಂತ್ರಿಕ ಮಾಧ್ಯಮವು ಶಿಲ್ಪಕಲಾವಿದರು ಅದನ್ನು ಕಲಾ ಪರಿಕರವಾಗಿ ಸಮರ್ಥವಾಗಿ ಉಪಯೋಗಿಸಿಕೊಂಡಿದ್ದಾರೆ. ಕಲ್ಲು, ಮಣ್ಣು ಮರದಿಂದ ಹಿಡಿದು ಕ್ಯಾಮೆರಾ, ಕಂಪ್ಯೂಟರ್ ವರೆಗೆ ಎಲ್ಲವು ಶಿಲ್ಪಕಲಾ ಪರಿಕರವಾಗಿ ಆಯಾ ಕಾಲದಲ್ಲಿ ಅದನ್ನು ಕಲಾವಿದರು ಬಳಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ೧೯೭೫ ರಿಂದ ೨೦೧೫ ಕಾಲಾವಧಿಯವರೆಗೆ

ಕನ್ನಡ ಶಿಲ್ಪಕಲಾ ಗ್ರಂಥಗಳು ಹತ್ತು ಹಲವು ಪ್ರಕಾರಗಳಲ್ಲಿ ಪ್ರಕಟಗೊಂಡಿದ್ದು, ಈ ಅವಧಿಯ (ದಶಕಗಳಾಗಿ ವಿಂಗಡಿಸಿಕೊಂಡು) ಗ್ರಂಥಗಳ ಮುಖಪುಟದಲ್ಲಿ ವಿವಿಧ ಮಾಧ್ಯಮದಲ್ಲಿ ರಚಿಸಿದ ಶಿಲ್ಪಗಳ, ಶಿಲ್ಪಿಗಳ ಭಾವ ಛಾಯಾಚಿತ್ರಗಳನ್ನು ಬಳಸಿಕೊಂಡ ಉದ್ದೇಶ, ಅರ್ಥ, ಮಹತ್ವ ಮತ್ತು ಅದರ ಪರಿಣಾಮಗಳು ಹಾಗೂ ಕಲಾತ್ಮಕ ಮೌಲ್ಯ ಇತ್ಯಾದಿ ವಿಷಯಗಳೊಂದಿಗೆ ತಾತ್ವಿಕ ಮತ್ತು ತಾಂತ್ರಿಕ ಪರಿಕಲ್ಪನೆ ನೆಲೆಯಲ್ಲಿ ಈ ಅಧ್ಯಾಯದಲ್ಲಿ ವಿಮರ್ಶೆಗೆ ಒಳಪಡಿಸಲಾಗುವುದು.

**ಅಧ್ಯಾಯ – ಐದು : ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ರಕ್ಷಾಪುಟವೊಂದು ಅಥವಾ ಪುಸ್ತಕ ಹೊದಿಕೆಯು ಕೇವಲ ಪುಟಗಳ ರಕ್ಷಣೆ ಮಾತ್ರ ಮಾಡುವುದಿಲ್ಲ! ಅದರ ಜೊತೆಗೆ ಪುಸ್ತಕದ ಬಗ್ಗೆ ಮಾಹಿತಿ ನೀಡುತ್ತದೆ ಹಾಗೂ ಪುಸ್ತಕದ ಒಳಗಿನ ಬರಹದ ಬಗ್ಗೆ ಸಾರಾಂಶ ನೀಡುತ್ತದೆ. ಅಲ್ಲದೆ ರಕ್ಷಾಪುಟವೊಂದು ಕೃತಿಯ ಬಗ್ಗೆ ಮೌನವಾಗಿ ಜಾಹೀರಾತು ಮಾಡುವ ಕಲೆ ಹೊಂದಿದೆ. ಕಲೆಯು ಯಾವುದೇ ಪ್ರಕಾರದ್ದಾಗಿರಲಿ ಅದು ನಿರಂತರ ಬೆಳೆಯುತ್ತಲಿದೆ. ಲಲಿತಕಲೆಯ ಎಲ್ಲಾ ಮಾಧ್ಯಮಗಳಲ್ಲಿ ಇಂದು ಆಧುನಿಕತೆ ಪಸರಿಸಿ ಕೊಂಡಿದೆ. ಕನ್ನಡದ ನಾಟಕಕಲೆಯೂ ಇದರಿಂದ ಹೊರತಾಗಿಲ್ಲ. ೧೯೦೦ ರಿಂದ ೨೦೧೫ ವರೆಗೆ ಹಲವಾರು ಪುಸ್ತಕ ಮುದ್ರಣಕಂಡಿವೆ. ಅದರಂತೆ ನಾಟಕ ಗ್ರಂಥಗಳ ಮುಖಪುಟ ಚಿತ್ರಕಲೆ ಕರ್ನಾಟಕದಲ್ಲಿ ಹೇರಳವಾಗಿ ಲಭ್ಯವಿದೆ. ಕನ್ನಡ ನಾಟಕ ಗ್ರಂಥಗಳ ಮುಖಪುಟ ಚಿತ್ರಕಲೆ ಒಂದೆಡೆ ಸೇರಿಸಿ ಅವುಗಳನ್ನು ಒಂದೊಂದು ದಶಕದ ಕಾಲಾವಧಿಯ ಆಧಾರದ ಮೇಲೆ ವಿಂಗಡಿಸಿಕೊಂಡು. ವಿನ್ಯಾಸದ ಹಿನ್ನೆಲೆ ಉದ್ದೇಶ, ಅರ್ಥ, ತಾತ್ವಿಕತೆ, ತಾಂತ್ರಿಕ ಬಗ್ಗೆ ಮತ್ತು ಸಮಕಾಲೀನತೆಗೆ ಅವುಗಳ ಮಹತ್ವ ಮತ್ತು ಸೂಕ್ತತೆ ಕುರಿತು ಈ ಅಧ್ಯಾಯದಲ್ಲಿ ನೋಡಲಾಗುವುದು/ ವಿವೇಚಿಸಲಾಗುವುದು.

**ಅಧ್ಯಾಯ – ಆರು : ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಒಂದು ಪರಿಪೂರ್ಣ ರಕ್ಷಾಪುಟ ಚಿತ್ರ ಮೇಲೆ ಚಿನ್ಹೆ ಅಥವಾ ಅಕ್ಷರಗಳ ಒಕ್ಕೂಟದಿಂದ ಜೋಡಿಸಿ ಹೊಂದಿಸಿದಾಗ ರಕ್ಷಾಪುಟ ಚಿತ್ರ ಎಷ್ಟು ಸಾಧ್ಯವೋ ಅಷ್ಟು ಪರಿಣಾಮ ಪ್ರತಿಫಲವು ಗೋಚರಿಸಬೇಕು ರಕ್ಷಾಪುಟ ಚಿತ್ರ ಅಗತ್ಯವಾಗಿ ತುಂಬಾ ಸರಳವಾಗಿ ಕಾಣಲು ಅಥವಾ ಆ ಕೃತಿಯ ಹೆಸರು ಓದುಗರ ಮನಸ್ಸಿನಲ್ಲಿ ಉಳಿಯಲು ದೃಷ್ಟಾಂತದಲ್ಲಿ ಸ್ಪಷ್ಟತೆಯು ಮತ್ತು ಸಂಕ್ಷಿಪ್ತ ವಿವರಣೆ ಇರುವಂತೆ ಮಾಡಬೇಕು. ಇಲ್ಲಿನ ವಿಶ್ಲೇಷಣೆಗೆ ಒಳಪಡಿಸಿಕೊಂಡ ಪ್ರಾತಿನಿಧಿಕ ಗ್ರಂಥಗಳ ಮುಖಪುಟ ವಿನ್ಯಾಸದಿಂದ ಬೆಳಕಿಗೆ ತರುವ ಅತಿಮುಖ್ಯ ಅಂಶಗಳು. ಮುಖಪುಟ ಸಂಯೋಜನಾ ವೈಖರಿ, ಶೀರ್ಷಿಕೆ ಅಕ್ಷರಗಳಲ್ಲಿ ಹೊಸತನ, ವರ್ಣಲೇಪನ ವಿಧಾನ, ವಿನ್ಯಾಸದ ತತ್ವ ಗುರುತಿಸಿಕೊಳ್ಳಲಾಗುವುದು ಹಾಗೂ ಈ ಅಧ್ಯಾಯದಲ್ಲಿ ಚಿತ್ರಕಲೆಯ ಪ್ರಕಾರಗಳಾದ ರೇಖಾಚಿತ್ರ, ನಿಸರ್ಗಚಿತ್ರ, ನೈಜಚಿತ್ರಕಲೆ, ನವ್ಯ ಮತ್ತು ಅಮೂರ್ತಕಲೆ, ಭಾವಚಿತ್ರ, ಛಾಯಚಿತ್ರ, ಚಿನ್ಹೆ, ಸಂಕೇತಗಳು ಮತ್ತು ಎಪ್ಪತ್ತರ ದಶಕದಲ್ಲಿ ರಕ್ಷಾಪುಟ ವಿನ್ಯಾಸ ಪದ್ಧತಿಯಲ್ಲಾದ ಬದಲಾವಣೆಗಳನ್ನು ಹೇಗೆ ಬಳಸಿಕೊಳ್ಳಲಾಗಿದೆ ಎಂಬುವುದನ್ನು ವಿಶ್ಲೇಷಣೆಗೆ ಒಳಪಡಿಸಿಕೊಳ್ಳಲಾಗುವುದು.

**ಅಧ್ಯಾಯ – ಏಳು : ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ನೃತ್ಯ ಮತ್ತು ಸಂಗೀತ ಗ್ರಂಥಗಳು ಹತ್ತು ಹಲವು ಚಿತ್ರಕಲೆಯ ವಿವಿಧ ಪ್ರಕಾರಗಳನ್ನು ತನ್ನ ಮುಖಪುಟಕ್ಕೆ ಬಳಸಿಕೊಂಡಿದೆ. ಈ ಗ್ರಂಥಗಳ ಮುಖಪುಟದಲ್ಲಿ ಚಿತ್ರಕಲೆ ಬಳಸಿಕೊಂಡ ಉದ್ದೇಶ, ಅರ್ಥ, ಮಹತ್ವ ಮತ್ತು ಅದರ ಪರಿಣಾಮಗಳು ಹಾಗೂ ಅದೊಂದು ಕಲೆ ಹಿನ್ನೆಲೆಯಲ್ಲಿ ಆಯ್ಕೆ ಮಾಡಿಕೊಂಡು ಕಲಾ ಶೈಲಿ ವರ್ಣಗಾರಿಕೆ, ಸಂಯೋಜನೆ, ಕಲಾತ್ಮಕ ಮೌಲ್ಯ ಇತ್ಯಾದಿ ವಿಷಯಗಳು ಈ ಅಧ್ಯಾಯದಲ್ಲಿ ವಿಮರ್ಶೆಗೆ ಒಳಪಡಿಸಲಾಗುವುದು. ಹಾಗೂ ಒಂದು ರಕ್ಷಾಪುಟ ಚಿತ್ರಕಲೆಯಲ್ಲಿ ಪದಜೋಡಣೆ ಅಥವಾ ಅಕ್ಷರಗಳ ಜೋಡಣೆ, ಅದರ ಬಣ್ಣ, ಅಲಂಕರಣೆ, ಇವುಗಳ ಸಮತೋಲನೆ ಇಲ್ಲದೇ ಹೋದರೆ ಆ ರಕ್ಷಾಪುಟ ಚಿತ್ರಕಲೆ ಕಣ್ಣಿದ್ದೂ ಕಾಣದಂತೆ ವ್ಯರ್ಥವಾಗಿ ಬಿಡುತ್ತದೆ. ಅದೇ ರಕ್ಷಾಪುಟ ಚಿತ್ರಕಲೆಯಲ್ಲಿ ಈ ಎಲ್ಲಾ ಅಂಶಗಳು ಸರಿಯಾಗಿ ಸಮತೋಲನವಾಗಿ ಜೋಡಣೆಯಾದಲ್ಲಿ ನೋಡುಗರನ್ನು ಮಂತ್ರಮುಗ್ಧರನ್ನಾಗಿಸುವ ಸಾಮರ್ಥ್ಯ ಹೊಂದಿರುತ್ತದೆ ಹಾಗೂ ಓದುಗರನ್ನು ಅಥವಾ ಗ್ರಾಹಕರನ್ನೂ ಆಕರ್ಷಿಸುವಲ್ಲಿ ಯಶಸ್ವಿಯಾಗುತ್ತದೆ. ಇವುಗಳೆಲ್ಲವು ಈ ಅಧ್ಯಾಯದಲ್ಲಿ ನೋಡಲಾಗುವುದು.

**ಅಧ್ಯಾಯ – ಎಂಟು : ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ ಗ್ರಂಥಕೃತಿಗಳ ಮುದ್ರಣಗಾರಿಕೆಯ ಕೆಲಸ ಸಾಮಾನ್ಯವಾಗಿತ್ತು. ಬರಹಗಾರರು, ಪ್ರಕಾಶಕರು, ಮುದ್ರಕವರ್ಗದವರಿಗೆಲ್ಲ ಗ್ರಂಥರಚನೆ ಮತ್ತು ಮುದ್ರಣದಲ್ಲಿ ಆಸಕ್ತಿ ಇತ್ತೆ ವಿನಃ ಪುಸ್ತಕದ ರಕ್ಷಾಪುಟ/ ರಕ್ಷಾಕವಚ/ ಮುಖಪುಟಗಳಲ್ಲಿ ಕಲಾತ್ಮಕತೆಯ ತೋರ್ಪಡಿಕೆ ಮತ್ತು ಗ್ರಂಥಮುಖ ಸೌಂದರ್ಯದ ಕಡೆಗೆ ವಿಶೇಷವಾಗಿ ನೋಡುವ ದೃಷ್ಟಿಕೋನ ಬೆಳೆಯಲಿಲ್ಲ. ಈ ಕಾರಣದಿಂದ ಆ ಕಾಲಘಟದಲ್ಲಿ (೧೯೦೦–೧೯೫೦) ಮುದ್ರಣಗೊಂಡ ಪ್ರಾತಿನಿಧಿಕ ಗ್ರಂಥಗಳ ಆಯ್ಕೆ ಮಾಡಿಕೊಂಡು ಅವುಗಳನ್ನು ಒಂದೊಂದು ದಶಕದ ಕಾಲಾವಧಿಯ ಆಧಾರದ ಮೇಲೆ ವರ್ಗೀಕರಿಸಿಕೊಂಡು ಅವುಗಳ ಸಾಧಕ– ಬಾಧಕ ಅವಲೋಕನ ಮಾಡಲಾಗುವುದು. ಸ್ವಾತಂತ್ರ್ಯೋತ್ತರ ಕರ್ನಾಟದಲ್ಲಿ (೧೯೫೧–೨೦೦೦) ಸಾಹಿತ್ಯ ಚಟುವಟಿಕೆ ಹೊಸ ಹುರುಪಿನಿಂದ ಬೆಳೆಯಲಾರಂಬಿಸಿ ಹೊಸ ಹೊಸ ಮುದ್ರಣ ಯಂತ್ರಗಳು ಬಳಕೆಗೆ ಬಂದವು. ಮುಖಪುಟ ಚಿತ್ರಗಾರರ, ವಿನ್ಯಾಸಗಾರರ ಸಂಖ್ಯೆ ಹೆಚ್ಚಾಯಿತು ಸಾಹಿತ್ಯ ಕೃತಿಗಳ ಮುಖಪುಟ/ರಕ್ಷಾಪುಟ ರಚನೆಯಲ್ಲಿ ಹೊಸ ಮಾದರಿಯ ಕಲೆಗಳು ಹೊರಹೊಮ್ಮಿದವು ಮತ್ತು ವರ್ಣಗಳ ಬಳಕೆಯಲ್ಲಿ, ತಂತ್ರಗಾರಿಕೆಯಲ್ಲಿ, ಅಕ್ಷರ ಆಕಾರಗಳಲ್ಲಿ ಹಾಗೂ ಕೃತಿಯ ಅಳತೆ, ಆಕಾರಗಳಲ್ಲಾದ ಬದಲಾವಣೆಗಳನ್ನು ದಶಕದ ಕಾಲಾವಧಿಯಾಗಿ ಗುರ್ತಿಸಿ ಇಲ್ಲಿ ವಿಮರ್ಶಿಸಲಾಗುವುದು.

**ಅಧ್ಯಾಯ – ಒಂಬತ್ತು : ಸಮಾರೋಪ**

ಈ ಮೇಲಿನ ಎಂಟು ಅಧ್ಯಾಯಗಳ ಫಲಿತಗಳ ಸಂಕ್ಷಿಪ್ತ ಸಮೀಕ್ಷೆಯನ್ನು ಇಲ್ಲಿ ಮಾಡಲಾಗುವುದು. ಪ್ರತಿಯೊಂದು ಅಧ್ಯಾಯದಲ್ಲಿ ನಡೆದ ಅಧ್ಯಯನದ ಸಾಧಕ ಬಾಧಕಗಳ ಬಗ್ಗೆ ಈ ಅಧ್ಯಾಯದಲ್ಲಿ

ಮತ್ತೊಮ್ಮೆ ಪರಿಶೀಲಿಸಲಾಗುವುದು ಹಾಗೂ ಪ್ರಬಂಧದ ಒಟ್ಟಾರೆ ಫಲಿತಗಳನ್ನು ಇಲ್ಲಿ ಕ್ರೂಢೀಕರಿಸಿ ಸಾರಾಂಶರೂಪದಲ್ಲಿ ತಿಳಿಸಲಾಗುವುದು.

**ರಕ್ಷಾಪುಟಗಳ ಕುರಿತು ಇದುವರೆಗೂ ನಡೆದ ಅಧ್ಯಯನ**

**೧. ಸ್ನಾತಕಪದವಿಗಾಗಿ (ಬಿ.ವಿ.ಎ/ಬಿ.ಎಫ್.ಎ)**

೨೦೦೯-೨೦೧೦ ರಲ್ಲಿ ನಯನ್ ಹೆಚ್. ಎಂ. ಅಂತಿಮ ವರ್ಷದ ಬಿ.ವಿ.ಎ.ಅನ್ವಯಕಲೆಯ ಸ್ನಾತಕ ಪದವಿಗಾಗಿ ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಕಿರು ಸಂಶೋಧನ ಪ್ರಬಂಧವು **'ಪುಸ್ತಕದ ಮುಖಪುಟಗಳು'**[೧] ಎಂಬ ವಿಷಯದ ಮೇಲೆ ಸಲ್ಲಿಸಿದ್ದಾರೆ. ಐದು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅವುಗಳಲ್ಲಿ ಮುಖ್ಯವಾಗಿ ಅಧ್ಯಾಯ ಮೂರು ಮುಖಪುಟಗಳ ಪ್ರಕಾರಗಳು ಎಂದು ವಿಂಗಡಿಸಿಕೊಂಡು ೧. ಕಾದಂಬರಿ ಮುಖಪುಟಗಳು ೨. ಶೈಕ್ಷಣಿಕ ಪುಸ್ತಕ ಮುಖಪುಟಗಳು ೩. ನಿಯತಕಾಲಿಕೆಗಳ ಮುಖಪುಟಗಳನ್ನು ಕುರಿತು ಬಗ್ಗೆ ವಿವರಿಸಿದ್ದಾರೆ. ಅಧ್ಯಾಯ ನಾಲ್ಕು ಸಮಕಾಲೀನ ಮುಖಪುಟಗಳನ್ನು ಕುರಿತು ಬರೆಯಲಾಗಿದೆ.

ಅಧ್ಯಾಯ ಮೂರರಲ್ಲಿ ಕೆಲವು ಮುಖಪುಟಗಳ ಕುರಿತು ಬರೆಯಲಾಗಿದ್ದು ಅವುಗಳಲ್ಲಿ ಕನ್ನಡ ಮತ್ತು ಇಂಗ್ಲೀಷ್ ಭಾಷೆಯ ಪುಸ್ತಕಗಳು ಸೇರಿವೆ. ಕೇವಲ ಪುಸ್ತಕಗಳ ಹೆಸರು ಮತ್ತು ಲೇಖಕರ ಹೆಸರು ತಿಳಿಸಿದ್ದಾರೆ. ಆದರೆ ಮುಖಪುಟ ರಚಿಸಿದ ಕಲಾವಿದರ ಹೆಸರು ಮತ್ತು ಪುಸ್ತಕ ಪ್ರಕಟಗೊಂಡ ವರ್ಷ ಎಲ್ಲಿಯೂ ತಿಳಿಸಿಲ್ಲ ಅಧ್ಯಾಯ ನಾಲ್ಕರಲ್ಲಿ ಶೈಕ್ಷಣಿಕ ಪುಸ್ತಕಗಳಿಗೆ ಸಂಬಂಧಿಸಿದ ಯಾವುದೊಂದು ಮುಖಪುಟಗಳ ಉಲ್ಲೇಖವಿಲ್ಲ. ಇದುವರೆಗೆ ಲಭ್ಯವಾದ ಮಾಹಿತಿ ಪ್ರಕಾರ ಇದುವೇ ಪ್ರಥಮ ಮುಖಪುಟಗಳ ಕುರಿತು ಬಂದ ಕಿರು ಪ್ರಬಂಧವಾಗಿದೆ.

**'ಮಾಸಿಕ ಸಾಹಿತ್ಯಕ ಪುರವಣಿಯ ಮುಖಪುಟ ವಿನ್ಯಾಸ'**[೨] ಎಂಬ ಕಿರು ಸಂಶೋಧನ ಪ್ರಬಂಧವು ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ಚಂದನ್ ಎನ್.ಎ. ಅವರು ೨೦೧೨-೧೩ ಸಾಲಿನಲ್ಲಿ ಸಲ್ಲಿಸಿದ್ದಾರೆ. ಒಟ್ಟು ಐದು ಅಧ್ಯಾಯಗಳನ್ನು ಮಾಡಿಕೊಂಡು ಕಿರು ಪ್ರಬಂಧ ಪೂರ್ಣಗೊಳಿಸಿದ್ದಾರೆ. ಮುಖ್ಯವಾಗಿ ಮೂರು ಮತ್ತು ನಾಲ್ಕು ಅಧ್ಯಾಯಗಳು ಕ್ರಮವಾಗಿ ಮಾಸಿಕ ಪತ್ರಿಕೆಯ ಮುಖಪುಟವಿನ್ಯಾಸದ ಮಹತ್ವ, ಸಾಹಿತ್ಯಕ ಪುರವಣಿಯ ವಿಧಗಳು ಮತ್ತು ವಿನ್ಯಾಸದ ಚಿತ್ರಗಳು ಎಂಬ ವಿಷಯಗಳ ಬಗ್ಗೆ ವಿವರಿಸಿದ್ದಾರೆ.

ಅಧ್ಯಾಯ ಮೂರರಲ್ಲಿ ಉಪಯೋಗಿಸಿದ ಮುಖಪುಟ ಚಿತ್ರಗಳೆಲ್ಲವೂ ಆಂಗ್ಲ ಪತ್ರಿಕೆಗಳಾಗಿವೆ. ನಾಲ್ಕನೆಯ ಅಧ್ಯಾಯದಲ್ಲಿ ಕನ್ನಡ ಮತ್ತು ಆಂಗ್ಲ ಭಾಷೆಯ ಸಾಹಿತ್ಯಕ ಪುರವಣಿಯ ವಿನ್ಯಾಸದ ಚಿತ್ರಗಳನ್ನು

---

೦೧. ನಯನ್ ಹೆಚ್. ಎಂ. : ಪುಸ್ತಕದ ಮುಖಪುಟಗಳು (ಅಪ್ರಕಟಿತ ಬಿ.ವಿ.ಎ ಸ್ನಾತಕಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧ). ಕು.ವಿ.ವಿ., ಶಿವಮೊಗ್ಗ. ೨೦೧೦

೦೨. ಚಂದನ್ ಎನ್.ಎ. : ಮಾಸಿಕ ಸಾಹಿತ್ಯಕ ಪುರವಣಿಯ ಮುಖಪುಟ ವಿನ್ಯಾಸ (ಅಪ್ರಕಟಿತ ಬಿ.ವಿ.ಎ ಸ್ನಾತಕಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧ), ದಾ.ವಿ.ವಿ., ದಾವಣಗೆರೆ. ೨೦೧೩

ಬಳಸಿಕೊಂಡಿದ್ದಾರೆ. ಅವುಗಳ ವಿವರಣೆ ಅಪೂರ್ಣವಾಗಿದ್ದು ಸರಿಯಾಗಿ ದಾಖಲೆ ಮಾಡಿರುವುದಿಲ್ಲ (ಉದಾ: ಮಾಸಿಕೆ ಪತ್ರಿಕೆಯ ಪ್ರಕಟಗೊಂಡ ತಿಂಗಳ, ವರ್ಷ ಹಾಗೂ ವಿನ್ಯಾಸಕಾರರ ಹೆಸರು) ಒಟ್ಟಾರೆ ಅವುಗಳು ಅಂತರ್‌ಜಾಲದಿಂದ ಮುಖಪುಟ ಚಿತ್ರಗಳನ್ನು ಸಂಗ್ರಹಿಸಿಕೊಂಡಿದ್ದು ಮತ್ತು ಹೆಚ್ಚಿನವು ಆಂಗ್ಲ ಭಾಷೆಯ ಮಾಸಿಕ ಪತ್ರಿಕೆಯ ಮುಖಪುಟಗಳಾಗಿವೆ.

**'ಕಾದಂಬರಿ ಮುಖಪುಟ ವಿನ್ಯಾಸ'**[೧೩] ಎಂಬ ವಿಷಯದ ಮೇಲೆ ಕಿರು ಪ್ರಬಂದವು ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ಪುನೀತ್.ಎಸ್ ಇವರು ೨೦೧೨–೧೩ ರಲ್ಲಿ ಸಲ್ಲಿಸಿದ್ದಾರೆ. ಒಟ್ಟು ಆರು ಅಧ್ಯಾಯಗಳಾಗಿದ್ದು ಅಧ್ಯಾಯ ಮೂರರಲ್ಲಿ ಕರ್ನಾಟಕದಲ್ಲಿ ಮುಖಪುಟ ವಿನ್ಯಾಸ ಬೆಳದುಬಂದ ಹಾದಿ, ಅಧ್ಯಾಯ ನಾಲ್ಕರಲ್ಲಿ ವಿವಿಧ ರೀತಿಯ ಕಾದಂಬರಿ ಮುಖಪುಟ ಮತ್ತು ಅಧ್ಯಾಯ ಐದರಲ್ಲಿ ಕರ್ನಾಟಕದಲ್ಲಿ ೨೦೦೧ ರಿಂದ ೨೦೧೩ ರವರೆಗೆ ಪ್ರಕಟಗೊಂಡ ಆಯ್ದ ಕಾದಂಬರಿ ಮುಖಪುಟಗಳಲ್ಲಿನ ಕಲಾತ್ಮಕತೆಯ ಅಧ್ಯಯನ ಎಂದು ವಿಂಗಡಿಸಿಕೊಂಡು ಅಭ್ಯಸಿಸಿದ್ದಾರೆ. ೨೦೦೧ ರಿಂದ ೨೦೧೩ ರವರೆಗೆ ಪ್ರಕಟಗೊಂಡ ಆಯ್ದ ಕಾದಂಬರಿ ಮುಖಪುಟಗಳಿಗೆ ಮಾತ್ರ ಈ ಪ್ರಬಂಧದ ಅಧ್ಯಯನವು ಸೀಮಿತಕ್ಕೊಳಪಟ್ಟಿದೆ.

**'ದೃಶ್ಯಕಲಾ ಗ್ರಂಥಗಳ ಮುಖಪುಟ ವಿನ್ಯಾಸ'**[೧೪] ಎಂಬ ಕಿರು ಪ್ರಬಂಧವು ಶರತ್‌ಕುಮಾರ್ ಇ. ಎಂ. ಇವರು ೨೦೧೩–೧೪ ರಲ್ಲಿ ಸ್ನಾತಕ ಪದವಿಗಾಗಿ ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಒಟ್ಟು ಎಂಟು ಅಧ್ಯಾಯಗಳಾಗಿ ಮಾಡಿಕೊಂಡಿದ್ದಾರೆ. ಮುಖ್ಯವಾಗಿ ಮೂರನೆಯ ಅಧ್ಯಾಯದಿಂದ ಏಳನೆಯ ಅಧ್ಯಾಯದವರೆಗೆ ಅನ್ವಯಕಲೆ, ಚಿತ್ರಕಲೆ, ಶಿಲ್ಪಕಲೆ, ಮುದ್ರಣಕಲೆ ಮತ್ತು ಛಾಯಾಚಿತ್ರಕಲೆಯ ಗ್ರಂಥಗಳ ಮುಖಪುಟಗಳು ಎಂದು ವಿಂಗಡಿಸಿಕೊಂಡು ಅಭ್ಯಸಿಸಿದ್ದಾರೆ. ಕನ್ನಡ ಮತ್ತು ಆಂಗ್ಲ ಮಾಧ್ಯಮಗಳ ಗ್ರಂಥಗಳ ಮುಖಪುಟಗಳನ್ನು ಅಂತರ್‌ಜಾಲದಿಂದ ತೆಗೆದುಕೊಂಡು ಅಧ್ಯಯನ ಮಾಡಿದ್ದಾರೆ.

**೨. ಸ್ನಾತಕೋತ್ತರ ಪದವಿಗಾಗಿ (ಎಂ.ವಿ.ಎ/ಎಂ.ಎಫ್.ಎ)**

**'ಕರ್ನಾಟಕದ ಖ್ಯಾತ ಮುಖಪುಟ ಕಲಾವಿದರು'**[೧೫] ಎಂಬ ವಿಷಯದ ಮೇಲೆ ಕಿರು ಸಂಶೋಧನಾ ಪ್ರಬಂಧವು ಶ್ರೀ ಸಂಗನಗೌಡ ಬಿ.ಪಾಟೀಲ್ ಅವರು ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ೨೦೧೨–೧೩ ರಲ್ಲಿ ಅಧ್ಯಯನ ಮಾಡಿಸಲ್ಲಿಸಿದ್ದಾರೆ. ಒಟ್ಟು ಐದು ಅಧ್ಯಾಯಗಳಿದ್ದು ಮುಖ್ಯವಾಗಿ ಐದು ಜನ ಮುಖಪುಟ ಕಲಾವಿದರ ಪರಿಚಯ ಮತ್ತು ಅವರು ರಚಿಸಿದ ಆಯ್ದ ಮುಖಪುಟ ಚಿತ್ರಗಳ ಕುರಿತು ವಿವರಿಸಿದ್ದಾರೆ. ಅಧ್ಯಾಯ ನಾಲ್ಕರಲ್ಲಿ ಆಯ್ದ ಮುಖಪುಟ ಚಿತ್ರಗಳ ಕುರಿತು ಬರೆದಿದ್ದು ಮುಖಪುಟ ಚಿತ್ರಗಳು ಯಾವ ಕಲಾವಿದರು ರಚಿಸಿದ್ದಾರೆ ಮತ್ತು ಯಾವ ಅವಧಿಯಲ್ಲಿ ರಚಿಸಿದ್ದಾರೆ ಎಂದು ಎಲ್ಲಿಯೂ ತಿಳಿಸಿಲ್ಲ.

---

೧೩. ಪುನೀತ್ ಎಸ್. : ಕಾದಂಬರಿ ಮುಖಪುಟ ವಿನ್ಯಾಸ (ಅಪ್ರಕಟಿತ ಬಿ.ವಿ.ಎ ಸ್ನಾತಕಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧ), ದಾ.ವಿ.ವಿ., ದಾವಣಗೆರೆ. ೨೦೧೩

೧೪. ಶರತ್‌ಕುಮಾರ್ ಇ.ಎಂ. : ದೃಶ್ಯಕಲಾ ಗ್ರಂಥಗಳ ಮುಖಪುಟ ವಿನ್ಯಾಸ(ಅಪ್ರಕಟಿತ ಬಿ.ವಿ.ಎ ಸ್ನಾತಕಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧ). ದಾ.ವಿ.ವಿ., ದಾವಣಗೆರೆ. ೨೦೧೪

೧೫. ಸಂಗನಗೌಡ ಬಿ. ಪಾಟೀಲ್ : ಕರ್ನಾಟಕದ ಖ್ಯಾತ ಮುಖಪುಟ ಕಲಾವಿದರು. (ಅಪ್ರಕಟಿತ ಎಂ.ವಿ.ಎ ಸ್ನಾತಕೋತ್ತರ ಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧ), ದಾ.ವಿ.ವಿ., ದಾವಣಗೆರೆ. ೨೦೧೩

ಮುಖಪುಟ ವಿನ್ಯಾಸಕ್ಕಿಂತ ಮುಖಪುಟ ಕಲಾವಿದರ ಬಗ್ಗೆ ಹೆಚ್ಚು ಅರಿತುಕೊಳ್ಳಲು ಈ ಪ್ರಬಂಧದಿಂದ ಸಾಧ್ಯವಾಗುತ್ತದೆ.

**'ಕನ್ನಡ ದಿನ ಪತ್ರಿಕೆಗಳ ಮುಖಪುಟ ವೈಶಿಷ್ಟತೆ'**[೬] ಎಂಬ ವಿಷಯದ ಮೇಲೆ ಕಿರು ಸಂಶೋಧನ ಪ್ರಬಂಧವು ೨೦೧೩-೧೪ ರಲ್ಲಿ ಶ್ರೀ ಪ್ರಮೋದ್ ಕೆ.ವಿ. ಅವರು ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಒಟ್ಟು ಎಂಟು ಅಧ್ಯಾಯಗಳಾಗಿ ಅಧ್ಯಯನ ಮಾಡಿದ್ದಾರೆ ಅವುಗಳಲ್ಲಿ ಅತಿ ಮುಖ್ಯವಾಗಿ ಗಮನಿಸಬಹುದಾದ ಅಧ್ಯಾಯಗಳೆಂದರೆ ಸಂಯುಕ್ತ ಕರ್ನಾಟಕ, ಪ್ರಜಾವಾಣಿ, ವಿಜಯ ಕರ್ನಾಟಕ ಮತ್ತು ಉದಯವಾಣಿ ಮುಖಪುಟ ವಿನ್ಯಾಸ (ಇವುಗಳು ಕ್ರಮವಾಗಿ ಅಧ್ಯಾಯ ಮೂರರಿಂದ ಅಧ್ಯಾಯ ಏಳರವರೆಗೆ ವಿವರಿಸಿದ್ದಾರೆ) ಯಾವುದೆ ಪತ್ರಿಕೆ ಯಶಸ್ವಿಯಾಗಬೇಕೆಂದರೆ ಅಂತಹ ಪತ್ರಿಕೆಯ ಮುಖಪುಟ ವಿನ್ಯಾಸವು ಕೆಲವು ವೈಶಿಷ್ಟ್ಯತೆಗಳಿಂದ ಕೂಡಿರಬೇಕು ಸರಳವಾದ ಹೊಂದಾಣಿಕೆ, ಲಯ ಬದ್ಧತೆ, ಅನುರೂಪದ ಸಂಯೋಜನೆ ಮತ್ತು ಸುದ್ದಿಯ ಮೌಲ್ಯ ಗುಣಮಟ್ಟ ಹಾಗೂ ಮಹತ್ವಗಳನ್ನು ಅರಿತುಕೊಂಡು ಮುಖಪುಟ ವಿನ್ಯಾಸ ಮಾಡುವುದರಿಂದ ಹೆಚ್ಚು ಆಕರ್ಷಕವಾಗಿ ಯಶಸ್ವಿಯಾಗುತ್ತವೆ ಎಂದೆನ್ನಿಸುತ್ತದೆ ಈ ಅಧ್ಯಯನದ ಕಾರ್ಯದಿಂದ.

**'ಪುಸ್ತಕಗಳ ಮುಖಪುಟಗಳು'** (ವಿಶೇಷವಾಗಿ ಕನ್ನಡ ಪುಸ್ತಕಗಳು)[೭] ಎಂಬ ವಿಷಯದ ಮೇಲೆ ಕಿರು ಸಂಶೋಧನಾ ಪ್ರಬಂಧವು ಶ್ರೀ ಸ್ವಾಮಿ ಅವರು ೨೦೧೩-೧೪ ರಲ್ಲಿ ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಒಟ್ಟು ಏಳು ಅಧ್ಯಾಯಗಳಾಗಿ ಮಾಡಿಕೊಂಡು ಅಧ್ಯಯನ ಮಾಡಿದ್ದಾರೆ. ಅಧ್ಯಾಯ ಮೂರು ಕಾದಂಬರಿ ಪುಸ್ತಕಗಳ ಮುಖಪುಟ, ಅಧ್ಯಾಯ ನಾಲ್ಕು ಚುಟುಕು ಸಾಹಿತ್ಯ ಪುಸ್ತಕಗಳ ಮುಖಪುಟಗಳು; ಅಧ್ಯಾಯ ಐದು ಕಥಾ ಪುಸ್ತಕಗಳ ಮುಖಪುಟಗಳು; ಅಧ್ಯಾಯ ಆರು ಇತರೆ ಪುಸ್ತಕಗಳ ಮುಖಪುಟಗಳು ಎಂದು ವಿಂಗಡಿಸಿಕೊಂಡು ಅಧ್ಯಯನ ಕೈಗೊಂಡಿದ್ದಾರೆ. ಮುಖಪುಟ ವಿನ್ಯಾಸವು ಕೇವಲ ಅಂದವಾಗಿ ವಿನ್ಯಾಸ ಮಾಡಿದರೆ ಸಾಲದು ಆ ವಿಷಯಕ್ಕೆ ಅನುಗುಣವಾಗಿ ಮುಖಪುಟವನ್ನು ವಿನ್ಯಾಸಮಾಡಿದರೆ ಅದು ಹೆಚ್ಚು ಅರ್ಥವಂತಿಕೆಯನ್ನು ಮತ್ತು ಪುಸ್ತಕದ ಘನತೆಯನ್ನು ತೋರಿಸುತ್ತದೆ. ಮುಖಪುಟವು ಸರಳೀಕೃತವಾಗಿರಬೇಕು ಹಾಗೂ ಓದುಗರಿಗೆ ಆಕರ್ಷಿಸುವಂತಿರಬೇಕು ಎಂಬ ಅಭಿಪ್ರಾಯ ಈ ಪ್ರಬಂಧದ್ದು.

### ೩. ಪುಸ್ತಕ /ಪತ್ರಿಕೆಗಳಲ್ಲಿ ಲೇಖನ

**'ನಿಜದ ನೆಲೆ'**[೮] ಡಾ. ಬಿ. ಕೆ. ಹಿರೇಮಠರವರ ಅಭಿನಂದನಾ ಗ್ರಂಥದಲ್ಲಿ 'ಹಿರೇಮಠ್ ಅವರು ರಚಿಸಿದ ಕೆಲವು ಮುಖಪುಟ ವಿನ್ಯಾಸಗಳು' ಎಂಬ ಲೇಖನದಲ್ಲಿ ೭೦ರ ದಶಕದಲ್ಲಿ ವಿಜಯಪುರ ಜಿಲ್ಲೆಯು ಮುದ್ರಣ ತಂತ್ರಜ್ಞಾನ ಹಾಗೂ ವರ್ಣ ವಿಂಗಡನೆ ಅಷ್ಟೊಂದು ಪ್ರಬುದ್ಧವಾಗಿ ಬೆಳೆದಿರದ ಕಾಲದ ಅವಧಿಯಲ್ಲಿ ಅಂದಿನ ಕವಿಗಳ, ಸಾಹಿತಿಗಳ ಕೃತಿಗಳಿಗೆಲ್ಲ ಮುಖಪುಟವಿನ್ಯಾಸ ರಚಿಸಿದ್ದು, ೬೦

---

೦೬. ಪ್ರಮೋದ್ ಕೆ. ವಿ. : ಕನ್ನಡ ದಿನಪತ್ರಿಕೆಗಳ ಮುಖಪುಟ ವೈಶಿಷ್ಟ್ಯತೆ (ಅ.ಪ್ರ.ಎಂ.ವಿ.ಎ.ಕಿ.ಪ್ರ), ದಾ.ವಿ.ವಿ., ದಾವಣಗೆರೆ. ೨೦೧೪

೦೭. ಶ್ರೀ ಸ್ವಾಮಿ : ಪುಸ್ತಕಗಳ ಮುಖಪುಟಗಳು, (ಅ.ಪ್ರ.ಎಂ.ವಿ.ಎ.ಕಿ.ಪ್ರ), ದಾ.ವಿ.ವಿ., ದಾವಣಗೆರೆ. ೨೦೧೪

೦೮. ಡಾ. ಎಸ್. ಸಿ. ಪಾಟೀಲ, ಸತ್ಯಾನಂದ ಪಾತ್ರೋಟ : ನಿಜದನೆಲೆ, ಪ್ರ: ಶ್ರೀ ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟ. ೨೦೦೩

ರ ದಶಕದಲ್ಲಿ ಸ್ವಲ್ಪ ಮಟ್ಟಿಗೆ ಬ್ಲಾಕ್ ಭರಾಟೆ ವರ್ಣ ವಿಂಗಡನೆ ಬಹುವರ್ಣ ಮುದ್ರಣ ವಿಜಯಪುರ ಜಿಲ್ಲೆಯವರೆಗು ವ್ಯಾಪಿಸಿದ್ದು. ಇಂತಹ ಸಂದರ್ಭದಲ್ಲಿ ಮುಖಪುಟಗಳಲ್ಲಿ ರೇಖಾಚಿತ್ರಗಳಿಗೆ ಒತ್ತುಕೊಟ್ಟು ಅನೇಕ ರೇಖಾಚಿತ್ರ ಆಧರಿತ ಮುಖಪುಟ ವಿನ್ಯಾಸವನ್ನು ಡಾ. ಬಿ.ಕೆ. ಹಿರೇಮಠ್ ಅವರು ರಚಿಸಿದ್ದಾರೆ ಎಂದು ಡಾ.ಬಸವರಾಜ್ ಗವಿಮಠರವರ ಅಭಿಪ್ರಾಯ.

**‘ಬಂಗಾರ ಬಣ್ಣ’**[೧೯] ಡಾ. ಬಸವರಾಜ್ ಗವಿಮಠ್‌ರ ಜನ್ಮ ಸುವರ್ಣ ಮಹೋತ್ಸವ ಅಭಿನಂದನಾ ಗ್ರಂಥದಲ್ಲಿ ‘ಮುಖಪುಟ ತೋರಣ’ ಎನ್ನುವ ವಿಷಯದ ಕುರಿತು ಶ್ರೀ ರಾಜು ಆನಂದ್ ರಾವ್ ಯಾದವ್ ಅವರು (ಡಾ. ಬಸವರಾಜ್ ಗವಿಮಠ್‌ರ ಮುಖಪುಟವಿನ್ಯಾಸ) ಲೇಖನ ಬರೆದಿದ್ದಾರೆ. ಅದರಲ್ಲಿ ಡಾ. ಗವಿಮಠ್‌ರು ಬಾಗಲಕೋಟೆ ಜಿಲ್ಲೆಯಲ್ಲಿ ಮುಂದು ವರಿಯದ ಅಂದಿನ ಮುದ್ರಣ ತಂತ್ರಜ್ಞಾನದಿಂದಲೂ ಈಗಿನ ಬೆಳದ ತಂತ್ರಜ್ಞಾನದ ಮೂಲಕ ಸಾಕಷ್ಟು ಕೃತಿಗಳ ಮುಖಪುಟ ವಿನ್ಯಾಸವನ್ನು ಮಾಡಿ ಕೃತಿ, ಪುಸ್ತಕ, ಗ್ರಂಥ, ಪತ್ರಿಕೆಗಳಿಗೆ ಒಂದು ಮೆರಗನ್ನು ತಂದುಕೊಟ್ಟಿದ್ದಾರೆ ಅಲ್ಲದೆ ಪುಸ್ತಕದ ಸಮಗ್ರ ವಿಷಯಕ್ಕೆ ತಕ್ಕಹಾಗೆ ಮುಖಪುಟದವಿನ್ಯಾಸವನ್ನು ರಚಿಸಿದ್ದಾರೆ ಎಂದು ತಿಳಿಸಿದ್ದಾರೆ.

ಒಟ್ಟಾರೆಯಾಗಿ ವಿವೇಚಿಸುವುದಾದರೆ ಇಲ್ಲಿಯವರೆಗೆ ನಡೆದ ಮುಖಪುಟ ಕುರಿತು ಸ್ನಾತಕ ಪದವಿಗಾಗಿರಬಹುದು ಅಥವಾ ಸ್ನಾತಕೋತ್ತರ ಪದವಿಗಾಗಿರಬಹುದು ಹಾಗೂ ಪುಸ್ತಕ /ಪತ್ರಿಕೆಗಳಲ್ಲಿನ ಲೇಖನಗಳೇ ಆಗಿರಬಹುದು. ಈ ಕಿರು ಪ್ರಬಂಧಗಳು ವಿದ್ಯಾರ್ಥಿಗಳು ಆಯಾ ಕೋರ್ಸಿನ ಅಧ್ಯಯನದ ಸಂದರ್ಭದಲ್ಲಿ ನಡೆಸಿದ ಸಂಶೋಧನಾ ಅಧ್ಯಯನಗಳಾಗಿದ್ದು, ಇವು ಮುಂದೆ ಸಂಶೋಧನಾ ಅಧ್ಯಯನಕ್ಕೆ ಅಭ್ಯರ್ಥಿಗಳು ತೊಡಗಿಸಿಕೊಳ್ಳಲು ಈ ಹಂತದ ಅಧ್ಯಯನಗಳು ತುಂಬಾ ಸಹಾಯಕಾರಿಯಾಗಿವೆ. ಮತ್ತು ಅನೇಕ ವೈವಿಧ್ಯಮಯವಾದ ವಿಷಯದ ಕುರಿತು ಸಂಶೋಧನಾ ಅಧ್ಯಯನಕ್ಕೆ ಆಕರ ಸಾಮಗ್ರಿಯಾಗಿವೆ. ಇವುಗಳ ಕೆಲಸಕಾರ್ಯವು ಈ ಸಂದರ್ಭದಲ್ಲಿ ಅಲ್ಲಗಳೆಯುವಂತಿಲ್ಲ.

ಕರ್ನಾಟಕ ದೃಶ್ಯಕಲೆಯಲ್ಲಿ ಆರಂಭಗೊಂಡ ಸಂಶೋಧನಾ ಅಧ್ಯಯನಗಳು ಮತ್ತು ಬೇರೆ ಬೇರೆ ಕ್ಷೇತ್ರಗಳಲ್ಲಿ ನಡೆದ ಸಂಶೋಧನಾ ಅಧ್ಯಯನಗಳನ್ನು ಗಮನಿಸಿದರೆ ಈ ದೃಶ್ಯಕಲಾ ಕ್ಷೇತ್ರದಲ್ಲಿ ನಡೆದ ಸಂಶೋಧನಾ ಅಧ್ಯಯನವು ಇನ್ನೂ ತುಂಬಾ ಕಡಿಮೆಯಾಗಿದೆ ಎಂದೇ ಹೇಳಬಹುದಾಗಿದೆ. ಡಾ. ಎಸ್. ಸಿ. ಪಾಟೀಲರು ವ್ಯಕ್ತಪಡಿಸಿದ ಅಭಿಪ್ರಾಯದ ಪ್ರಕಾರ ‘ಇಲ್ಲಿ ನಡೆದ ಸಂಶೋಧನಾ ಅಧ್ಯಯನಗಳಲ್ಲಿ ಪ್ರಾಥಮಿಕ ಆಕರಗಳ ಸಂಗ್ರಹ ಸಮೀಕ್ಷೆ ರೂಪದ ಸಂಶೋಧನಾ ಅಧ್ಯಯನಗಳೇ ಹೆಚ್ಚಾಗಿವೆ. ಅಲ್ಲಲ್ಲಿ ವಿಶ್ಲೇಷಣಾತ್ಮಕ ಅಧ್ಯಯನಗಳು ಮತ್ತು ಅಧ್ಯಯನದ ಹಿಂದಿನ ತಾತ್ವಿಕ ಸಿದ್ಧಾಂತಗಳ ಪರಿಕಲ್ಪನೆಯನ್ನು ಕಟ್ಟಿಕೊಡುವ ಪ್ರಯತ್ನದ ಸಂಶೋಧನಾ ಅಧ್ಯಯನಗಳು ಸ್ವಲ್ಪ ಪ್ರಮಾಣದಲ್ಲಿ ನಡೆದಿವೆ’ ಎಂಬ ಮಾತುಗಳು ಸತ್ಯವೇ ಆಗಿವೆ ಎಂದು ಹೇಳಬಹುದಾಗಿದೆ. ಈ ಮಹಾಪ್ರಬಂಧ ಸಂಶೋಧನಾ ಅಧ್ಯಯನವು ತಾತ್ವಿಕ ಮತ್ತು ತಾಂತ್ರಿಕ ನೆಲೆ-ಹಿನ್ನೆಲೆಯಲ್ಲಿ ವಿವೇಚಿಸಲಾಗುವುದು.

---

೧೯. ಡಾ. ಸಿದ್ಧರಾಮ ಬಂಗಾರಿ & ಸಿತಿಮಾ ವಜ್ಜಲ (ಸಂ.) : ಬಂಗಾರಬಣ್ಣ, ಪ್ರ: ತರಂಗಿಣಿ ಪ್ರಕಾಶನ, ಇಳಕಲ್. ೨೦೧೪

**ಅಧ್ಯಯನದ ವ್ಯಾಪ್ತಿ**

ಯಾವುದೇ ಸಂಶೋಧನೆಯ ವಿಷಯಕ್ಕೆ ವ್ಯಾಪ್ತಿ ಅನಿವಾರ್ಯ ಅಗತ್ಯವೂ ಹೌದು, ಅಲ್ಲದೆ ವ್ಯಾಪ್ತಿ ಇರುವುದರಿಂದ ಸಂಶೋಧನಾ ಕಾರ್ಯಕ್ಕೆ ಒಂದು ಮಾರ್ಗಸೂಚಿ ಇದ್ದಂತೆ ಯಾವುದು? ಎಲ್ಲಿಂದ? ಹೇಗೆ? ಎಲ್ಲಿಯವರೆಗೆ ಕಾರ್ಯ ಕೈಗೊಳ್ಳಬೇಕೆಂದು ವ್ಯಾಪ್ತಿ ಸೂಚಿಸುತ್ತದೆ. ಈ ಕಾರಣಕ್ಕಾಗಿ ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯ ವಿಷಯಕ್ಕೆ ವ್ಯಾಪ್ತಿ ಬಹಳ ಅವಶ್ಯಕವಾಗಿದೆ. ಕನ್ನಡ ಸಾಹಿತ್ಯ ಗ್ರಂಥಗಳು ಹತ್ತು ಹಲವಾರು ಮತ, ಪಂಥ, ಪಂಗಡ ವರ್ಗ ಹಳೆಗನ್ನಡ, ಹೊಸಗನ್ನಡ, ನವ್ಯ–ನವ್ಯೋತ್ತರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ, ವೈದ್ಯಕೀಯ, ವಿಜ್ಞಾನ, ಲಲಿತಕಲೆ, ದೃಶ್ಯಕಲೆ ಮುಂತಾದ ಹಲವು ವಿಷಯಗಳಿಂದ ರಚನೆಗೊಂಡು ಪ್ರಕಟಗೊಂಡಿವೆ ಮತ್ತು ಈಗಲೂ ಸಹ ಪ್ರಕಟಗೊಳ್ಳುತ್ತಿವೆ.

ಈ ಎಲ್ಲಾ ಗ್ರಂಥಗಳು ಅವುಗಳ ರಕ್ಷಾಪುಟಗಳಲ್ಲಿ ಅಥವಾ ಮುಖಪುಟಗಳಲ್ಲಿ ಚಿತ್ರಕಲೆಯನ್ನು ಬಳಸಿಕೊಂಡು ರಚನೆಗೊಂಡು ಕಂಗೊಳಿಸುತ್ತಿವೆ ಹಾಗೂ ಓದುಗರಿಗೂ ಆಕರ್ಷಿಸುತ್ತಲಿವೆ. ಹಾಗಂತ ಕನ್ನಡದ ಎಲ್ಲಾ ಸಾಹಿತ್ಯ ಪ್ರಕಾರಗಳ ಗ್ರಂಥದ ರಕ್ಷಾಪುಟ ಚಿತ್ರಕಲೆ ಕುರಿತು ಅಧ್ಯಯನ ಮಾಡುವುದು ಸಾಧ್ಯವಿಲ್ಲ – ಸಾಧುವಲ್ಲ. ಸಂಶೋಧನ ಕಾರ್ಯಕ್ಕೆ ಆಕಾರ, ಆಯಾಮ, ವ್ಯಾಪ್ತಿ ಬಹಳ ಮುಖ್ಯವಾಗುತ್ತದೆ. ಇವುಗಳಿರುವುದರಿಂದಲೇ ಈ ಸಂಶೋಧನೆಗೆ ಅದರ ಕಾರ್ಯಕ್ಕೆ ಒಂದು ನೆಲೆ–ಬೆಲೆ ಸಿಗುತ್ತದೆ. ಈ ಮೇಲೆನ ಎಲ್ಲಾ ಅಂಶಗಳನ್ನು ಗಮನಿಸಿ, ಸ್ವಾತಂತ್ರಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದ 'ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ' ವಿಶೇಷವಾಗಿ ೧೯೦೦ ರಿಂದ ೨೦೦೦ ರವರೆಗಿನ ಲಲಿತಕಲಾ ಗ್ರಂಥಗಳು ಅನುಲಕ್ಷಿಸಿ; ಲಲಿತಕಲಾ ಅಕಾಡೆಮಿ, ಶಿಲ್ಪಕಲೆ ಅಕಾಡೆಮಿ, ನಾಟಕ ಅಕಾಡೆಮಿ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ನೃತ್ಯ ಮತ್ತು ಸಂಗಿತ ಅಕಾಡೆಮಿ, ಸಾಹಿತ್ಯ ಅಕಾಡೆಮಿಗಳ ಪ್ರಕಟಣೆ ಹಾಗೂ ಕನ್ನಡ ಸಾಹಿತ್ಯ ಪರಿಷತ್ ಗ್ರಂಥಾಲಯದ ಸಂಗ್ರಹದಲ್ಲಿನ ಪುಸ್ತಕ ಮತ್ತು ಕನ್ನಡೇತರ ಭಾಷೆಯ ಗ್ರಂಥಗಳ ಮುಖಪುಟಗಳು ಈ ಮೇಲೆ ಉಲ್ಲೇಖಿಸಿದ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಇಲ್ಲಿನ ಸಂಶೋಧನೆಯ ಅಧ್ಯಯನಕ್ಕೊಳಪಡಿಸಿದೆ.

**ವಿಷಯ ವ್ಯಾಪ್ತಿ:** ಕನ್ನಡ ಗ್ರಂಥಗಳು ಅನೇಕ ಪ್ರಕಾರಗಳಲ್ಲಿ ಪ್ರಕಟಗೊಂಡಿವೆ. (ಹತ್ತು ಹಲವಾರು ಮತ, ಪಂಥ, ಪಂಗಡ ವರ್ಗ ಹಳೆಗನ್ನಡ, ಹೊಸಗನ್ನಡ, ನವ್ಯ–ನವ್ಯೋತ್ತರ ಸಾಮಾಜಿಕ, ಧಾರ್ಮಿಕ ಆರ್ಥಿಕ ರಾಜಕೀಯ ವೈದ್ಯಕೀಯ, ವಿಜ್ಞಾನ) ಅವುಗಳನ್ನು ವಿಂಗಡಿಸಿಕೊಂಡು ಅಧ್ಯಯನ ಮಾಡುವುದಕ್ಕಿಂತಲೂ ಲಲಿತಕಲಾ (ದೃಶ್ಯಕಲೆ) ಹಿನ್ನೆಲೆಯಿಂದ ಚಿತ್ರಕಲೆಯ ಅನೇಕ ಪ್ರಕಾರಗಳನ್ನು ಗಮನಿಸಿ ಚಿತ್ರಕಲೆಯ ವಿವಿಧ ರೂಪಗಳನ್ನು ಮತ್ತು ಶೈಲಿ ಇತ್ಯಾದಿ ಅಂಶಗಳನ್ನು ಕನ್ನಡ (ಲಲಿತಕಲಾ) ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿ ಯಾವ ರೀತಿ ಬಳಕೆಯಾಗಿದೆ ಮತ್ತು ಅವುಗಳ ಪ್ರಕಾರಗಳು, ಅದರ ಮಹತ್ವ ಇತ್ಯಾದಿ ಅಂಶಗಳನ್ನು ಅರಿತುಕೊಳ್ಳುವ ಉದ್ದೇಶದಿಂದ ಈ ಅಧ್ಯಯನವು ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ ಮತ್ತು ಮುಖಪುಟದಲ್ಲಿ ಬಳಕೆಯಾದ

ಚಿತ್ರಕಲೆಯ ವಿವಿಧ ಪ್ರಕಾರಗಳಿಗೆ ಮಾತ್ರ ಸೀಮಿತಗೊಳಿಸಿದೆ. ಅವುಗಳಲ್ಲಿ ಚಿತ್ರಕಲಾ, ಶಿಲ್ಪಕಲಾ ಮತ್ತು ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿನ ತಾತ್ವಿಕ ಚಿಂತನೆಗಳನ್ನು ಹೆಚ್ಚು ಚರ್ಚಿಸಲಾಗುವುದು. ಹಾಗೂ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ನೃತ್ಯ ಮತ್ತು ಸಂಗೀತ ಅಕಾಡೆಮಿ, ಸಾಹಿತ್ಯ ಅಕಾಡೆಮಿ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿನ ತಾಂತ್ರಿಕ ಅಂಶಗಳು, ರಕ್ಷಾಪುಟ ವಿನ್ಯಾಸ ತತ್ತ್ವ/ನಿಯಮ, ವರ್ಣ, ಸಂಯೋಜನೆ, ಅಕ್ಷರಶೈಲಿ ಮುಂತಾದವುಗಳನ್ನು ಇಲ್ಲಿ ನೋಡಲಾಗುವುದು. ಹಾಗೂ ಚಿತ್ರಕಲೆಯ ಪ್ರಕಾರಗಳಾದ ರೇಖಾಚಿತ್ರ, ನೈಜಚಿತ್ರ, ಅಮೂರ್ತಚಿತ್ರ ಮತ್ತು ತಂತ್ರಜ್ಞಾನ ಆಧಾರಿತ ರಚನೆಗೊಂಡ ರಕ್ಷಾಪುಟ/ಚಿತ್ರಕಲೆಯೂ ಇಲ್ಲಿನ ವಿಷಯಕ್ಕೆ ಒಳಪಟ್ಟಿರುತ್ತದೆ.

**ಕಾಲಾವಧಿಯ ವ್ಯಾಪ್ತಿ:** ಚಿತ್ರಕಲೆಯು ಕನ್ನಡ ಗ್ರಂಥಗಳ ರಕ್ಷಾಪುಟದಲ್ಲಿ ಹೇಗೆ ಬಳಸಿಕೊಳ್ಳಲಾಗಿದೆ ಎಂಬುವುದನ್ನು ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಅವಧಿಯ (೧೯೦೦ ರಿಂದ ೨೦೦೦ರ ವರೆಗಿನ ಒಂದು ಶತಮಾನದ) ಕೆಲವು ಪ್ರಾತಿನಿಧಿಕ ಕನ್ನಡ ಗ್ರಂಥಗಳನ್ನು ಆಯ್ದುಕೊಂಡು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗುವುದು. ಅಲ್ಲದೆ ಸ್ವಾತಂತ್ರಪೂರ್ವ, ಸ್ವಾತಂತ್ರ್ಯೋತ್ತರ ಕಾಲಾವಧಿಯು ದಶಕಗಳಾಗಿ (ಉದಾ–ಐವತ್ತರ ದಶಕ, ಅರವತ್ತರ ದಶಕ, ಎಪ್ಪತ್ತರ ದಶಕ, ಎಂಬತ್ತರ ದಶಕ, ತೊಂಬತ್ತರ ದಶಕ) ವಿಂಗಡಿಸಿಕೊಂಡು ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿನ ತಾತ್ವಿಕ ಮತ್ತು ತಾಂತ್ರಿಕತೆ ಅಂಶಗಳನ್ನು ಚರ್ಚಿಸಲಾಗುವುದು. ಅಲ್ಲದೆ ಇಪ್ಪತೊಂದನೆ ಶತಮಾನದ ಮೊದಲ ದಶಕದ ಕೆಲವು ರಕ್ಷಾಪುಟ ಚಿತ್ರಕಲೆಯನ್ನು ಇಲ್ಲಿ ಹೆಚ್ಚಿನ ತಿಳಿವಳಿಕೆ ಅಥವಾ ಮಾರ್ಗದರ್ಶಿ ಅಥವಾ ಅಧ್ಯಯನದ ತೌಲನಿಕ ವಿವೇಚನೆಗಾಗಿ ನೋಡಲಾಗಿದೆ.

**ಸ್ವಾತಂತ್ರ್ಯಪೂರ್ವ ನೆಲೆ:** ಕನ್ನಡ ಸಾಹಿತ್ಯ ಪರಿಷತ್ ಗ್ರಂಥಾಲಯದಲ್ಲಿನ ಲಲಿತಕಲಾ ವಿಷಯಗಳ ಗಂಥ್ರಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳುವುದು ಅನಿವಾರ್ಯ ಮತ್ತು ಅವಶ್ಯಕವಾಗಿದೆ. ಕಾರಣ ಸ್ವಾತಂತ್ರ್ಯಪೂರ್ವ ಅವಧಿಯಲ್ಲಿ ಲಲಿತಕಲಾ ವಿಷಯಗಳಿಗೊಸ್ಕರ ಯಾವುದೇ ಅಕಾಡೆಮಿ/ಪ್ರಾಧಿಕಾರ ಕರ್ನಾಟಕದಲ್ಲಿ ಇರಲಿಲ್ಲ. ಹಾಗಂತ ೧೯೦೦ ರಿಂದ ೧೯೪೭ರವರೆಗೆ ಅಂದರೆ ಸ್ವಾತಂತ್ರ್ಯಪೂರ್ವ ಅವಧಿಯ ಕರ್ನಾಟಕದಲ್ಲಿ ಕನ್ನಡ ಗಂಥ್ರಗಳ ರಚನೆ ಕಾರ್ಯ, ಮುದ್ರಣಗಾರಿಕೆ, ಪ್ರಕಾಶನ, ಪ್ರಚಾರ ಮತ್ತು ಪ್ರಾಯೋಜಕತ್ವದ ಕೆಲಸ ನಡದೆ ಇಲ್ಲ ಎಂದಿಲ್ಲ. ಈ ಎಲ್ಲಾ ಕೆಲಸ ಕಾರ್ಯಗಳು ಖಾಸಗಿ/ವೈಯಕ್ತಿಕ ಮಟ್ಟದಲ್ಲಿ ಸ್ವಂತ ಆಸಕ್ತಿಯಿಂದ ಮಾಡಿರುವುದು ಐತಿಹಾಸಿಕ ಸತ್ಯ. ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ ಈ ರೀತಿ ನಡೆದ ಕನ್ನಡ ಸಾಹಿತ್ಯ ಕೃಷಿ ಅದು ಯಾವುದೇ ಕ್ಷೇತ್ರದ್ದಾಗಿರಲ್ಲಿ ಲಿಲತಕಲೆ ಅಥವಾ ಲಲಿತೇತರ ಕಲೆ ವಿಷಯ ಕುರಿತು ಪ್ರಕಟಿತ ಗ್ರಂಥಗಳು ಕನ್ನಡ ಸಾಹಿತ್ಯ ಪರಿಷತ್ ಗ್ರಂಥಾಲಯದ ಸಂಗ್ರಹದಲ್ಲಿ ಲಭ್ಯವಿರುವುದರಿಂದ ಇಲ್ಲಿನ ಸಂಗ್ರಹದಲ್ಲಿರುವ ಕನ್ನಡ ಲಲಿತಕಲಾ ಗ್ರಂಥಗಳ ಆಯ್ಕೆ ಯೋಗ್ಯವಾದದ್ದು ಎಂದು ಭಾವಿಸಿಕೊಳ್ಳಲಾಗಿದೆ. ಏಕೆಂದರೆ ಕನ್ನಡ ಸಾಹಿತ್ಯ ಪರಿಷತ್ ೧೯೧೫ ರಲ್ಲಿ ಪ್ರಾರಂಭವಾದ ಒಂದು ಸಾಹಿತ್ಯ ಚಟುವಟಿಕೆಯ ಸಂಸ್ಥೆ. ಅಕಾಡೆಮಿ ಪ್ರಾರಂಭವಾಗುವುದಕ್ಕೂ ಮುಂಚೆ ಅಂದರೆ ೧೯೬೪ರ

ವರೆಗಿನ ಮತ್ತು ಅದಕ್ಕೂ ಹಿಂದಿನಕಾಲಾವಧಿಯ ಕರ್ನಾಟಕದಲ್ಲಿ ಕನ್ನಡ ಗ್ರಂಥಗಳ ರಚನೆ ಮತ್ತು ಮುದ್ರಣ ಇತ್ಯಾದಿ ಕಾರ್ಯಗಳ ಅಧಿಕೃತ ಮಾಹಿತಿ ಅಥವಾ ನಂಬಲಾರ್ಹವಾದ ಮಾಹಿತಿ ಲಭ್ಯವಾಗುವುದು ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು ಇಲ್ಲಿಯೇ ಎಂದ ಅರಿತುಕೊಂಡು ಸಂಗ್ರಹಿಸಿಕೊಳ್ಳಲಾಗಿದೆ.

**ಸ್ವಾತಂತ್ರ್ಯೋತ್ತರ ನೆಲೆ:** ಕರ್ನಾಟಕ ಸರಕಾರವು ೧೯೬೪ರ ನಂತರ ಕೆಲವು ಅಕಾಡೆಮಿ ಸ್ಥಾಪಿಸಿತ್ತು. ಅದಾದ ಮೇಲೆ ಆಯಾ ಅಕಾಡೆಮಿಗಳು ಸ್ವಂತ ಅಸ್ತಿತ್ವ ಹೊಂದಿದ್ದರಿಂದ ಲಲಿತಕಲಾ ಕ್ಷೇತ್ರದ ಸಾಹಿತ್ಯ ಅಕಾಡೆಮಿ, ನಾಟಕ ಅಕಾಡೆಮಿ, ನೃತ್ಯ ಮತ್ತು ಸಂಗಿತ ಅಕಾಡೆಮಿ, ಲಲಿತಕಲಾ ಅಕಾಡೆಮಿ, ಶಿಲ್ಪಕಲಾ ಅಕಾಡೆಮಿ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಇವುಗಳಿಂದ ಕಲಾಸಕ್ತರಿಗೆ, ಕಲಾವಿದ್ಯಾರ್ಥಿಗಳಿಗೆ, ಕಲಾ ಬರಹಗಾರರಿಗೆ, ಸಂಶೋಧನಾ ಅಧ್ಯಯನಕ್ಕೆ ಹೆಚ್ಚು ಪ್ರೋತ್ಸಾಹ ಮತ್ತು ಉತ್ಸಾಹ ದೂರೆಯಿತು. ಇದರಿಂದ ಪುಸ್ತಕ ಬರವಣಿಗೆ ಅಥವಾ ರಚನೆ, ಮುದ್ರಣ, ಪ್ರಕಾಶನದಂತಹ ಕಾರ್ಯಚಟುವಟಿಕೆಯು ಸ್ವತಂತ್ರವಾಗಿ ನಿರ್ವಹಣೆ ಮಾಡಲಾರಂಭಿಸಿದವು. ಆದಕಾರಣ ಸ್ವಾತಂತ್ರ್ಯೋತ್ತರ ನಂತರದ ಅವಧಿಯಿಂದ ಈ ಅಧ್ಯಯನಕ್ಕೆ ಮೂಲ ಆಕರಗ್ರಂಥಗಳು ಆಯಾ/ವಿವಿಧ ಅಕಾಡೆಮಿಯು ಪ್ರಕಟಿಸಿದ ಮತ್ತು ಅವುಗಳ ಸಂಗ್ರಹದಲ್ಲಿದ್ದ ಗ್ರಂಥಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಭೌಗೋಳಿಕ ಮತ್ತು ಭಾಷೆಯ ವ್ಯಾಪ್ತಿ:** ಕರ್ನಾಟಕ ಮತ್ತು ಕನ್ನಡ, ಭೌಗೋಳಿಕವಾಗಿ ವಿಶಾಲವಾದ ಕರ್ನಾಟಕದಲ್ಲಿ ವೈಯಕ್ತಿಕ ಮತ್ತು ಖಾಸಗಿ ಮಟ್ಟದಲ್ಲಿ ನಡೆದ ಕನ್ನಡ ಗ್ರಂಥಗಳ ರಚನೆ ಮತ್ತು ಮುದ್ರಣ ಇತ್ಯಾದಿ ಕಾರ್ಯಗಳ ಮಾಹಿತಿ ಸಂಗ್ರಹವು ಈ ಸಂಶೋಧನೆಗೆ ತಾಂತ್ರಿಕವಾಗಿ ಹಲವು ಸಮಸ್ಯೆ ಒಡ್ಡುತ್ತದೆ ಉದಾ: ಪ್ರಾದೇಶಿಕವಾಗಿ ನೋಡುವುದಾದರೆ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಪೂರ್ವ ಕರ್ನಾಟಕ, ಪಶ್ಚಿಮ ಕರ್ನಾಟಕ–ಹೈದ್ರಾಬಾದ್ ಕರ್ನಾಟಕ, ಮುಂಬಯಿ ಕರ್ನಾಟಕ, ಮೈಸೂರು ಕರ್ನಾಟಕ, ಕರಾವಳಿ ಕರ್ನಾಟಕ, ಮಧ್ಯ ಕರ್ನಾಟಕ ಎಂಬಿತ್ಯಾದಿ ಅನೇಕ ಸಂಕೀರ್ಣ ಹಾಗೂ ಸೂಕ್ಷ್ಮಸಂವೇದನೆಯ ವಿಷಯವು ಉಲ್ಬಣಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಅಖಂಡ ಕರ್ನಾಟಕದ ಎಲ್ಲಾ ಭಾಗದಲ್ಲಿ ನಡೆದ ಎಲ್ಲಾ ಪ್ರಕಾರದ ಕನ್ನಡ ಸಾಹಿತ್ಯ ಕೃಷಿಯ ಅಥವಾ ಬರವಣಿಗೆಯ ಗ್ರಂಥಗಳು ಕನ್ನಡ ಸಾಹಿತ್ಯ ಪರಿಷತ್ ಗ್ರಂಥಾಲಯದಲ್ಲಿದ್ದ ಸ್ವಾತಂತ್ರ್ಯಪೂರ್ವ ಅವಧಿಯ ಮತ್ತು ಸ್ವಾತಂತ್ರ್ಯೋತ್ತರ ನಂತರ ಆಯಾ/ವಿವಿಧ ಅಕಾಡೆಮಿಗಳಲ್ಲಿ ಲಭ್ಯವಿದ್ದ/ ಉಪಲಬ್ಧವಿದ್ದ ಕಾರಣ ಇದುವೇ ನ್ಯಾಯಸಮ್ಮತ/ಯೋಗ್ಯ ಕೆಲಸವೆಂದು ಭಾವಿಸಿಕೊಂಡು ಕರ್ನಾಟಕ ರಾಜ್ಯದಲ್ಲಿನ ಕಾರ್ಯಚಟುವಟಿಕೆ ಮತ್ತು ಕನ್ನಡ ಭಾಷೆಯ ಗ್ರಂಥಗಳಿಗೆ ಮಾತ್ರ ಈ ಅಧ್ಯಯನದ ವ್ಯಾಪ್ತಿ ಒಳಪಟ್ಟಿರುತ್ತದೆ.

ಕನ್ನಡ ಭಾಷೆಯ ಇತರೆ ಸಾಹಿತ್ಯ ಪ್ರಕಾರ ಮತ್ತು ಕರ್ನಾಟಕೇತರ ಪ್ರದೇಶದಲ್ಲಿನ ಅವುಗಳ ವಸ್ತು ವಿಷಯಗಳು ಈ ಅಧ್ಯಯನಕ್ಕೆ ಒಳಪಡುವುದಿಲ್ಲ. ಈ ಅಧ್ಯಯನವು ಪ್ರಾತಿನಿಧಿಕ ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆಗೆ ಸೀಮಿತವಾಗಿದ್ದರೂ ಅಧ್ಯಯನದ ತೌಲನಿಕ ವಿವೇಚನೆ ಇತರ ದೇಶ ವಿದೇಶ ಹಾಗೂ ಗ್ರಂಥಗಳ ರಕ್ಷಾಪುಟಗಳನ್ನು ಪೂರಕವಾಗಿ ವಿವೇಚಿಸಲಾಗುವುದು ನೋಡಲಾಗವುದು/ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ವೈಧಾನಿಕತೆ**

ಈ ಅಧ್ಯಯನಕ್ಕೆ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಂಡು ಅವುಗಳ ವಿಶ್ಲೇಷಣೆ ಮಾಡಲಾಗಿದೆ.

೧. ಮೂಲ ಆಕರ ಸಾಮಗ್ರಿ    ೨. ಆನುಷಂಗಿಕ ಆಕರ ಸಾಮಗ್ರಿ

**೧. ಮೂಲ ಆಕರ ಸಾಮಗ್ರಿ**

ಮೂಲ ಆಕರ ಸಾಮಗ್ರಿಗಳಲ್ಲಿ ಕ್ಷೇತ್ರಕಾರ್ಯ ಅತೀ ಮುಖ್ಯವಾದ ಅಂಶವಾಗಿದ್ದು, ಈ ಮಹಾಪ್ರಬಂಧದ ಅಧ್ಯಯನ ಕ್ರಮಕ್ಕೆ ಅಗತ್ಯವಾಗಿ ಬೇಕಾಗುವಂತಹದ್ದು. ಒಂದು ನಾಡಿನ ಸಂಸ್ಕೃತಿ, ಇತಿಹಾಸ, ಕಲೆ ವಿಷಯಗಳ ಬಗ್ಗೆ ಸಂಶೋಧನೆ ಮಾಡುವಾಗ ಕ್ಷೇತ್ರಕಾರ್ಯ ಮುಖ್ಯವಾಗುತ್ತದೆ. ಇದು ಮೂಲ ಆಕರ ಸಾಮಗ್ರಿಗಳಿಂದ ಮಾಹಿತಿ ಸಂಗ್ರಹಿಸಲು ಸುಲಭ ಮಾರ್ಗವಾಗಿದೆ. ಈ ಅಧ್ಯಾಯಕ್ಕೆ ಮೂಲ ಆಕರ ಸಾಮಗ್ರಿಯಾಗಿ ಗ್ರಂಥಗಳ ಮೂಲ ರಕ್ಷಾಪುಟ / ಮುಖಪುಟಗಳನ್ನು ಬಳಸಿಕೊಳ್ಳಲಾಗಿದೆ. ಈ ಅಧ್ಯಯನಕ್ಕೆ ಪ್ರಮುಖವಾಗಿ ಕ್ಷೇತ್ರಕಾರ್ಯ ವಿಧಾನವನ್ನು ಬಳಸಲಾಗಿದೆ. ಮತ್ತು ಪೂರಕವಾಗಿ ತೌಲನಿಕ, ಕ್ಷೇತ್ರಿಯ ಅಧ್ಯಯನದ ವಿಧಾನಗಳನ್ನು ಸಹ ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಕ್ಷೇತ್ರಕಾರ್ಯ :** ಕ್ಷೇತ್ರಕಾರ್ಯದಲ್ಲಿ ಅವಲೋಕನ ಅತಿ ಮುಖ್ಯವಾದದ್ದು, ಮೂಲ ಗ್ರಂಥಗಳು ಇರುವ ಕಡೆಗೆ ಅನೇಕ ಬಾರಿ ಭೇಟಿಕೊಟ್ಟು ಅವುಗಳನ್ನು ಸೂಕ್ಷ್ಮವಾಗಿ ಗಮನಿಸಿ ಛಾಯಾಚಿತ್ರಣ ಮಾಡಿಕೊಂಡು ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಬರೆದುಕೊಳ್ಳಲಾಯಿತು. ಅಲ್ಲದೇ ಕರ್ನಾಟಕದಲ್ಲಿನ ಗ್ರಂಥಾಲಯಗಳು, ಕರ್ನಾಟಕ ಸರ್ಕಾರದ ವಿವಿಧ ಅಕಾಡೆಮಿಗಳು ಹಾಗೂ ವಿವಿಧ ಧಾರ್ಮಿಕ ಮಠ–ಮಾನ್ಯಗಳಿಗೆ ಭೇಟಿ ನೀಡಿ ಅಲ್ಲಿನ ಅಧಿಕಾರಿ ವರ್ಗದವರಿಂದ ಮಾಹಿತಿ ಪಡೆದುಕೊಳ್ಳಲಾಗಿದೆ.

**ಸಂದರ್ಶನ :** ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ ಅಧ್ಯಯನ ಕೈಗೊಂಡಾಗ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸುವ ಸಂದರ್ಭದಲ್ಲಿ ಮುಖಪುಟ ಕಲಾವಿದರುಗಳಾದ ಶ್ರೀ. ಪ.ಸ. ಕುಮಾರ, ಬೆಂಗಳೂರು; ಶ್ರೀ. ಕೆ. ಕೆ. ಮಕಾಳೆ, ಹಂಪಿ; ಶ್ರೀ. ಎನ್.ಆರ್. ಬಡಿಗೇರ, ಬೆಂಗಳೂರು; ಕಲಾವಿದರುಗಳಾದ ಶ್ರೀ. ರಾಮದಾಸ ಅಡ್ಯಂತಾಯ, ಮೈಸೂರು; ಶ್ರೀ ಸುರೇಶ ಹಾಲಭಾವಿ, ಧಾರವಾಡ; ಪ್ರೊ. ಮಲ್ಲಿಕಾರ್ಜುನ ಜಾಧವ್, ದಾವಣಗೆರೆ; ಡಾ. ಬಸವರಾಜ ಗವಿಮಠ, ಬಾಗಲಕೋಟೆ ಮುಂತಾದ ಕಲಾವಿದರುಗಳು ನೀಡಿದ ಮಾಹಿತಿಗಳನ್ನು ಸಂದರ್ಶಿಸಿ, ಧ್ವನಿ ಮುದ್ರಿಸಿಕೊಂಡು ನಂತರ ಮರುಪರಿಶೀಲನೆ ನಡೆಸಿ ಸೂಕ್ತ ಮಾಹಿತಿಗಳನ್ನು ಸಂಗ್ರಹಿಸಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಛಾಯಾಚಿತ್ರಣ :** ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಓರಿಯಂಟಲ್ ಲೈಬ್ರರಿ, ಮೈಸೂರು; ಕರ್ನಾಟಕ ಲಲಿತಕಲಾ ಅಕಾಡೆಮಿ; ಕರ್ನಾಟಕ ಶಿಲ್ಪಕಲಾ ಅಕಾಡೆಮಿ; ಕರ್ನಾಟಕ ನಾಟಕ ಅಕಾಡೆಮಿ; ಕರ್ನಾಟಕ ನೃತ್ಯ ಮತ್ತು ಸಂಗೀತ ಅಕಾಡೆಮಿ; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ;

ಕೇಂದ್ರ ಗ್ರಂಥಾಲಯ; ಕನ್ನಡ ಸಾಹಿತ್ಯ ಪರಿಷತ್ತು; ಜೈನ ಬಸದಿ, ಮೂಡಬಿದರಿ ಮುಂತಾದ ಸ್ಥಳಗಳನ್ನು ಭೇಟಿ ನೀಡಿ ಅಲ್ಲಿ ಸಂಗ್ರಹಗೊಂಡ ಗ್ರಂಥಗಳನ್ನು ಛಾಯಾಚಿತ್ರಣ ಮಾಡಿಕೊಳ್ಳಲಾಯಿತು. ಈ ಅಧ್ಯಾಯದಲ್ಲಿ ಛಾಯಾಚಿತ್ರವು ಸ್ಪಷ್ಟವಾಗಿ ಕಾಣುವಂತೆ ಸಂಗ್ರಹಿಸುವುದು ಬಹುಮುಖ್ಯ ಪಾತ್ರವಾಗಿದೆ ಎಂದು ತಿಳಿದು ಸೂಕ್ಷ್ಮವಾಗಿ ಸಂಗ್ರಹಿಸಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿ**

ಸಂಶೋಧನಾ ಮಹಾಪ್ರಬಂಧಗಳು ಪ್ರಕಟಿತ, ಅಪ್ರಕಟಿತ ಕೃತಿಗಳು, ನಿಘಂಟುಗಳು, ಗೆಝೆಟಿಯರ್‌ಗಳು, ಪತ್ರಿಕಾ ಲೇಖನಗಳು, ರಕ್ಷಾಪುಟಗಳ/ಮುಖಪುಟದ ಕುರಿತು ಪ್ರಕಟವಾದ ಲೇಖನಗಳು, ವಿಮರ್ಶೆ ಸಂಶೋಧನಾ ಲೇಖನಗಳು ವಿಷಯಕ್ಕೆ ಸಂಬಂಧಿಸಿದ ಬೇರೆ ಬೇರೆ ಬಿಡಿ ಲೇಖನಗಳು, ಗ್ರಂಥಾಲಯಗಳು, ದಿನ ಪತ್ರಿಕೆಗಳು, ಮುಂತಾದ ವರದಿಗಳು, ಅಂತರ್‌ಜಾಲ ಇತ್ಯಾದಿಗಳನ್ನು ಆನುಷಂಗಿಕ ಆಕರ ಸಾಮಗ್ರಿಗಳಾಗಿ ಬಳಸಿಕೊಂಡು ಅಧ್ಯಯನವನ್ನು ರೂಪಿಸಲಾಗಿದೆ.

❑❑❑

ಅಧ್ಯಾಯ : ಎರಡು

# ರಕ್ಷಾಪುಟ ಚಿತ್ರಕಲೆಯ ನೆಲೆ–ಹಿನ್ನೆಲೆ ಮತ್ತು ಬೆಳವಣಿಗೆ

ಸಾಹಿತ್ಯದ ಪ್ರತಿಭೆಯನ್ನು ಉಪಯುಕ್ತ ಜ್ಞಾನದ ಮಾಹಿತಿಗಳ ಶೇಖರಣೆಯ ಪುಸ್ತಕಗಳನ್ನು ಸಂರಕ್ಷಿಸಲು ಉಪಯೋಗಿಸಿದ ಹೊಸ ವಿಧಾನವೇ ಪುಸ್ತಕದ ರಕ್ಷಾಕವಚ ಅಥವಾ ಪುಸ್ತಕ ಹೊದಿಕೆ. ಆದರೆ ಈ ರಕ್ಷಾಕವಚವು ಕೇವಲ ಕವಚವಾಗದೇ ಅದಕ್ಕೊಂದು ಅಂದ, ಲಕ್ಷಣವನ್ನು ಹೆಚ್ಚಿಸಲು ಬೇಕಾದ ಕೆಲವು ಹೊಸ ವಿಧಾನಗಳನ್ನು ಅಳವಡಿಸಲು ಮುಂದಾದರು ಪುಸ್ತಕಗಳ ರಚನೆಯು ಪ್ರಾರಂಭವಾದಾಗ ಇವುಗಳನ್ನು ರಕ್ಷಿಸಲು ಸಡಿಲವಾದ, ಅಗಲವಾದ ಚರ್ಮದ, ಹಾಳೆಯ ಹಾಸಿನಲ್ಲಿ ಹಾಳೆಗಳ ಕಂತೆಗಳನ್ನು ಶೇಖರಿಸಿ ಹಾಳೆಯ ಹಾಸಿನಿಂದ ಮುಚ್ಚಿ ದಾರದಿಂದ ಬಿಗಿದು ಕಟ್ಟುತ್ತಿದ್ದರು. ಕೆಲಕಾಲಗಳನಂತರ ಈ ಹೊದಿಕೆಗಳ ಮೇಲೆ ಚಿತ್ರಗಳನ್ನು ಬಿಡಿಸುವ ರೂಢಿಯನ್ನು ಬೆಳೆಸಿಕೊಂಡರು. ಇದು ಪುಸ್ತಕಗಳ ರಕ್ಷಣೆಯಷ್ಟೇ ಅಲ್ಲದೇ, ಅವುಗಳನ್ನು ಗುರುತಿಸಲು ಮತ್ತು ಮಾರಾಟ ಮಾಡಲು ಸುಲಭವಾಗಿ ಸಹಾಯಕಾರಿಯಾಗುತ್ತಿತ್ತು. ಇದು ಓದುಗ ಪ್ರಿಯರಿಗೆ ಆಕರ್ಷಣೀಯಕಾರಿಯಾಗುತ್ತಿತ್ತು ಚಕಿತಗೊಳಿಸುತ್ತಿತ್ತೆಂದು ಹೇಳಲಾಗಿದೆ.[೧]

**ಮುಖಪುಟ, ರಕ್ಷಾಪುಟ ಮತ್ತು ಪುಸ್ತಕ ಹೊದಿಕೆ ಅರ್ಥ**

ಮುಖ/ಮುಖಪುಟ ಈ ಪದವು 'ಮುಂಭಾಗ, ಹೊರಭಾಗ, ಹೊರಮೈ, ಪ್ರಾರಂಭ, ಎದರು, ಮುಖ್ಯ, ಪ್ರಧಾನ'[೨] ಎಂಬ ಅರ್ಥವುಳ್ಳ ಶಬ್ಧವಾಗಿದೆ. ಅಂದರೆ ಯಾವುದೇ ಭೌತಿಕ ಲಕ್ಷಣಹೊಂದಿದ ವ್ಯಕ್ತಿ ಅಥವಾ ಒಂದು ಘನವಸ್ತುವಿನ ಪ್ರಥಮ/ತಕ್ಷಣದ ನೋಟವಾಗಿರುತ್ತದೆ. ಉದಾ: ಮನೆಯ ಹೊರಬಾಗಿಲು/ ಮುಂಬಾಗಿಲು, ಅಂಗಡಿಯ ಮುಂಬಾಗಿಲು, ವಾಹನದ ಮುಂದಿನ ಭಾಗ ಇದು ಆ ಕ್ಷಣದಲ್ಲಿ ಮುಖ್ಯಭಾಗ/

೦೧. Dictionary of Art, Vol-IV, pp. 368-369

೧೨. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ). ಪು–೧೦೨೦. ೧೦೨೧. ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೧

ಮುಖಭಾಗವಾಗಿ ಆ ದೃಶ್ಯದ ಒಂದು ನೋಟ/ತುಣುಕು ನೋಡುಗರಿಗೆ ಕಾಣುತ್ತದೆ. ಪ್ರಥಮ ಅಥವಾ ತಕ್ಷಣ ನೋಡಬೇಕಾದ ಒಂದು ಪ್ರಧಾನ ಭಾಗವೆ/ಪ್ರಮುಖ ಅಂಗಕ್ಕೆ ಮುಖ ಎಂದು ಹೇಳಬಹುದು. (ವಧು-ವರರ ಅನ್ವೇಷಣೆಯಲ್ಲಿ ತಕ್ಷಣ/ಥಟ್ಟನೆ/ಕ್ಷಣಾರ್ಧದಲ್ಲಿ ವ್ಯಕ್ತಿಯ ಮುಖದಕಡೆಗೆ ದೃಷ್ಟಿಹೋಗುವುದು). ಪುಟ ಇದು ಸಂಸ್ಕೃತದ ಪೃಷ್ಠಿ ಎಂಬ ಶಬ್ದದ ತದ್ಭವ. ಒಂದು ವಸ್ತುವಿನ ಒಂದು ಮುಖ, ಮುಂಭಾಗ ಅಥವಾ ಹಿಂಭಾಗ, ಕನ್ನಡದಲ್ಲಿ ಕಾಗದದ ಒಂದು ಹಾಳೆಯ ಯಾವುದಾದರೂ ಒಂದು ಮುಖ, ಇಂಗ್ಲೀಷ್‌ನ Page ಎಂಬ ಶಬ್ದಕ್ಕೆ ಸಮಾನ.

ಕವಚ ಈ ಶಬ್ದವು 'ಹೊದಿಕೆ, ಆವರಣ, ಉಕ್ಕಿನ ಅಂಗಿ, ರಕ್ಷಾಮಂತ್ರ, ರಕ್ಷೆ'[೩] ಎಂಬ ಅರ್ಥವುಳ್ಳದ್ದಾಗಿದೆ. ಅಂದರೆ ವಸ್ತುಗಳು ಅಥವಾ ವ್ಯಕ್ತಿಗಳು ಹವಾಮಾನ, ವಾತವರಣ, ಋತುಮಾನ, ಕ್ರಿಮಿ, ಕೀಟಾಣು, ಹುಳ, ಜಂತು ಮುಂತಾದವುಗಳಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಲು ನೈಸರ್ಗಿಕ ಮತ್ತು ಮಾನವ ನಿರ್ಮಿತ ಮಾಡಿಕೊಂಡ ಒಂದು ರಕ್ಷಣಾತ್ಮಕ ವಸ್ತುವಿಗೆ ಕವಚ ಅಥವಾ ರಕ್ಷಾಕವಚ/ಹೊದಿಕೆ ಎಂದು ಹೇಳಬಹುದು. ಇಂಗ್ಲಿಷ್‌ನ Cover page ಮತ್ತು Book jecket ಎಂಬ ಶಶ್ದಕ್ಕೆ ಇದು ಸಮಾನ ಅರ್ಥಹೊಂದಿದೆ.

ಈ ಹಿನ್ನೆಲೆಯಲ್ಲಿ ಮುಖಪುಟ ಎಂದರೆ ಪುಸ್ತಕ, ಪತ್ರಿಕೆ ಗ್ರಂಥದ ಪ್ರಥಮ ಭಾಗ ಅಥವಾ ಮುಖಭಾಗ ಅಥವಾ ಪ್ರಧಾನ ಅಂಗಕ್ಕೆ ಅಥವಾ ಹೊರಮೈ/ಹೊರಭಾಗ, ಮುಖ್ಯ/ಮೊದಲಪುಟವೆ ಮುಖಪುಟ ಎಂದು ಅರ್ಥೈಸಿಕೊಳ್ಳಬೇಕು ಮತ್ತು ರಕ್ಷಾಕವಚ ಎಂದರೆ ಪುಸ್ತಕ-ಗ್ರಂಥದ ಮುಖಪುಟ ಮತ್ತು ಹಿಂಬದಿಪುಟ ಎರಡು ಸೇರಿರುವ/ಒಟ್ಟುಗೊಂಡಿರುವ ವಿನ್ಯಾಸಕ್ಕೆ ರಕ್ಷಾಕವಚ/ರಕ್ಷಾಪುಟ/ಪುಸ್ತಕ ಹೊದಿಕೆ ಎಂದು ಕರೆಯಲಾಗುತ್ತದೆ.

ಒಟ್ಟಾರೆ ತಾಂತ್ರಿಕವಾಗಿ ಮುಖಪುಟ, ರಕ್ಷಾಕವಚ, ರಕ್ಷಾಪುಟ, ಪುಸ್ತಕಹೊದಿಕೆ ಎಂಬಿತ್ಯಾದಿ ಹೆಸರಿಂದ ಗುರುತಿಸಿಕೊಳ್ಳುವ ಈ ವಿನ್ಯಾಸವು ಸಂರಕ್ಷಣೆಯ ಮೂಲ ಉದ್ದೇಶದಿಂದ ಹುಟ್ಟಿಕೊಂಡು ನಂತರ ಸಂವಹನ/ಸಂಪರ್ಕ ಮಾಧ್ಯಮವಾಗಿ ಬೆಳೆದು ಇಂದು ಜಾಗತೀಕರಣದ ನೆಲೆಯಲ್ಲಿ ಸಂರಕ್ಷಣೆ, ಸಂವಹನ, ಸಂಪರ್ಕ ಮಾಧ್ಯಮದೊಂದಿಗೆ ಸೌಂದರ್ಯ ಪ್ರಜ್ಞಾಪೂರ್ಣವಾಗಿ ರಚನೆಗೊಳ್ಳುತ್ತಿದೆ ಎಂಬ ಅಂಶವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಇಲ್ಲಿ ಮುಖಪುಟ, ರಕ್ಷಾಕವಚ/ರಕ್ಷಾಪುಟ ಮತ್ತು ಪುಸ್ತಕಹೊದಿಕೆ ಈ ಮೂರು ಬಗೆಗಳ ಅಂಗಗಳು, (Elements) ವಿನ್ಯಾಸದಲ್ಲಿನ ಸಾಮ್ಯತೆ ಮತ್ತು ಭಿನ್ನತೆಗಳನ್ನು ಈ ರೇಖಾಚಿತ್ರದ ಮೂಲಕ ಸ್ಪಷ್ಟವಾಗಿ ತಿಳಿದು ಕೊಳ್ಳಬಹುದು.

'ಪ್ರಾಚೀನ ಕಾಲದಲ್ಲಿ ಸುಮೇರಿಯನ್ನರು, ಬ್ಯಾಬಿಲೋನಿಯನ್ನರು, ಅಸ್ಸೀರಿಯನ್ನರು ಮತ್ತು ಹಿಬ್ಬಟೀಯನ್ನರು ಮಣ್ಣಿನ ಪಾಟಿಗಳ ಮೇಲೆ ಬರೆಯುವ ಕಲೆಯನ್ನು ರೂಢಿಸಿಕೊಂಡಿದ್ದರು. ಈ ಮಣ್ಣಿನ ಪಾಟಿಗಳನ್ನು ವಿವಿಧ ಆಕಾರಗಳಲ್ಲಿ ಮತ್ತು ಅಳತೆಗಳಲ್ಲಿ ರಚಿಸುತ್ತಿದ್ದರು. ಹೆಚ್ಚಿನವುಗಳು ಐದು ಅಂಗುಲ

೦೩. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ), ಪು-೨೪೧, ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೧

## ೧. ಮುಖಪುಟ




## ೨. ರಕ್ಷಾಪುಟ




## ೩. ಪುಸ್ತಕ ಹೊದಿಕೆ



ಉದ್ದ ಮತ್ತು ಒಂದು ಅಥವಾ ಎರಡು ಅಂಗುಲ ಅಗಲವಿರುವ ಪಾಟಿಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು ಮತ್ತು ಅವುಗಳ ಹಿಂಬದಿಯಲ್ಲಿ ಸಂಖ್ಯೆಗಳನ್ನು ಬರೆದು ಸಂಖ್ಯೆಗಳ ಮೂಲಕ ಜೋಡಿಸಿ ಓದುವ ಪದ್ಧತಿಯನ್ನು ರೂಢಿಸಿಕೊಂಡಿದ್ದು ಕಂಡು ಬರುತ್ತದೆ. ಕ್ರಮೇಣ ಅವು ಬೇಗನೆ ಹಾಳಾಗಬಾರದೆಂದು, ಯಾವುದೇ ಹಾನಿಗೊಳಗಾಗಬಾರದೆಂದು, ಒಡೆದು ಹೋಗಬಾರದೆಂದು ಅವುಗಳನ್ನು ಕುಲುಮೆಯಲ್ಲಿ ಸುಟ್ಟು ಅಥವಾ ಸೂರ್ಯನ ಶಾಖಕ್ಕೆ ಒಣಗಿಸಿ ಅವುಗಳಿಗೆ ಅಂತಿಮರೂಪ ಕೊಟ್ಟು ಅವುಗಳನ್ನು ಜೋಪಾನವಾಗಿಡುತ್ತಿದ್ದರೆಂದು ತಿಳಿದುಬಂದಿದೆ. ಕೆಲವಡೆ ಈ ಪಾಟಿಗಳನ್ನು ಹೊಸ ಶೈಲಿಯಲ್ಲಿ ರಚಿಸಿ ಅವುಗಳ ಅಂದವನ್ನು ಹೆಚ್ಚಿಸಿರುವುದು ಕಂಡುಬಂದಿದೆ. ಈ ರೀತಿ ಪ್ರಾಚೀನ ಯುಗದ ಪುಸ್ತಕಗಳ ಬಗ್ಗೆ ನಮಗೆ ಮಾಹಿತಿ ದೊರೆಕಿರುವುದು ಕಂಡುಬರುತ್ತದೆ'.[೪] ಹೀಗೆ ನಾಗರಿಕತೆ ರೂಪುಗೊಳ್ಳುತ್ತ ಬಂದಂತೆಲ್ಲ ಆಯಾ ದೇಶದ ಜನಾಂಗ ಅನೇಕ ಕಾರಣಾಂತರಗಳಿಗೋಸ್ಕರ (ತಮ್ಮ ಮುಂದಿನ ಪೀಳಿಗೆಗೆ ತಾವು ಮಾಡಿರುವ ಸಾಧನೆ ಗೊತ್ತಾಗಲೆನ್ನುವುದು ಅದರ ಉದ್ದೇಶ ಎಂದು ನಂಬಬಹುದು) ಕಲ್ಲುಗಳ ಮೇಲೆ ಅಕ್ಷರ ಲಿಪಿಯನ್ನು ಕೆತ್ತುವುದರ ಮೂಲಕ ಒಂದು ಶಿಸ್ತುಬದ್ಧರೂಪದಲ್ಲಿ ಅಕ್ಷರಲಿಪಿಯನ್ನು ಅಳವಡಿಸಿಕೊಳ್ಳತೊಡಗಿದರು. ಕ್ರಮೇಣ, ವರ್ಷಗಳುರುಳಿದಂತೆ, ವೈಚಾರಿಕ ಪ್ರಜ್ಞೆ, ನಾಗರಿಕ ಪ್ರಜ್ಞೆ ಹೆಚ್ಚು ಹೆಚ್ಚು ಜಾಗೃತಗೊಳ್ಳುತ್ತಾ ಬಂದಂತೆ ಅಧಿಕಾಧಿಕ ಮಾಹಿತಿಗಳನ್ನು ಸಂಗ್ರಹಿಸುತ್ತಾ, ಬಟ್ಟೆಯ ಮೇಲೆ ಸಂದೇಶ ಮಾಹಿತಿ ಬರೆಯತೊಡಗಿದರು.

ಕಾಗದ ಮತ್ತು ಮುದ್ರಣ ಯಂತ್ರ ಸಂಶೋಧನೆಯಾದ ನಂತರ ಕಾಗದದ ಲಿಪಿಯ ಮೂಲಕ ಮುದ್ರಣ ಯಂತ್ರದ ಸಹಾಯದೊಂದಿಗೆ ಮಾಹಿತಿ ಸಂಗ್ರಹಿಸುವ ಪದ್ಧತಿ ಪ್ರಾರಂಭವಾಯಿತು, ಈ ಪದ್ಧತಿ ಕಾಲಾನುಕ್ರಮದಲ್ಲಿ ನಾಗರಿಕತೆಯಲ್ಲಿ ಸಂಭವಿಸಿದ ವೈಜ್ಞಾನಿಕ ಪ್ರಗತಿ, ಬೌದ್ಧಿಕ ವಿಕಾಸ ಈ ಎಲ್ಲ ಬೆಳವಣಿಗೆಗಳ ಪರಿಣಾಮವಾಗಿ ಹೆಚ್ಚಿನಮಾಹಿತಿ, ಜ್ಞಾನ ತಿಳಿವಳಿಕೆಯನ್ನು ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸುವುದ-ಕೋಸ್ಕರವೂ, ಸುರಕ್ಷಿತವಾಗಿರುವುದಕೋಸ್ಕರವೊ, ತನಗೆ ಅಗತ್ಯ ಬಿದ್ದಾಗ ಪುನರಾವಲೋಕನಕ್ಕೆಂದೊ ತನ್ನ ಸಹಚರರಿಗೆ, ಸಮಾಜಕ್ಕೆ ಲಿಪಿಬದ್ಧಗೊಂಡ ತನ್ನ ಇಂಗಿತವನ್ನು ಶಿಸ್ತುಬದ್ಧವಾಗಿ, ಒಪ್ಪ ಓರಣವಾಗಿ ಕಾದಿಟ್ಟು ಪ್ರಸ್ತುತಪಡಿಸಿ ಆ ಮೂಲಕ ಆ ಕುರಿತು ಮಾಹಿತಿ ವಿನಿಮಯ ಮಾಡಿಕೊಳ್ಳಬೇಕೆನ್ನುವ ಉದ್ದೇಶದಿಂದಲೋ ಹೀಗೆ ಹತ್ತು-ಹಲವಾರು ಅವಶ್ಯಕತೆಗಳಿಗೋಸ್ಕರ ವಿಚಾರವಂತ ನಾಗರಿಕ ತನ್ನ ಲಿಪಿ ಬರಹವನ್ನು ಪುಸ್ತಕದ ರೂಪದಲ್ಲಿ ಪ್ರಸ್ತುತಪಡಿಸ ತೊಡಗಿದ.

ಅಂದಿನಿಂದಲೇ ಪುಸ್ತಕ ಪ್ರಕಟನೆ ಆರಂಭವಾಯಿತೆಂದು ಊಹಿಸಬಹುದು, ಕಾಲಾನುಕ್ರಮದಲ್ಲಿ ನಾಗರಿಕ ಸಮಾಜದಲ್ಲಿ ರೂಪುಗೊಳ್ಳುತ್ತ ಬಂದ ಸೌಂದರ್ಯ ಪ್ರಜ್ಞೆಯ ಕಾರಣದಿಂದಾಗಿ ಪುಸ್ತಕವನ್ನು ಅಂದಗೊಳಿಸುವ ಮನಸ್ಸು ಮಾಡತೊಡಗಿದ. ಪುಸ್ತಕದ ಒಳಗಿನ ಸಂಗತಿಯತ್ತ ಓದಲು ತನ್ನವರನ್ನು ಪ್ರೇರೇಪಿಸಬೇಕೆಂದು, ಪುಸ್ತಕ ಹೊರಗಿನ ಆಕಾರವೂ ಸಹ ಚೆಂದವಾಗಿರಬೇಕೆಂದು ಗಮನಿಸಿ, ಆ ಕುರಿತು ಪ್ರಯೋಗಶೀಲನಾದ ಪರಿಣಾಮವಾಗಿ ವರ್ಷಗಳುರುಳಿದಂತೆ ಪುಸ್ತಕದ ಹೊರಗಿನ ರಕ್ಷಾಪುಟಕ್ಕೆ ಬಗೆ

---

೦೪. Dr. G M. Rege : World of Visual communication, p.no.53-54

ಬಗೆಯ ವಿನ್ಯಾಸಗಳನ್ನು ರೂಪಿಸಿತೊಡಗಿದ, ಹೀಗೆ ರಕ್ಷಾಪುಟ ಅಂದದ ವಿನ್ಯಾಸಕ್ಕೊಳಪಡತೊಡಗಿತು. ಬಾಹ್ಯ ಸೌಂದರ್ಯವೇ ಅಂತರಂಗದ ಸೌಂದರ್ಯಾಸ್ವಾದನೆಯ ಪ್ರಥಮ ಹಂತವೆಂದು ಅರಿವಾಗತೊಡಗಿತು. ಹಾಗಾಗಿ ರಕ್ಷಾಪುಟದ ಒಪ್ಪ ಓರಣ, ಸೊಬಗು, ಆಕರ್ಷಣೆಯತ್ತ ಹೆಚ್ಚು ಹೆಚ್ಚು ಗಮನನೀಡತೊಡಗಿದ ಮುಖಪುಟ/ರಕ್ಷಾಪುಟ ವಿನ್ಯಾಸಗಾರಿಕೆಯನ್ನು ಗ್ರಂಥದ ಪರಿಪೂರ್ಣತೆಯ ಅತ್ಯಗತ್ಯ/ಅನಿವಾರ್ಯ ಅಂಶ ಎಂದು ಪರಿಭಾವಿಸತೊಡಗಿದ, ಅದರಿಂದಾಗಿ ರಕ್ಷಾಪುಟ/ಮುಖಪುಟ ಕೇವಲ ರಕ್ಷಾ ಕವಚವಷ್ಟೇ ಅಗಿ ಪರಿಗಣಿತವಾಗದೆ, ಗ್ರಂಥದ ಒಟ್ಟಾರೆ ಅರ್ಥವನ್ನು ಧ್ವನಿಸುವ ಸಾಹಿತ್ಯಾಸಕ್ತರ ಕಣ್ಣುಸೆಳೆಯಬಲ್ಲ, ಬರಹಗಳ ಸಮೂಹಕ್ಕೊಂದು ಓರಣವಾದ ಶಿಸ್ತನ್ನು ಒದಗಿಸಬಲ್ಲ ಮೌಲಿಕತೆ ಉಳ್ಳದ್ದುದೆಂಬ ಭಾವನೆ ಸಾಹಿತ್ಯವಲಯದಲ್ಲಿ ಪ್ರಚಲಿತಕ್ಕೆ ಬಂತು, ಕ್ರಮೇಣ ಅದರಲ್ಲೂ ಪ್ರಾವೀಣ್ಯತೆ, ಕಲಾತ್ಮಕತೆ, ಅಭಿವ್ಯಕ್ತಿ. ಸಾಮರ್ಥ್ಯ ಈ ಎಲ್ಲ ಅಂಶಗಳು ಪರಿಗಣಿತವಾಗತೊಡಗಿದುವು, ಇಂದು ಮುಖಪುಟವಿನ್ಯಾಸ ಎನ್ನುವುದು ಒಂದು ಪ್ರತ್ಯೇಕ ಕಲಾಪ್ರಕಾರ ಎನ್ನುವಷ್ಟರಮಟ್ಟಿಗೆ ಗುರ್ತಿಸಿಕೊಳ್ಳುತ್ತಿದೆ.

ಮುಖಪುಟ ವಿನ್ಯಾಸಕಾರನೆಂದರೆ ಬಹುಮುಖಿ ಪ್ರತಿಭಾವಂತನಾಗಿರುವ ಏಕ ಕಾಲದಲ್ಲಿ ಸಾಹಿತ್ಯದ ಅರ್ಥ ಗ್ರಹಣ ಸಾಮರ್ಥ್ಯಧ ಜೊತೆಗೆ ಸಂಕ್ಷಿಪ್ತವಾಗಿ ಅತಿ ವಿಶಿಷ್ಟವಾಗಿ ತನ್ನ ಕಲಾಕೌಶಲ್ಯ ಮೇಳೈಸಿ ಸಂಬಂಧಪಟ್ಟ ಸಾಹಿತ್ಯದ ಸಾರವನ್ನು ಮುಖಪುಟದ ವಿನ್ಯಾಸದ ಮೂಲಕ ಹರಳುಗಟ್ಟಿಸಬಲ್ಲ ಪ್ರತಿಭಾಶಾಲಿ ಎಂಬ ಧೋರಣೆ ರೂಪುಗೊಂಡಿದೆ. ಅಷ್ಟರಮಟ್ಟಿಗೆ ಮುಖಪುಟ ವಿನ್ಯಾಸಗಾರಿಕೆ ಸಂಕೀರ್ಣವಾಗಿ ಬೆಳೆದಿದೆ. ಭಾರತದಲ್ಲಿ ಸಹ ಮುಖಪುಟಗಳ ಇತಿಹಾಸ ವಾಸ್ತವವಾಗಿ ಆರಂಭಗೊಳ್ಳುವದು ಹಸ್ತಪ್ರತಿಗಳ ಉಗಮದ ಅವಧಿಯಿಂದಲೇ ಎನ್ನಬಹುದು, ಏಕೆಂದರೆ ಹಸ್ತಪ್ರತಿಗಳನ್ನು ರಚಿಸಿದವರು ಅದರ ಒಪ್ಪ ಓರಣದ ಸಲುವಾಗಿ ಅದಕ್ಕೊಂದು ಶಿಸ್ತಾದ ದಪ್ಪಗಿನ ಹೊದಿಕೆಯನ್ನು ಕೊಟ್ಟಿರುವುದೇ ಮುಖಪುಟದ ಪರಿಕಲ್ಪನೆಗೆ ನಾಂದಿ ಹಾಡಿತು ಎಂದು ಅಭಿಪ್ರಾಯಪಡಬಹುದು. ಭಾರತದಲ್ಲಿ ಪುಸ್ತಕದ ಕಟ್ಟುಗಳನ್ನು ಕಟ್ಟುವ ಕಲೆಯು ಪ್ರಾಚೀನ ಕಾಲದಲ್ಲಿ ಆರಂಭವಾಯಿತು. ಅಂದಿನ ಧಾರ್ಮಿಕ ಸೂತ್ರಗಳನ್ನು ತಾಳೆ ಎಲೆಯ ಎರಡೂ ಬದಿಯಲ್ಲಿ ಬರೆದು ಅವುಗಳನ್ನು ಒಣಗಿಸಿ ಅವುಗಳದ್ದೇ ಸಂಖ್ಯೆಗಳನ್ನು ಬರೆದು ಎರಡೂ ಬದಿಯ ರಂಧ್ರಗಳನ್ನು ಕೊರೆದು ದಪ್ಪನೆಯ ದಾರದ ಸಹಾಯದಿಂದ ಕಟ್ಟುತಿದ್ದರು ಮತ್ತು ಇವುಗಳನ್ನು ಸಂರಕ್ಷಿಸಲು ಮೇಲೆ ಮತ್ತು ಕೆಳಗೆ ಮರದ ಚೌಕಾಕಾರದ ತುಂಡುಗಳನ್ನು ಹಾಕಿ ಕಟ್ಟುತ್ತಿದ್ದರು.

ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ಹೇಗೆ ಪುಸ್ತಕ ತಯಾರಿಸುತ್ತಿದ್ದರೊ ಹೆಚ್ಚು ಕಡಿಮೆ ಅದೇ ರೀತಿಯಲ್ಲಿ 'ಈಜಿಪ್ಟಿಯನ್ನರು ಪ್ಯಾಪಿರಸ್ ಸುರುಳಿಗಳನ್ನು ಮತ್ತು ಪುಸ್ತಕಗಳನ್ನು ಇದೇ ರೀತಿಯ ವಿಧಾನದಿಂದ ಪುಸ್ತಕದ ಕಟ್ಟುಗಳನ್ನು ತಯಾರಿಸುತ್ತಿದ್ದರು. ಮಾಯನ್ ಜನಾಂಗದವರು ಬಳಸುತ್ತಿದ್ದ ವಿಧಾನವನ್ನೂ ನಾವು ನೋಡಬಹುದು. ಹೆಲೆನ್‌ಸ್ಟಿಕ್-ರೋಮನ್ನರು ಉದ್ದನೆಯ ಸುರುಳಿಗಳನ್ನು ಬರೆದು ಸುತ್ತುತ್ತಿದ್ದರು. ನ್ಯಾಯಾಲಯಕ್ಕೆ ಸಂಬಂಧಿಸಿದ ವಿಷಯದ ದಾಖಲೆಗಳನ್ನು ಮೇಣ ಲೇಪಿತ ಪಾಟಿಗಳಲ್ಲಿ ಪ್ರಮುಖವಾದ ದಾಖಲೆಗಳನ್ನು ಪ್ಯಾಪಿರಸ್ ಅಥವಾ ವೆಲ್ಲಮ್‌ನಲ್ಲಿ ಬರೆಯುತ್ತಿದ್ದರು'.[೫] ಏಕೆಂದರೆ ಇವುಗಳು ಬಹುಕಾಲ ಬಾಳಿಕೆ ಬರುವಂತಹ ವಸ್ತುಗಳಾಗಿದ್ದವು. ಆದರೆ ಈ ಸುರುಳಿಯಾಕಾರದ ಪುಸ್ತಕಗಳು ಬಹಳ ಸಮಸ್ಯೆಯನ್ನುಂಟು

೦೫. Wikipedia the Free Encyclopedia :2012-13

ಮಾಡುತ್ತಿದ್ದವು. ಅದೇನೆಂದರೆ ನಾವು ಬೇಕಾದ ವಿಷಯವನ್ನು ಓದಬೇಕಾದರೆ ಸುರುಳಿಯನ್ನು ಪೂರ್ಣವಾಗಿ ತೆಗೆದು ಓದಬೇಕಿತ್ತು ಮತ್ತು ಬೇಕಾದ ವಿಷಯವನ್ನು ಬೇಗನೆ ಹುಡುಕುವುದು ಸಾಧ್ಯವಾಗುತ್ತಿರಲಿಲ್ಲ.

ಪುಸ್ತಕಗಳನ್ನು ತಯಾರಿಸಲು ಪೇಪರ್ ಬಳಕೆಯಾಗುವುದಕ್ಕಿಂತ ಮೊದಲು ಪುಸ್ತಕಗಳನ್ನು ಬಟ್ಟೆಗಳ ಸಹಾಯದಿಂದ ಸುತ್ತಿ ರಕ್ಷಿಸುವ ವಿಧಾನವನ್ನು ಬಹಳಷ್ಟು ಪ್ರಕಾಶಕರು ಅನುಸರಿಸುತ್ತಿದ್ದರು, ೧೮೨೦ ದಶಕಕ್ಕಿಂತ ಮುಂಚೆ ವೆಲ್ಲಮ್ (ಚರ್ಮಕಾಗದ) ಮತ್ತು ಎಳೆಹಸುವಿನ ಚರ್ಮದ ಸಹಾಯದಿಂದ ಪುಸ್ತಕಗಳನ್ನು ಸುರಳಿಸುತ್ತಿ ರಕ್ಷಾಕವಚಗಳನ್ನು ಕಟ್ಟುತ್ತಿದ್ದರು. ಆದರೆ ಇದು ಹೆಚ್ಚುಕಾಲ ಬಾಳಿಕೆ ಬರುತ್ತಿರಲಿಲ್ಲ. ಆದ್ದರಿಂದ ಇವುಗಳು ಹೆಚ್ಚು ಜನಪ್ರಿಯಗಳಿಸುವಲ್ಲಿ ವಿಫಲವಾದವು. ೧೮೨೦ರ ನಂತರ ಯಾಂತ್ರೀಕೃತ ಪುಸ್ತಕದ ಬೈಂಡಿಂಗ್ ಪ್ರಾರಂಭವಾಯಿತು. ಪುಸ್ತಕದ ಬೈಂಡಿಂಗ್‌ಗೆ ಬಟ್ಟೆ ಮತ್ತು ಪೇಪರ್‌ನ್ನು ಬಳಸಲು ಪ್ರಾರಂಭಿಸಿದರು. ಯಾಂತ್ರೀಕೃತವಾಗಿ ತಯಾರಿಸುತ್ತಿದ್ದ ಪುಸ್ತಕದ ಬೈಂಡಿಂಗ್ ಬೆಲೆಗಿಂತ ಕೈಯಿಂದ ತಯಾರಿಸಲ್ಪಟ್ಟ ಬೈಂಡಿಂಗ್ ಬೆಲೆ ಹೆಚ್ಚಾಗಿರುತ್ತಿತ್ತು. ೧೮೨೬ರ ವೇಳೆಯಲ್ಲಿ, ರಷ್ಯಾದಲ್ಲಿ ತಂತ್ರಜ್ಞಾನದ ಮೂಲಕ ಪುಸ್ತಕದ ಬೈಂಡಿಂಗ್ ತಯಾರಿಸುವುದು ಬಳಕೆಗೆ ಬಂದಿತ್ತು. ಕಾಗದ ಮತ್ತು ಬಟ್ಟೆಗಳಂತಹ ಕಚ್ಚಾವಸ್ತುಗಳಿಂದ ತಯಾರಿಸಲ್ಪಟ್ಟ ಪುಸ್ತಕಗಳು ಅಗ್ಗವಾಗಿ ದೊರೆಯಲಾರಂಭಿಸಿದ್ದವು. ಇತಿಹಾಸಕಾರರು ಹೇಳುವ ಪ್ರಕಾರ 'ಮೊಟ್ಟಮೊದಲು ಮುದ್ರಿತವಾದ ಪುಸ್ತಕದ ಹೊದಿಕೆ ಛಾಯಾಚಿತ್ರದೊಂದಿಗೆ ಸೇರಿಸಿದ ಮುಖಪುಟವನ್ನು ಲಾಂಗ್‌ಮಾನ್ಸ್ (ಲಂಡನ್) ಪ್ರಕಟಿಸಿದ 'ದಿ ಕೀಪ್‌ಸೇಕ್' ಎಂಬ ಪುಸ್ತಕವು ೧೮೩೨ರಲ್ಲಿ ಮುದ್ರಿತವಾಗಿತ್ತು'[೬] ಅಮೇರಿಕದಲ್ಲಿ ಇದಾದ ಅರವತ್ತು ವರ್ಷಗಳವರೆಗೂ ಪುಸ್ತಕಗಳ ಹೊದಿಕೆಗಳ ರಚನೆಯಲ್ಲಿ ಅಲ್ಪ ಬದಲಾವಣೆ ಕಂಡುಬಂದಿತು. ೧೮೯೦ ರಲ್ಲಿ ಮುದ್ರಿತವಾದ ವಿಲಿಯಂ ಡೀಸ್ ಹೊವೆಲ್ಸ್‌ರ 'ದಿ ಶ್ಯಾಡೋ ಆಫ್ ಎ ಡ್ರೀಮ್'[೭] ಎಂಬ ಪುಸ್ತಕವನ್ನು ಚಿತ್ರಸಹಿತ ಮುಖಪುಟದ ರಕ್ಷಾಕವಚವನ್ನು ತಯಾರಿಸಲಾಯಿತು.

೧೯ನೆಯ ಶತಮಾನದಲ್ಲಿ ಸಾಂಪ್ರದಾಯಿಕವಾಗಿ ಮುಖಪುಟವನ್ನು ಕೈಯಿಂದ ರಚಿಸಲಾಗುತ್ತಿತ್ತು. ಮುಖಪುಟವನ್ನು ರಚಿಸಲು ದಪ್ಪರಟ್ಟುಗಳು, ಪ್ಲಾಸ್ಟಿಕ್‌ಹಾಳೆಗಳು, ರಿಂಗ್‌ಬೈಂಡಿಂಗ್‌ಗಳನ್ನು ಬಳಸಲಾಗುತ್ತಿತ್ತು. ಕಾಲಕ್ರಮೇಣ ಮುಖಪುಟದಲ್ಲಿ ಒಂದು ಬರೀ ತಲೆಬರಹವನ್ನು ಮಾತ್ರ ಉಪಯೋಗಿಸಿಕೊಳ್ಳದೆ. ಅದರಲ್ಲಿ ಅಡಗಿರುವ ಮಾಹಿತಿಯ ಕೆಲಸವನ್ನು ಮಾಡಲಾರಂಭಿಸಿತು. ಅಂದರೆ ಕಥೆ, ಕಾದಂಬಯಲ್ಲಿ ಅಡಕವಾಗಿರುವ ಕಥೆಯನ್ನು ಅರ್ಥೈಸಿಕೊಂಡು. ಆ ಕಥೆಯ ಒಂದು ಮುಖ್ಯವಾದ ಒಂದು ಭಾಗವನ್ನು ಜನರಿಗೆ ಆಕರ್ಷಕವಾಗುವ ರೀತಿಯಲ್ಲಿ ರೇಖೆಗಳ ಮುಖಾಂತರ ಕಲಾವಿದ ಸೃಜನಶೀಲತೆಯನ್ನು ಬಳಸಿಕೊಂಡು ಪುಸ್ತಕದ ಹೊದಿಕೆಗೆ ಒಂದು ಹೊಸ ಆಯಾಮವನ್ನು ನೀಡಿದನು. ಹೀಗೆ ಪ್ರಾರಂಭವಾದ ಮುಖಪುಟದ ರಚನೆಗೆ ನಿಖರವಾದ ವರ್ಷ ದೊರಕಿಲ್ಲಾ. ಕೆಲವು ಸಂದರ್ಭಗಳಲ್ಲಿ ಪುಸ್ತಕದ ಬೈಂಡಿಂಗ್ ಮಾಡಬೇಕಾದರೆ ಯಂತ್ರಗಳ ಸಹಾಯವನ್ನು ತೆಗದುಕೊಳ್ಳುವ ಪರಿಪಾಠ ರೂಢಿಗೆ ಬರತೊಡಗಿತು. (ರಷ್ಯಾದ ಅಲೆಗ್ಸಾಂಡರ್

೦೬. Book jackets Blurbs & Bibliographers, The Library 5thSer. V.XXVi, #2, pp.97
೦೭. ಅದೇ.

ರಾಡಿಚೆಂಕೊ ಮತ್ತು ಎಲ್ ಲಿಸಿಟಿಕ್ಕಿ ಇವರುಗಳು ೧೯೨೦ರಲ್ಲಿ ಆಧುನಿಕ ಪುಸ್ತಕದ ಹೊದಿಕೆಯ ಮಾದರಿಯನ್ನು ಮೊದಲು ಬಳಸಿದವರು. ೧೮೯೪-೯೫ರಲ್ಲಿ ಆ ಕಾಲದ ಪಸಿದ್ಧ ನಕ್ಷೆಗಾರ ಆಬ್ರೀ ಬಿಯರ್ಡ್ಸ್‌ಲಿ ಅವರ ಯಲ್ಲೋಬುಕ್ ಪ್ರಕಟಗೊಂಡಿತು.)

೧೯ನೆಯ ಶತಮಾನದಲ್ಲಿ ವಿಕ್ಟೋರಿಯನ್ ಯುಗದಲ್ಲಿ ಕಾದಂಬರಿಗಳು ಮಾಸಿಕಗಳಲ್ಲಿ ಮುದ್ರಣಗೊಳ್ಳುತ್ತಿದ್ದು, ಕೆಲವೊಮ್ಮೆ ಇವು ರೇಖಾಚಿತ್ರಗಳನ್ನು ಒಳಗೊಂಡಿರುವ ಮುಖಪುಟ ಹೊಂದಿರುತ್ತಿದ್ದವು. ಡಿಕೆನ್ಸ್ ಎನ್ನುವವ ಆ ಕಾಲದ ಪ್ರಮುಖ ಮುಖಪುಟ ವಿನ್ಯಾಸಕಾರನಾಗಿದ್ದ. ಆತನು ಮುಖಪುಟ ವಿನ್ಯಾಸಗೊಳಿಸುವಾಗ ಹಸಿರು ಬಣ್ಣದ ರೇಖಾಚಿತ್ರ ಹೊಂದಿರುವ ಕಾಗದವನ್ನು ಮತ್ತು ಆಯಾ ಕಾದಂಬರಿಗಳ ಕುರಿತಾದ ಚಿತ್ರಗಳು ಮತ್ತು ಪಾತ್ರಗಳ ರೇಖಾಚಿತ್ರ ಬಳಸಿಕೊಳ್ಳುತ್ತಿದ್ದ. ೧೯ನೆಯ ಶತಮಾನದ ಕೊನೆಯ ಅವಧಿಯಲ್ಲಿ ಮುಖಪುಟವನ್ನು ವಿವಿಧ ರೀತಿಯ ಚಿತ್ರಗಳೊಂದಿಗೆ ವಿನ್ಯಾಸಗೊಳಿಸುವ ಕ್ರಮ ಬಳಕೆಗೆ ಬಂತು ಎಂದು ಅಭಿಪ್ರಾಯಪಡಬಹುದು. ಏಕೆಂದರೆ ೧೮೯೦ರ ವೇಳೆಯಲ್ಲಿ ರಚಿತಗೊಂಡ ಎಲ್ಲೋಬುಕ್ ಈ ರೀತಿಯ ಮುಖಪುಟ ವಿನ್ಯಾಸ ಹೊಂದಿತ್ತು.

೧೯ನೆಯ ಶತಮಾನದಿಂದ ಈಚೆಗಿನ ಬೆಳವಣಿಗೆ ಅಂದರೆ ಪೇಪರ್ ಬೋರ್ಡ್ ಮತ್ತು ಹ್ಯಾಂಡ್ ಬೈಂಡಿಂಗ್ ಪುಸ್ತಕದ ಹೊದಿಕೆ ಅಂದರೆ ಹಲವು ಹಾಳೆಗಳನ್ನು ಒಟ್ಟುಗೂಡಿಸುವ ರಕ್ಷಾಕವಚ ಸಿದ್ಧಪಡಿಸುವ ರೂಢಿ ಬಳಕೆಗೆಬಂದಿದ್ದು. 'ಥಾಮಸ್ ಲೌವ್ ಪಿಕಾಕ್' ಎಂಬಾತ ಪುಸ್ತಕದ ಹೊರಭಾಗದ ಮುಖಪುಟಕ್ಕಿಂತ ಬೇರೆ ಯಾವುದು ಹೊಂದುವುದಿಲ್ಲ. ಚಿತ್ರ ಹೊಂದಿರುವ ಮುಖಪುಟಗಳು ಆ ಪುಸ್ತಕದ ಬಗ್ಗೆ ಮತ್ತು ಅದರ ಗುಣ ಲಕ್ಷಣಗಳ ಬಗ್ಗೆ ಹೇಳುತ್ತದೆ ಎಂದು ೧೯ನೆಯ ಶತಮಾನದಲ್ಲಿ ಹೇಳಿರುವುದು ನಾವು ಅಗತ್ಯವಾಗಿ ಗಮನಿಸಬೇಕಾದ ಅಂಶ. ಏಕೆಂದರೆ ಅವನ ಆ ಮಾತು ಆ ಕಾಲದ ಪುಸ್ತಕ ಮುಖಪುಟದ ಬಗ್ಗೆ ನಮಗೆ ಸಾಂಕೇತಿಕವಾಗಿ ಅರಿವನ್ನು ನೀಡುತ್ತದೆ.

೧೯೨೦ರ ದಶಕದಲ್ಲಿ ನವೀನ ಮಾದರಿಯ ಪುಸ್ತಕದ ಹೊದಿಕೆಗಳನ್ನು ದಾರಗಳನ್ನು ಎಳೆಗಳಿಂದ ಕಟ್ಟಿ ಪುಸ್ತಕಗಳನ್ನು ತಯಾರಿಸುತ್ತಿದ್ದರು. ಇಂದಿಗೂ ನಾವು ಈ ತರಹದ ಪುಸ್ತಕ ರಚನೆಯನ್ನು ನೋಡಬಹುದು ಅಮೇರಿಕನ್ನರು ಸಮೃದ್ಧವಂತರೂ ಹಾಗೂ ಅಕ್ಷರಸ್ಥರಾಗುತ್ತಿದ್ದ ಕಾರಣ ಪುಸ್ತಕಗಳ ಬೇಡಿಕೆ ಹೆಚ್ಚಿತ್ತು ಮತ್ತು ಸ್ಪರ್ಧಾತ್ಮಕತೆ ಹೆಚ್ಚಿತ್ತು. ಈ ಕಾರಣದಿಂದಾಗಿ 'ಪ್ರಕಾಶಕರು ಪುಸ್ತಕಗಳ ಅಂದ ಹೆಚ್ಚಿಸಲು ಮತ್ತು ಅವುಗಳು ಬಣ್ಣಗಳಿಂದ ಕೂಡಿದ, ಪುಸ್ತಕಗಳ ಹೊದಿಕೆಯನ್ನು ಆಕರ್ಷಕವಾಗಿಸಲೂ ಹೆಚ್ಚು ಹಣ ವಿನಿಯೋಗಿಸತೊಡಗಿದರು. ಇದಕ್ಕೆ ಪೂರಕವಾಗಿ ಪುಸ್ತಕ ವಿನ್ಯಾಸಕಾರರ ಒಂದು ಯುಗವೇ ಆರಂಭವಾಯಿತು. ಮೊದಮೊದಲು ಬಹಳಷ್ಟು ಪ್ರಕಾಶಕರು ಇದರ ಬಗ್ಗೆ ಅಷ್ಟಾಗಿ ಗಮನಹರಿಸಲಿಲ್ಲ. ಕ್ರಮೇಣ ಪುಸ್ತಕ ವಿನ್ಯಾಸವು ಪ್ರಕಾಶಕರ ವರ್ಚಸ್ಸು ಹಾಗೂ ಮಾರಾಟದ ಗತಿಯನ್ನು ಹೆಚ್ಚಿಸುತ್ತಾ ಬಂದಿದ್ದು ಮಾರಾಟ ಮಳಿಗೆಗಳಲ್ಲೂ ಈ ಪುಸ್ತಕಗಳು ನೋಡುಗರಿಗೆ, ಓದುಗರಿಗೆ ಒಂದು ಕಾಂತಿಯನ್ನು ಬೆಳಗುವಂತೆ ಮಾಡುತ್ತಿದ್ದವು'.[೮]

---

೦೮. John William tebbel : History of book publishing in the United States, Vol.2, pp. 657

೨೦ನೆಯ ಶತಮಾನದ ಮೊದಲೆರಡು ದಶಕಗಳಲ್ಲಿ ಪುಸ್ತಕ ಹೊದಿಕೆಗಳನ್ನು ಸುರುಳಿಯಾಕಾರದ ಶೈಲಿಯ ವಿನ್ಯಾಸಗಳುಳ್ಳ ಹೂವಿನ ಚಿತ್ರಗಳುಳ್ಳ ಡಿಸೈನ್‌ಗಳಿಂದ ಅಲಂಕರಿಸುತ್ತಿದ್ದರು. ಲೇಖಕರ ಮತ್ತು ಪ್ರಕಾಶಕರ ಹೆಸರುಗಳನ್ನು ವೃತ್ತಾಕಾರದ ಹಾಳೆಯಲ್ಲಿ ಮುದ್ರಿಸಿ ಅದನ್ನು ಪುಸ್ತಕಗಳು ಆಕರ್ಷಕವಾಗಲು ಸಹಾಯಕಾರಿಯಾಯಿತು. ಬಹಳಷ್ಟು ಜನರು ಈ ಪುಸ್ತಕಗಳ ರಕ್ಷಾ ಕವಚದ ಅಂದಕ್ಕೆ ಮೊರೆ ಬಿದ್ದು ಪುಸ್ತಕಗಳನ್ನು ಖರೀದಿಸುತ್ತಿದ್ದರು. ಇದೇ ಶತಮಾನದಲ್ಲಿ ಮತ್ತೆರಡು ಅನ್ವೇಷಣೆಗಳಾದ ಪುಸ್ತಕದ ಮುಂಬದಿ ಮತ್ತು ಹಿಂಬದಿಯ ಪುಟಗಳಿಗೆ ಚಿತ್ರಸಹಿತ ಮತ್ತು ವಿವರ ಸಹಿತ ಮುದ್ರಿಸುವುದನ್ನು ಪರಿಚಯಿಸಿದರು.

೨೦ನೆಯ ಶತಮಾನ ಪುಸ್ತಕ ವಿನ್ಯಾಸದ ದೃಷ್ಟಿಯಿಂದ, ಮುಖಪುಟ ರಚನೆಯ ದೃಷ್ಟಿಯಿಂದ ಅತ್ಯಂತ ಗಣನೀಯವಾದ ಬೆಳವಣಿಗೆ ಕಂಡ ಕಾಲಾವಧಿ. ಇದಕ್ಕೆ ಸಾಕಷ್ಟು ಉದಾಹರಣೆಗಳನ್ನು ಕೊಡಬಹುದು. ೧೯೦೨ ರಲ್ಲಿ ಕ್ಲಿಪಿಂಗ್ಸ್ ಸಣ್ಣಕಥೆಗಳ ಮುಖಪುಟ ವಿನ್ಯಾಸ ಎಲ್ಲರ ಗಮನ ಸೆಳೆಯಿತು. ೧೯೧೧ ರಲ್ಲಿ ಒಬ್ಬ ಲೇಖಕ ಮುಖಪುಟ ವಿನ್ಯಾಸಕ್ಕೆ ಒಂದು ವ್ಯಾಪಾರಿಕ ತಿರುವನ್ನು ನೀಡುತ್ತಾನೆ. ಅವನು ಪ್ರಕಾಶಕರಿಗೆ 'ಪುಸ್ತಕವು ಒಂದು ಹುಡುಗಿಯಂತೆ'[೯] ಅವಳನ್ನು ಒಪ್ಪಿಸಲು ಅಥವಾ ಶೃಂಗರಿಸಲು ಒಳ್ಳೆಯ ವಸ್ತ್ರವಿನ್ಯಾಸಗಾರ ಹೇಗೆ ಅವಳಿಗೆ ಒಪ್ಪುವಂತಹ ವಸ್ತ್ರವನ್ನು ಸಿದ್ಧಪಡಿಸುತ್ತಾನೆಯೋ ಹಾಗೆ ಮುಖಪುಟ ವಿನ್ಯಾಸವನ್ನು ಸಿದ್ಧಪಡಿಸಬೇಕು ಎಂದು ಹೇಳುತ್ತಾನೆ. ಇದಾದ ನಂತರ ರೇಖಾ ಚಿತ್ರಗಳನ್ನು ಆಯಾ ಪುಸ್ತಕಗಳಿಂದಲೇ ತೆಗೆದುಕೊಳ್ಳಲಾಗುತ್ತಿತ್ತು.

ನಂತರ ೧೯೨೦ ರಲ್ಲಿ ಬ್ರಿಟನ್ನಿನ ಆರ್ಥಿಕ ಪರಿಸ್ಥಿತಿಯು ಚೇತರಿಸಿಕೊಂಡು ಹೊಸ ಆಯಾಮಕ್ಕೆ ತಿರುಗಿತು ಇದರಿಂದ ಪುಸ್ತಕ ಪ್ರಕಾಶಕರು ತಮ್ಮ ಪುಸ್ತಕವನ್ನು ಬೇರೆ ರೀತಿಯಲ್ಲಿ ಪ್ರಾಯೋಜಿಸಲು ಆರಂಭಿಸಿದರು ಮತ್ತು ಒಂದು ಹೊಸ ಬಗೆಯ ಕಲಾವಿದರು ಕಲಾ ಶಾಲೆಗಳಿಂದ ಹೊರಬರುತ್ತಿದ್ದರಿಂದ ಅವರದೇ ಒಂದು ವ್ಯಾಪಾರೀಕರಣದ ಕಲೆಯನ್ನು ಮೈಗೂಡಿಸಿಕೊಂಡರು. 'ಸಂಗ್ರಹಕಾರರು ಹೇಳುವುದೇನೆಂದರೆ ೧೯೨೦ ರಿಂದ ೧೯೩೦ ರ ವರೆಗೆ ಮುಖಪುಟಗಳ ಸುವರ್ಣ ಕಾಲ ಎಂದು ಗುರುತಿಸಲಾಗಿದೆ.'[೧೦] ಏಕೆಂದರೆ ಸಮಾನ ಜ್ಞಾನದ ಕಲಾವಿದರು ಯುರೋಪಿನ ಆಧುನಿಕ ಕಲೆಯನ್ನು ಮೈಗೂಡಿಸಿಕೊಂಡರು. ಸುಮಾರು ಪ್ರಕರಣಗಳಲ್ಲಿ ರೇಖಾಚಿತ್ರಗಳು ಮತ್ತು ಚಿತ್ರಗಳನ್ನು ಪ್ರಕಾಶಕರೇ ನಿರ್ಧರಿಸುತ್ತಿದ್ದರು. ಮತ್ತು ಕೆಲವೇ ಸಲಹೆಗಳನ್ನು ಲೇಖಕರಿಂದ ಪಡೆಯುತ್ತಿದ್ದರು. ಆದರೆ ಇಲ್ಲಿ ಕೆಲವು ವಿನ್ಯಾಸಗಳು ಈ ಹಿಂದೆನಲ್ಲಿ ನಡೆಯುತ್ತಿದ್ದ ಕಾರ್ಯ ವೈಖರಿಯ ವಿರುದ್ಧವಾಗಿ ನಿಲ್ಲುತ್ತವೆ. ಅದರಲ್ಲಿ ಪರ್ಜಿನಿಯ ಊಲ್ಫ್ ಲೇಖಕಿಯ 'ಟೂ ದ ಲೈಟ್ ಹೌಸ್' ಎಂಬ ಕಾದಂಬರಿಯ ಮುಖಪುಟವಿನ್ಯಾಸವನ್ನು ಆಕೆಯ ಸಹೋದರಿಯಾದ ವೆನೆಸ್ ಬೆಲ್ ವಿನ್ಯಾಸಗೊಳಿಸುತ್ತಾಳೆ'[೧೧]. ಈ ಮುಖಪುಟವು ಲೈಟ್ ಹೌಸ್ ನಿಂದ ಬರುತ್ತಿರುವ ಬೆಳಕು ಮತ್ತು ಅದರ ಸುತ್ತಲೂ ಇರುವ ಸಮುದ್ರದ ಅಲೆಗಳನ್ನು ಪರಿಣಾಮಕಾರಿಯಾಗಿ ವಿನ್ಯಾಸಗೊಳಿಸಲಾಗಿದೆ.

---

೦೯. John William tebbel : History of book publishing in the United States, Vol.2, pp. 657

೧೦. ಅದೇ.

೧೧. ಅದೇ.

ಜೆ.ಜೆ.ಆರ್.ಟೋಲ್ಕಿನ್ ತನ್ನ ಪ್ರಥಮ ಕಾದಂಬರಿಯಾದ 'ದ ಹಾಬೀಟ್' ಎಂಬ ಕಾದಂಬರಿಗೆ ತಾನೇ ಒಂದು ಸುಂದರವಾದ ಬೆಟ್ಟ ಗುಡ್ಡ ಮತ್ತು ಪ್ರಕೃತಿ ಸೌಂದರ್ಯದ ಒಂದು ರಮ್ಯ ನೋಟದ ಚಿತ್ರಣವನ್ನು ಬಹಳ ಸುಂದರವಾಗಿ ವಿನ್ಯಾಸಗೊಳಿಸಿದ್ದಾರೆ.

೧೯೩೫ರಲ್ಲಿ ಪೆಂಗ್ವಿನ್ ಪುಸ್ತಕ ಎಂಬ ಸಂಸ್ಥೆಯನ್ನು ಆಲೆನ್ ಲೇನ್ ಎಂಬ ವ್ಯಕ್ತಿಯು ಹುಟ್ಟುಹಾಕುತ್ತಾನೆ. ಈ ಪ್ರಕಾಶನ ಸಂಸ್ಥೆಯು ಕಲ್ಪನಾ ಲೋಕದ ಮತ್ತು ಕಾಲ್ಪನಿಕ ಕಥೆ, ಕಾದಂಬರಿ ಪ್ರಕಟಿಸುವಲ್ಲಿ ಒಂದು ಕ್ರಾಂತಿಕಾರಿ ಬದಲಾವಣೆಯನ್ನು ತೋರುತ್ತದೆ. ಪೆಂಗ್ವಿನ್ ಪ್ರಕಾಶನ ಸಂಸ್ಥೆಯು ಕಡಿಮೆ ವೆಚ್ಚದಲ್ಲಿ ಹೆಚ್ಚು ಆಯೋಜನೆಗೆ ಒಳಪಡಿಸುವ ಪುಸ್ತಕಗಳನ್ನು ಪ್ರಕಟಿಸಿ ತನ್ನ ಮಾರುಕಟ್ಟೆಯನ್ನು ವಿಸ್ತಾರಗೊಳಿಸಿದೆ. ಇದರ ಮೊದಲನೆಯ ಹತ್ತು ಕಾದಂಬರಿಗಳು ಕಡಿಮೆ ವೆಚ್ಚದ ಮುಖಪುಟ ವಿನ್ಯಾಸವನ್ನು ಹೊಂದಿದ್ದವು. ಇದಾದ ನಂತರ ಪುಸ್ತಕಗಳ ಮುಖಪುಟ ವಿನ್ಯಾಸ ಒಂದು ನಿರ್ದಿಷ್ಟ ರೂಪದಲ್ಲಿ ರೂಪಗೊಂಡಿತು. ಹೇಗೆಂದರೆ ಕೇಸರಿ ಬಣ್ಣ ಕಾಲ್ಪನಿಕ ಕಥೆಗಳಿಗೆ, ನೀಲಿ ಬಣ್ಣವು ಆತ್ಮಚರಿತೆಗಳಿಗೆ; ಅಪರಾಧ ಕುರಿತ ಕಾದಂಬರಿಯ ಮುಖಪುಟಕ್ಕೆ ಹಸಿರು ಬಣ್ಣವನ್ನು ಉಪಯೋಗಿಸುತ್ತಿದ್ದರು. ಇದಾದ ನಂತರ ಪೆಂಗ್ವಿನ್ ಕಾದಂಬರಿಗಳ ಮುಖಪುಟ ವಿನ್ಯಾಸವನ್ನು ಡೇವಿಡ್ ಜೆಂಟಲ್ ಮ್ಯಾನ್ ಮತ್ತು ಪೌಲ್‌ಹೌಗಾರ್ ಈ ಕಲಾವಿದರು ವಿನ್ಯಾಸಗೊಳಿಸಲಾರಂಬಿಸಿದರು.

ಇದಾದ ನಂತರ ಛಾಯಾಚಿತ್ರಗಳನ್ನು ಪ್ರಕಾಶನ ಸಂಸ್ಥೆಯಲ್ಲಿ ಬಳಸಿಕೊಳ್ಳಲಾರಂಭಿಸಿದರು ಕ್ರಿಸ್ಟಫರ್ ಐರಿಷ್ ಉಡ್ಸ್ ಎಂಬ ಲೇಖಕರ ಗುಡ್ ಬೈಟು ಬರ್ಲಿನ್ ಎಂಬ ಕೃತಿಗೆ ಬರ್ಲಿಂಗ್ ಪಾರ್ಕ್‌ನಲ್ಲಿ ತೆಗೆದ ಒಂದು ಛಾಯಾಚಿತ್ರವನ್ನು ಬಳಸಿಕೊಂಡು ಮುಖಪುಟ ವಿನ್ಯಾಸ ಮಾಡಲಾಯಿತು. ಇದನ್ನು ಹಾಗಾರ್ತ್ ಪ್ರೆಸ್ ಎಂಬ ಪ್ರಕಾಶನ ಸಂಸ್ಥೆ ಮುದ್ರಣಪಡಿಸಿತು. '೧೯೬೦ ರಲ್ಲಿ ಮುಖಪುಟ ವಿನ್ಯಾಸಕ್ಕಾಗಿ ಛಾಯಾಚಿತ್ರವನ್ನು ಬಳಸಿಕೊಳ್ಳುವುದು ಪ್ರಪಂಚದಾದ್ಯಂತ ಹರಡಿತು'[೧೨] ೧೯೬೦ ರಲ್ಲಿ ಕೆಲವು ಸುಂದರವಾದ ಮಹಿಳಾ ನರ್ತಕಿಯರ ಕೆಲವು ಶೃಂಗಾರದ ಛಾಯಾಚಿತ್ರವನ್ನು 'ಓರ್ಬೆನ್' ಕಾದಂಬರಿಯಲ್ಲಿ ಬಳಸಿಕೊಳ್ಳಲಾಗಿತ್ತು. ನಂತರ ಪೆಂಗ್ವಿನ್ ಪುಸ್ತಕ ಸಂಸ್ಥೆಯು ಮಿಲನ್ ರವರ ಕಾದಂಬರಿಗೆ ಛಾಯಾಚಿತ್ರವನ್ನು ಬಳಸಿ ಪಾಲಿಶ್ ವಿನ್ಯಾಸಕಾರ ಮತ್ತು ಸಿನಿಮಾ ನಿರ್ದೇಶಕನಾದ ಹೈಂಡ್ರೀಸ್ ಕಿಲಿಮಿ ಓಕ್ಸಿ ಹೊಸ ರೀತಿಯಲ್ಲಿ ವಿನ್ಯಾಸಗೊಳಿಸಿದ ತದನಂತರ '೧೯೨೦ ಮತ್ತು ೧೯೩೦ ರಲ್ಲಿ ಗ್ರಾಫಿಕ್ ವಿನ್ಯಾಸವನ್ನು ಬಳಸಿ'[೧೩] ಪೆಂಗ್ವಿನ್ ಎವಿಲಿನ್ ವಾಗ್ ಅವರ ಪ್ರಕಾಶನ ಸಂಸ್ಥೆಯ ಪುಸ್ತಕಗಳನ್ನು ಪೀಟರ್ ಬೆಂಟ್ಲೇಸ್ ವಿನ್ಯಾಸಗೊಳಿಸುತ್ತಾನೆ. ಇದಾದ ನಂತರ ಪೆಂಗ್ವಿನ್ ಸಂಸ್ಥೆಯ ಪುಸ್ತಕಗಳು ಹೊಸ ಆಯಾಮದಲ್ಲಿ ಮುದ್ರಣಗೊಂಡವು ಮತ್ತು ವಾಗ್‌ನ ವಿನ್ಯಾಸವನ್ನು ಆ ಶತಮಾನದ ಉತ್ಕೃಷ್ಟವಾದ ವಿನ್ಯಾಸವೆಂದು ಗುರುತಿಸಲಾಗಿದೆ. ಯೂರೋಪ್ ಖಂಡ, ವಿಶೇಷವಾಗಿ 'ಲಂಡನ್ ಮತ್ತು ನ್ಯೂಯಾರ್ಕ್ ನಗರಗಳ ಪ್ರಕಾಶಕರುಗಳು ೨೦ನೆಯ ಶತಮಾನದ ಮುಖಪುಟ ವಿನ್ಯಾಸಗಾರಿಕೆಯಲ್ಲಿ ಹೆಚ್ಚಿನ ಕೊಡುಗೆ ನೀಡಿರುತ್ತಾರೆ.'[೧೪] ಉದಾಹರಣೆಗೆ ಅಲೆಗ್ಸಾಂಡರ್ ರಾಡ್‌ಚನ್‌ಕೋ ಮತ್ತು ಇ–ಲಿಟ್ಸ್‌ಕೀ ಇವರು ಮುಖಪುಟಕ್ಕೆ ಆಧುನಿಕ ಸ್ವರೂಪವನ್ನು ನೀಡಿದ ಪ್ರಮುಖ ಪ್ರಕಾಶಕರು.

---

೧೨. Book jackets Blurbs & Bibliographers, The Library 5th Ser. V.XXVi, #2, pp.97

೧೩. ಅದೇ.

೧೪. ಅದೇ.

ಈ ಮೇಲೆ ಉಲ್ಲೇಖಿಸಿದ ಎಲ್ಲ ಅಂಶಗಳೂ ಪಾಶ್ಚಿಮಾತ್ಯ ಜಗತ್ತಿನಲ್ಲಿ ಪುಸ್ತಕದ ರಕ್ಷಾಕವಚ / ಮುಖಪುಟದ ಕುರಿತಂತೆ ನಡೆದ ಗಂಭೀರವಾದ, ಅಗಾಧವಾದ, ಸೃಜನಾತ್ಮಕವಾದ ಬೆಳವಣಿಗೆಗಳ ಕುರಿತು ವಿಶೇಷ ಬೆಳಕು ಚೆಲ್ಲುತ್ತವೆ. ಪ್ರತಿಯೊಂದು ಸಂಗತಿಯನ್ನು / ಸಂದೇಶವನ್ನು / ಬೆಳವಣಿಗೆಯನ್ನು ದಾಖಲೀಕರಣಗೊಳಿಸುವ ಅಲ್ಲಿನ ನಾಗರಿಕ ಸಮುದಾಯದ ಮನೋಭಾವದಿಂದಾಗಿ ಆ ರಾಷ್ಟ್ರಗಳಲ್ಲಿ ಸಂಭವಿಸಿದ ಅನೇಕ ಮಹತ್ವಪೂರ್ಣ ಅಂಶಗಳು ಕಾಲಕಾಲಕ್ಕೆ ದಾಖಲೀಕರಣಗೊಂಡು ಇಂದು ನಮಗೆ ಉಪಲಬ್ಧಗಳಾಗಿವೆ. ಆದರೆ ಇದೇ ಮಾತನ್ನು ಭಾರತೀಯ ಉಪಖಂಡದ ಮಟ್ಟಿಗೆ ನಾವು ಅನ್ವಯಿಸಲಾಗದು. ಏಕೆಂದರೆ ಶ್ರವಣ ಸಂಸ್ಕೃತಿಯನ್ನೇ ಪ್ರಧಾನವಾಗಿರಿಸಿಕೊಂಡು ಬಂದ ಇಲ್ಲಿನ ನಾಗರಿಕತೆ ಲಿಪಿಬದ್ಧವಾಗಿ ಅದೆಷ್ಟೋ ಮಾಹಿತಿಗಳನ್ನು ದಾಖಲಿಸಲಿಲ್ಲವಾದ ಕಾರಣ ಇಲ್ಲಿ (ಭಾರತದಲ್ಲಿ) ಪುಸ್ತಕದ ರಕ್ಷಾಪುಟ / ಮುಖಪುಟ ಕಾಲಕಾಲಕ್ಕನುಗುಣವಾಗಿ ಬದಲಾವಣೆಗೆ ಒಳಗಾಗುತ್ತ ಬಂದಿದ್ದನ್ನು ಉಲ್ಲೇಖಿಸುವುದು ಬಲು ಪ್ರಯಾಸದ / ಅಸಾಧ್ಯದ ಕಾರ್ಯವೇ ಎನಿಸುತ್ತದೆ. ಈ ಮೊದಲೇ ಪ್ರಸ್ತಾಪಿಸಿದಂತೆ ಭಾರತೀಯ ಪ್ರಾಚೀನ ಸಂಸ್ಕೃತಿಯಲ್ಲಿ ಶ್ರವಣ ಪರಂಪರೆ ಗಟ್ಟಿಯಾಗಿ ಬೇರೂರಿದ್ದು ಮತ್ತು ರಚಿಸಿಲ್ಪಟ್ಟಂತಹ ಅದೆಷ್ಟೋ ಗ್ರಂಥರಾಶಿಗಳನ್ನು ಜತನವಾಗಿ ಕಾಪಾಡುವಲ್ಲಿ ಕಾಳಜಿವಹಿಸದೇ ಇದ್ದುದು, ಜೊತೆಗೆ ಅಧುನಿಕ ಶಿಕ್ಷಿತ ಸಮುದಾಯ ಪ್ರಾಚೀನ ಮತ್ತು ಅರ್ವಾಚೀನ ಗ್ರಂಥಸ್ಥ ಸಾಹಿತ್ಯಗಳ ಬಗ್ಗೆ ದಿವ್ಯ ನಿರ್ಲಕ್ಷ್ಯವಹಿಸಿದ್ದು ಹೀಗೆ ನಾನಾ ಕಾರಣಗಳಿಂದ ಭಾರತೀಯ ಪರಂಪರೆಯಲ್ಲಿ ಪುಸ್ತಕಗಳ / ಗ್ರಂಥಗಳ ಮುಖಪುಟ / ರಕ್ಷಾಪುಟ ಹಂತ ಹಂತವಾಗಿ ಏನೆಲ್ಲಾ ವೈವಿಧ್ಯತೆ, ವಿಕಾಸಗಳನ್ನು ಹೊಂದುತ್ತ ಇಂದು ಈ ಮಟ್ಟಕ್ಕೆ ತಲುಪಿದೆಯಂಬುದನ್ನು ಸಮಗ್ರ ಕ್ರಮಾಗತ ಬೆಳವಣಿಗೆಗಳನ್ನು ವಿಶ್ಲೇಷಿಸುವುದು ಅಸಾಧ್ಯವಾದುದು. ಆದರೂ ಉಪಲಬ್ಧವಿರುವ ದಾಖಲೆಯನ್ನೇ ಅನುಸರಿಸಿ ಭಾರತೀಯ ಗ್ರಂಥಗಳ ಮುಖಪುಟದ ವಿಕಾಸದ ಕುರಿತು ಸ್ಥೂಲನೋಟ ಹರಿಸಲಾಗಿದೆ.

**ಭಾರತದಲ್ಲಿ ಮುಖಪುಟದ ವಿಕಾಸ**

'ಸುಮಾರು ಒಂದು ಶತಮಾನದ ನಂತರ ಅಂದರೆ ಕ್ರಿ.ಪೂ.೪ನೇ ಶತಮಾನದಲ್ಲಿ ಭಾರತದಲ್ಲಿ ಹತ್ತಿಯ ಬಟ್ಟೆಯ ಮೇಲೆ ಬರೆಯುವ ಕ್ರಮ ರೂಢಿಗೆಬಂದಿತು.'[೧೫] ಬಟ್ಟೆಗಳನ್ನು ಪುಸ್ತಕದ ಹಾಳೆಯಂತೆ ಒಂದು ಅಳತೆಯಲ್ಲಿ ಕತ್ತರಿಸಿ ಅದರ ಮೇಲೆ ವಿಶೇಷ ಮಸಿ ಬಳಸಿ ಬರೆಯುತ್ತಿದ್ದರು. ತಾಳೆಗರಿಗಿಂತ ಇದು ಒಂದು ಉತ್ತಮ ವಿಧಾನವಾಗಿತ್ತು. ಕೆಲವು ರೀತಿಯಲ್ಲಿ ತಾಳೆಗರಿಯಲ್ಲಿದ್ದ ಕೊರತೆಗಳು ಇಲ್ಲಿಯೂ ಇತ್ತು. ಪ್ರತಿಮಾಡುವ ಸಂರಕ್ಷಿಸುವ ಕೆಲಸಗಳು ಅಷ್ಟೇ ತ್ರಾಸದಾಯಕವಾಗಿತ್ತು. ಹಳೆಯ ಕಾಲದಲ್ಲಿ ಗ್ರೀಕರು ಪ್ರಾಣಿಗಳ ಚರ್ಮವನ್ನು ಬರೆಯಲು ಉಪಯೋಗಿಸುತ್ತಿದ್ದರು. ಆದರೆ ಭಾರತದಲ್ಲಿ ಈ ಪದ್ಧತಿ ಅಷ್ಟಾಗಿರಲಿಲ್ಲ.

ಸುಮಾರು 'ಕ್ರಿ.ಶ ೧೧ನೆಯ ಶತಮಾನದ ವೇಳೆಗೆ ಭಾರತದೇಶದಲ್ಲಿ ಜನರು ಬರೆಯಲು ಕಾಗದವನ್ನು ಬಳಸುವಷ್ಟು ಮುಂದುವರಿದರು.'[೧೬] ಈ ಸಮಯದಲ್ಲಿಯೂ ಕಾಗದದ ಮೇಲೆ ಮಸಿ ಬಳಸಿ

---

೧೫. Wikipedia the Free encyclopedia :2013–14

೧೬. ಡಾ. ಎಂ. ಜಿ. ಮಂಜುನಾಥ, ಜಿ.ಕೆ.ದೇವರಾಜ್ ಸ್ವಾಮಿ : ಕನ್ನಡ ಲಿಪಿ ವಿಕಾಸ, ಪುಟ–೨೩

ಕೈ ಬರಹದಲ್ಲಿ ಬರೆಯುತ್ತಿದ್ದರು, ಹಾಗಾಗಿ ಎಲ್ಲರಿಗೂ ಓದಲು ಪುಸ್ತಕಗಳಾಗಲಿ ಮತ್ತಿತರ ಮಾಹಿತಿಯಾಗಲಿ ಸುಲಭವಾಗಿ ದೊರೆಯುತ್ತಿರಲಿಲ್ಲ. ಮೊದಲು ಬರೆಯುವುದಾಗಲಿ, ಪ್ರತಿ ಮಾಡುವುದಾಗಲಿ ತ್ರಾಸದಾಯಕವಾದ ಕೆಲಸ, ಹೆಚ್ಚು ಸಮಯ ಹಿಡಿವ ಕೆಲಸವೂ ಆಗಿತ್ತು. ಆದರೆ ರಕ್ಷಿಸುವ ದೃಷ್ಟಿಯಿಂದ ಕಾಗದವನ್ನು ರಕ್ಷಿಸುವುದು ಸ್ವಲ್ಪ ಸುಲಭವಾಗಿತ್ತು. ಮುದ್ರಣ ಯಂತ್ರ ಭಾರತಕ್ಕೆ ಬಂದದ್ದು ಒಂದು ಆಕಸ್ಮಿಕ. ಈ ಯಂತ್ರ ಪೋರ್ಚುಗೀಸರಿಂದ ಇಥಿಯೋಫಿಯಾ ದೇಶಕ್ಕೆ ರವಾನೆಯಾಗುತ್ತಿತ್ತು. ತೆಗೆದುಕೊಂಡು ಹೋಗುವ ದಾರಿಯಲ್ಲಿ ಅದನ್ನು ಗೋವಾ ತೀರದಲ್ಲಿ ಇಳಿಸಲಾಗಿತ್ತು. ಅಷ್ಟರಲ್ಲಿ ಆ ದೇಶದ ರಾಜ ಆ ಕ್ರೈಸ್ತ ಪಾದ್ರಿಗಳಾಗಲಿ ಆ ಯಂತ್ರವಾಗಲಿ ನನಗೆ ಅಗತ್ಯವಿಲ್ಲವೆಂಬ ಸಂದೇಶವನ್ನು ಕಳುಹಿಸಿದ. ಅದೇ ಸಂದರ್ಭದಲ್ಲಿ ೧೫೪೨ರಲ್ಲಿ ಫ್ರಾನ್ಸಿಸ್ ಕ್ಷೇವಿಯರ್ ಎಂಬ ಸ್ಪೇನ್ ದೇಶದ ಪಾದ್ರಿ ಗೋವಾದಲ್ಲಿ ಶಾಲೆಯೊಂದನ್ನು ತೆರೆದು ತರಂಗಂಬಾಡಿ ಸ್ಥಳದಲ್ಲಿ ಬೈಬಲ್ ಕಲಿಸುತ್ತಿದ್ದ. ಆತನಿಗೆ ಮುದ್ರಣ ಯಂತ್ರದ ಅವಶ್ಯಕತೆ ಇತ್ತು. ಹಾಗಾಗಿ ಆ ಯಂತ್ರವನ್ನು ಅಲ್ಲೇ ಸ್ಥಾಪಿಸಿ ಮುದ್ರಣ ಮಾಡಲು ಪ್ರಾರಂಭಿಸಿದ. ಅದು ಭಾರತೀಯರ ಪಾಲಿಗೆ ಪ್ರಪಂಚದ ಬಾಗಿಲನ್ನು ತೆರೆಯುವ ಸಾಧನವಾಗಿತ್ತು. ಇದಾದ ನಂತರ ಅನೇಕ ಮುದ್ರಣ ಯಂತ್ರಗಳು ಭಾರತವನ್ನು ತಲುಪಿದವು. ಇವುಗಳೆಲ್ಲವೂ ಸಮುದ್ರ ತೀರದಲ್ಲಿಯೇ ಸ್ಥಾಪಿತಗೊಂಡವು. ಗುಟನ್‌ಬರ್ಗನ ಮುದ್ರಣ ಕಲೆ ಬಂದು ಒಂದುನೂರು ವರ್ಷಗಳನ್ನು ದಾಟಿರಲಿಲ್ಲ. ಅದು ಭಾರತವನ್ನು ತಲುಪಿಸುವಷ್ಟು ವರ್ಷಗಳು ಕೆಲವೇ ಜನರ ಸೊತ್ತಾಗಿದ್ದ ತಾಳೆಗರಿಯ ಹಾಳೆಯಲ್ಲಿ ಅಡಗಿದ ಮಾಹಿತಿ ಮುದ್ರಣ ಕಲೆ ಭಾರತವನ್ನು ತಲುಪಿದ ನಂತರ ಸಾಮಾನ್ಯ ಜನರಿಗೆ ದಕ್ಕುವಂತಾಯಿತು.

ಭಾರತಕ್ಕೆ ಮುದ್ರಣ ತಂತ್ರ ತಲುಪಿ, ಮೊದಲು ಭಾರತದ ಭಾಷೆ ಒಂದರಲ್ಲಿ ಮುದ್ರಣವಾಗಿದ್ದು. '೧೫೫೬ರಲ್ಲಿ ಮಲಬಾರಿನಲ್ಲಿ ತಮಿಳು ಲಿಪಿಯಲ್ಲಿ ಡಾಕ್ಟ್ರಿನಾ ಕ್ರಿಸ್ಟಿನಾ ಎಂಬ ಪುಸ್ತಕದ ೧೬ಪುಟಗಳನ್ನು ಮುದ್ರಿಸಿರುವುದೇ ಮೊದಲ ಪ್ರಯತ್ನವೆಂದು ದಾಖಲಾಗಿದೆ.'[೧೭] ಇಷ್ಟೆಲ್ಲಾ ಆದರೂ ಪುಸ್ತಕಗಳು ಹೆಚ್ಚಿನ ಸಂಖ್ಯೆಗಳಲ್ಲಿ ಮುದ್ರಣವಾಗಲಿಲ್ಲ. ಅದಕ್ಕೆ ಹಲವಾರು ಕಾರಣಗಳಿದ್ದವು. ಮೊದಲಿಗೆ ಈ ಪುಸ್ತಕಗಳು ಪ್ರಾರ್ಥನೆಯ ಪುಸ್ತಕಗಳಾಗಿದ್ದವು ಅವುಗಳಿಂದ ಸಾಮಾನ್ಯ ಜನರಿಗೆ ಹೆಚ್ಚು ಪ್ರಯೋಜನವಿರಲಿಲ್ಲ. ಸಾಮಾನ್ಯರಿಗೆ ಓದುವುದು, ಬರೆಯುವುದು, ಬರುತ್ತಿರಲಿಲ್ಲ. ಮುದ್ರಣವನ್ನು ಮಾಡಿ ವ್ಯಾಪಾರ ಮಾಡಲು ಹೊರಟವರಿಗೆ ಇದರಿಂದ ಲಾಭವಿಲ್ಲವೆಂದು ಹಿಂದೆ ಸರಿದರು.

'ಭಾರತಕ್ಕೆ ಮುದ್ರಣ ಯಂತ್ರ ಕ್ರಿ.ಶ. ೧೬ನೆಯ ಶತಮಾನಾಂತ್ಯದಲ್ಲಿ ಬ್ರಿಟಿಷರು ಇಂಗ್ಲಿಷ್ ಮುದ್ರಣ ಯಂತ್ರಗಳನ್ನು ತಂದು ಕಲ್ಕತ್ತಾದಲ್ಲಿ ಇಟ್ಟರು. ಅನಂತರ ಐವತ್ತು ವರ್ಷಗಳಲ್ಲಿ ಬೊಂಬಾಯಿ ಮತ್ತು ಮದ್ರಾಸುಗಳಲ್ಲೂ ಇಡಲ್ಪಟ್ಟವು. 'ಹಿಂದೂಸ್ಥಾನದ ಭಾಷೆಗಳ ಅಕ್ಷರಗಳನ್ನು ಮೊದಲ ಬಾರಿಗೆ ಅಚ್ಚಿನ ಮೊಳೆಗಳಲ್ಲಿ ಉರುಳಿಸಿದವನು ಕ್ರಿ.ಶ. ೧೫೫೬ರಲ್ಲಿ ಗೋವಾದಲ್ಲಿ ಇದ್ದ ಬಸ್ಟ್‌ಮೆಂಟ್ (Bustamante) ಎಂಬ ಸ್ಪೇಯಿನ್ ದೇಶದವನು. ಅನಂತರ ೧೫೭೭ರಲ್ಲಿ ಸ್ಪೇಯಿನ್ ದೇಶದ ಇನ್ನೋರ್ವ ಜೆ.ಗೋನ್‌ಸಾಲ್ವೇಸ್ (Ganslaves) ಎಂಬುವನು ಕೊಚ್ಚಿನ್‌ನಲ್ಲಿ ನೆಲೆಸಿ ತಮಿಳು ಅಕ್ಷರದ ಅಚ್ಚು ಮೊಳೆಗಳನ್ನು ಕಂಡು

೧೭. Wikipedia the Free encyclopedia :2012-13

ಹಿಡಿದನು. ತಮಿಳು ಅಕ್ಷರಗಳನ್ನು ಕೊರೆದಿದ್ದ ಜೆ. ಗೋನ್‌ಸಾಲ್ವೇಸ್‌ನ ಕನ್ನಡ ಲಿಪಿಗಳ ಅಚ್ಚು ಮೊಳೆಗಳನ್ನು ತಯಾರಿಸಲು ತೊಡಗಿದನು. ಆದರೆ ಅವನಿಗೆ ಕನ್ನಡ ಅಕ್ಷರಗಳು ಸ್ವಲ್ಪ ಬಿಗುಡಾಗಿ ತೋರಿದ್ದರಿಂದ ಆ ಕೆಲಸವನ್ನು ಅಲ್ಲಿಯೇ ಬಿಟ್ಟಿದ್ದನು. ಸುಮಾರು ಒಂದು ನೂರು ವರ್ಷಗಳ ನಂತರ ಜಾನ್‌ಗಿಲ್ ಕ್ರಿಸ್ಟ್ ಎಂಬಾತನು ಕನ್ನಡ ಅಚ್ಚು ಮೊಳೆಗಳ ನಿರ್ಮಾಣದಲ್ಲಿ ಯಶಸ್ವಿಯಾದನು. ಪರಿಣಾಮವಾಗಿ ೧೭೯೦ರ ಕಾಲಕ್ಕೆ ಬಂಗಾಳದ ಶ್ರೀರಾಂಪುರ ಮುದ್ರಣಾಲಯದಲ್ಲಿ ಕನ್ನಡ ಮುದ್ರಣವನ್ನು ಪ್ರಾರಂಭಿಸಿದರು'[೧೮]

ಒಟ್ಟಿನಲ್ಲಿ ಭಾರತದಲ್ಲಿ ಈ ಪುಸ್ತಕದ ಹೊದಿಕೆ ಎಂಬುವುದನ್ನು ಮೊದಲು ಸಂಗ್ರಹ ಮಾಡಿದ ಮಾಹಿತಿಯನ್ನು ರಕ್ಷಣೆಮಾಡಲು ಉಪಯೋಗಿಸುತ್ತಿದ್ದರು. ಅಂದರೆ ಮೊದಲು ತಾಳೆಗರಿಯ ಮೇಲೆ ಮಾಹಿತಿ ಸಂಗ್ರಹವಾಯಿತು ಆ ಸಂಗ್ರಹವಾದ ಮಾಹಿತಿ ಸಂಗ್ರಹಿಸಲೆಂದು ತಾಳೆಗರಿಯ ಎರಡೂ ಬದಿಯಲ್ಲಿ ಎರಡು ರಂಧ್ರಗಳನ್ನು ಮಾಡಿ ಅದರಲ್ಲಿ ದಾರವನ್ನು ಪೋಣಿಸಿ ಆ ದಾರದಿಂದ ತಾಳೆಗರಿಯ ಮಾಹಿತಿಯನ್ನು ಕಟ್ಟಿ ಅದನ್ನು ಒಂದು ವಸ್ತ್ರದಲ್ಲಿ ಅಥವಾ ಬಟ್ಟೆಯಲ್ಲಿ ಸುತ್ತಿಡುತ್ತಿದ್ದರು. ಹೀಗೆ ಪ್ರಾರಂಭವಾದ ಈ ಪದ್ಧತಿ ಆಮೇಲೆ ಮುದ್ರಣ ಯಂತ್ರದ ಬಳಕೆ ಪ್ರಾರಂಭವಾಗಿ, ಸಂಗ್ರಹಿಸಿದ ಮಾಹಿತಿ ಮುದ್ರಣವಾದ ಮೇಲೆ ಮೊದಮೊದಲು ಎರಡೂ ಬದಿಯಲ್ಲಿ ರಟ್ಟುಗಳಿಂದ ರಕ್ಷಿಸಿಡುವ ಪದ್ಧತಿ ಆರಂಭವಾಯಿತು. ಮೊದಲು ರಟ್ಟುಗಳಿಂದ ಪ್ರಾರಂಭವಾದ ಈ ಮುಖಪುಟಗಳು ಕೇವಲ ರಕ್ಷಣೆಗಾಗಿ ಉಪಯೋಗಿಸಲ್ಪಡುತ್ತಿದ್ದರು. ನಂತರದ ದಿನಮಾನದಲ್ಲಿ ಈ ಮುಖಪುಟದಲ್ಲಿ ಅನೇಕ ಬದಲಾವಣೆಗಳು ಕಂಡುಬರತೊಡಗಿದವು, ಮುಖಪುಟದಲ್ಲಿ ಅಕ್ಷರಗಳ ಬಳಕೆ ಪ್ರಾರಂಭವಾಯಿತು ಅಂದರೆ ಕಥೆಯ ಶೀರ್ಷಿಕೆಯನ್ನು ಮುಖಪುಟದಲ್ಲಿ ಬರೆಯಲಾರಂಭಿಸಿದರು. ಹೀಗೆ ಆರಂಭವಾದ ಮುಖಪುಟಗಳೆಂದರೆ ರಾಮಾಯಣ, ಮಹಾಭಾರತ, ಭಗವದ್ಗೀತೆ, ಇವು ತಲೆಬರಹದಿಂದ ಪ್ರಾರಂಭವಾದ ಮುಖಪುಟ ಪುಸ್ತಕಗಳಾಗಿವೆ.

ಒಟ್ಟಾರೆಯಾಗಿ ಹೇಳುವುದಾದರೆ ಭಾರತದಲ್ಲಿ ಮುದ್ರಣಗಾರಿಕೆಯ ಪ್ರಗತಿ ಹೆಚ್ಚು ಕಡಿಮೆ ೧೧–೧೨ನೆಯ ಶತಮಾನದಿಂದ ಮೊದಲ್ಗೊಂಡು ೧೮ನೆಯ ಶತಮಾನದ ಅಂತ್ಯದ ವೇಳೆಗೆ ಗಣನೀಯವಾದ ಹಂತವನ್ನು ತಲುಪಿತು. ಇಲ್ಲಿನ ಮುದ್ರಣ ತಂತ್ರಗಾರಿಕೆಯ ಪ್ರಗತಿಯೊಂದಿಗೆ ಇಲ್ಲಿನ ಸಾಹಿತ್ಯಗಳ ರಕ್ಷಾಪುಟ / ಮುಖಪುಟ ವಿನ್ಯಾಸದ ಬೆಳವಣಿಗೆಯೂ ಥಳುಕು ಹಾಕಿಕೊಂಡಿದೆ (ಎಲ್ಲಾ ದೇಶಗಳಲ್ಲೂ ಇದೇ ರೀತಿಯಾಗಿದೆ ಎಂಬುದು ಗಮನದಲ್ಲಿರಿಸಿಕೊಳ್ಳಬೇಕಾದ ಅಂಶ) ಇಲ್ಲೂ ಸಹ ಸ್ಪೇನ್, ಜರ್ಮನಿ, ಇಂಗ್ಲೆಂಡ್ ಹೀಗೆ ವಿದೇಶದವರು ಬಂದು ಮುದ್ರಣ ಯಂತ್ರಗಳ ಮೂಲಕ ಪ್ರಕಟಣೆಗೆ ತೊಡಗಿಸಿಕೊಂಡ ಮೇಲೆಯೇ ಕ್ರಮೇಣ ಪುಸ್ತಕಗಳ ಮುದ್ರಣದಲ್ಲಿ ಅವುಗಳ ರಕ್ಷಾಪುಟ ವಿನ್ಯಾಸಗಾರಿಕೆಯಲ್ಲಿ ಬದಲಾವಣೆಗೊಳ್ಳುತ್ತ ಪ್ರಗತಿ ಆಗತೊಡಗಿದ್ದು ಉಲ್ಲೇಖಿಸಲೇಬೇಕಾದ ಅಂಶವಾಗುತ್ತದೆ. ಸಾರಾಂಶವಾಗಿ ಹೇಳಬೇಕೆಂದರೆ ಪಶ್ಚಿಮನಾಡಿನ ಪ್ರಗತಿಯ ಜಾಡಿನ ನೆರಳಿನಲ್ಲೇ ಭಾರತದಲ್ಲಿಯೂ ಸಹ ಪುಸ್ತಕ ಮುದ್ರಣ ತಂತ್ರಜ್ಞಾನ ಮತ್ತು ರಕ್ಷಾಪುಟ / ಮುಖಪುಟ ವಿನ್ಯಾಸ ಕಲೆ ಆರಂಭಿಕ ಪ್ರಗತಿಯನ್ನು ನಿಷ್ಕರ್ಷಿಸಿಕೊಂಡಿತ್ತು ಎಂದು ಅಭಿಪ್ರಾಯ ಪಡಬಹುದು.

---

೧೮. ನಿರಂಜನ್ ವಾನಳ್ಳಿ : ಕನ್ನಡದಲ್ಲಿ ಕಲೆ – ಸಾಹಿತ್ಯ ಪತ್ರಿಕೆಗಳು, ಪುಟ–೬೩

**ಕರ್ನಾಟಕದಲ್ಲಿ ರಕ್ಷಾಪುಟ ವಿನ್ಯಾಸ ಬೆಳವಣಿಗೆ**

ಕನಾಟಕದಲ್ಲಿ ರಕ್ಷಾಪುಟ / ಮುಖಪುಟ ವಿನ್ಯಾಸದ ಬೆಳವಣಿಗೆ ಭಾರತದ ಭೂಖಂಡದಲ್ಲಾದ ಬೆಳವಣಿಗೆಯಿಂದ ಹೊರತಾಗಿಯೇನೂ ಇಲ್ಲ. ಭಾರತದ ಬೇರೆ ಬೇರೆ ಭಾಗಗಳಲ್ಲಿ ಪ್ರಾಚೀನಕಾಲದಲ್ಲಿ ಯಾವ ರೀತಿಯಲ್ಲಿ ಲಿಪಿಗಾರಿಕೆ ನಡೆಯಿತೋ ಅದರಂತೆಯೇ ಕರ್ನಾಟಕದಲ್ಲೂ ಸಹ ನಡೆದಿದೆ ಎಂದು ಅಭಿಪ್ರಾಯ ಪಡಬಹುದು. ಕರ್ನಾಟಕ ಸಮಗ್ರ ಭಾರತದ ಅವಿಭಾಜ್ಯ ಅಂಗವೇ ಆಗಿದ್ದುದರಿಂದ ಮತ್ತು ಈ ರಾಜ್ಯದ ಆಡಳಿತಗಾರರು ರಾಜರುಗಳ ಅವಧಿಯಲ್ಲಿ ಅಥವಾ ಅದಕ್ಕೂ ಪೂರ್ವದಲ್ಲಿ ಇಲ್ಲಿನ ಜನ ಸಮುದಾಯ ಬೇರೆ ಬೇರೆ ಭಾಗಗಳ ಜನ ಸಮೂಹದೊಂದಿಗೆ ಸಂಪರ್ಕ ಕಲ್ಪಿಸಿಕೊಂಡ ಕಾರಣದಿಂದ ಭರತಖಂಡದ ಬೇರೆ ಬೇರೆ ಭೂಭಾಗಗಳ ಮುದ್ರಣಗಾರಿಕೆ, ಲಿಪಿಬದ್ಧಗೊಳಿಸುವಿಕೆ ಇಲ್ಲಿನ ಜನ ಸಮುದಾಯವನ್ನು ಪ್ರಭಾವಿಸಿರಲೇಬೇಕು. ಹಾಗಾಗಿ ಒಟ್ಟಾರೆ ಭಾರತದ ಮುದ್ರಣ ಲಿಪಿಗಾರಿಕೆಯನ್ನು ಅನುಲಕ್ಷಿಸಿ ಅಥವಾ ಭಾರತದ ಬೇರೆ ಬೇರೆ ರಾಜ್ಯಗಳ ಪ್ರಾಚೀನ ಲಿಪಿಗಾರಿಕೆ, ಗ್ರಂಥ ರಕ್ಷಾಪುಟ / ಮುಖಪುಟ ವಿನ್ಯಾಸಗಾರಿಕೆಯನ್ನು ಅನುಲಕ್ಷಿಸಿಯೇ ಇಲ್ಲಿನ ಮುದ್ರಣದ ಬಗ್ಗೆಯಾಗಲಿ, ಇಲ್ಲಿನ ಗ್ರಂಥಗಳ ರಕ್ಷಾಪುಟ / ಮುಖಪುಟ ಬೆಳವಣಿಗೆಯ ಕುರಿತು ಸಮರ್ಪಕವಾದ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ.

ಕಲ್ಲುಗಳ ಮೇಲೆ ಶಿಲಾಶಾಸನ ಕೆತ್ತುತ್ತಾ ಮಾಹಿತಿಯನ್ನು ಸಂಗ್ರಹಿಸಿಡಲು ಮತ್ತು ತಮ್ಮ ಮುಂದಿನ ಪೀಳಿಗೆಗೆ ತಾವು ಮಾಡಿರುವ ಸಾಧನೆ ಗೊತ್ತಾಗಲೆಂದು, ಕಲ್ಲುಗಳ ಮೇಲೆ ಅಕ್ಷರ ಲಿಪಿಯನ್ನು ಕೆತ್ತುತ್ತಿದ್ದರು. ಹೀಗೆ ಮಾಹಿತಿ ಸಂಗ್ರಹಣೆ ಮಾಡುತ್ತಾ ನಂತರ ಬಟ್ಟೆಯ ಮೇಲೆಯೂ ಕೂಡ ಸಂದೇಶ, ಮಾಹಿತಿಯನ್ನು ಬರೆಯಲಾರಂಭಿಸಿದರು, ಹೀಗೆಯೆ ಬೆಳವಣಿಗೆಯಾಗುತ್ತಾ ನಂತರ ಕಾಗದ ಸಂಶೋಧನೆಯಾಯಿತು. ಸಂಶೋಧಿಸಿದ ಕಾಗದದ ಲಿಪಿಗಳ ಮುಖಾಂತರ ಮುದ್ರಣ ಯಂತ್ರದ ಸಹಾಯದೊಂದಿಗೆ ಮಾಹಿತಿಯನ್ನು ಸಂಗ್ರಹಿಸಿಡುವ ಪದ್ಧತಿ ಪ್ರಾರಂಭವಾಯಿತು, ಹೀಗೆ ಮಾಹಿತಿ ಸಂಗ್ರಹಕ್ಕೆಂದು ಪ್ರಾರಂಭವಾದ ಈ ಪದ್ಧತಿ ನಾಗರಿಕರು ವಿದ್ಯಾವಂತರಾದಂತೆ ಅವರಿಗೆ ಹೆಚ್ಚಿನ ಮಾಹಿತಿ, ಅರಿವು, ಜ್ಞಾನ, ತಿಳಿವಳಿಕೆ, ನೀಡುವ ಉದ್ದೇಶದಿಂದ ಪುಸ್ತಕಗಳ ಪ್ರಕಟಣೆ ಆರಂಭವಾಗಿರಬೇಕು / ಆರಂಭವಾಯಿತು. ಪ್ರಕಟವಾಗುವ ಪುಸ್ತಕಗಳೊಂದಿಗೆ ಅದರ ಮಾಹಿತಿ ನೀಡುವ ರಕ್ಷಾಪುಟವೂ ಬಳಕೆಗೆ ಬಂತು ಅಥವಾ ಉಪಯೋಗಿಸಲಾರಂಭಿಸಿದರು. ರಕ್ಷಾಪುಟ ಚಿತ್ರಕಲೆಯು ಬೆಳೆಯುತ್ತಾ ಅದು ಪುಸ್ತಕದಲ್ಲಿನ ಎಲ್ಲಾ ಮಾಹಿತಿ ಒಂದೇ ಪುಟದಲ್ಲಿ ಅಥವಾ ಹಿಂಬದಿ ಪುಟದಲ್ಲಿಯೂ ಸಹ ಸಂಕ್ಷಿಪ್ತವಾಗಿ ಮತ್ತು ಆಕರ್ಷಕವಾಗಿ ಸುಂದರ ವರ್ಣಗಳೊಂದಿಗೆ ಉತ್ತಮ ವಿನ್ಯಾಸದಿಂದ ಅಭಿವೃದ್ಧಿಗೊಳ್ಳುತ್ತಾ ಸಾಗಿತು / ಸಾಗಿದೆ / ಸಾಗುತ್ತಿದೆ.

ಕರ್ನಾಟಕದಲ್ಲಿಯೂ ಸಹ ಹಸ್ತಪ್ರತಿಗಳಿಗೆ ಸೂಕ್ತ ರೀತಿಯ ರಕ್ಷಾಪುಟಗಳನ್ನು ಅಳವಡಿಸಿದಂದಿನಿಂದ ಮುಖಪುಟ ಕಲ್ಪನೆ ಉದಯಿಸಿತು. ಅದಕ್ಕೂ ಪೂರ್ವದಲ್ಲಿ 'ಕ್ರಿಪೂ ೫ನೆಯ ಶತಮಾನದ ಸಮಯದಲ್ಲಿ ಪಾಠಶಾಲೆಗಳಲ್ಲಿ ಮರದ ಹಲಗೆಯ ಮೇಲೆ ಬಳಪದ ಕಲ್ಲು ಬಳಸಿ ಬರೆಯುತ್ತಿದ್ದರು. ಮತ್ತೆ ಕೆಲವರು ಭೂರ್ಜಪತ್ರ, ಮರದ ತೊಗಟೆ, ತಾಳೆಗರಿಯ ಎಲೆಗಳು ಇತ್ಯಾದಿಗಳನ್ನು ಬೇರೆ-ಬೇರೆ ತರಹದ ಎಣ್ಣೆ ಇತ್ಯಾದಿಗಳನ್ನು ಬಳಸಿ ಹದಗೊಳಿಸಿ ಬಳಸುತ್ತಿದ್ದರು. ತಾಳೆಗರಿಯ ಮೇಲೆ ಬರೆಯಲು ವಿಶೇಷ ರೀತಿಯ

ಮಸಿಯನ್ನು ತಯಾರಿಸಿಟ್ಟುಕೊಳುತ್ತಿದ್ದರು. ಬರೆಯಲು ಹಕ್ಕಿಗಳ ಪುಕ್ಕವನ್ನು ಬಳಸುತ್ತಿದ್ದರು. ತಾಳೆಗರಿಗಳ ಮೇಲೆ ಬರೆದು, ಪ್ರತಿಯೊಂದು ಗರಿಯ ಮಧ್ಯದಲ್ಲಿ ತೂತು ಕೊರೆದು ಎಲ್ಲಾ ತಾಳೆಗರಿಗಳನ್ನು ಕ್ರಮವಾಗಿ ಒಂದುದಾರಕ್ಕೆ ಪೋಣಿಸಿಡುತ್ತಿದ್ದರು. ಆ ನಂತರ ಆ ದಾರದಿಂದಲೇ ಪೂರ್ತಿ ಕಟ್ಟನ್ನು ಕಟ್ಟಿ ಒಂದು ಪುಸ್ತಕದ ರೂಪದಲ್ಲಿ ಕಟ್ಟಿಡುತ್ತಿದ್ದರು. ಈ ರೀತಿಯಲ್ಲಿ ತಾಳೆಗರಿಮೇಲೆ ಕೈಬರಹವನ್ನು ಬರೆದು ಸಂರಕ್ಷಿಸಿ ದೊರಕಿರುವ ಅತ್ಯಂತ ಕನ್ನಡ ರಚನೆ ಎಂದರೇ ೯ನೆಯ ಶತಮಾನದ ಧವಳ ಎಂಬ ಜೈನಮತದ ಧರ್ಮಗ್ರಂಥವೆಂದು ಗುರುತಿಸಲಾಗಿದೆ, ಇದರಲ್ಲಿ ೧೪೭೮ ಹಾಳೆಗಳಿರುವುದಾಗಿ ದಾಖಲೆಯಾಗಿದೆ.'[೧೯]

'ಹಸ್ತ ಪತ್ರಿಯೊಂದು ನಿರ್ಮಾಣವಾಗಬೇಕಾದಾಗ ಅದರ ಹಿಂದುಗಡೆ ಅನೇಕ ಕುಶಲಿಗಳ ಮೌನ ತಪಸ್ಸು ಸಂದಾಯವಾಗಿರುತ್ತಿತ್ತು ಎಂಬುದನ್ನು ಹೇಳಿದ್ದಾರೆ. ಅದರಲ್ಲಿ ಫಲಕಗಳನ್ನು ತಯಾರಿಸುತ್ತಿದ್ದ ಬಡಿಗ (ವರ್ಧಕಿ) ಅವುಗಳ ಮೇಲೆ ಚಿತ್ರ ಬರೆಯುತ್ತಿದ್ದ ಚಿತ್ರಕಾರ ಇವರು ಹಸ್ತ ಪ್ರತಿ ಸೌಂದರ್ಯವರ್ಧನೆಗೆ ಕಾರಣರಾದ ಪ್ರಮುಖರು ಒಂದು ಹಸ್ತಪ್ರತಿಗೆ ವರ್ಣರಂಜಿತ ಫಲಕಗಳನ್ನು ಜೋಡಿಸಬೇಕಿದ್ದರೆ ಸಾಮಾನ್ಯವಾಗಿ ಬಡಿಗ ಮತ್ತು ವರ್ಣಚಿತ್ರಕಾರ ತಾಳೆಯೋಲೆ ಇಲ್ಲವೆ ಕಾಗದ ಪ್ರತಿಗಳಲ್ಲಿನ ಪತ್ರಗಳು ವರ್ಣರಂಜಿತವಾಗಬೇಕಿದ್ದರೆ ಪ್ರತಿಕಾರ ಇಲ್ಲವೆ ವರ್ಣಚಿತ್ರಕಾರ ಪರಿಶ್ರಮಿಸಬೇಕಾಗುತ್ತಿತ್ತು.'[೨೦]

'ಫಲಕಗಳ ಮೇಲೆ ನೇರವಾಗಿ ವರ್ಣಚಿತ್ರಗಳನ್ನು ಬಿಡಿಸಿರುವ ನಿದರ್ಶನಗಳು ಕಡಿಮೆ ಬಟ್ಟೆಯನ್ನಂಟಿಸಿ ಚಿತ್ರ ರಚಿಸಿದ ಉದಾಹರಣೆಗಳು ಸ್ವಲ್ಪ ಮಟ್ಟಿಗೆ ದೊರಕುತ್ತವೆ. ಇವುಗಳಿಗಿಂತ ಹಲಗೆಯ ಮೇಲೆ ಬಿಳಿ ಲೇಪಕವನ್ನು ಸವರಿ ವರ್ಣಚಿತ್ರಗಳನ್ನು ರಚಿಸಿದ ನಿದರ್ಶನಗಳು ಸರ್ವೇಸಾಮಾನ್ಯ. ಆದರೆ ಚಿತ್ರಗಳ ಸ್ಪಷ್ಟತೆ ಹಾಗೂ ಸ್ಥಿರತೆಯ ದೃಷ್ಟಿಯಿಂದ ಫಲಕದ ಮೇಲಿನ ನೇರ ಚಿತ್ರಣಕ್ಕಿಂತ ಫಲಕಗಳಿಗೆ ಲೇಪಕವನ್ನು ಬಳಿದು ಚಿತ್ರಿಸಿದ ಅದಕ್ಕಿಂತಲೂ ಬಟ್ಟೆಯನ್ನಂಟಿಸಿ ಚಿತ್ರಿಸಿದವು ಉತ್ತಮವಾದವುಗಳು.'[೨೧]

'ಹಸ್ತಪ್ರತಿಗಳಲ್ಲಿ ಬರೆಯದೆ ಉಳಿದ ಸ್ಥಳವನ್ನು ತುಂಬಲು ರಚಿಸಿದ್ದವುಗಳನ್ನು ಅಗತ್ಯದ ಅಲಂಕಾರಗಳೆಂದೂ ಹಸ್ತಪ್ರತಿಗಳ ಸೌಂದರ್ಯವನ್ನು ಹೆಚ್ಚಿಸುವ ದೃಷ್ಟಿಯಿಂದ ರಚಿಸಲಾದವುಗಳನ್ನು ಉದ್ದೇಶಿತ ಅಲಂಕಾರಗಳೆಂದೂ, ಆಯಾ ಗ್ರಂಥದಲ್ಲಿ ಬರುವ ಸಂದರ್ಭ ಸನ್ನಿವೇಶಗಳನ್ನು ಇಲ್ಲವೆ ಆ ಗ್ರಂಥದ ವಿಷಯ ನಿರೂಪಣೆಗೆ ಸಹಾಯಕವಾಗುವಂತೆ ರಚಿಸಿದ ಚಿತ್ರಗಳನ್ನು ಸಾಂದರ್ಭಿಕ ಚಿತ್ರಗಳೆಂದೂ ಮತ್ತೆ ವಿಂಗಡಿಸಿಕೊಳ್ಳಬೇಕು'[೨೨] ಎಂಬ ಅಭಿಮತ ವಿದ್ವಾಂಸರುಗಳದ್ದಾಗಿದೆ. ಹಸ್ತ ಪ್ರತಿಗಳಲ್ಲಿನ ವರ್ಣಚಿತ್ರಗಳ ವಿಂಗಡಣೆ. ಪತ್ರ (ತಾಳೆಗೆರಿ ಮತ್ತು ಕಾಗದ) ಫಲಕ (ರಕ್ಷಾ ಫಲಕ) ಹಸ್ತಪ್ರತಿ ರಕ್ಷಾಪುಟಕ್ಕೆ ಬಳಸಿಕೊಂಡ ಮಾಧ್ಯಮಗಳು ಕಾಗದ, ರಟ್ಟು, ಬಿದಿರಿನ ಚಾಪೆಯನ್ನು, ಬಟ್ಟೆಯನ್ನು, ಚರ್ಮವನ್ನು, ಹಸ್ತಪ್ರತಿ ರಕ್ಷಾಪುಟದ ಮೇಲೆ ವರ್ಣ ಚಿತ್ರಗಳನ್ನು ರಚಿಸುವ ಪದ್ಧತಿ. ಫಲಕಗಳ ಮೇಲೆ ನೇರವಾಗಿ ವರ್ಣಚಿತ್ರಗಳ ರಚನೆ. ಒಣಗಿದ ಮೇಲೆ ನಯಗೊಳಿಸಿ ವರ್ಣಚಿತ್ರಗಳ ರಚನೆ ಕವಡೆ/ಶಂಖದಿಂದ ಮೇಲ್ ಮೈಯನ್ನು ತಯಾರಿಸಿಕೊಂಡು ವರ್ಣಚಿತ್ರಗಳ ರಚನೆ.

---

೧೯. ಡಾ. ಎಂ.ಎಂ.ಕಲಬುರ್ಗಿ : ಕನ್ನಡ ಗ್ರಂಥಸಂಪಾದನಾ ಶಾಸ್ತ್ರ, ಪುಟ-೨೯
೨೦. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿ - ಒಂದು ಅಧ್ಯಯನ, ಪುಟ-೧೮೨
೨೧. ಅದೇ., ಪುಟ-೧೮೩
೨೨. ಅದೇ., ಪುಟ-೧೬೮

'ಹಸ್ತಪ್ರತಿ ಫಲಕದ ಚಿತ್ರರಚನಾವಿಧಿಯ ಬಗ್ಗೆ ಚರ್ಚಿಸುತ್ತಾ ಫಲಕದ ಮಾಧ್ಯಮ ಮರದ ಫಲಕ, ಲೋಹದ ಫಲಕ ಆನೆದಂತ ಫಲಕ, ಮಿಶ್ರಫಲಕ ಇತ್ಯಾದಿ ಮಾಧ್ಯಮಗಳ ಕುರಿತು ವಿವರಣೆ ತಿಳಿಸಿದ್ದಾರೆ. ಹಾಗೂ ಹಸ್ತಪ್ರತಿಗಳಿಗೆ ರಕ್ಷಾಕವಚದಂತಿರುವ ಫಲಕಗಳು ರಾಜ್ಯ ರಕ್ಷಿಸುವ ಕೋಟೆಗೋಡೆಗಳ ಕಾರ್ಯವನ್ನು ಅವು ನಿರ್ವಹಿಸುತ್ತವೆ. ಹಸ್ತಪ್ರತಿಗಳು ತಾಳೆಗರಿ, ಭೂರ್ಜ ಪತ್ರ ಕಾಗದದ ಪತ್ರಪಟ ಚಿತ್ರಗಳು ಯಾವುದೇ ಇದ್ದರೂ ಅವುಗಳನ್ನು ಕಾಯ್ದಿಟ್ಟು ಕೊಳ್ಳುವಲ್ಲಿ ಫಲಕಗಳು ಬಹುಮುಖ್ಯ ಪಾತ್ರವನ್ನು ನಿರ್ವಹಿಸುತ್ತವೆ. ಮಾನವ ದೇಹದೊಳಗಿನ ಎಲುಬಿನ ಹಂದರದಂತೆ ಹಸ್ತಪ್ರತಿಗಳ ಹೊರಗಿದ್ದು ಈ ಫಲಕಗಳು ಕಾಯುವ ಕಾರ್ಯವನ್ನು ನಿರ್ವಹಿಸುತ್ತವೆ. ಹಸ್ತ ಪ್ರತಿಗಳಿಗೆ ಇರುವ ಆಪತ್ತುಗಳಿಂದ ಸಂರಕ್ಷಿಸಲು ಕೂಡಾ ಈ ಫಲಕಗಳು ರಕ್ಷಣೆ ನೀಡುತ್ತವೆ. ಗಾಳಿ, ಬೂಷ್ಟ್, ತೇವಾಂಶಗಳಿಂದ ರಕ್ಷಣೆ ಒದಗಿಸಿದಂತೆ. ಗೆದ್ದಲು, ಜಿರಲೆ, ಕೀಟಗಳಿಂದ ಇಲಿ, ಹೆಗ್ಗಣ ಮನೆಯೊಳಗೆ ಅಲ್ಲಲ್ಲಿ ಗೂಡುಕಟ್ಟುವ ಪಕ್ಷಿಗಳಿಂದಲೂ ಈ ಫಲಕಗಳು ಸಂರಕ್ಷಣೆಯನ್ನು ಒದಗಿಸಿ ಕೃತಿಗಳ ಆಯುರ್ಮಾನವನ್ನು ವೃದ್ಧಿಸುತ್ತವೆ.'[೨೩] ಎಂಬ ಅಭಿಪ್ರಾಯವನ್ನು ಸಹ ಕೆಲವು ತಜ್ಞರು ವ್ಯಕ್ತಪಡಿಸಿದ್ದಾರೆ.

**ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ ಪುಸ್ತಕಗಳ ಮುಖಪುಟ ವಿನ್ಯಾಸ/ರಚನೆ**

ಈ ಅಧ್ಯಯನವು ೧೯೦೦ ರಿಂದ ೨೦೦೦ ರ ವರೆಗಿನ ಕನ್ನಡ ಸಾಹಿತ್ಯ ಗ್ರಂಥಗಳ ಮುಖಪುಟ ವಿನ್ಯಾಸದ ಕುರಿತಾಗಿದ್ದರೂ ಆಂಶಿಕವಾಗಿ/ಪ್ರಾತಿನಿಧಿಕವಾಗಿ ಕರ್ನಾಟಕದಲ್ಲಿ ಅದಕ್ಕೂ ತುಸು ಮುಂಚೆ ಕನ್ನಡ ಸಾಹಿತ್ಯ ಗ್ರಂಥಗಳ ಪ್ರಕಟಣೆ, ಆ ಕುರಿತಾಗಿ ಇದ್ದ ವ್ಯವಸ್ಥೆಗಳ ಕುರಿತು ಸ್ಥೂಲ ನೋಟ ಹರಿಸಬೇಕಾದುದ್ದು ಅಗತ್ಯವಾಗಿರುವುದರಿಂದ. ಸ್ವಾತಂತ್ರ್ಯಪೂರ್ವ ೧೯೦೧ ಕ್ಕಿಂತಲೂ ಮೊದಲು ಇಲ್ಲಿನ ವಿನ್ಯಾಸ, ಇತ್ಯಾದಿ ಮೌಲಿಕ ಸಂಗತಿಗಳ ಕುರಿತು ಸಂಕ್ಷೇಪದಲ್ಲಿ (ಸಂಕ್ಷಿಪ್ತವಾಗಿ) ವಿವರಿಸಲು ಪ್ರಯತ್ನಿಸಲಾಗಿದೆ. 'ಕ್ರಿ.ಶ ೧೮೧೭ ರಲ್ಲಿ ವಿಲಿಯಂ ಕ್ಯಾರಿ ಎಂಬುವನು A Grammar of the Kurnata language' ಎಂಬ ಗ್ರಂಥವನ್ನು ಪ್ರಕಟಿಸಿದನು, ಇದು ಕನ್ನಡದ ಪ್ರಥಮ ಮುದ್ರಿತ ಕೃತಿ, ಅಲ್ಲಲ್ಲಿ ಕನ್ನಡದ ಪದ, ವಾಕ್ಯಗಳನ್ನೊಳಗೊಂಡ ೧೪೫ ಪುಟಗಳ ಈ ವ್ಯಾಕರಣ, ಬಂಗಾಲದ ಶ್ರೀ ರಾಮಪುರದಲ್ಲಿ ಈತನೇ ಸ್ಥಾಪಿಸಿದ್ದ 'ಮಿಶನ್ ಪ್ರೆಸ್' ದಲ್ಲಿ ಅಚ್ಚಾಯಿತು, ಇದೇ ಪ್ರೆಸ್ಸಿನಲ್ಲಿ ಕ್ರಿ.ಶ ೧೮೨೦ ರಂದು ಜಾನ್ ಮೆಕಲ್ ಎಂಬುವನು 'A Grammar of Canarese language ಎಂಬ ೨೧೧ ಪುಟಗಳ ವ್ಯಾಕರಣವನ್ನು ಮದ್ರಾಸದ ಫೋರ್ಟ್ ಸೇಂಟ್ ಜಾರ್ಜ್ ಪ್ರೆಸ್‌ನ ಮುಖಾಂತರ ಪ್ರಕಟಿಸಿದನು. ನಾಲ್ವಡಿ ಜಾರ್ಜ್‌ದೊರೆಗಳಿಗೆ ಅರ್ಪಿಸಿದರೂ ಕೃತಿರಚನೆಗೆ ಶಬ್ದಮಣಿದರ್ಪಣದ ನೆರವನ್ನು ಪಡೆದುದಾಗಿ ಹೇಳಿರುವರು. ಕ್ರಿ.ಶ ೧೮೨೪ ರಂದು ವಿ.ರೀವ್ಹ ಅವರ ೨೫೦೦೦ ಶಬ್ದಗಳ ೮೫೦ ಪುಟಗಳ English Dictionary ಪ್ರಕಟವಾಯಿತು. ೧೮೩೮ ರಲ್ಲಿ ಶ್ರೀ ರಂಗಪಟ್ಟಣ ಕೃಷ್ಣಮಾಚಾರಿಯವರು 'ಹೊಸಗನ್ನಡ ನುಡಿಗನ್ನಡತಿ ಎಂಬ ಹೊಸಗನ್ನಡ ವ್ಯಾಕರಣವು' ಎಂಬ ಕೃತಿಯನ್ನು ಪ್ರಕಟಿಸಿದರು'[೨೪]

---

೨೩. ಡಾ. ಎಚ್. ಎನ್. ಚಿತ್ರಗಾರ : ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ (ಅಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧ). ಪು-೫೫

೨೪. ಡಾ. ಎಂ.ಎಂ.ಕಲಬುರ್ಗಿ : ಕನ್ನಡ ಗ್ರಂಥಸಂಪಾದನಾ ಶಾಸ್ತ್ರ, ಪುಟ-೨೯

ಕನ್ನಡನಾಡು ಏಕೀಕರಣಕ್ಕಿಂತ ಮೊದಲು ಕರ್ನಾಟಕದ ಬೇರೆ ಬೇರೆ ಭೂಭಾಗಗಳು; ಮದ್ರಾಸು, ಮುಂಬಯಿ ಹೀಗೆ ಬೇರೆ ಬೇರೆ ಪ್ರಾಂತಗಳಲ್ಲಿ ಹಂಚಿಹೋಗಿದ್ದವಷ್ಟೆ. ಈ ಮುಂಬಯಿ ಪ್ರಾಂತದಲ್ಲಿ ಸಾಕಷ್ಟು ಮೊದಲೇ ಕೊಂಚ ಸುಧಾರಿತ ಮುದ್ರಣದ ಗ್ರಂಥಗಳಿದ್ದವು. 'ಮುಂಬಯಿ ಪ್ರಾಂತವು ಕ್ರಿ.ಶ. ೧೮೨೪ ರಷ್ಟು ಹಿಂದೆಯೇ ಒಂದು ಕಲ್ಲಚ್ಚಿನ ಪ್ರೆಸ್ಸನ್ನು ಆರಂಭಿಸಿತ್ತು, ಇಲ್ಲಿ ಅಚ್ಚಾದ ಮತ್ತು ನಮಗೆ ದೊರೆತ ಮೊದಲ ಕನ್ನಡ ಪುಸ್ತಕವೆಂದರೆ ಸಣ್ಣ ಹಿತೋಪದೇಶ (ಕ್ರಿ.ಶ ೧೮೩೬) ಎಂಬುದು ತತ್ಪೂರ್ವದಲ್ಲಿ ಬೇಕಾಗಿದ್ದ ಮೂರು ಪ್ರಾಥಮಿಕ ಪುಸ್ತಕಗಳನ್ನು ಹೇಗೂ ಬಳ್ಳಾರಿಯ ಮಿಶನ್ ಪ್ರೆಸ್‌ನಲ್ಲಿ ಮುದ್ರಿಸಿ ತರಿಸಿಕೊಂಡಿದ್ದರು'[೨೫] ಇತ್ತ ಬೆಂಗಳೂರು ನಗರದಲ್ಲಿ ಓರ್ವ 'ಮ್ಯಾಜಿಸ್ಟ್ರೇಟ್'ನು ಸರಕಾರದ ವತಿಯಿಂದ ಕ್ರಿ.ಶ ೧೮೪೨-೪೩ ರಲ್ಲಿ ಕಲ್ಲಚ್ಚಿನ ಮುದ್ರಣವನ್ನು ಆರಂಭಿಸಿದ್ದು ಒಂದು ಮಹತ್ವದ ಹೆಜ್ಜೆಯಾಗಿದೆ.[೨೬] ಈ ಅಚ್ಚುಕೂಟದಲ್ಲಿ ಹಿಂದೂ ಪರಂಪರೆಯ ಮತ್ತು ಶಾಲೆಗಳಿಗೆ ಉಪಯೋಗ ಬೀಳುವಂತಹ ಪುಸ್ತಕಗಳನ್ನು ಮುದ್ರಿಸುತ್ತಿದ್ದರೆನ್ನಬಹುದು, ವರ್ಣಯಂತ್ರದ ಪ್ರಸ್ತಾಪವನ್ನು ನೋಡಿದರೆ ಬಣ್ಣದ ಇಲ್ಲವೆ ಚಿತ್ರಗಳ ಮುದ್ರಣ ಇಲ್ಲಿ ನಡೆಯುತ್ತಿದ್ದಿತೆಂದು ಅನಿಸುವುದು'[೨೭] ಛಾಪಾಖಾನೆಗೆ ವರ್ಣಯಂತ್ರ ಎಂದು ಕರೆಯುತ್ತಿದ್ದಿರಬೇಕು ಎಂಬುದಾಗಿ ತಮ್ಮ ಗ್ರಂಥ ಹೊಸಗನ್ನಡ ಅರುಣೋದಯದಲ್ಲಿ ಡಾ.ಶ್ರೀನಿವಾಸ ಹಾವನೂರರವರು ಅಭಿಪ್ರಾಯ ಪಟ್ಟಿದ್ದಾರೆ'.[೨೮]

೧೯ನೆಯ ಶತಮಾನದ ಪೂರ್ವಾರ್ಧದ ವೇಳೆಗೆ ಕರ್ನಾಟಕದಲ್ಲಿ ಮುದ್ರಣಕ್ಕೆ ಆರಂಭದೊರೆಯಿತು. ಈ ಆರಂಭವನ್ನು ಒದಗಿಸಿಕೊಟ್ಟಿದ್ದವರು ವೆಸ್ಲಿಯನ್ ಪ್ರೆಸ್. ೧೮೪೦ ರ ನವೆಂಬರ್ ತಿಂಗಳಲ್ಲಿ ಬೆಂಗಳೂರು ನಗರದ ಕಂಟೋನ್ಮೆಂಟ್ ಪ್ರದೇಶದಲ್ಲಿ (ಅಲಸೂರು ಪೇಟೆ ಬಳಿ) ಆರಂಭವಾದ ಈ ಪ್ರೆಸ್ 'Canarese and English Instructor' ಎಂಬ ಶಿರೋನಾಮೆಯ ಪುಸ್ತಕವನ್ನು ನಾಂದಿಹಾಡಿತು, ಆದರೆ ಅದನ್ನು ಮದ್ರಾಸಿಗೆ ಕಳಿಸಿ ಬೈಂಡ್ ಮಾಡಿಸಬೇಕಾಗಿ ಬಂದಿತು, ನಮ್ಮ ರಾಜ್ಯದಲ್ಲಿ ಆ ಕಾಲಾವಧಿಯಲ್ಲಿ ಮುದ್ರಣ ತಂತ್ರಜ್ಞಾನ ಎಷ್ಟರಮಟ್ಟಿಗೆ ಶೈಶವಾವಸ್ಥೆಯಲ್ಲಿ ಇದ್ದಿತು ಎಂಬುದನ್ನು ಸೂಚಿಸುತ್ತದೆ. ಇದೇ ವೆಸ್ಲಿಯನ್ ಪ್ರೆಸ್ ನಂತರದ ಒಂದು ದಶಕದ ಅವಧಿಯಲ್ಲಿ ಗಮನಾರ್ಹ ಸುಧಾರಣೆಗಳನ್ನು ಕಂಡುಕೊಂಡು ಗಣನೀಯವಾದ ಪ್ರಮಾಣದಲ್ಲಿ ಪುಸ್ತಕಗಳನ್ನು ಮುದ್ರಿಸುವುದರ ಮೂಲಕ ಕರ್ನಾಟಕದಲ್ಲಿ ಮುದ್ರಣಗಾರಿಕೆಯಲ್ಲಿ ಕ್ರಾಂತಿ ಸಂಭವಿಸುವಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿರುತ್ತದೆ.

ಜರ್ಮನಿಯ ಬಾಸೆಲ್ ನಗರದ ಮೂರು ಜನ ಮಿಷನರಿಗಳು ಕ್ರಿ.ಶ. ೧೮೩೪ ರಂದು ಮಂಗಳೂರಿನಲ್ಲಿ ಬಾಸೆಲ್ ಮಿಷನ್ ಸಂಸ್ಥೆಯನ್ನು ಪ್ರಾರಂಭಿಸಿದರು. ಈ ಸಂಸ್ಥೆಯ ಮುದ್ರಣಾಲಯದಿಂದ ಮೊಗ್ಲಿಂಗ್‌ರವರ ಮೂಲಕ ಜೈಮಿನಿ ಭಾರತ (೧೮೪೮), ಬಸವಪುರಾಣ (೧೮೫೦), ಪರ್ವಭಾರತ (೧೮೫೧), ಚನ್ನಬಸವ ಪುರಾಣ (೧೮೫೧), ರಾಜೇಂದ್ರನಾಮ (೧೮೫೭), ಕನ್ನಡ ಗಾದೆಗಳು (೧೮೫೯),

೨೫. ಡಾ. ಶ್ರೀನಿವಾಸ ಹಾವನೂರು : ಹೊಸಗನ್ನಡದ ಅರುಣೋದಯ, ಪುಟ-೪೪

೨೬ ಅದೇ., ಪುಟ-೪೫

೨೭ ಅದೇ., ಪುಟ-೪೬

೨೮. ಅದೇ., ಪುಟ-೪೭

ದಾಸರಪದ (೧೮೬೦) ಮತ್ತು ರಾವಣ ದಿಗ್ವಿಜಯ (ಯಕ್ಷಗಾನ) ಗಳು ಪ್ರಕಟವಾದವು. ಇವರ ಮಾದರಿಯಲ್ಲಿ ಪೂರ್ವ ಪಶ್ಚಿಮಗಳ ವಿದ್ವಾಂಸರ ಅನೇಕ ಕಲ್ಲಚ್ಚಿನ ಪ್ರಕಟಣೆಗಳನ್ನು ಬೆಳಕಿಗೆ ತಂದರು.'[೨೯] ಕ್ರಿ.ಶ. ೧೮೪೧ ರಲ್ಲಿ ಇದೇ ಮಂಗಳೂರು ಬಾಸೆಲ್ ಮಿಶನ್ ಜರ್ಮನ್ ಇವ್ಯಾಂಜೆಲಿಕಲ್ ಮೆಶಿನ್ ಪ್ರೆಸ್ ಎಂಬ ಹೆಸರು ಪಡೆದು ಕರ್ನಾಟಕ ಮುದ್ರಣ ಕಾರ್ಯದಲ್ಲಿ ವಿಶೇಷವಾಗಿ ತೊಡಗಿಸಿಕೊಂಡಿತು. 'ಈ ಪ್ರೆಸ್ಸಿನಲ್ಲಿ ಮೈಗಲ್ ಮುದ್ರಿಸಿದ ಮೊದಲ ಪುಸ್ತಕವೆಂದರೆ 'ತುಳು ಕೀರ್ತನೆಗಳು' ಶುರುವಿಗೆ ಇಲ್ಲಿಯ ಮುದ್ರಣವೆಲ್ಲ ಕಲ್ಲಚ್ಚಿನಿಂದ ನಡೆಯುತ್ತಿದ್ದಿತು. ಆಗ ಸಣ್ಣ ಪುಟ್ಟ ಮತ ಪುಸ್ತಕಗಳು ಮುದ್ರಣಗೊಂಡವು. ಮುಂದೆ ಕುಮಾರವ್ಯಾಸ ಭಾರತ, ಬಸವ ಪುರಾಣ, ಚೆನ್ನಬಸವ ಪುರಾಣ, ಜೈಮಿನಿ ಭಾರತಗಳಂತಹ ದೊಡ್ಡ ಗಾತ್ರದ ಬಹುಪುಟ ಸಂಖ್ಯೆಯ ಪುಸ್ತಕಗಳು ಕಲ್ಲಚ್ಚಿನಲ್ಲಿಯೇ ಹೊರಬಂದವು. ಈ ಪ್ರೆಸ್ ಮುದ್ರಿಸಿದ ಈ ಗ್ರಂಥಗಳೆಲ್ಲ ಒಂದೇ ಆಕಾರದಲ್ಲಿ ಅತ್ಯಂತ ದುಂಡಾಗಿ, ದಕ್ಷತೆ, ಪರಿಶ್ರಮಗಳಿಂದೊಡಗೂಡಿ ಮುದ್ರಿತವಾಗಿವೆ ಎಂಬುದಾಗಿ ಕನ್ನಡದ ವಿದ್ವಾಂಸ ಶ್ರೀನಿವಾಸ ಹಾವನೂರ್‌ರವರು ಅಭಿಪ್ರಾಯ ಪಡುತ್ತಾರೆ.

ಕ್ರಿಶ ೧೮೫೧ರ ಹೊತ್ತಿಗೆ ದೊಡ್ಡದಾದ ಮುದ್ರಣಯಂತ್ರವನ್ನು ಅಳವಡಿಸಿಕೊಂಡು ಮುಂದುವರಿಯಿತು. ಹೀಗೆ ಮುದ್ರಣ ತಂತ್ರಗಾರಿಕೆಯಲ್ಲಿ ಮುದ್ರಣ ಕೃಷಿಯಲ್ಲಿ ೧೯ನೆಯ ಶತಮಾನದ ಉತ್ತರಾರ್ಧದ ವೇಳೆಯಲ್ಲಿ ಬಾಸೆಲ್ ಮಿಶನ್ ಸ್ಥಾಪಿಸಿದ ಸಾಧನೆ ಅತ್ಯಂತ ಅನುಪಮವಾದುದು ಎಂದೇ ಹೇಳಬೇಕಾಗುತ್ತದೆ. ಏಕೆಂದರೆ ಕನ್ನಡವೂ ಒಳಗೊಂಡಂತೆ, ತಮಿಳು, ಮಲೆಯಾಳಂ, ದೇವನಾಗರಿ ಮೊದಲಾದ ಭಾಷೆಗಳಲ್ಲಿ ಮುದ್ರಣ ಕಾರ್ಯನಡೆಸಿದ ಇದು ಆ ಕಾಲಘಟ್ಟಕ್ಕೆ ಅತ್ಯಂತ ಮಾದರಿಯೆನಿಸಿದ ಚೆಲುವಾದ ಹೊರನೋಟವುಳ್ಳ ಪುಸ್ತಕಗಳ ಅಚ್ಚಿಗೆ ವಿಶೇಷ ಪ್ರಾಶಸ್ತ್ಯ ನೀಡಿತು. ಆ ದಿಸೆಯಲ್ಲಿ ಇತರ ಮುದ್ರಣಗಾರರಿಗೆ ಆದರ್ಶಪ್ರಾಯವೆನಿಸಿತು ಇದರ ಈ ರೀತಿಯ ಕಾರ್ಯವನ್ನು ಅನುಲಕ್ಷಿಸಿ 'Manual of the Administration of the madras presidency' ಇದರ ಪುಟ ೫೫೦ರಲ್ಲಿ ಉಲ್ಲೇಖಿಸಿದ ವಿಷಯ ಅದು ಇಂತಿದೆ 'The Basel Mission Press at Mangalore whose Canarese printing is uneghulled for beauty an any other press in India' ಈ ಮಿಶನ್ನಿನವರು ಪಡಿಯಚ್ಚುಗಳನ್ನು ತಯಾರಿಸಿ ಬಣ್ಣದಿಂದ ಮುದ್ರಿಸುವುದನ್ನು ಮೊದಲಿನಿಂದಲೂ ಬಳಕೆಯಲ್ಲಿ ತಂದಿದ್ದರು. ಭಾರತ ನಕಾಶದ ೩೮೦೦ ಪ್ರತಿಗಳನ್ನು ಬಣ್ಣದಿಂದ ಮುದ್ರಿಸಿದ್ದಾಗಿ ಕ್ರಿ.ಶ. ೧೮೫೯ರ ಮಿಶನ್ನಿನ ವಾರ್ಷಿಕ ವರದಿಯಲ್ಲಿ ಕಾಣಿಸಲಾಗಿದೆ. ೧೭x೧೨ ಇಂಚು ಅಗಲವಿರುವ ನಕಾಶವು ಕನ್ನಡದಲ್ಲಿ ಹೊರಬಂದ ನಕಾಶಗಳಲ್ಲಿ ಮೊದಲಿನದಾಗಿರುವ ಸಂಭವವಿದೆ'[೩೦]

೧೮೪೮ ರಲ್ಲಿ ಆರಂಭವಾದ ಕೊಲಂಬಿಯನ್ ಪ್ರೆಸ್ ಬೆಂಗಳೂರಿನಲ್ಲಿ ಆರಂಭವಾದ ಎರಡನೆಯ ಮುದ್ರಣಾಲಯ, 'ಆರಂಭದಲ್ಲಿ ಮುದ್ರಣದ ವೇಗ ತೀರಾ ಕುಂಠಿತವಾಗಿತ್ತು, ಹತ್ತು ವರ್ಷಗಳಲ್ಲಿ ಪ್ರಕಟವಾದದ್ದು ಹತ್ತೇ ಪುಸ್ತಕಗಳು. ಮುಂದೆ ಮುದ್ರಣದ ಅಚ್ಚು ಮೊಳೆಗಳಲ್ಲಿ ಗಣನೀಯ ಸುಧಾರಣೆ ಮಾಡಿದ ವೆಸ್ಲಿಯನ್ ಪ್ರೆಸ್‌ನಲ್ಲಿ ಸಾಕಷ್ಟು ಪುಸ್ತಕಗಳು ಮುದ್ರಿತವಾದವು'[೩೧] ಎಂಬ ಅಂಶ ಕರ್ನಾಟಕದಲ್ಲಿ ೧೯ನೆಯ ಶತಮಾನದ

---

೨೯. ಡಾ. ಎಂ.ಎಂ.ಕಲಬುರ್ಗಿ : ಕನ್ನಡ ಗ್ರಂಥಸಂಪಾದನಾ ಶಾಸ್ತ್ರ, ಪುಟ-೨೯

೩೦. Manual of the Administration of the madras presidency, pp.41

೩೧. ಪ್ರಕಾಶ್ ಕಂಬತ್ತಳ್ಳಿ : ಮುದ್ರಣಾಲಯಗಳು ಮತ್ತು ಪ್ರಕಾಶನ ಸಂಸ್ಥೆಗಳು, ಪುಟ-೪೦೬

ಮೊದಲ ಐದು ದಶಕಗಳಲ್ಲಿ ಮುದ್ರಣ ತಂತ್ರಜ್ಞಾನ, ವಿನ್ಯಾಸ ಪ್ರಮುಖಸ್ಥಾನವನ್ನಾಗಲಿ ಜನಪ್ರಿಯ ಸ್ತರವನ್ನಾಗಲಿ ತಲುಪಲಿಲ್ಲವಾಗಿತ್ತೆಂಬುದನ್ನು ದೃಢೀಕರಿಸುತ್ತದೆ.

ಈ ಮಧ್ಯೆ ಸರ್ಕಾರಿ ಮಟ್ಟದಲ್ಲಿ ಮುದ್ರಣ ವ್ಯವಸ್ಥೆ ಆರಂಭಗೊಂಡಿತು. ಬೆಂಗಳೂರಿನ ಕೋಟೆ ಬಳಿ ಇರುವ ಟಿಪ್ಪುಸುಲ್ತಾನನ ಅರಮನೆಯಲ್ಲಿ '೧೮೫೦ ರಲ್ಲಿ ಸರ್ಕಾರಿ ಮುದ್ರಣಾಲಯ ಆರಂಭಗೊಂಡಿತು, ಸ್ವಲ್ಪ ದಿನಗಳಲ್ಲೇ ಈ ಮುದ್ರಣಾಲಯ ಈಗಿನ ನೃಪತುಂಗ ರಸ್ತೆಗೆ ಸ್ಥಳಾಂತರಗೊಂಡಿತು. ಮತ್ತೆ ೧೮೭೩ ರಲ್ಲಿ ಕಬ್ಬನ್ ಪಾರ್ಕ್‌ಗೆ ಸ್ಥಳಾಂತರಿಸಲ್ಪಟ್ಟು ಸುಮಾರು ೧೩೦ ವರ್ಷಗಳ ವರೆಗೆ ಅಲ್ಲಿಯೇ ಕಾರ್ಯನಿರ್ವಹಿಸುತ್ತಿತ್ತು'.[೩೨] ಎಂಬ ಅಂಶ ಇಲ್ಲಿ ಬೆಂಗಳೂರಿನಲ್ಲಿ ದಿನದಿಂದ ದಿನಕ್ಕೆ ಮುದ್ರಣ ಕ್ಷೇತ್ರ ಪ್ರವರ್ಧಮಾನಕ್ಕೆ ಬರತೊಡಗಿತ್ತು ಎಂಬುದನ್ನು ಪುಷ್ಟೀಕರಿಸುತ್ತದೆ. (ಈ ಸರ್ಕಾರಿ ಮುದ್ರಣಾಲಯ ೨೦೦೨ ರಲ್ಲಿ ಕೆಂಗೇರಿ ಸಮೀಪ ಸ್ಥಳಾಂತರಗೊಂಡು ಇಂದಿಗೂ ಅಲ್ಲೇ ಕಾರ್ಯನಿರ್ವಹಿಸುತ್ತಿದೆ) ಆದರೆ ತ್ವರಿತಗತಿಯಲ್ಲಿ ಬೆಳವಣಿಗೆ ಸಂಭವಿಸಲಿಲ್ಲ ಎಂದೇ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಏಕೆಂದರೆ ಸರ್ಕಾರಿ ಮುದ್ರಣಾಲಯದಲ್ಲೂ ಸಹ ಆರಂಭದಲ್ಲಿ ಹ್ಯಾಂಡ್ ಮಷಿನ್ ಅನ್ನೇ ಬಳಸಲಾಗುತ್ತಿತ್ತು. ನಂತರದಲ್ಲಿ ಕಾಲಿನಿಂದ ನಡೆಸುವ ಯಂತ್ರಗಳು ಬಳಕೆಯಾದವು ಕೆಲ ಸಮಯದ ವರೆಗೆ ಗ್ಯಾಸ್ ಎಂಜಿನ್‌ಗಳನ್ನು ಬಳಸಲಾಗುತ್ತಿತ್ತು, ನಂತರದಲ್ಲಿ ೧೯೦೭ ರ ಹೊತ್ತಿಗೆ ವಿದ್ಯುತ್‌ಚಾಲಿತ ಯಂತ್ರಗಳ ಬಳಕೆಗೆ ಈ ಮುದ್ರಣಾಲಯ ತೆರೆದು ಕೊಂಡಿತ್ತು.

ಹತ್ತೊಂಬತ್ತನೆಯ ಶತಮಾನದ (ಸ್ವಾತಂತ್ರ್ಯಪೂರ್ವ) ಅವಧಿಯಲ್ಲಿನ ಆಯ್ದ ಕೆಲವು ಕನ್ನಡ ಗ್ರಂಥಗಳ ರಕ್ಷಾಪುಟಗಳ ಅವಲೋಕನದಿಂದ ಕಂಡುಕೊಂಡ ಸಂಗತಿಗಳು ಹೀಗಿವೆ:

- ಸಾಮಾನ್ಯವಾಗಿ ಪುಸ್ತಕಗಳ ರಕ್ಷಾಪುಟ ಎಂಟು ಇಂಚು ಉದ್ದ ಆರು ಇಂಚು ಅಗಲ ಅಳತೆಯಲ್ಲಿ ರಚಿಸಲ್ಪಟ್ಟಿವೆ.
- ರಕ್ಷಾಪುಟದ ವಿನ್ಯಾಸಕಾರ ರಕ್ಷಾಪುಟದಲ್ಲಿ ಗ್ರಂಥದ ಸಾಹಿತ್ಯದ ಕುರಿತು ಆ ಕಾಲಾವಧಿಯಲ್ಲಿ ಚಲಾವಣೆಯಲ್ಲಿದ್ದ ಒಪ್ಪ ಓರಣ ಎನ್ನಬಹುದಾದ ಅಕ್ಷರ ಲಿಪಿಗಾರಿಕೆಯನ್ನು ಅನುಸರಿಸಿದ್ದಾನೆ.
- ಮುಂಬದಿಯ ರಕ್ಷಾಪುಟದಲ್ಲಿ ಆಸಕ್ತ ಓದುಗರಿಗೆ ಬೇಕಾದ ಅಗತ್ಯ ಮಾಹಿತಿಯನ್ನು ನೀಡಲಾಗಿದೆ. (ಗ್ರಂಥ ಕರ್ತೃ, ಆಶ್ರಯದಾತ, ಪ್ರಕಾಶನ ಸಂಸ್ಥೆಯ ಹೆಸರುಗಳು ಇತ್ಯಾದಿ).
- ಏಕವರ್ಣ ಹೊಂದಿರುವ ಮತ್ತು ಚಪ್ಪಟೆ ಲೇಪನ ವರ್ಣಹೊಂದಿದ ರಕ್ಷಾಪುಟ ರಚಿಸಲಾಗಿದೆ.
- ಬಹಳಷ್ಟು ಗ್ರಂಥಗಳ ರಕ್ಷಾಪುಟಗಳು ಯಾವುದೇ ರೀತಿಯ ಚಿತ್ತಾರ ವಿನ್ಯಾಸಗಳನ್ನು ಹೊಂದಿಲ್ಲ. ಕೆಲವು ಗ್ರಂಥಗಳ ಮುಂಬದಿಯ ರಕ್ಷಾಪುಟಗಳ ಅಂಚನ್ನು ಮಾತ್ರ ಸರಳಗ್ಯೆ ಚಿತ್ರಣದ ಮೂಲಕ ವಿನ್ಯಾಸಗೋಳಿಸಲಾಗಿದೆ.

---

೩೨. ಪ್ರಕಾಶ್ ಕಂಬತ್ತಳ್ಳಿ : ಮುದ್ರಣಾಲಯಗಳು ಮತ್ತು ಪ್ರಕಾಶನ ಸಂಸ್ಥೆಗಳು, ಪುಟ-೪೦೬

ಇದೇ ಕಾಲಕ್ಕೆ ಬಳ್ಳಾರಿ, ಬೆಂಗಳೂರು ಸೆಟ್ಟರು ವಿದ್ವಾಂಸರಿಂದ ಟೀಕೆ, ಟಿಪ್ಪಣಿ ಬರೆಯಿಸಿ ಪ್ರಕಟಿಸಿದ ನೂರಾರು ಪ್ರಾಚೀನ ಕೃತಿಗಳು ಕರ್ನಾಟಕದ ಮನೆ ಮನೆಗಳಲ್ಲಿ ಶೋಭಿಸಿದವು. ಲಾಭ ದೃಷ್ಟಿಯಿಂದ ಮಾಡಿದ್ದರೂ ಅವರ ಈ ಸೇವೆಗೆ ಕನ್ನಡ ಗ್ರಂಥ ಸಂಪಾದನೆಯ ಇತಿಹಾಸದಲ್ಲಿ ವಿಶಿಷ್ಟ ಮರ್ಯಾದೆ ಸಲ್ಲುತ್ತದೆ.

'ಮುಖಪುಟದಲ್ಲಿ ಬಣ್ಣದ ಚಿತ್ರವಾಗಲಿ ಬಣ್ಣದ ಮುದ್ರಣವಾಗಲಿ ಸಾಮಾನ್ಯವಾಗಿ ಇರುತ್ತಿರಲಿಲ್ಲ. ಒಳಗಿನ ಮೊದಲ ಪುಟವಾದರೂ ಆಕರ್ಷಣೀಯವೇನಲ್ಲ'[೩೩] ಎಂಬುದಾಗಿ ಡಾ. ಶ್ರೀನಿವಾಸ ಹಾವನೂರರವರ ಅಭಿಪ್ರಾಯವು ತುಂಬ ಸಮಂಜಸವೆನಿಸುತ್ತದೆ. 'ಕನ್ನಡದ ಅಚ್ಚುಕಾರ್ಯ ಶ್ರೀರಾಂಪುರ, ಮದ್ರಾಸ್, ಬಳ್ಳಾರಿ, ಬೆಂಗಳೂರುಗಳಲ್ಲಿ ಪ್ರಾರಂಭವಾದರೂ ಅದರ ಸ್ವರೂಪ ಮುದ್ರೆ ಹಾಕಿದವರು. ಕನ್ನಡ ಗ್ರಂಥ ಸಂಪಾದನೆಗೆ ಶ್ರೀಕಾರ ಹಾಕಿದವರು ಮಂಗಳೂರು ಪ್ರದೇಶದ ಪಾದ್ರಿಗಳೆಂದು ಸ್ಪಷ್ಟವಾಗುತ್ತದೆ ಎಂಬುದಾಗಿ ಡಾ.ಎಂ.ಎಂ. ಕಲಬುರ್ಗಿಯವರ ಅಭಿಮತ.'[೩೪]

**ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಪುಸ್ತಕಗಳ ಮುಖಪುಟವಿನ್ಯಾಸ/ರಚನೆ**

ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಆಧುನಿಕ ಮುಖಪುಟಗಳು ಬೆಳಕಿಗೆ ಬಂದಿದ್ದು 'ಅ.ನ.ಕೃಷ್ಣರಾಯರು, ಬೀಚಿ, ಬಸವರಾಜ ಕಟ್ಟಿಮನಿ ಇವರ ಕಾಲದಿಂದ ಕರ್ನಾಟಕದಲ್ಲಿ ಕಾದಂಬರಿಯ ಯುಗ ಪ್ರಾರಂಭವಾಯಿತು. ಆಗ ಆರಂಭವಾದ ಈ ಕಥೆ ಕಾದಂಬರಿಯ ಯುಗ ಕಾಲಾ ನಂತರ ಸುಮಾರು ಜನ ಅಂದರೆ ಅನುಪಮ ನಿರಂಜನ, ಟಿ.ಕೆ.ರಾಮರಾವ್ ಹೀಗೆ ಅನೇಕ ಸಾಹಿತಿಗಳು, ಲೇಖಕರ ಗುಂಪೇ ಇಲ್ಲಿ ಉದಯವಾಯಿತು. ಇವರುಗಳು ರಚಿಸುತ್ತಿದ್ದ ಆ ಎಲ್ಲಾ ಪುಸ್ತಕಗಳಿಗೂ ಮುಖಪುಟ ಬಳಸುವ ಪದ್ದತಿ ಆರಂಭವಾಯಿತು. ಪ್ರಾರಂಭದಲ್ಲಿ ಪುಸ್ತಕಗಳಿಗೆ ಅತಿಹೆಚ್ಚು ಮುಖಪುಟವಿನ್ಯಾಸ ಮಾಡಿದ ತುಂಬಾ ಹಿರಿಯರೆಂದರೆ/ ಹಳಬರೆಂದರೆ ಧಾರವಾಡದ ಜಿ.ಕೆ.ಮೂರ್ತಿ ಎಂಬುವರು'.[೩೫] ಕಥೆ, ಕಾದಂಬರಿಗಳಿಗೆ ಮುಖಪುಟಗಳನ್ನು ಬಳಸುವ ಪದ್ಧತಿ ಆರಂಭವಾಗಿ ಮೊದಲು ಕಥೆಯ ತಲೆಬರಹವನ್ನು ಮಾತ್ರ ಮುದ್ರಿಸಿ ಮಾರಾಟಕ್ಕೆ ಬಿಡುತ್ತಿದ್ದರು. ಕಾಲಕ್ರಮೇಣ ಪುಸ್ತಕ ಆಕರ್ಷಕವಾಗಿ ಕಾಣಬೇಕೆಂದು ಕಥೆಯ ಮುಖ್ಯಭಾಗವನ್ನು ಒಂದು ದೃಶ್ಯರೂಪಕದ ಮುಖಾಂತರ ಕಥೆಯ ತಿರುಳನ್ನು ಸರಳ ರೇಖೆಯಿಂದ ಚಿತ್ರಗಳ ಮುಖಾಂತರ ಚಿತ್ರಿಸುವ ಪದ್ಧತಿ ಆರಂಭವಾಗತೊಡಗಿತು. ಮಾರುಕಟ್ಟೆಯಲ್ಲಿ ಜನರಿಗೆ ಆಕರ್ಷಕವಾಗಿ ಕಾಣಬೇಕು, ಅದರಲ್ಲಿರುವ ವಿಷಯ ಜನರಿಗೆ ಮುಖಪುಟದ ಮುಖಾಂತರ ಗೊತ್ತಾಗಬೇಕು, ಅದರಲ್ಲಿ ಒಂದು ಆಕರ್ಷಣೆ ಮೂಡಿಸಬೇಕು, ಎಂಬ ಉದ್ದೇಶದಿಂದ ವ್ಯಾಪಾರದ ದೃಷ್ಟಿಯಿಂದ ಪುಸ್ತಕ ಪ್ರಕಾಶಕರು ಮತ್ತು ಲೇಖಕರು ಚರ್ಚಿಸಿ, ಅವರುಗಳು ಮುಖಪುಟಗಳನ್ನು ಕಥೆಗೆ ಹೊಂದಾಣಿಕೆಯಾಗುವಂತೆ ಚಿತ್ರಗಳನ್ನು ಬಳಸಿ ಪುಸ್ತಕ ಪ್ರಕಟಿಸಲು ಆರಂಭಿಸಿದರು. ಈ ಅವಧಿಯಲ್ಲಿ ಅತಿಹೆಚ್ಚು ಮುಖಪುಟ ಮತ್ತು ಕರ್ನಾಟಕದ

---

೩೩. ಡಾ.ಶ್ರೀನಿವಾಸ ಹಾವನೂರು : ಹೊಸಗನ್ನಡದ ಅರುಣೋದಯ, ಪುಟ-೫೭

೩೪. ಡಾ. ಎಂ. ಎಂ. ಕಲಬುರ್ಗಿ : ಕನ್ನಡ ಗ್ರಂಥಸಂಪಾದನಾ ಶಾಸ್ತ್ರ, ಪುಟ-೩೦

೩೫. ಸಂದರ್ಶನ : ಶ್ರೀ ಪ.ಸ ಕುಮಾರ (ಮುಖಪುಟ ಕಲಾವಿದರು), ಬೆಂಗಳೂರು. ದಿ. ೦೬.೦೬.೨೦೧೩

ಮೊದಲ ಮುಖಪುಟ ಕಲಾವಿದರೆಂದು ಕರೆಸಿಕೊಳ್ಳುವ ಜಿ.ಕೆ.ಮೂರ್ತಿ ಎಂಬುವವರು ತುಂಬಾ ಕಾದಂಬರಿಗಳಿಗೆ, ಕಥೆಗಳಿಗೆ ಮುಖಪುಟ ರಚನೆ ಮಾಡಿದ್ದಾರೆ. ಕರ್ನಾಟಕದ ಹೆಚ್ಚಿನ ಪ್ರಕಾಶಕರು ಇವರ ಬಳಿ ಮುಖಪುಟವಿನ್ಯಾಸದ ಕೆಲಸ ಮಾಡಿಸಿಕೊಂಡಿದ್ದಾರೆ. ಎಂಬತ್ತರ ದಶಕದವರೆಗೆ ಮುಖಪುಟ ರಚನೆಮಾಡುವುದು ತಕ್ಷಣ ಮುದ್ರಣ ಮಾಡುವುದು ಸುಲಭವಾಗಿರಲಿಲ್ಲ.

ಮೊದಲು ಮುಖಪುಟ ಮುದ್ರಣಕ್ಕೆಂದು ಬ್ಲಾಕಮೆಕಿಂಗ್ ಮುದ್ರಣ ಯಂತ್ರವನ್ನು ಬಳಸುತ್ತಿದ್ದರು. ಆದರೆ ಕರ್ನಾಟಕದಲ್ಲಿ 'ಬ್ಲಾಕ್‌ಮೇಕಿಂಗ್ ಯಂತ್ರದ ಪರಿಚಯವಿರಲಿಲ್ಲ. ಆ ಕಾಲದಲ್ಲಿ ರಚಿಸಿದ ಎಲ್ಲಾ ಮುಖಪುಟಗಳನ್ನೂ ಬ್ಲಾಕ್‌ಮೇಕಿಂಗ್ ಯಂತ್ರದ ಮುಖಾಂತರವೇ ಮುದ್ರಿಸಬೇಕಾಗಿತ್ತು. ಈ ಬ್ಲಾಕ್‌ಮೇಕಿಂಗ್ ಪದ್ಧತಿ ಅಂದರೆ ಈಗ ನಾವು ಕರೆಯುವ ಸಿ.ಎಮ್.ವೈ.ಕೆ– ಅಂದರೇ ಸಿ–ಸಯಾನ್,ಎಮ್–ಮೆಜೆಂಟಾ ವೈ–ಎಲ್ಲೊ ಕೆ–ಬ್ಲಾಕ್ ಹೀಗೆ ನಾವು ಕರೆಯುವ, ವರ್ಣಗಳನ್ನು ಬ್ಲಾಕ್‌ಗಳಾಗಿ ಬೇರ್ಪಡಿಸಿ ಅವುಗಳನ್ನು ಚನ್ನೈಗೆ ಕಳಿಸಬೇಕಾಗಿತ್ತು. ಅಲ್ಲಿ ಬ್ಲಾಕ್‌ಗಳನ್ನು ತಯಾರಿಸಿಕೊಂಡು /ಉಪಯೋಗಿಸಿಕೊಂಡು ಮುಖಪುಟ ರಚನೆ ಮಾಡಿ ಅವುಗಳನ್ನು ಮತ್ತೆ ಬೆಂಗಳೂರಿಗೆ ತರಿಸಬೇಕಿತ್ತು.'[೩೬]

ಹೀಗೆ ಪ್ರಾರಂಭವಾದ ಮುಖಪುಟಗಳಲ್ಲಿ ಮೊದ ಮೊದಲು ಆರಂಭವಾದ ಎಲ್ಲಾ ಮುಖಪುಟಗಳು ವರ್ಣದಿಂದ ಕೂಡಿದ್ದವು. ಮುದ್ರಣಗೊಳ್ಳುತ್ತಿದ್ದ ಮುಖಪುಟಗಳು ತುಂಬಾ ದುಬಾರಿಯಾಗಿದ್ದವು ಮತ್ತು ತುಂಬಾ ಸಮಯವನ್ನು ತೆಗೆದುಕೊಳ್ಳುತ್ತಿದ್ದವು. ಈ ವಿಧಾನವು ದುಬಾರಿ ಕಾರ್ಯವೆಂದು ತಿಳಿದ ತಕ್ಷಣ ಮುಖಪುಟ ರಚನೆ ಸರಳ ರೇಖೆಯಿಂದ ರಚಿಸಲು ಪ್ರಾರಂಭವಾಯಿತು. ಅಂದರೆ ಅದರಲ್ಲಿ ಕಲಾಕೃತಿಗಳಿಗೆ ಮೈವಳಿಕೆಗಳು ಇರುತ್ತಿರಲಿಲ್ಲ. ಏಕ/ದ್ವಿವರ್ಣದ ಸರಳ ರೇಖೆಗಳಿಂದ ಕಲಾಕೃತಿಗಳನ್ನು ಮುದ್ರಿಸಲಾಗುತ್ತಿತ್ತು. ಹೇಗೆಂದರೆ ಒಂದು ಚಿತ್ರಬರೆದು ಆ ಮುಖಪುಟಕ್ಕೆ ತಲೆಬರಹ ಹಾಕಿ ಪುಸ್ತಕದ ಮುಖಪುಟದ ಕಾರ್ಯ ಮುಗಿಸುತ್ತಿದ್ದರು. ಅಂದರೆ ಎರಡು ವರ್ಣದಲ್ಲಿ ಆ ಕಾರ್ಯ ಸಾಗುತ್ತಿತ್ತು. ಚಿತ್ರಕ್ಕೆ ಒಂದು ವರ್ಣ ಮತ್ತು ತಲೆಬರಹಕ್ಕೆ ಒಂದು ವರ್ಣ ಹಿನ್ನೆಲೆ (background) ಖಾಲಿ ಇರಿಸಲಾಗುತ್ತಿತ್ತು. ಇನ್ನು ಸ್ವಲ್ಪ ಮುಂದುವರಿದು ಹಣ ಖರ್ಚುಮಾಡುವವರಿದ್ದರೆ ಮೂರು ವರ್ಣಗಳಲ್ಲಿ ಈ ಕಾರ್ಯ ಸಾಗುತ್ತಿತ್ತು. ಅದು ಸುಮಾರು ವರ್ಷಗಳ ಕಾಲ ಹೀಗೆ ಸಾಗುತ್ತಾ ಬಂದಿತ್ತು. ಈ ರೀತಿಯ ಮುಖಪುಟಗಳ ಮುದ್ರಣ ಕೆಲಸ ಸುಮಾರು ೧೯೮೦ ದಶಕದ ವರೆಗೆ ಅಂದರೆ ಬೆಂಗಳೂರುನಲ್ಲಿ ಆಫ್‌ಸೆಟ್ ಯುಗ ಆರಂಭವಾಗುವವರೆಗೆ ನಡೆಯಿತು.

ಆಫ್‌ಸೆಟ್ ಬಂದು ಒಂದಿಷ್ಟು ವರ್ಷಗಳಾದ ಮೇಲೆ ಮುಖಪುಟ ಮುದ್ರಣ ನಿಧಾನವಾಗಿ ಆರಂಭವಾಯಿತು. ಆಫ್‌ಸೆಟ್ ಬಂದ ತಕ್ಷಣ ಯಾರೊಬ್ಬ ಪ್ರಕಾಶಕರೂ ಮುಖಪುಟವಿನ್ಯಾಸ ಮುದ್ರಣ ಆರಂಭ ಮಾಡಲಿಲ್ಲ. ಏಕೆಂದರೆ ವರ್ಣಗಳ ಬೇರ್ಪಡಿಸುವಿಕೆ, ಅಕ್ಷರಗಳ ಹೊಂದಾಣಿಕೆ, ಚಿತ್ರಗಳ ಜೋಡಣೆ ಇತ್ಯಾದಿ ಕೆಲಸ ಕಾರ್ಯಗಳು ತುಂಬಾ ಖರ್ಚುದಾಯಕವಾಗಿದ್ದವು. ಆರಂಭದ ಕಾಲದಲ್ಲಿ ಇದು ಸುಲಭವಾಗಿರಲಿಲ್ಲ, ಆಫ್‌ಸೆಟ್ ನವೀಕರಣಗೊಂಡು ಅದರಲ್ಲಿ ಆಧುನಿಕತೆ ಬಳಕೆಯಾದ ನಂತರವೇ

---

೩೬. ಸಂದರ್ಶನ : ಶ್ರೀ ಪ.ಸ ಕುಮಾರ (ಮುಖಪುಟ ಕಲಾವಿದರು), ಬೆಂಗಳೂರು. ದಿ. ೦೬.೦೬.೨೦೧೩

ವರ್ಣಸಂಯೋಜನೆ, ಚಿತ್ರಗಳ ಮುದ್ರಣ, ಅಕ್ಷರಗಳು ಮುದ್ರಣವಾಗತೊಡಗಿದವು. ಮತ್ತು ಕಡಿಮೆ ಖರ್ಚಿನಲ್ಲಿ ಉತ್ತಮ,ಆಕರ್ಷಕ ಮುಖಪುಟ ರಚನೆಗೊಳುತ್ತಿದ್ದವು. ಆಗ ಎಲ್ಲಾ ಪ್ರಕಾಶಕರು ಈ ಆಫ್‌ಸೆಟ್ ಮುದ್ರಣ ಬಳಸಲಾರಂಭಿಸಿದರು.

**ಕರ್ನಾಟಕದಲ್ಲಿ ನವೀನ ಮಾದರಿಯ ಪುಸ್ತಕ ಕಟ್ಟುಗಳ(ಬೈಂಡಿಂಗ್)ರಚನೆ.**

ನಾವು ಯಾವುದೇ ಒಂದು ಪುಸ್ತಕವನ್ನು ಪ್ರಕಟಿಸಬೇಕಾದರೆ, ಅದರ ಹೊದಿಕೆಯು ಪ್ರಾಮುಖ್ಯತೆ ವಹಿಸುತ್ತದೆ. ಅದು ಹೇಗೆಂದರೆ ಪುಸ್ತಕ ಹೊದಿಕೆ ಪುಸ್ತಕದಲ್ಲಿರುವ ವಿಷಯವನ್ನು ಸಂಕ್ಷಿಪ್ತವಾಗಿ ಹೇಳುತ್ತದೆ, ಹಾಗೂ ಲೇಖಕರ ಬಗ್ಗೆಯೂ ಮಾಹಿತಿ ನೀಡುತ್ತದೆ. ಆದರೆ ಗಮನವಿಡಬೇಕಾದ ಅಂಶವೇನೆಂದರೆ ಕಥೆಯ ಸಾರಾಂಶಕ್ಕೆ ನಾವು ಅಗತ್ಯಕ್ಕಿಂತ ಹೆಚ್ಚಿನ ವಿವರ ಕೊಡಬಾರದು ಪುಸ್ತಕ ಹೊದಿಕೆಗಳಲ್ಲಿ ಮುದ್ರಿಸಬೇಕಾದ ಅಂಶಗಳಲ್ಲಿ ನಾವು ಮೊದಲು ಏನನ್ನು ಮುದ್ರಿಸಬೇಕು ಎಂಬುದನ್ನು ಸರಿಯಾಗಿ ತೀರ್ಮಾನಿಸಬೇಕು. ಗೊತ್ತಿಲ್ಲವಾದಲ್ಲಿ ವಿಷಯಗಳನ್ನು ತಿಳಿದುಕೊಂಡು ಕಾರ್ಯಪ್ರವೃತ್ತರಾಗಬೇಕು.

ಪುಸ್ತಕ ಹೊದಿಕೆಯ ಮೇಲೆ ರಚಿಸಿರುವು ಚಿತ್ರವು ಒಬ್ಬ ಸಮರ್ಥ ಓದುಗನ ಮೇಲೆ ಪ್ರಭಾವ ಬೀರುವುದು ಎಂದರೆ ತಪ್ಪಾಗಲಾರದು. ಬಹಳಷ್ಟು ಪ್ರಕಾಶಕರು ಪುಸ್ತಕದ ಮೇಲ್ಕಟ್ಟು ಅಥವಾ ಮುಖಪುಟದ ಅಥವಾ ಪುಸ್ತಕ ಹೊದಿಕೆಯ ವಿನ್ಯಾಸಕ್ಕೆಂದೇ ಹೆಚ್ಚು ಹಣ ವಿನಿಯೋಗಿಸುತ್ತಾರೆ. ಒಂದು ಆಕರ್ಷಕ ವಿನ್ಯಾಸವುಳ್ಳ ಪುಸ್ತಕವು ಹೆಚ್ಚು ಜನರನ್ನು ಆಕರ್ಷಿಸುತ್ತದೆ ಮತ್ತು ಪುಸ್ತಕಗಳನ್ನು ಕೊಂಡುಕೊಳ್ಳಲು ಪ್ರೇರೇಪಿಸುತ್ತದೆ.

ನಾವು ಯಾವುದೇ ಒಂದು ಪುಸ್ತಕದ ಹೊದಿಕೆಯ ವಿನ್ಯಾಸವನ್ನು ಚಿತ್ರಿಸುವ ಮುನ್ನ ಪುಸ್ತಕದ ವಿಷಯದ ಬಗ್ಗೆ ತಿಳಿದುಕೊಳ್ಳಬೇಕು ಪುಸ್ತಕದ ವಿಷಯವು ಹಾಸ್ಯವಿರಬಹುದು, ಸಾಹಸವಿರಬಹುದು, ರಹಸ್ಯ ಅಥವ ನಿಗೂಢ ಕಥೆಯಿರಬಹುದು. ಮುಖಪುಟದಲ್ಲಿ ರಚಿಸುವ ಚಿತ್ರವು ಆ ಪುಸ್ತಕದ ವಿಷಯವನ್ನು ಓದುಗರು ಗುರುತಿಸುವಂತಾಗಬೇಕು. ಅಂದರೆ ಉದಾಹರಣೆಗೆ ಒಂದು ನಿಗೂಢ ಕಥೆಯಾಗಿದ್ದರೆ ಪಾಳುಮನೆಯ ಬಾಗಿಲ ಮೂಲೆಯಲ್ಲಿ ಕಟ್ಟಿದ ಜೇಡರಬಲೆಯ ಚಿತ್ರ ಕಥೆಯ ನಿಗೂಢತೆಯನ್ನು ಬಿಂಬಿಸುತ್ತದೆ, ಹಾಸ್ಯಭರಿತ ಕಥೆಯಾಗಿದ್ದರೆ ಎರಡೂ ಶೂಗಳ ಶೂಲೇಸ್‌ಗಳನ್ನು ಜೋಡಿಸಿ ಕಟ್ಟಿದ ಚಿತ್ರವನ್ನು ರಚಿಸಿ ಮುಖಪುಟದಲ್ಲಿ ಮುದ್ರಿಸಬೇಕು. ಇದು ವಿನ್ಯಾಸಗರನಲ್ಲಿರುವ ಕಲಾತ್ಮಕತೆ ಮತ್ತು ಸೃಜನಶೀಲತೆಯನ್ನು ತೋರುತ್ತದೆ. ಸಾಹಸಮಯ ಕಥೆಯಿದ್ದರೆ ಬೆಟ್ಟವನ್ನು ಏರುತ್ತಿರುವ ಯುವಕನ ಚಿತ್ರವನ್ನು ಚಿತ್ರಿಸಿ ಅದನ್ನು ಮುಖಪುಟವಾಗಿ ರಚಿಸಬಹುದು. ಪುಸ್ತಕದ ಹೊದಿಕೆಯ ಒಳ ಪುಟದಲ್ಲಿನ ಕಥೆಯ ಸಾರಾಂಶವನ್ನು ಪ್ರಕಟಿಸಬೇಕು ಮತ್ತು ಸಾರಾಂಶವು ಕಥೆಯಲ್ಲಿರುವ ಮುಖ್ಯವಾದ ಮತ್ತು ಕಥೆಯಲ್ಲಿ ಅಡಗಿರುವ ವಿಸ್ಮಯತೆಯನ್ನು ವಿವರಿಸುವಂತಿರಬೇಕು. ಸಾರಾಂಶದ ಕೊನೆಯು ಕುತೂಹಲಕರವಾದ ಪ್ರಶ್ನೆಯಿಂದ ಕೊನೆಗೊಳ್ಳಬೇಕು.

ಕಳೆದ ಹತ್ತಾರು ವರ್ಷಗಳಿಂದ ಕನ್ನಡ ಗ್ರಂಥಗಳ ರಕ್ಷಾಪುಟಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಮುಖಪುಟ ಚಿತ್ರಕಲೆ ಬರೆಯುವ ಕಲೆಯಲ್ಲೂ ವಿಪರೀತ ಬದಲಾವಣೆಗಳಾಗಿವೆ. ಕಲಾವಿದರು ಶಿಷ್ಟ

ವಿಧಾನ ಬಿಟ್ಟು ನವೀನ ಮಾರ್ಗವನ್ನು ಅನುಸರಿಸುತ್ತಿದ್ದಾರೆ. ಓದುಗರು, ಲೇಖಕರು ಸಹ ಇಂತಹ ಪ್ರಯೋಗವನ್ನು ಇಷ್ಟಪಡುತ್ತಿದ್ದಾರೆ. ಇತ್ತೀಚಿನ ರಕ್ಷಾಪುಟಗಳು ಸಹ ಗ್ರಂಥ/ಪುಸ್ತಕಗಳ ಮಾರಾಟದ ಯಶಸ್ಸಿನಲ್ಲಿ ಪ್ರಮುಖ ಪಾತ್ರವಹಿಸುತ್ತಿವೆ. ಕಾಲ ಕಳೆದಂತೆ ಮುಖಪುಟ/ರಕ್ಷಾಪುಟ ವಿನ್ಯಾಸಗಳ ಬಗ್ಗೆ ಧೋರಣೆ ಹಾಗೂ ಅದನ್ನು ರಚಿಸುವ ಕಲೆಯಲ್ಲಿ ಆಗಾಧ ಪರಿವರ್ತನೆಗಳಾಗಿವೆ. ಆರಂಭದಲ್ಲಿ ಶೀರ್ಷಿಕೆ, ಲೇಖಕರ ಹೆಸರು, ಅವಶ್ಯಕತೆಗಳು ಇದ್ದರೆ ಮಾತ್ರ ರೇಖಾಚಿತ್ರಗಳ ಬಳಕೆ ಮಾಡುತ್ತಿದ್ದರೂ. ರಕ್ಷಾಪುಟ/ಮುಖಪುಟ ರಚನೆಯನ್ನು ಮಾಡುವುದು ಒಂದು ಕಲೆಯಾಗಿ ಪರಿಗಣಿಸಿಯೂ ಇರಲಿಲ್ಲ, ಆದರೆ ಇಂದು ಮುಖಪುಟ ವಿನ್ಯಾಸವು ಎಷ್ಟೊಂದು ರೂಪಾಂತರಗಳೊಂದಿಗೆ ಬೆಳೆದು ನಿಂತಿದೆ ಎಂದರೆ ಆಶ್ಚರ್ಯ ಪಡಬೇಕಾಗಿಲ್ಲ ನೂರಾರು ಅಥವಾ ಸಾವಿರಾರು ಪುಟಗಳಲ್ಲಿರುವ ವಿಷಯವನ್ನು ಕೇವಲ ಸಣ್ಣ ಶೀರ್ಷಿಕೆ ಮತ್ತು ರಕ್ಷಾಪುಟ ಚಿತ್ರಕಲೆ ವಿನ್ಯಾಸದಲ್ಲಿ ತಿಳಿಸುವುದು ಸಣ್ಣ ಸಂಗತಿಯಲ್ಲ.

ಕೈಗಾರಿಕಾ ಕ್ರಾಂತಿಯ (೧೮೨೦) ನಂತರ ಯಂತ್ರಗಳಿಂದ ಪುಸ್ತಕದ ಬೈಂಡಿಂಗ್ ಪ್ರಾರಂಭವಾಯಿತು. ಪುಸ್ತಕದ ಬೈಂಡಿಂಗ್‌ಗೆ ಬಟ್ಟೆ ಮತ್ತು ಪೇಪರ್‌ನ್ನು ಬಳಸಲು ಪ್ರಾರಂಭಿಸಿದರು ಯಂತ್ರಗಳಿಂದ ತಯಾರಿಸುತ್ತಿದ್ದ ಪುಸ್ತಕದ ಬೈಂಡಿಂಗ್ ಬೆಲೆಯು ಕಡಿಮೆಯಿತ್ತು. ಕೈಯಿಂದ ತಯಾರಿಸಲ್ಪಟ್ಟ ಬೈಂಡಿಂಗ್ ಪುಸ್ತಕದ ಬೆಲೆ ಹೆಚ್ಚಾಗಿರುತ್ತಿತ್ತು ನಂತರದ ದಿನಗಳಲ್ಲಿ ಬರುವಂತಹ ಪುಸ್ತಕದ ರಕ್ಷಾಕವಚ ಅತ್ಯಂತ ಅಗ್ಗವಾಗಿದ್ದವು ಮತ್ತು ಹಲವಾರು ಬಣ್ಣಗಳನ್ನು ಮುಖಪುಟದ ಮೇಲೆ ಬಳಸಲಾಗುತ್ತಿತ್ತು. ಪುಸ್ತಕದ ರಕ್ಷಾಕವಚವು ಪುಸ್ತಕಕ್ಕೆ ಕೇವಲ ರಕ್ಷಣೆ ನೀಡುವುದಲ್ಲದೆ, ಆ ಪುಸ್ತಕದ ಪ್ರಚಾರ ಮತ್ತು ಸಂವಹನ ಕ್ರಿಯೆಯನ್ನು ನಡೆಸುತ್ತಿತ್ತು ೨೦ನೆಯ ಶತಮಾನದ ಪ್ರಾರಂಭದಲ್ಲಿ ಚರ್ಮದ ಮತ್ತು ಬಂಗಾರದ ಎಲೆಗಳಿಂದ ಕೂಡಿದ ರಕ್ಷಾಕವಚಗಳ ಪುಸ್ತಕಗಳು ಚಾಲ್ತಿಗೆ ಬಂದವು ೨೦ನೆಯ ಶತಮಾನದಲ್ಲಿ ಲಂಡನ್, ಯುರೋಪ್, ನ್ಯೂಯಾರ್ಕ್ ದೇಶಗಳಲ್ಲಿ ಪುಸ್ತಕ ರಕ್ಷಾಕವಚಗಳ ಮೇಲೆ ಕಲಾಕೃತಿಗಳನ್ನು ಬಳಸಲಾಯಿತು ಎಂದು ತಿಳಿದು ಬಂದಿದೆ.

**ಪುಸ್ತಕ ಕಟ್ಟುಗಳಲ್ಲಿ ವಿವಿಧ ಪ್ರಕಾರಗಳು: (ಆಧುನಿಕತೆ/ನವೀನಮಾದರಿ/ತಾಂತ್ರಿಕತೆ)**

ಆಧುನಿಕ ರೀತಿಯ ಪುಸ್ತಕ ಕಟ್ಟುಗಳನ್ನು ನಾಲ್ಕು ರೀತಿಯಲ್ಲಿ ವಿಭಾಗಿಸಬಹುದು ಅವುಗಳೆಂದರೆ:

೧. 'ದೃಢವಾದ ಪುಸ್ತಕ ಕಟ್ಟು (Hardcover binding)

೨. ರಂಧ್ರಯುಕ್ತ ಪುಸ್ತಕ ಕಟ್ಟು (Punch and bind)

೩. ಉಷ್ಣಧಾರಣಾ ಕಟ್ಟು/ ಶಾಖೋತ್ಕರ್ಷ ಕಟ್ಟುವಿಕೆ (Thermal activated binding)

೪. ಹೊಲಿಗೆಯುಕ್ತ ಕಟ್ಟು (Stitched or sewn binding)'[೩೭]

**೧. ದೃಢವಾದ ಪುಸ್ತಕ ಕಟ್ಟುವಿಕೆ ವಿಧಾನ (Hardcover binding)**

ಇದು ಸರ್ವೇ ಸಾಮಾನ್ಯವಾಗಿ ಬಳಕೆಯಲ್ಲಿರುವ ಪುಸ್ತಕ ಕಟ್ಟುವಿಕೆ ವಿಧಾನ. ಇದರಲ್ಲಿ ಮೊದಲಿಗೆ

೩೭ Wikipedia the Free encyclopedia

ಎಲ್ಲಾ ಪುಟಗಳನ್ನು ಕ್ರಮಬದ್ಧವಾಗಿ ಜೋಡಿಸಿಕೊಳ್ಳಲಾಗುತ್ತದೆ. ನಂತರದಲ್ಲಿ ಎಲ್ಲಾ ಹಾಳೆಗಳ ಒಂದು ಅಂಚನ್ನು ಅಂಟಿನ ಸಹಾಯದಿಂದ ಲೇಪಿಸಿಕೊಂಡು, ಆ ಮೇಲೆ ಮುಖಪುಟ ಹೊದಿಕೆ ಮತ್ತು ಹಿಂಪುಟ (ಹಿಂಬದಿ ಪುಟ) ಹೊದಿಕೆ ಈ ಎರಡೂ ಹೊದಿಕೆಗಳ ಸಲುವಾಗಿನ ದಪ್ಪನೆಯ ರಟ್ಟುಗಳನ್ನು ಬಟ್ಟೆಹಾಕಿ, ಹಾಳೆ ಅಥವಾ ಕ್ಯಾನ್ವಾಸ್ ಸಹಾಯದಿಂದ ಮುಚ್ಚಿ ಬಿಸಿಲಲ್ಲಿ ಸ್ವಲ್ಪ ಹೊತ್ತು ಒಣಗಿಸಬೇಕು.

**೨. ರಂಧ್ರಯುಕ್ತ ಪುಸ್ತಕ ಕಟ್ಟುವಿಕೆ (Punch and bind)**

ಈ ರೀತಿಯ ಪುಸ್ತಕ ಕಟ್ಟುವಿಕೆಯಲ್ಲಿ ಜೋಡಿಸಿದ ಪುಟಗಳು ಸಡಿಲವಾಗಬಾರದೆಂಬ ಕಾರಣಕ್ಕೆ ಕ್ರಮಬದ್ಧವಾಗಿ ಹೊಂದಿಸಿದ ಪುಟಗಳನ್ನು ಪ್ರತಿಪುಟಕ್ಕೂ ಸಮಾನಾಂತರದಲ್ಲಿ-ಸಮಾನ ಅಳತೆಯ ರಂಧ್ರ ಮಾಡಿ ದಾರದ ಸಹಾಯದಿಂದ ಅವುಗಳನ್ನು ಪೋಣಿಸಲಾಗುತ್ತದೆ. ಎಷ್ಟೇ ದಪ್ಪನಾದ ಪುಸ್ತಕವಿದ್ದರೂ ಈ ವಿಧಾನದಿಂದ ಕಟ್ಟುಹಾಕಬಹುದು. ಆದರೆ ಈ ರೀತಿಯ ರಕ್ಷಾಕಟ್ಟು ಹೊಂದಿರುವ ಪುಸ್ತಕಗಳ ಪುಟಗಳನ್ನು ತೆರೆದಾಗ ಆ ಪುಟಗಳು ಸಮತಟ್ಟಾಗಿರುವುದಿಲ್ಲ. ಈ ರೀತಿಯ ಪುಸ್ತಕ ಕಟ್ಟುವಿಕೆ ನಾಲ್ಕು ವಿಧಗಳಾಗಿವೆ. **ಅವುಗಳೆಂದರೆ:**

೨.೧ ವೈರ್ ಬೈಂಡಿಂಗ್ (Double Wire binding)

೨.೨ ಬಾಚಣಿಕೆಯಂತೆ ಕಟ್ಟುವಿಕೆ (Comb binding)

೨.೩ ವೆಲೋ ಬೈಂಡಿಂಗ್ (Velo Bind)

೨.೪ ಸ್ಪೈರಲ್ ಬೈಂಡಿಂಗ್ (Spiral Binding)

**೨.೧. ವೈರ್ ಬೈಂಡಿಂಗ್ ವಿಧಾನಕ್ಕೆ (Double Wire binding)**

ಈ ರೀತಿಯ ಬೈಂಡಿಂಗ್‌ನಲ್ಲಿ ಪುಟಗಳನ್ನೆಲ್ಲಾ ಕ್ರಮಬದ್ಧವಾಗಿ, ಅಚ್ಚುಕಟ್ಟಾಗಿ ಜೋಡಿಸಿ. ರಂಧ್ರಕದ ಸಹಾಯದಿಂದ ಚೌಕ ಅಥವಾ ವೃತ್ತಾಕಾರದ ರಂಧ್ರಗಳನ್ನು ೩:೧ ಅನುಪಾತದಲ್ಲಿ ಕೊರೆದು ಪ್ರತಿ ಪುಟವೂ ಬಿಡಿ ಬಿಡಿಯಾಗಿರುವಂತೆ ಪುಟಗಳನ್ನೆಲ್ಲಾ ಅವುಗಳಲ್ಲಿ ಕೊರೆಯಲ್ಪಟ್ಟ ರಂಧ್ರಗಳ ಮೂಲಕ ತಂತಿಯಲ್ಲಿ ಪೋಣಿಸಿ (ತೂರಿಸಿ) ಕಟ್ಟಲಾಗಿರುತ್ತದೆ. ಈ ರೀತಿಯ ಬೈಂಡಿಂಗ್‌ನಲ್ಲಿ ಪುಸ್ತಕದ ಗಾತ್ರವನ್ನು ಅನುಸರಿಸಿ ರಂಧ್ರಗಳು ಕೊರೆಯಲ್ಪಟ್ಟಿರುತ್ತವೆ. ರಂಧ್ರಗಳನ್ನು ಕೊರೆಯುವಲ್ಲಿ ಈ ಮೇಲೆ ಉಲ್ಲೇಖಿಸಿದ ಅನುಪಾತ ವ್ಯತ್ಯಾಸಗೊಂಡರೆ ಈ ಬೈಂಡಿಂಗ್ ನಿಷ್ಪ್ರಯೋಜಕವೆನಿಸುತ್ತದೆ ಅಷ್ಟೇ ಅಲ್ಲ ಪುಸ್ತಕದ ಒಟ್ಟಾರೆ ಅಂದವನ್ನೇ ಕೆಡಿಸುತ್ತದೆ.

**೨.೨. ಕಾಂಬ್ ಬೈಂಡಿಂಗ್ (Comb binding)**

ಬಾಚಣಿಗೆ ಉಪಯೋಗಿಸಿ ರೂಪಿಸುವ ಬೈಂಡಿಂಗ್ ವಿಧಾನ ಇದಾಗಿರುವುದರಿಂದ ಕಾಂಬ್ ಬೈಂಡಿಂಗ್ ಎಂಬ ಹೆಸರು ಬಂದಿದೆ. ಈ ರೀತಿಯ ಬೈಂಡಿಂಗ್ ವಿಧಾನದಲ್ಲಿ ಹಾಳೆಗಳ ಒಂದು ಬದಿಯಲ್ಲಿ ಉದ್ದನೆಯ ಆಯತಾಕಾರದ ರಂಧ್ರ ಕೊರೆದು ಇದರ ಮಧ್ಯದಲ್ಲಿ ಪ್ಲಾಸ್ಟಿಕ್‌ನಿಂದ ಮಾಡಿದ ಹೆಣಿಗೆ (ಬಾಚಣಿಗೆ) ತೂರಿಸಿ ಕಟ್ಟಲಾಗಿರುವುದರಿಂದ ಪುಟಗಳನ್ನು ತಿರುವಿ ಹಾಕಲು ಬಹಳ ಸುಲಭವಾಗುತ್ತದೆ

ಮತ್ತು ಪುಟಗಳು ಹಾನಿಗೊಳಗಾಗುವ ಸಂಭವ ತೀರಾ ಕಡಿಮೆ. ಈ ಹೆಣಿಗೆಗಳನ್ನು ಮರುಬಳಕೆ ಮಾಡಬಹುದು ಅಲ್ಲದೆ ಇವು ಬಗೆ ಬಗೆಯ ಬಣ್ಣಗಳಲ್ಲಿ ಮತ್ತು ಅಳತೆಗಳಲ್ಲಿ ಮಾರುಕಟ್ಟೆಯಲ್ಲಿ ದೊರಕುತ್ತವೆ.

**೨.೩. ವೆಲೋ ಬೈಂಡಿಂಗ್: (Velo Bind)**

ಈ ವಿಧಾನದ ಬೈಂಡಿಂಗ್‌ನಲ್ಲಿ ಉದ್ದನೆಯ ಪ್ಲಾಸ್ಟಿಕ್ ಪಟ್ಟಿಗಳನ್ನು ಬಳಸಿಕೊಳ್ಳಲಾಗುತ್ತದೆ. ಆ ವಿಧಾನ ಇಂತಿದೆ: ಮೊದಲಿಗೆ ಪುಟಗಳನ್ನು ಕ್ರಮಬದ್ಧವಾಗಿ ಹೊಂದಿಸಿಕೊಳ್ಳಲಾಗುತ್ತದೆ (ಜೋಡಿಸಿಕೊಳ್ಳಲಾಗುತ್ತದೆ) ನಂತರದಲ್ಲಿ ಪ್ರತಿಪುಟದ ಅಂಚಿನಲ್ಲೂ ಮೇಲೆ ಮತ್ತು ಕೆಳಗೆ ಒಂದು ಸುಸಂಬದ್ಧವಾದ ಅಂತರದಲ್ಲಿ ರಂಧ್ರಕೊರೆದು (ಈ ರಂಧ್ರಗಳು ಎಲ್ಲಾ ಪುಟಗಳಲ್ಲೂ ಸಮನಾದ ಅಂತರದಲ್ಲಿರಬೇಕು ಉದ್ದನೆಯ ಪ್ಲಾಸ್ಟಿಕ್ ಪಟ್ಟಿಗಳನ್ನು ರಿವೆಟ್ ಎಂದು ಕರೆಯಲಾಗುವ) ಒಂದು ಬಗೆಯ ಮೊಳೆಗಳ ಸಹಾಯದಿಂದ ತಿರುವಿ ಬಿಸಿಮಾಡಲಾಗುತ್ತದೆ. ಹೀಗೆ ಪ್ಲಾಸ್ಟಿಕ್ ಪಟ್ಟಿಗಳನ್ನು ತಿರುವಿ ಬಿಗಿ ಮಾಡುವ ಪ್ರಕ್ರಿಯೆಯಲ್ಲಿ ಒಂದು ಬದಿಯ ಪ್ಲಾಸ್ಟಿಕ್ ಪಟ್ಟಿಯಿಂದ ಮತ್ತೊಂದು ಬದಿಯ ಪ್ಲಾಸ್ಟಿಕ್ ಪಟ್ಟಿಯ ಮೂಲಕ ಪೆನ್ನುಗಳನ್ನು ಜೋಡಿಸಿಕೊಂಡು ಕೊನೆಯಲ್ಲಿ ಪುಸ್ತಕದಿಂದ ಹೊರಬಂದ ಪೆನ್ನುಗಳನ್ನು ಕತ್ತರಿಸಲಾಗುತ್ತದೆ/ಸೀಲ್ ಮಾಡಲಾಗುತ್ತದೆ. ಈ ರೀತಿಯ ಬೈಂಡಿಂಗ್ ಶಾಶ್ವತವಾಗಿ ಉಳಿಯುವಂತಹುದು.ಕೆಲವೊಂದು ಕಛೇರಿಗಳ ದಾಖಲೆಗಳು, ಬೃಹತ್ ಉದ್ದಿಮೆ/ವಾಣಿಜ್ಯ ವಹಿವಾಟುಗಳ ದಾಖಲೆಗಳು ಇತ್ಯಾದಿ ಮಹತ್ವ ಪೂರ್ಣ ದಾಖಲಾತಿಗಳನ್ನು ಸಂಗ್ರಹಿಸಿಡಲು ಈ ರೀತಿಯ ಬೈಂಡಿಂಗ್ ವಿಧಾನ ಅನುಸರಿಸುತ್ತಾರೆ.

**೨.೪. ಸ್ಪೈರಲ್ ಬೈಂಡಿಂಗ್ (Spiral Binding) (ಸುರುಳಿ ತಂತಿ ಬೈಂಡಿಂಗ್)**

ಸುರುಳಿಯಾಗಿರುವ ಲೋಹದ ಅಥವಾ ಪ್ಲಾಸ್ಟಿಕ್ ತಂತಿಯನ್ನು ಉಪಯೋಗಿಸಿ, ಬೈಂಡಿಂಗ್ ಮಾಡುವ ವಿಧಾನವಿದು. ಈ ವಿಧಾನದಲ್ಲೂ ಸಹ ಮೊದಲು ಕ್ರಮಬದ್ಧವಾಗಿ ಪುಟಗಳನ್ನು ಜೋಡಿಸಿಕೊಳ್ಳಬೇಕಾಗುತ್ತದೆ. ಆಮೇಲೆ ಅವುಗಳ ಒಂದು ಬದಿಯಲ್ಲಿ ರಂಧ್ರಕ ಯಂತ್ರದ ಸಹಾಯದಿಂದ ರಂಧ್ರಗಳನ್ನು ಮಾಡಿಕೊಳ್ಳಬೇಕಾಗುತ್ತದೆ. (ಇಲ್ಲಿ ರಂಧ್ರಗಳೆಲ್ಲ ಒಂದೇ ಅಳತೆ ಹೊಂದಿರಬೇಕಾದುದು ತೀರಾ ಅಗತ್ಯವಾದುದರಿಂದ ಈ ರಂಧ್ರಗಳನ್ನು ಸುರುಳಿಯಾಕಾರದ ಲೋಹದ ಸಹಾಯದಿಂದ ರಂಧ್ರಗಳನ್ನು ಮಾಡಿಕೊಳ್ಳುವುದು ಸಾಮಾನ್ಯ) ಈ ರಂಧ್ರಗಳ ಮೂಲಕ ಸುರುಳಿಯಾಕಾರದ ಲೋಹದ ಅಥವಾ ಪ್ಲಾಸ್ಟಿಕ್ ತಂತಿಯ ಕೊಳವೆಯನ್ನು ಸುತ್ತಬೇಕು ೪:೧ ಅನುಪಾತದ ರಂಧ್ರಗಳೇ (೪:೧ ಅನುಪಾತವೆಂದರೆ – ಒಂದು ಅಂಗುಲಕ್ಕೆ ನಾಲ್ಕು ರಂಧ್ರಗಳಿರಬೇಕು ಎಂದು ಅರ್ಥ) ಈ ರೀತಿಯ ಬೈಂಡಿಂಗ್ ವಿಧಾನಕ್ಕೆ ಅತ್ಯಂತ ಪ್ರಶಸ್ತ ಏಕೆಂದರೆ ಈ ರೀತಿಯ ಅನುಪಾತದಲ್ಲಿ ಪುಟಗಳು ಜೋಡಿಸಲ್ಪಟ್ಟರೆ, ಅವುಗಳನ್ನು ಹಿಂಗಡೆ ಮುಂಗಡೆ ಸರಿಸಲು ಕಷ್ಟವೂ ಆಗಲಾರದು ಅಲ್ಲದೆ, ಪುಟಗಳ ಬಿಗಿತ ಹಿತ ಮಿತ ಸ್ಥಿತಿಯಲ್ಲಿರುತ್ತದೆ. ಇತ್ತೀಚಿನ ದಿನಗಳಲ್ಲಿ ಇದು ಜನಪ್ರಿಯವಾಗುತ್ತಿದೆ. ಏಕೆಂದರೆ ಇದನ್ನು ರೂಪಿಸಲು ಬೇಕಾಗುವ ಖರ್ಚು ಕಡಿಮೆ ಮತ್ತು ಸುಲಭವಾಗಿ ರಚಿಸಬಹುದು. ಅಲ್ಲದೆ ರಚನಾ ಕಾಲಾವಧಿಯೂ ಕೂಡ ಈ ರೀತಿ

ಬೈಂಡಿಂಗ್ ನಿರ್ಮಾಣಕ್ಕೂ ಸ್ವಲ್ಪವೇ ಸಾಕು. ಇಂದಿನ ದಿನಗಳಲ್ಲಿ ಅಟ್ಲಾಸ್ ಕ್ಯಾಲೆಂಡರ್‌ಗಳು ಟೇಬಲ್ ಕ್ಯಾಲೆಂಡರ್‌ಗಳು ಈ ತರಹದ ಬೈಂಡಿಂಗ್ ವಿಧಾನದಲ್ಲೇ ರಚಿತಗೊಂಡು ಮಾರುಕಟ್ಟೆಯಲ್ಲಿ ಜನಪ್ರಿಯತೆ ಗಳಿಸಿವೆ.

**೩. ಉಷ್ಣಧಾರಣೂ ಕಟ್ಟುವಿಕೆ/ ಶಾಖೋತ್ಕರ್ಷ ಕಟ್ಟುವಿಕೆ (Thermal activated binding)**

ಬಿಸಿ ಅಂಟು ಪದಾರ್ಥಗಳನ್ನು ಬಳಸಿ, ಪುಸ್ತಕಗಳ ಕಟ್ಟು ರಚಿಸುವುದನ್ನು ಉಷ್ಣಧಾರಣೂ ಕಟ್ಟುವಿಕೆ ಅಥವಾ ಶಾಖೋತ್ಕರ್ಷ ಕಟ್ಟುವಿಕೆ ಎನ್ನುತ್ತಾರೆ. ಇದರಲ್ಲಿ ಅನೇಕ ವಿಧಾನಗಳಿವೆ. ಅವುಗಳೆಂದರೆ:

೩.೧. ಸದೃಢ ಹೊದಿಕೆ: (Perfect binding)

೩.೨. ಉಷ್ಣತೆ ಕಟ್ಟುವಿಕೆ: (Thermal Binding)

೩.೩. ರಟ್ಟಿನ ಹೊದಿಕೆ: (Card Board Binding)

೩.೪. ಅಂಟು ಪಟ್ಟಿ ಹೊದಿಕೆ: (Tape Binding)

೩.೫. ಯೂನಿಬೈಂಡ್: (Uni Bind)

**೩.೧. ಸದೃಢವಾದ ಪುಸ್ತಕ ಕಟ್ಟು (ಹೊದಿಕೆ) (Perfect binding)**

ಈ ರೀತಿಯ ಪುಸ್ತಕ ಕಟ್ಟು ರಚನೆಯಲ್ಲಿ ಎರಡೂ ಬದಿಗೆ (ಮುಂಬದಿ ಮತ್ತು ಹಿಂಬದಿ) ನಯವಾದ ಕಾಗದಗಳನ್ನು ಬಳಸಲಾಗುತ್ತದೆ. ಈ ರೀತಿಯ ಪುಸ್ತಕ ಕಟ್ಟು ಹಾಕಬೇಕಾದಾಗ ನಿರ್ದಿಷ್ಟ ಸಂಖ್ಯೆ ಪ್ರತಿಗಳನ್ನು ಕಂತೆಗಳನ್ನಾಗಿ ಮಾಡಿ, ಅವುಗಳನ್ನು ಸಮನಾಗಿ ಜೋಡಿಸಿ ಅವುಗಳಿಗೆ ದಪ್ಪ ಕಾಗದದ ಹೊದಿಕೆಯನ್ನು ಹಾಕಿ ಅಂಟಿಸಲಾಗುತ್ತದೆ. ಈ ರೀತಿ ಹೊದಿಕೆ (ಕಟ್ಟು) ತಯಾರಿಸಲು ಬಿಸಿಯಾದ ವಜ್ರಸರಿ ಅಗತ್ಯ. ಈ ಬಿಸಿ ವಜ್ರಸರಿಯನ್ನು ಹೊದಿಕೆಯ ಒಂದು ಬದಿಗೆ ಲೇಪಿಸಲಾಗುತ್ತದೆ. ಅನಂತರ ಸುಮಾರು ಎರಡು ನಿಮಿಷಗಳ ಕಾಲ ಅದನ್ನು ಹಾಗೆಯೇ ಬಿಟ್ಟು ಮತ್ತೆ ದಪ್ಪ ಕಾಗದದ ಸಹಾಯದಿಂದ ಅದಕ್ಕೆ ಹೊದಿಕೆ ಹಾಕಲಾಗುತ್ತದೆ. ಇನ್ನುಳಿದ ಮೂರು ಭಾಗಗಳಲ್ಲಿ ಪುಸ್ತಕದ ಕಾಗದಗಳನ್ನು ಕತ್ತರಿಸಿ ಸಮತಟ್ಟಾಗಿ ಕಾಣುವಂತೆ ಮಾಡಲಾಗುತ್ತದೆ. ಆದರೆ ಈ ರೀತಿಯ ಕಟ್ಟು (ಹೊದಿಕೆ) ಹೊಂದಿರುವ ಗ್ರಂಥಗಳನ್ನು ಮೇಲಿಂದ ಮೇಲೆ ಉಪಯೋಗಿಸುವುದರಿಂದ ಅಥವಾ ಹೆಚ್ಚುಕಾಲ ಉಪಯೋಗಿಸುವುದರಿಂದ ಪುಟಗಳು ಕಿತ್ತು, ಹರಿದು ಹೋಗುವ ಸಂಭವವಿರುತ್ತದೆ.

**೩.೨. ಥರ್ಮಲ್ ಬೈಂಡಿಂಗ್ (Thermal Binding)**

ಇದು ಪುಟಗಳ ಒಂದು ಬದಿಯಲ್ಲಿ ದಪ್ಪನಾಗಿ ಬಿಸಿಯ ವಜ್ರಸರಿಯನ್ನ ಲೇಪಿಸಿ, ಪುಸ್ತಕದ ಎರಡೂ ಬದಿಯಲ್ಲೂ ಅಂದರೆ ಮೇಲ್ಪದರ ಮತ್ತು ಕೆಳಪದರದ ಪುಟಗಳಿಗೆ ವಜ್ರಸರಿಯನ್ನು ಲೇಪಿಸಿ, ದಪ್ಪನೆಯ ಕಾಗದದಿಂದ ಹೊದಿಕೆ ನಿರ್ಮಿಸಿ ಲೇಪಿಸಿದ ವಜ್ರಸರಿ ತಣ್ಣಗಾಗುವವರೆಗೂ ಬಿಟ್ಟು ಅದರ

ಮೇಲೆ ನಯವಾದ ಕಾಗದಲೇಪಿಸಿ ಸಿದ್ಧಗೊಳಿಸುವ ವಿಧಾನವಾಗಿದೆ ಈ ರೀತಿಯ ವಿಧಾನದ ಹೊದಿಕೆಯನ್ನು ಅಲಂಕರಣಗೊಳಿಸಬೇಕಾದರೆ ವಜ್ರಸರಿ ತಣ್ಣಗಾದ ಮೇಲೆಯೇ ಹೊದಿಕೆಗೆ ಸೂಕ್ತ ಕಾಗದ ಅಲಂಕರಣ ಮಾಡಬೇಕಾಗುತ್ತದೆ. ಈ ರೀತಿಯ ಹೊದಿಕೆ (ಕಟ್ಟು) ವಿಧಾನ ತುಂಬ ಸಮಯಾಪೇಕ್ಷಿತ ಮತ್ತು ಹೆಚ್ಚು ಶ್ರಮದಾಯಕವಾಗಿರುವುದಲ್ಲದೆ ತಪ್ಪುವ ಸಂಭವವೂ ಹೆಚ್ಚಿರುವುದರಿಂದ ಇಂದು ಈ ರೀತಿಯ ಹೊದಿಕೆ (ಕಟ್ಟು) ಅಷ್ಟೊಂದು ಪ್ರಚಲಿತದಲ್ಲಿಲ್ಲ. ಒಟ್ಟಾರೆಯಾಗಿ ಇದನ್ನು ಅಪ್ರಸ್ತುತ ವಿಧಾನ ಎಂದೇ ಪರಿಗಣಿಸಬಹುದು.

**೩.೩. ರಟ್ಟಿನ ಹೊದಿಕೆ (ರಕ್ಷಾಕವಚ) (Card Board Binding)**

ಪುಸ್ತಕದ ಎರಡೂ ಬದಿಗಳಲ್ಲಿ ಕಾಗದಗಳನ್ನು ಅಂಟಿಸಿ, ಅದರ ಮೇಲೆ ರಟ್ಟಿನ ತುಂಡುಗಳನ್ನು ಪುಸ್ತಕದ ಅಳತೆಗೆ ಬೇಕಾದಷ್ಟು ಕತ್ತರಿಸಿ, ಅಂಟಿಸಿ, ನಂತರ ಅದನ್ನು ಬೈಂಡಿಂಗ್ ಯಂತ್ರದ ಮೂಲಕ ಬಿಗಿದು ಕಟ್ಟುವ ವಿಧಾನವೇ ರಟ್ಟಿನ ಹೊದಿಕೆ ವಿಧಾನ. ಇದರಲ್ಲಿ ರಟ್ಟಿನ ಸಹಾಯದಿಂದ ಮೂಡಿದ ಹೊದಿಕೆಯು ಅತ್ಯಂತ ಗಟ್ಟಿಯಾಗಿರುತ್ತದೆ ಹೆಚ್ಚು ಉಪಯೋಗಕ್ಕೂ ಪ್ರಶಸ್ತವಾದುದು.

**೩.೪. ಅಂಟು ಪಟ್ಟಿ ಹೊದಿಕೆ (Tape Binding)**

ಈ ವಿಧಾನದಲ್ಲಿ ಮೊದಲು ಎಲ್ಲ (ಪುಟಗಳನ್ನು) ಕಾಗದಗಳನ್ನು ಅನುಕ್ರಮವಾಗಿ ಹೊಂದಿಸಿಕೊಂಡು ನಂತರ ಕಾಗದಗಳನ್ನೆಲ್ಲಾ (ಪುಟಗಳನ್ನೆಲ್ಲಾ) ರಂಧ್ರಕದ ಸಹಾಯದಿಂದ ಕಟ್ಟಿ ಬಿಗಿಗೊಳಿಸಲಾಗುತ್ತದೆ. ನಂತರ ಪುಸ್ತಕದ ಒಂದು ಬದಿಯಲ್ಲಿ (ಕೆಳಬದಿಯಲ್ಲಿ) ಅಂಟು ಪಟ್ಟಿಯಿಂದ ಅಂಟಿಸಲಾಗುತ್ತದೆ. ಮೇಲ್ಬದಿಯಲ್ಲೂ ಕೂಡ ಪಟ್ಟಿಯಿಂದ ಅಂಟಿಸಿರುತ್ತಾರೆ. ಇದನ್ನು ಆಕರ್ಷಣೀಯವಾಗುವಂತೆ ಮಾಡಲು ಬೇರೆ ಬೇರೆ ಬಣ್ಣದ ಪಟ್ಟಿಗಳನ್ನು ಅಳವಡಿಸಿರುವುದೂ ಉಂಟು. ಇದು ಸುಲಭ ಮತ್ತು ತ್ವರಿತಗತಿಯಲ್ಲಿ ಸಿದ್ಧಪಡಿಸುವ ವಿಧಾನವಾದರೂ ಇದರ ಬಾಳಿಕೆ ಕಡಿಮೆ.

**೩.೫. ಯೂನಿಬೈಂಡ್ (Uni bind)**

ಪುಸ್ತಕದ ಹಿಂಬದಿಯಲ್ಲಿ ಅಂದರೆ ಮಡಿಕೆಯಾದ ಬದಿಯಲ್ಲಿ ಲೋಹದ ಪಟ್ಟಿಯಲ್ಲಿ ಅಂಟು ಲೇಪಿಸಿ ಪುಟಗಳನ್ನು ಜೋಡಿಸಿ ಬಿಗಿಗೊಳಿಸುವಂತಹ ವಿಧಾನವಿದು. ಈ ವಿಧಾನದಲ್ಲೂ ಸಹ ಅಂಟು ಪಟ್ಟಿ ಹೊದಿಕೆ ವಿಧಾನವನ್ನೇ ಅನುಸರಿಸಲಾಗುತ್ತದೆ. ಆದರೆ ವ್ಯತ್ಯಾಸವೆಂದರೆ ಈ ಮೇಲಿನ ವಿಧಾನದಲ್ಲಿ ಲೋಹದ ಪಟ್ಟಿ ಬಳಕೆಯಾಗುವುದಿಲ್ಲ. ಆದರೆ ಈ ವಿಧಾನದಲ್ಲಿ ಲೋಹದ ಪಟ್ಟಿ ಬಳಕೆಯಾಗುತ್ತದೆ. ಈ ರೀತಿಯ ಬೈಂಡಿಂಗ್ ನಿರ್ಮಿಸಿದರೆ ಪುಸ್ತಕ ಹೆಚ್ಚು ಆಕರ್ಷಕವಾಗುತ್ತದೆ. ಬಹುಶಃ ಆಕರ್ಷಣೀಯ ಉದ್ದೇಶದಿಂದಲೇ ಫೋಟೋ ಆಲ್ಬಂ ತಯಾರಿಸುವಲ್ಲಿ ಈ ವಿಧಾನ ಬಳಸುತ್ತಾರೆ. ಇಂದು ಈ ರೀತಿಯ ಹೊದಿಕೆ ತಯಾರಿಸಲು ಮಾರುಕಟ್ಟೆಯಲ್ಲಿ ನಮಗೆ ಸಿದ್ಧರೂಪದ Uni bind ಸೆಟ್ ಸಿಗುವುದರಿಂದ ಹೆಚ್ಚು ಪ್ರಚಾರದಲ್ಲಿದೆ (ಬಳಕೆಯಲ್ಲಿದೇ).

**೪. ಹೊಲಿಗೆಯುಕ್ತ ಕಟ್ಟು (Stitched or sewn binding)**

ಹೊಲಿಗೆಯ ಸಹಾಯದಿಂದ ರೂಪಿತ ಪುಸ್ತಕಹೊದಿಕೆ ಇದರಲ್ಲೂ ಎರಡು ಪ್ರಭೇದಗಳಿವೆ/ ವಿಧಗಳಿವೆ ಅವುಗಳೆಂದರೆ:

೪.೧ ಸ್ವೆನ್ ಬೈಂಡಿಂಗ್ (Sewn binding)

೪.೨ ಸ್ಟಾಪ್‌ಲಿಂಗ್ (Stapling)

**೪.೧. ಸ್ವೆನ್ ಬೈಂಡಿಂಗ್ (Sewn binding)**

ಇದು ಲಕ್ಷಣದಲ್ಲಿ ರಟ್ಟಿನ ಸಹಾಯದಿಂದ ತಯಾರಿಸಿದ ಪುಸ್ತಕದ ರೀತಿಯಲ್ಲೇ ಆಗಿರುತ್ತದೆ ಆದರೆ ಮುಖ್ಯ ವ್ಯತ್ಯಾಸವೆಂದರೆ– ರಟ್ಟಿನ ಸಹಾಯದಿಂದ ಉಂಟಾದ ಪುಸ್ತಕದ ಹೊದಿಕೆ ಗಟ್ಟಿ ರಟ್ಟಿನ ಪದರದಿಂದ ರಚಿಸಲ್ಪಟ್ಟಿದ್ದರೆ ಇಲ್ಲಿ ಗಟ್ಟಿರಟ್ಟಿನ ಪದರದ ಬದಲು ಮೃದು ಪದರ ಇದ್ದಿರುತ್ತದೆ ಇದು ಸುಲಭವಾಗಿ ತಯಾರಿಸಲು ಬರುವಂತಹುದು ಮತ್ತು ಉತ್ತಮ ಎಂದು ಹೇಳಲಾಗುತ್ತದೆ.

**೪.೨. ಸ್ಟ್ಯಾಪ್‌ಲಿಂಗ್ (Stapling)**

ನಿಯತಕಾಲಿಕ ಪತ್ರಿಕೆಗಳನ್ನು ಬೈಂಡ್ ಮಾಡಲು ಇದು ಅತ್ಯಂತ ಪ್ರಶಸ್ತವಾದುದು. ಈ ರೀತಿಯ ವಿಧಾನದ ಬೈಂಡಿಂಗ್‌ನಲ್ಲಿ ಪುಟಗಳನ್ನು ಎರಡು ಬದಿಯಿಂದಲೂ ಮಡಚಿ ಮಧ್ಯಭಾಗದಲ್ಲಿ ಪಿನ್ನುಗಳಿಂದ ಒತ್ತಿ ಬಿಗಿ ಮಾಡಿರಲಾಗಿರುತ್ತದೆ. ಆದರೆ ಇದಕ್ಕೆ ಅಪವಾದವೆಂದರೆ ಇಂತಹ ನಿಯತಕಾಲಿಕೆಗಳು ಕೆಲವು ವಿಶೇಷ ಸಂಧರ್ಭಗಳಲ್ಲಿ ಹೊರತರುವ ವಿಶೇಷಾಂಕಗಳು ಅಂತಹ ವಿಶೇಷಾಂಕಗಳನ್ನು ರೂಪಿಸುವಾಗ ಮಾತ್ರ ವಜ್ರಸರಿಯಿಂದ ಅಂಟಿಸಿ ಬಿಗಿ ಹೊದಿಕೆ ಹಾಕಿ ಬೈಂಡ್ ಮಾಡಲಾಗಿರುತ್ತದೆ.

ಹೀಗೆ ಭಾರತದಲ್ಲಿ ಮುಖಪುಟದ ಇತಿಹಾಸ ಸುಮಾರು ೧೮ನೇ ಶತಮಾನದಲ್ಲಿ ಪ್ರಾರಂಭವಾಗಿ ತನ್ನ ವಿಸ್ತಾರವನ್ನು ಭಾರತದಾದ್ಯಂತ ಹರಡಿಸಿ ತನ್ನದೇ ಆದ ಸ್ಥಾನವನ್ನು ಗಟ್ಟಿಯಾಗಿ ಇಂದಿಗೂ ಉಳಿಸಿಕೊಂಡು ಬಂದಿದೆ. ಹಾಗೆಯೇ ಕರ್ನಾಟಕದಲ್ಲಿಯೂ ರಕ್ಷಾಪುಟ ವಿನ್ಯಾಸ ಬೆಳವಣಿಗೆ, ನವೀನ ಮಾದರಿಯ ಪುಸ್ತಕ ಕಟ್ಟುಗಳು, ರಕ್ಷಾಪುಟ ವಿನ್ಯಾಸದ ವಿವಿಧ ನಮೂನೆಯ ಅಳತೆಯ ಆಕಾರಗಳನ್ನು ಹೊಂದಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

❑❑❑



GRAMMAR

OF THE

KURNATA LANGUAGE.

By W. CAREY, D. D.

*Professor of the Sungskrita, Bengalee, and Mahratta Languages in the College of Fort William.*

Serampore:

PRINTED AT THE MISSION PRESS,

1817

೧. ಹೊಸಗನ್ನಡದ ಪ್ರಪ್ರಥಮ ಪುಸ್ತಕ (೧೮೧೭). ಕನ್ನಡ ಅಕ್ಷರಗಳು ಮೊದಲ ಬಾರಿಗೆ ಕಾಣಿಸಿಕೊಂಡಿವೆ. ಶ್ರೀರಾಮಪುರದ ಮುದ್ರಣ. [ಪುಟ ೩೫, ೩೩೫-೩೬]

೧೮೧೭



THE

NEW

TESTAMENT

IN

CANARESE,

VOL. 1.

MADRAS:

AT THE COMMERCIAL PRESS,

FOR THE BRITISH AND FOREIGN BIBLE SOCIETY

1820

೨. ಸಂಪೂರ್ಣವಾಗಿ ಕನ್ನಡ ಅಕ್ಷರಗಳನ್ನೊಳಗೊಂಡ ಪ್ರಥಮ ಮುದ್ರಿತ ಪುಸ್ತಕ (ಕ್ರಿ.ಶ. ೧೮೨೦). ಕನ್ನಡ ಬೈಬಲ್‌ನ (ಹೊಸ ಒಡಂಬಡಿಕೆ) ಮೊದಲ ರೂಪ. ಅನುವಾದಕ ಜೆ. ಹ್ಯಾಂಡ್ಸ್ ತನ್ನ ತಂದೆಗೆ ಕಳುಹಿಸಿದ ಪ್ರತಿಯೇ ಇದು. ಅವನ ಹಸ್ತಾಕ್ಷರವಿರುವ ಈ ಅಪೂರ್ವ ಗ್ರಂಥ ಮುಂಬಯಿ ವಿಶ್ವವಿದ್ಯಾಲಯದ ಗ್ರಂಥಭಂಡಾರದಲ್ಲಿದೆ. [ಪುಟ ೩೬]

೧೮೨೦



A HELP

IN

ACQUIRING A KNOWLEDGE

OF THE

ENGLISH LANGUAGE,

DESIGNED FOR THE BENEFIT OF THOSE IN THIS COUNTRY,

WHO WISH TO STUDY THE ENGLISH

LANGUAGE AND SCIENCES.

"The fear of the Lord is the beginning of wisdom; and to depart from evil is understanding."

"Of all things, knowledge is esteemed the greatest treasure, from incapability to be stolen, from incapability to be given away, and from incapability to be destroyed."

PRINTED AT THE BELLARY MISSION PRESS.

A. D. 1835.

೪. ಜಾನ್ ರೀಡ್ ವಿರಚಿತವಾದ ಈ ಭಾಷಾಭ್ಯಾಸದ ಪುಸ್ತಕದಲ್ಲಿ ಕ್ರಿಶ್ಚಿಯನ್ ಮತ ವಿಚಾರಗಳನ್ನು ಸೇರಿಸಲಾಗಿ ತಂದಿದ್ದಾರೆ. [ವಿವರಗಳಿಗೆ ಪುಟ ೩೫೪-೫೫]

೧೮೩೫



ಮಂಗಳೂರ ಸಮಾಚಾರ

೧೦. ಕನ್ನಡದ ಪ್ರಪ್ರಥಮ ಪತ್ರಿಕೆ 'ಮಂಗಳೂರ ಸಮಾಚಾರ'ದ (೧೮೪೩-೪೪) ಕೊನೆಯ ಸಂಚಿಕೆ. ಬಳ್ಳಾರಿಗೆ ಸ್ಥಳಾಂತರಿಸಿ, ಬಿಡಿಮೊಳೆಗಳಿಂದ ಹೆಚ್ಚು ಪ್ರತಿಗಳನ್ನು ಮುದ್ರಿಸಿ, ಅದನ್ನು 'ಕನ್ನಡ ಸಮಾಚಾರ' ಎಂದು ಕರೆಯಬೇಕೆಂದುದರ ಪ್ರಸ್ತಾಪ ಈ ಸಂಪಾದಕೀಯದ ಕೊನೆಯಲ್ಲಿದೆ. [ಪುಟ ೭೮೩-೭೮೪]

೧೮೪೪ ರಲ್ಲಿನ ಪತ್ರಿಕೆಯ ಮುಖಪುಟ

ಅಧ್ಯಾಯ : ಮೂರು

# ಚಿತ್ರಕಲೆ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

- ಸ್ವಾತಂತ್ರ್ಯೋತ್ತರ ಕನ್ನಡ ಚಿತ್ರಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ
- ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಚಿತ್ರಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಅಧ್ಯಾಯ : ಮೂರು

## ಚಿತ್ರಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಕರ್ನಾಟಕದಲ್ಲಿ– ಕನ್ನಡದಲ್ಲಿ ಚಿತ್ರಕಲೆಗೆ ಸಂಬಂಧಿಸಿದ ಸಾಹಿತ್ಯಗಳು ರಚನೆಗೊಳ್ಳಲಾರಂಭಿಸಿದ್ದು ಅ. ನ. ಕೃಷ್ಣರಾವ್, ಕೆ. ಶಿವರಾಮ ಕಾರಂತ ಇಂಥವರುಗಳಿಂದ ಇವರುಗಳನ್ನು ಹೊರತು ಪಡಿಸಿದರೆ ಬಿ.ಪಿ.ಬಾಯಿರಿಯವರ ಕಲಾಸಾಹಿತ್ಯ ಕೃಷಿಯು ಉಲ್ಲೇಖನೀಯ. ಇವರ ಸಾಧನೆಗಳೆಲ್ಲಾ ರಾಜ್ಯದಲ್ಲಿ ನಡೆದ ವೈಯಕ್ತಿಕ ಮಟ್ಟದ ಕಲಾ ಸಾಹಿತ್ಯ ಕಾರ್ಯಗಳು ಎಂದು ಪರಿಗಣಿಸಲ್ಪಟ್ಟಿರುತ್ತವೆ. ಹಾಗಾಗಿ ಇವುಗಳು ಖಾಸಗಿ ಮಟ್ಟದ ಕಾರ್ಯಸಾಧನೆಗಳೆಂದು ಪರಿಗಣಿಸಲ್ಪಟ್ಟಂತವುಗಳು. ಸ್ವಾತಂತ್ರ್ಯ ಪೂರ್ವದ ಕಾಲಘಟ್ಟದಲ್ಲೇ ಇಂತಹ ಮಹನೀಯರುಗಳ ಪ್ರಯತ್ನ ನಡೆದಿದೆಯಾದರೂ, ಅವು ಬೆರಳೆಣಿಕೆ ಗ್ರಂಥಗಳು. ಈ ದಿಸೆಯಲ್ಲಿ ಸರಕಾರದ ಸರ್ಕಾರಿ ಸ್ವಾಮ್ಯದ ಸಂಘ ಸಂಸ್ಥೆಗಳು ಹುಟ್ಟಿ, ಅವುಗಳ ಮುಖಾಂತರ ದೃಶ್ಯಕಲಾ ಸಾಹಿತ್ಯ ಗ್ರಂಥ ಸಂಪಾದನೆ, ಪ್ರಕಟಣೆಗಳಂತಹ ಗುರುತರ ಕಾರ್ಯಕ್ರಮಗಳು ಆಯೋಜನೆ–ಗೊಳ್ಳತೊಡಗಿದುದು ಸ್ವಾತಂತ್ರ್ಯಾನಂತರವೇ. ಅಂದರೆ ಸರಿ ಸುಮಾರು ೧೯೫೦–೬೦ರ ದಶಕದಿಂದ ಇದರ ಹೆಜ್ಜೆ ಗುರುತುಗಳು ಮೂಡಲಾರಂಭಿಸಿದವಾದರೂ ಹೇಳಿಕೊಳ್ಳುವಂತಹ ರೀತಿಯಲ್ಲಿ ಇಂತಹ ಕಾರ್ಯಗಳು ನಡೆಯ ತೊಡಗಿದ್ದುದು ೧೯೬೦–೭೦ರ ದಶಕದಿಂದ ಎಂದು ಊಹಿಸಬಹುದಷ್ಟೆ. ಈ ಪ್ರಬಂಧ ಕ್ಷೇತ್ರಕಾರ್ಯ ಅಧ್ಯಯನ ಸಮಯದಲ್ಲಿ ಲಭ್ಯವಾದ ದೃಶ್ಯಕಲಾ ಸಾಹಿತ್ಯಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು, ಆ ಆಧಾರದ ಮೇಲೆ ಆಯಾ ದೃಶ್ಯಕಲಾ ಸಾಹಿತ್ಯ ಗ್ರಂಥದ ರಕ್ಷಾಪುಟ ಚಿತ್ರ ಮತ್ತು ವಿನ್ಯಾಸದ ಕುರಿತು ಸಂಶೋಧನಾತ್ಮಕ ವಿಶ್ಲೇಷಣೆ ಮಾಡಲಾಗಿದೆ.

ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ರಚಿತವಾದ ದೃಶ್ಯಕಲಾ ಸಾಹಿತ್ಯಗಳ ಆಯ್ದ ಕೆಲವು ಗ್ರಂಥಗಳು. (ಕನ್ನಡ ಸಾಹಿತ್ಯ ಪರಿಷತ್ ಸಂಗ್ರಹದಲ್ಲಿ ಲಭ್ಯವಾದ ವೈಯಕ್ತಿಕ ಮಟ್ಟದ್ದು) ಕರ್ನಾಟಕ

ಲಲಿತಕಲಾ ಅಕಾಡೆಮಿ ಹೊರತಂದಿರುವ ದೃಶ್ಯಕಲಾ ಸಾಹಿತ್ಯಗಳ ಮುಖಪುಟ ವಿನ್ಯಾಸಗಳು (ಮೇಲ್ನೋಟಕ್ಕೆ ಕಂಡು ಬರುವ ಸಂಗತಿಯೆಂದರೆ ವ್ಯಕ್ತಿಗಳು ಹೊರತಂದಿರುವ ದೃಶ್ಯಕಲಾ ಸಾಹಿತ್ಯ ಮುಖಪುಟಗಳಲ್ಲಿ ವೈವಿಧ್ಯತೆ ಕಂಡು ಬರುತ್ತದೆ).

ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಕಟಿಸಿದ ದೃಶ್ಯಕಲಾ ಸಾಹಿತ್ಯಗಳ ಮುಖಪುಟದ ವಿನ್ಯಾಸದಲ್ಲಿ ಏಕತಾನತೆ (ಏಕರೂಪತೆ) ಕಂಡು ಬರುತ್ತದೆ. ಜೊತೆಗೆ ರಕ್ಷಾಪುಟ ಚಿತ್ರಗಳಲ್ಲಿ ವೈವಿಧ್ಯತೆಯ ಲಕ್ಷಣಗಳು ಕಾಣಬಹುದು. ಪ್ರಸಕ್ತ ಅಧ್ಯಯನದಲ್ಲಿ ಈ ಅಧ್ಯಾಯನದ ಇತಿಮಿತಿಗಳನ್ನು ಅನುಲಕ್ಷ್ಯಿಸಿ, ಇಲ್ಲಿ ಕೆಲವು ದೃಶ್ಯಕಲಾ ಸಾಹಿತ್ಯಗಳ ಗ್ರಂಥ ರಕ್ಷಾಪುಟ ಚಿತ್ರಗಳ/ಮುಖಪುಟ ವಿನ್ಯಾಸ ಕುರಿತಂತೆ ಅವಲೋಕಿಸಲಾಗುವುದು

**೩.೧. ಸ್ವಾತಂತ್ರ್ಯೋತ್ತರ ಕನ್ನಡ ಚಿತ್ರಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

**೩.೧.೧. ಡ್ರಾಯಿಂಗ್ ಶಿಕ್ಷಕ (೧೯೪೭)**

೧೯೪೭ರಲ್ಲಿ ಕನ್ನಡ ನಾಡಿನ ಖ್ಯಾತ ಕಲಾವಿದ ಅಮೀನ್‌ಸಾಬ್ ಕಮಡೊಳ್ಳಿಯವರಿಂದ ರಚಿತವಾದ 'ಡ್ರಾಯಿಂಗ್ ಶಿಕ್ಷಕ' ಪುಸ್ತಕಕ್ಕೆ ಮುಖಪುಟ ವಿನ್ಯಾಸಗೊಳಿಸಿದವರು ಫಕೀರಪ್ಪ ಎಲ್ಲಪ್ಪ ಎನ್ನುವರು. ತಿಳಿಕಂದು ಬಣ್ಣದ ಹಿನ್ನೆಲೆ ಅವಕಾಶದಲ್ಲಿ ಕಪ್ಪು-ಬಿಳುಪು ವರ್ಣದಲ್ಲಿ ಸರಳವಾದ ನೈಜವಾದ ನಿಸರ್ಗ ಚಿತ್ರಣವಿದೆ. ಮೇಲ್ಭಾಗದಲ್ಲಿ ಸರಳಗೈ ಮಾದರಿಯಲ್ಲಿ ಡ್ರಾಯಿಂಗ್ ಶಿಕ್ಷಕ ಎಂಬ ಶೀರ್ಷಿಕೆಯ ಅಕ್ಷರಗಳಿದ್ದು ನೋಟಕನ ಗಮನವನ್ನು ಅನಾಯಾಸವಾಗಿ ಸೆಳೆಯಬಲ್ಲಂತಹ ಕೃತಿ ಶೀರ್ಷಿಕೆಯ ಅಕ್ಷರಗಳು ಅವಾಗಿದ್ದು, ಲೇಖಕರ ಹೆಸರು ತುಂಬಾ ಚಿಕ್ಕದಾಗಿ ಬೇಗನೆ ಓದುಗನ ಲಕ್ಷ್ಯಕ್ಕೆ ಬಾರದ ಗಾತ್ರ ಮತ್ತು ಶೈಲಿಯಲ್ಲಿ ಬರೆಯಲ್ಪಟ್ಟಿದೆ. ಈ ಮುಖಪುಟದಲ್ಲಿ ವಿನ್ಯಾಸಗೊಳಿಸಿರುವ ನಿಸರ್ಗ ದೃಶ್ಯ ಸರಳವಾದುದಾದರೂ ಯಥಾದರ್ಶನ ರೀತಿಯಲ್ಲಿ ಅಗತ್ಯವಿರುವಲ್ಲೆಲ್ಲಾ ಛಾಯಾಕರಣ (Shades) ಹೊಂದಿದ್ದು ನಿಸರ್ಗ ಚಿತ್ರಣದಲ್ಲಿ ಅತ್ಯಂತ ಉಲ್ಲೇಖನೀಯ ಅಂಶವಾದ ಯಥಾದರ್ಶನ ನಿರೂಪಣೆ ಸುಂದರವಾಗಿ ಮೂಡಿಬಂದಿದೆ. ಒಟ್ಟಾರೆಯಾಗಿ ಇದರ ವಿನ್ಯಾಸ ಮಾದರಿ ತುಂಬಾ ಸರಳವಾದುದು, ಆ ಸಂದರ್ಭ (ಅವಧಿಯಲ್ಲಿ)ದಲ್ಲಿ ಕಲಾವಲಯದಿಂದ ಜನ ಸಾಮಾನ್ಯವರ್ಗ ಅಪೇಕ್ಷಿಸುತ್ತಿದ್ದ ಕೌಶಲ್ಯಪೂರ್ಣ ಸಹಜ ಸುಂದರ ಅಭಿವ್ಯಕ್ತಿಯನ್ನು ಸಾಕಷ್ಟು ಯಶಸ್ವಿಪೂರ್ಣವಾಗಿ ನೆರವೇರಿಸಿದುದು ಎಂದು ಅಭಿಪ್ರಾಯ ಪಡಬಹುದು.

**೩.೧.೨. ಚಿತ್ರಕಲಾ ಪ್ರವೇಶ (೧೯೫೦)**

'ಚಿತ್ರಕಲಾ ಪ್ರವೇಶ' (೧೯೫೦) ಪುಸ್ತಕ ಗೋ. ಶ್ರೀಪದ್ದಾರ ಎಂಬ ಲೇಖಕರ ಕೃತಿಯಾಗಿದೆ. ತನ್ನ ಮುಖಪುಟದ ತುಂಬೆಲ್ಲಾ ಸುಂದರ ಚಿತ್ತಾರಗಳನ್ನು (ಮಾನವ, ಗುಲಾಬಿಹೂವು, ಕುಸುರಿ ನಕ್ಷೆ) ಹೊಂದಿರುವಂತಹುದು ಮುಖಪುಟದ ಅಂಚಿನ ಸುತ್ತೆಲ್ಲಾ ಹಾವಾಡಿಗ, ಡೊಳ್ಳು ಬಾರಿಸುವವ, ಡೋಲು ಬಾರಿಸುವವ, ಚಿತ್ತಾಕರ್ಷಕ ಗುಲಾಬಿ ಹೂವು, ಪಂಜರದೊಳಗಿನ ಗಿಣಿಯೊಡನೆ ಸಂಭಾಷಿಸುತ್ತಿರುವ ಕನ್ನಿಕೆ, ಕೌಶಲ್ಯಪೂರ್ಣ ಕುಸುರಿವಿನ್ಯಾಸಗಳು. ಈ ಎಲ್ಲಾ ಚಿತ್ರಗಳನ್ನು ವರ್ಣಯುಕ್ತವಾಗಿ ಬಿಡಿಸಿದ್ದು,

ಮಧ್ಯದಲ್ಲಿನ ಚೌಕಟ್ಟಿನಲ್ಲಿ 'ಚಿತ್ರಕಲಾ ಪ್ರವೇಶ' ಎಂಬ ಕೃತಿ ಶೀರ್ಷಿಕೆಯನ್ನು ಸರಳಗೈ ಮಾದರಿಯಲ್ಲಿ ಕಣ್‌ನೋಟಕ್ಕೆ ಕುಕ್ಕುವ ರೀತಿಯಲ್ಲಿ ರೂಪಿಸಿದ್ದು, ಆ ಚೌಕಟ್ಟಿನ ತಳಭಾಗದಲ್ಲಿ ಪುಟ್ಟದಾಗಿ ಕೆಂಪು ಅಕ್ಷರಗಳಲ್ಲಿ ಕೃತಿ ಲೇಖಕರ ಹೆಸರನ್ನು ಬರೆಯಲಾಗಿದೆ. ಐವತ್ತರ ದಶಕದಲ್ಲಿ ರಚಿತವಾದ ಕಲಾಕೃತಿಯ ಮುಖಪುಟದಲ್ಲಿ ರೂಪಿಸಿರುವ ಎಲ್ಲ ಚಿತ್ರಗಳೂ ಸ್ಮರಣಚಿತ್ರಣ ಮಾದರಿಯಲ್ಲಿ ರಚನೆಯಾಗಿವೆ. ಎಳೆ ವಯಸ್ಸಿನ ಮಕ್ಕಳನ್ನು ಆಕರ್ಷಿಸುವಂತಹ ಚಿತ್ರಗಳಿವು, ಇಲ್ಲಿ ಕಲಾವಿದರು ವಿವಿಧ ವೃತ್ತಿಕೌಶಲ್ಯದ ಬಗೆ ಬಗೆಯ ಭಂಗಿಗಳನ್ನು ಮುಗ್ಧ ಮಕ್ಕಳ ಮನಸ್ಸು ಸೆಳೆಯಲ್ಪಡುವ ರೀತಿಯಲ್ಲಿ ರೂಪಿಸಿರುವುದರಿಂದ ಮುಖಪುಟ ವಿನ್ಯಾಸಗಾರಿಕೆಯಲ್ಲಿ ಅಗತ್ಯ ಉದ್ದೇಶ ಸಾಧಿತವಾದಂತಾಗಿದೆ. ಕಾಲಘಟ್ಟದ ಕುರಿತಂತೆ ಅವಲೋಕಿಸಿದಾಗ ಇದು ಆ ಸಂದರ್ಭದ ಮಟ್ಟಿಗೆ ನವ ನವೀನವಾದ ಮಾದರಿಯ ಮುಖಪುಟವಿನ್ಯಾಸ ಎನ್ನಬಹುದು. ಈ ಕೃತಿಯ ಪ್ರಕಾಶಕರು/ಮುಖಪುಟ ವಿನ್ಯಾಸಗಾರರು ಯಾರೆಂಬುದು ಎಲ್ಲಿಯೂ ಉಲ್ಲೇಖಿಸಲ್ಪಟ್ಟಿಲ್ಲ.

### ೩.೨. ಎಪ್ಪತ್ತರ ದಶಕದಲ್ಲಿ ಮೂಡಿ ಬಂದ ಕನ್ನಡ ದೃಶ್ಯಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

### ೩.೨.೧. ಕರ್ನಾಟಕದಲ್ಲಿ ಚಿತ್ರಕಲೆ (೧೯೭೧)

ಕೆ. ಶಿವರಾಂ ಕಾರಂತರಿಂದ ೧೯೭೧ ರಲ್ಲಿ ರಚಿತವಾದ 'ಕರ್ನಾಟಕದಲ್ಲಿ ಚಿತ್ರಕಲೆ' ಎಂಬ ಪುಸ್ತಕ ಮೈಸೂರು ವಿ.ವಿ.ಯ ಪ್ರಸಾರಾಂಗದಿಂದ ಪ್ರಕಟಿಸಲ್ಪಟ್ಟಿದ್ದು ಮೈವಳಿಕೆಯುಕ್ತ ತಿಳಿಕಂದು ಬಣ್ಣದ ಅವಕಾಶದಲ್ಲಿ ನೋಡುಗನ ಗಮನಕ್ಕೆ ಬರುವಂತೆ ಸರಳಗೈ ಬರವಣಿಗೆಯಲ್ಲಿ (Free hand writing) ಕೃತಿಯ ಶೀರ್ಷಿಕೆ ಕೆಂಪು ಬಣ್ಣದಲ್ಲಿ ಬರೆಯಲ್ಪಟ್ಟಿದೆ, ಶೀರ್ಷಿಕೆಯ ಕೆಳಗಡೆ ತುಂಬ ಚಿಕ್ಕದಾಗಿ ಕೆಂಪು ಬಣ್ಣದಲ್ಲೇ ಲೇಖಕರ ಹೆಸರು ನಮೂದಿಸಲ್ಪಟ್ಟಿದ್ದು ಮುಖಪುಟದ ತಳಭಾಗದಲ್ಲಿ ಮೈಸೂರು ವಿ.ವಿಯ. ಲಾಂಛನ ಮುದ್ರಿಸಲ್ಪಟ್ಟಿದೆ. ಯಾವುದೇ ರೀತಿಯ ಚಿತ್ತಾರಗಳಿಲ್ಲದ, ಹಳೆಯ ಕಾಲದ ಹಸ್ತಪ್ರತಿ ಸಾಹಿತ್ಯಗಳನ್ನು ಜ್ಞಾಪಿಸುವ ಮುಖಪುಟವಿದು ಎಂದು ಭಾಸವಾಗುತ್ತಿದೆ.

### ೩.೨.೨. ಭಾರತೀಯ ಚಿತ್ರಕಲೆ (೧೯೭೨)

ಬಾಯಿರಿಯವರಿಂದ ಬರೆಯಲ್ಪಟ್ಟ 'ಭಾರತೀಯ ಚಿತ್ರಕಲೆ' ಗ್ರಂಥದ ಮುಖಪುಟ ಅದರ ಅವಕಾಶ (Space) ದ ತುಂಬೆಲ್ಲಾ ವೀಣಾಪಾಣಿ ಶಾರದೆಯ ರೇಖಾಚಿತ್ರ ಹೊಂದಿದೆ. ಇಲ್ಲಿ ರೇಖಿಸಲ್ಪಟ್ಟ ವೀಣಾಧಾರಿಣಿಯ ಚಿತ್ರ ಶೈಲಿಯಲ್ಲಿ 'ಅಜಂತಾ ಮಾದರಿಯಲ್ಲಿ'[೧] ಅಲಂಕರಣತೆಯನ್ನು ಹೋಲುತ್ತದೆ. ಮುಖದಲ್ಲಿ ಪ್ರಶಾಂತತೆ, ಸಮಾಧಿಸ್ಥಿತಿ ತಲ್ಲೀನಭಾವ ಆವರಿಸಿದೆ ತನ್ನ ತೊಡೆಯ ಮೇಲೆ ವೀಣೆಯನ್ನು ಇರಿಸಿಕೊಂಡು ವೀಣೆಯ ಅಡಿಭಾಗ (ಕೆಳಗಡೆ) ದಲ್ಲಿ ಎಡಗೈ ತೂರಿಸಿ, ಎಡಹಸ್ತವನ್ನು ವೀಣೆಯ ಮೇಲಿರಿಸಿ ಮೀಟುತ್ತಾ ಬಲಗೈ ಹಸ್ತವನ್ನು ಮೃದುವಾಗಿ ವೀಣೆಯ ತಳಭಾಗಕ್ಕೆ ತಾಗಿಸಿದ್ದಾಳೆ. ಭುಜದ ಮೇಲೆ ಇಳಿಬಿದ್ದಿರುವ ಕೇಶರಾಶಿ, ದೇಹಕ್ಕೆ ಒತ್ತಾಗಿ ಉಟ್ಟಿರುವ ಸೀರೆ, ಉತ್ಪ್ರೇಕ್ಷೆಯೆನಿಸುವಷ್ಟು ನಿರೂಪಣೆಗೊಂಡಿರುವ ಲಾವಣ್ಯವಂತಿಕೆ, ಈ ಎಲ್ಲ ಅಂಶಗಳೂ ಚಿತ್ರಕ್ಕೆ ಆಕರ್ಷಣೀಯತೆಯ ಜೊತೆಗೆ

೦೧. Edith Tomory: A History of fine arts in India & the west page-40-43

ರಮಣೀಯತೆಯನ್ನು ಒದಗಿಸಿವೆ. ಶರೀರ ಶಾಸ್ತ್ರದ ಪ್ರಮಾಣಬದ್ಧ ಮಾನವ ದೇಹ ಅನುಸರಣೆ ಇಲ್ಲಿ ಆಗಿಲ್ಲ, ಹದಿಹರಯದ ಸ್ತ್ರೀಯ ಬಾಗು-ಬಳುಕುಗಳ ಅತಿರಂಜಕತೆ ಇಲ್ಲಿ ಮೇಳೈಸಿದ್ದು ಪ್ರತಿಮಾ ನಿರೂಪಣಾ ವಿಧಾನ ಅಜಂತಾ ಶೈಲಿಯದು ರಮಣೀಯ ಯುಕ್ತ ರೇಖಾಲಾಲಿತ್ಯದಿಂದಾಗಿ-ಭಾವ ನಿರೂಪಣೆಯಿಂದಾಗಿ ಮುಖಪುಟ ಆಕರ್ಷಕವೆನಿಸುತ್ತದೆ. ಈ ಚಿತ್ರದ ಮೇಲ್ಭಾಗದ ಬಲಪಾರ್ಶ್ವದಲ್ಲಿ ಹಸಿರು ಹಿನ್ನೆಲೆಯ ಪುಟ್ಟ ಆಯಾತಾಕಾರದ ಚೌಕಟ್ಟಿನಲ್ಲಿ ಸರಳಗೈ ಮಾದರಿಯಲ್ಲಿ ಬಿಳಿಯ ವರ್ಣದಲ್ಲಿ ಕೃತಿಯ ಶೀರ್ಷಿಕೆಯನ್ನು ಬರೆಯಲಾಗಿದೆ. ವೀಣಾಪಾಣಿ ಸರಸ್ವತಿಯ ರೇಖಾಚಿತ್ರದ ಕೆಳಗಡೆ ಹಸಿರು ವರ್ಣದಲ್ಲಿ ಚಿಕ್ಕದಾಗಿ ಆದರೆ ಸ್ಪಷ್ಟವಾಗಿ ಕಾಣುವಂತೆ ಲೇಖಕರ ಹೆಸರನ್ನು ಉಲ್ಲೇಖಿಸಲಾಗಿದೆ. ಕ್ರಮವಾಗಿ ೧೯೭೨ರಲ್ಲಿ ಸಮಾಜ ಪುಸ್ತಕಾಲಯ, ೧೯೭೯ರಲ್ಲಿ ರವೀಂದ್ರ ಫಾಣೇಕರ್ ಇವರು ಈ ಪುಸ್ತಕವನ್ನು ಪ್ರಕಟಿಸಿದ್ದಾರೆ. ಎರಡು ಪುಸ್ತಕಗಳ ರಕ್ಷಾಪುಟ ಚಿತ್ರ ಒಂದೇ ರೀತಿಯಾಗಿದೆ . ಇದರ ಮುಖಪುಟ ವಿನ್ಯಾಸಗೊಳಿಸಿದ ಕಲಾವಿದರು ಯಾರೆಂಬುದು ತಿಳಿದುಬಂದಿಲ್ಲ.

### ೩.೨.೩. ಕಾರ್ಟೂನ್ಸ್ (೧೯೭೪)

ಮೂರ್ತಿ ಎನ್ನುವವರಿಂದ ೧೯೭೪ ರಲ್ಲಿ ಬರೆಯಲ್ಪಟ್ಟ 'ಕಾರ್ಟೂನ್ಸ್' ಕೃತಿಯ ಮುಖಪುಟ ಆಕಾರ ಅಗಲವಾದದ್ದು. ಇಲ್ಲಿ ನಿರೂಪಿಸಲ್ಪಟ್ಟಿರುವ ಕೃತಿ ತಲೆಬರಹ ಮತ್ತು ತಲೆಬರಹದ ಕೆಳಗಡೆ ಬಿಡಿಸಲ್ಪಟ್ಟಿರುವ ಒಂದು ವ್ಯಂಗ್ಯಚಿತ್ರ ಕಾರಣದಿಂದಾಗಿ ಪ್ರಜ್ಞಾವಂತ ವಾಚಕರಿಗೆ ಥಟ್ಟನೆ (ಒಂದೇ ನೋಟಕ್ಕೆ) ಇದರಲ್ಲಿನ ಸಾಹಿತ್ಯದ/ಸಂಗತಿಯ ಹೂರಣವನ್ನು ಬಿಚ್ಚಿಡುತ್ತದೆ. ಇಲ್ಲಿ ಮುಖಪುಟದ ಹಿನ್ನೆಲೆಗೆ ತಿಳಿಗುಲಾಬಿ ಬಣ್ಣವಿದ್ದು, ಮುಖಪುಟದ ಮಧ್ಯದ ಬಹುತೇಕ ಭಾಗ 'ಕಾರ್ಟೂನ್ಸ್' ಎಂಬ ಶೀರ್ಷಿಕಾಕ್ಷರಗಳ ಬಳಕೆಯಾಗಿದೆ. ಕಪ್ಪು ಬಣ್ಣದ ಅಂಚು ರೇಖೆಗಳನ್ನು ಹೊಂದಿದ ಸರಳಗೈ ಶೈಲಿಯಲ್ಲಿ ಬರೆಯಲ್ಪಟ್ಟಿರುವ ಈ ಶೀರ್ಷಿಕಾಕ್ಷರಗಳ ಕೆಳಗಡೆ ಅದೇ ಅಕ್ಷರಗಳನ್ನು ದಪ್ಪ ಕಪ್ಪುಬಣ್ಣದಲ್ಲಿ ಛಾಯೆಯೋಪಾದಿಯಲ್ಲಿ ಮೂಡಿಸಲಾಗಿದೆ. ಹೀಗೆ ನಾಲ್ಕುಬಾರಿ ಪುನರಾವರ್ತ ಗೊಂಡಿರುವ ಈ ಶೀರ್ಷಿಕಾ ಅಕ್ಷರಗಳ ಕೆಳಗಡೆಯಲ್ಲಿ ಬೂದು ಬಣ್ಣದ ಆವರಣದಲ್ಲಿ ಕಪ್ಪು ಬಿಳುಪಿನಲ್ಲಿ ತಲೆಗೆ ಪೇಟಾ ಧರಿಸಿದ ವ್ಯಕ್ತಿಯೋರ್ವ (ಶ್ರೀ ಸಾಮಾನ್ಯ) ಬಲಗಾಲನ್ನು ಮುಂದೆ ಚಾಚಿ, ಕತ್ತನ್ನು ತುಸು ಮೇಲಕ್ಕೆತ್ತಿ ಅವಾಕ್ಕಾಗಿ ಶೀರ್ಷಿಕೆಯ ಕಡೆಗೆ ದಿಟ್ಟಿಸುತ್ತಿರುವ ವ್ಯಂಗ್ಯ ಚಿತ್ತಾರವಿದ್ದು. ಈ ವ್ಯಂಗ್ಯ ರೇಖೆಯನ್ನೆಳೆದ ಕಲಾವಿದರ ಸಹಿಯೂ ದೀರ್ಘವಾದ ಓರೆಯಾದ ಗೀಟುಗಳಲ್ಲಿ ನಮೂದಾಗಿದೆ. ಹೀಗೆ ಇಲ್ಲಿ ಸಂಯೋಜಿಸಲ್ಪಟ್ಟಿರುವ ಪ್ರತಿ ವಿವರವೂ ವ್ಯಂಗ್ಯಾತ್ಮಕವಾಗಿಯೇ ತೋರ್ಪಡಿಕೆಯಾಗಿರುವುದರಿಂದ ಸಹಜವಾಗಿಯೇ ಈ ಮುಖಪುಟದಲ್ಲಿ ಅಂತರಂಗದ ಅರ್ಥ ಸಾಹಚರ್ಯ ಮೇಳವಿಸಿದೆ. (ಈ ಕೃತಿಯ ಮುಖಪುಟವನ್ನು ವಿನ್ಯಾಸಗೊಳಿಸಿದವರ ಹೆಸರು ಅಧಿಕೃತವಾಗಿ ಎಲ್ಲಿಯೂ ನಮೂದಿಸಲ್ಪಟ್ಟಿಲ್ಲ) ಇದನ್ನು ಮುದ್ರಿಸಿದವರು ಬಾಪ್ಕೊ ಪ್ರಕಟಣೆ, ಬೆಂಗಳೂರು.

### ೩.೨.೪. ಕರ್ನಾಟಕದಲ್ಲಿ ಚಿತ್ರಕಲೆ (೧೯೭೫)

೧೯೭೫ರಲ್ಲಿ ಪುನರ್ ಮುದ್ರಣಗೊಂಡ ಡಾ. ಕೆ. ಶಿವರಾಮ ಕಾರಂತರಿಂದ ರಚಿತವಾದ

'ಕರ್ನಾಟಕದಲ್ಲಿ ಚಿತ್ರಕಲೆ' ಕೃತಿಯ ಮುಖಪುಟದಲ್ಲಿ 'ತಂಜಾವೂರು ಸಾಂಪ್ರದಾಯಿಕ ಭಿತ್ತಿಚಿತ್ರ'[೨] ಮಾದರಿಯ ವಿಷ್ಣುಮೂರ್ತಿ ಚಿತ್ರದ ವರ್ಣಛಾಯಾಚಿತ್ರವನ್ನು ಹೊಂದಿದೆ. ಮುಖಪುಟದ ಶೇ ೯೫ ರಷ್ಟು ಭಾಗದಲ್ಲಿ ಈ ಛಾಯಾ ಚಿತ್ರವಿದ್ದು ಮೇಲ್ಗಡೆ ಸರಳಗೈ ಶೈಲಿಯಲ್ಲಿ ತಿಳಿನೀಲಿ ಬಣ್ಣದ ಹಿನ್ನೆಲೆಯಲ್ಲಿ ಬಿಳಿಬಣ್ಣದಲ್ಲಿ ಕೃತಿಯ ಶೀರ್ಷಿಕೆ ಮತ್ತು ಲೇಖಕರ ಹೆಸರು ನಮೂದಿಸಲ್ಪಟ್ಟಿದೆ. ಇಂದಿನ ದಿನಗಳಲ್ಲಿ ಈ ರೀತಿಯ ಮುಖಪುಟ ವಿನ್ಯಾಸ ತೀರಾ ಹಳೆಯ ಮಾದರಿಯೆನಿಸಿದರೂ ಎಪ್ಪತ್ತರ ದಶಕದಲ್ಲಿನ ಸಂದರ್ಭಕ್ಕೆ ಇದು ಹೊಸತನದಿಂದಲೇ ಕೂಡಿದುದಾಗಿತ್ತು, ಕೃತಿಯ ಶೀರ್ಷಿಕೆಗೆ ಪೂರಕವಾಗಿ ಮುಖಪುಟದಲ್ಲಿ ಭಿತ್ತಿಚಿತ್ರವೊಂದರ ಛಾಯಾಚಿತ್ರವನ್ನು ಮುಖಪುಟದ ತುಂಬೆಲ್ಲ ಎದ್ದು ಕಾಣುವಂತೆ ಸಂಯೋಜಿಸಿರುವುದರಿಂದ ಸಹೃದಯ ಓದುಗರಿಗೆ ಕೃತಿಯ ಸಾರವನ್ನು ಅರ್ಥೈಸಿಕೊಳ್ಳುವುದು ತೀರಾ ಸುಲಭವಾಗಿದೆ ಎಂದು ಇಲ್ಲಿ ಅಭಿಪ್ರಾಯ ಪಡಬಹುದು.

### ೩.೩. ಎಂಬತ್ತರ ದಶಕದಲ್ಲಿ ಮೂಡಿ ಬಂದ ಕನ್ನಡ ದೃಶ್ಯಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

#### ೩.೩.೧. ಎಂ. ವಿ. ಮಿಣಜಿಗಿ (೧೯೮೩)

ಗವೀಶ ಹಿರೇಮಠ್‌ರವರಿಂದ ರಚಿತವಾಗಿ ೧೯೮೩ರಲ್ಲಿ ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಕೇಷನ್ಸ್ ಇವರಿಂದ ಮುದ್ರಣಗೊಂಡ ಕರ್ನಾಟಕ ಕಲಾವಿದರ ಮಾಲೆಯಡಿಯಲ್ಲಿನ ೩ನೆಯ ಪ್ರಕಟಣೆ ನಾಡಿನ ಪ್ರಖ್ಯಾತ ಚಿತ್ರಕಲಾವಿದ ಎಂ. ವಿ. ಮಿಣಜಿಗಿಯವರ ಜೀವನ ಮತ್ತು ಕಲಾ ಸಾಧನೆಗಳ ಕುರಿತಾದ ಪುಸ್ತಕ 'ಎಂ. ವಿ. ಮಿಣಜಿಗಿ' ಎಂಬ ಶೀರ್ಷಿಕೆಯದು. ಇದರ ಬಿಳಿಯ ಬಣ್ಣದ ಮುಖಪುಟ ಹಾಳೆಯ ಮೇಲೆ ಎಂ. ವಿ. ಮಿಣಜಿಗಿಯವರಿಂದಲೇ ರಚಿಸಲ್ಪಟ್ಟ ಜಲವರ್ಣ ಮಾಧ್ಯಮದ 'ಪಟಮಂಜರಿ' ಎಂಬ ಶೀರ್ಷಿಕೆಯ ಕೃತಿಯ ಛಾಯಾಚಿತ್ರವನ್ನು ಮುದ್ರಿಸಲಾಗಿದೆ. ನಲ್ಲನಿಗಾಗಿ ಕಾದು ಕಾದು ಬೇಸತ್ತ ತರಣಿಯೋರ್ವಳು, ತನ್ನ ನಲ್ಲನನ್ನು ಹುಡುಕುವುದಕ್ಕಾಗಿ ಮನೆಬಿಟ್ಟು ಹೊರಟಿದ್ದಾಳೆ.

ಇದೇ ಸಂದರ್ಭದಲ್ಲಿ ಆಗಸದಲ್ಲಿ ಧಾರಾಕಾರ ಮಳೆ ಸುರಿಸುವ ಕಾರ್ಮೋಡಗಳು ದಟ್ಟೈಸಿವೆ; ಆಕೆಯ ಸಖಿಯೋರ್ವಳು ಅವಳ ತೋಳನ್ನು ಹಿಡಿದೆಳೆಯುತ್ತ ಹೋಗಬೇಡೆಂದು ಮನೆಯೊಳಗೆ ಎಳೆದುಕೊಳ್ಳುತ್ತಿದ್ದಾಳೆ. 'ರಾಜಸ್ತಾನಿ ಚಿಕಣಿಚಿತ್ರ ಸಂಪ್ರದಾಯವನ್ನು'[೩] ಹೋಲುವ ಮಾದರಿಯಲ್ಲಿ (ಶೈಲಿಯ) ರಚಿತವಾದ ಚಿತ್ರವಿದು. ಪ್ರಸ್ತುತ ಚಿತ್ರದಲ್ಲಿ ಯಥೋಚಿತ ಭಾವಸ್ಫುರಣೆ, ವಸ್ತ್ರ, ಆಭರಣ, ಅಲಂಕಾರ ಇವುಗಳನ್ನು ಚಿತ್ರದಲ್ಲಿ ತೋರ್ಪಡಿಸಲಾಗಿದೆ. ಸೂಕ್ಷ್ಮತೆ/ಪಾರದರ್ಶಕ ನೋಟದ ಚಿತ್ರಣ, ಎಳೆಮೋಡಯುಕ್ತ ಕಾರ್ಮುಗಿಲ ಸಮರ್ಥ ಅಭಿವ್ಯಕ್ತಿ–ಹೀಗೆ ಈ ಕಲಾಕೃತಿ ಅನೇಕ ಕಲಾತ್ಮಕ ಅಂಶಗಳನ್ನು ತನ್ನಲ್ಲಿ ಅಳವಸಿಕೊಂಡಿರುವುದರಿಂದ ಮುಖಪುಟ ವಿನ್ಯಾಸದ ಸಲುವಾಗಿ ಇದು ಉತ್ತಮ ಆಯ್ಕೆ ಎನ್ನಬಹುದು. ಈ ರಕ್ಷಾಪುಟದಲ್ಲಿ ಚಿತ್ರದ ಮೇಲ್ಗಡೆ ಕೃತಿ ಶೀರ್ಷಿಕೆಯು ಕ್ಯಾಲಿಗ್ರಾಫಿಕ್ ಶೈಲಿಯ ಅಕ್ಷರ ಮಾದರಿಯಲ್ಲಿ ಮುಖಪುಟದ ಅಳತೆಗೆ (32 Font size) ಅನುಗುಣವಾಗಿ ಕಪ್ಪು ಬಣ್ಣ ಬಳಸಿ ಕನ್ನಡದಲ್ಲಿ ಬರೆಯಲ್ಪಟ್ಟಿದೆ.

---

೦೨. ಪಿ.ಆರ್ ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು-೧೭೦-೧೭೧

೦೩. Edith Tomory: A History of fine arts in India & the west page-257-276

ಈ ಚಿತ್ರದ ಕೆಳಗೆ ಅದೇ ಕಪ್ಪು ಬಣ್ಣದಿಂದ ಕನ್ನಡದಲ್ಲಿ ಕರ್ನಾಟಕ ಲಲಿತ ಕಲಾ ಅಕಾಡೆಮಿ ಎಂದು ನಮೂದಿಸಲಾಗಿದ್ದು ಆ ಪದಗಳೂ ಸಹ ಕ್ಯಾಲಿಗ್ರಾಫಿಕ್ ಶೈಲಿಯ ಅಕ್ಷರಗಳಿಂದ ಕೂಡಿವೆ.

### ೩.೩.೨. ವೈ.ಸುಬ್ರಹ್ಮಣ್ಯರಾಜು (೧೯೮೭)

ಕರ್ನಾಟಕ ಕಲಾವಿದರು ಮಾಲೆಯಲ್ಲಿ ೧೨ನೆಯ ಪ್ರಕಟಣೆಯಾಗಿ ಹೊರಹೊಮ್ಮಿದುದು, 'ವೈ.ಸುಬ್ರಹ್ಮಣ್ಯರಾಜು' ಎಂಬ ಪುಸ್ತಕ, ವೈ.ಸುಬ್ರಹ್ಮಣ್ಯರಾಜು ಎಂಬ ಚಿತ್ರಕಲಾವಿದರ ಜೀವನ ಮತ್ತು ಕಲಾಕೃತಿಗಳ ಕುರಿತಂತೆ ಈ ಪುಸ್ತಕವನ್ನು ಬರೆದವರು ಎಸ್.ಎನ್.ಚಂದ್ರಶೇಖರ್ ಎನ್ನುವವರು. ಇದು ಅಚ್ಚಾಗಿರುವುದು ೧೯೮೭ರಲ್ಲಿ ಶ್ರೀ ವೆಂಕಟೇಶ್ವರ ಆಫ್‌ಸೆಟ್ ಪ್ರಿಂಟರ್ಸ್ ಇವರಿಂದ. ವೈ. ಸುಬ್ರಹ್ಮಣ್ಯರಾಜುರವರ 'ದಸರಾ ಮೆರವಣಿಗೆ' ಎಂಬ ಶೀರ್ಷಿಕೆಯ ಭಿತ್ತಿಚಿತ್ರದ ಛಾಯಾಚಿತ್ರವನ್ನು ಈ ಕೃತಿಯ ಮುಖಪುಟಕ್ಕೆ ಅಚ್ಚಿಸಲಾಗಿದೆ. ಬಿಳಿಯ ಬಣ್ಣದ ಮುಖಪುಟ ಹಾಳೆಯ ಮೇಲ್ತುದಿಯಲ್ಲಿ ಕೃತಿ ಶೀರ್ಷಿಕೆ ಕನ್ನಡದಲ್ಲಿ ಕ್ಯಾಲಿಗ್ರಾಫಿಕ್ ಶೈಲಿಯ ಅಕ್ಷರಗಳಲ್ಲಿ ದಪ್ಪನಾಗಿ ಎದ್ದು ಕಾಣುವಂತೆ (೩೦ ಅಳತೆ Font size ಯಲ್ಲಿ) ಬರೆಯಲ್ಪಟ್ಟಿದೆ. ತಳಭಾಗದಲ್ಲಿ ಅದೇ ಶೈಲಿಯ ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಲಲಿತ ಕಲಾ ಅಕಾಡೆಮಿ ಎಂದು ನೋಡುಗರ ಗಮನಕ್ಕೆ ಸುಲಭವಾಗಿ ಬರುವಂತಹ ಅಳತೆಯಲ್ಲಿ (24 Font size) ಬರೆಯಲಾಗಿದೆ. ಈ ಎರಡೂ ಪದಪುಂಜಗಳ ನಡುವಿನ ವಿಶಾಲ ಅವಕಾಶದಲ್ಲಿ ಸುಬ್ರಹ್ಮಣ್ಯ ರಾಜುರವರ ಕಲಾಕೃತಿ ಛಾಯಾಚಿತ್ರ ಅಚ್ಚಿಸಲಾಗಿದೆ.

'ಇಲ್ಲಿನ ಕಲಾಕೃತಿಗಳಲ್ಲಿ ನಿರೂಪಿಸಿದ ಆಕೃತಿಗಳು ಚಿಕಣಿ ಚಿತ್ರಕಲಾ ಸಂಪ್ರದಾಯವನ್ನು ನೆನಪಿಸುತ್ತವೆ'[೪]. ಮೆರವಣಿಗೆಗಳಲ್ಲಿ ಅಲಂಕೃತಗೊಂಡ ಆನೆಯ ಮೇಲೆ ಮಹಾರಾಜರು ಅಂಬಾರಿಯಲ್ಲಿ ಕುಳಿತು ಮೆರವಣಿಗೆಗೆ ಹೊರಟಿದ್ದಾರೆ. ಅರಮನೆಯ ಬೇರೆ-ಬೇರೆ ವರ್ಗದ/ಸ್ತರದ ಅಧಿಕಾರಿ ಗಣ ಮೆರವಣಿಗೆಯಲ್ಲಿ ಸಾಗಿದೆ. ದ್ವಾರ ಕಮಾನಿನ ಅಲಂಕರಣಗಳಿವೆ, ಚಿತ್ರದ ಮೇಲೆ ಕೆಳಗೆ ಮೂಡಿಸಿದ ಹೂಬಳ್ಳಿಯ ಚೆಲವು ಸಮೂಹ ಸಂಯೋಜನಾ ಕ್ರಮ ಇವೆಲ್ಲ ಒಂದು ಸಾಂಪ್ರದಾಯಿಕ ಕ್ರಮದಲ್ಲಿ ಆಯೋಜನೆಗೊಂಡಿರುವುದು ಈ ಕಲಾಕೃತಿಯ ಮುಖ್ಯ ಅಂಶ. ಇಲ್ಲಿನ ಪ್ರತಿಯೊಂದು ಘಟಕದ ಚಿತ್ರಣದಲ್ಲಿ ಕಲಾವಿದರು ವಹಿಸಿದ ಆಸಕ್ತಿ, ತಾಳ್ಮೆ ಮತ್ತು ನಿರ್ವಹಣೆ ಇವೂ ಸಹ ಇಲ್ಲಿ ಎದ್ದು ಕಾಣುವ ಅಂಶಗಳು. ಹಿನ್ನೆಲೆಯಲ್ಲಿ ವಿದ್ಯುದ್ದೀಪಾಲಂಕೃತ ಅರಮನೆ ಮತ್ತು ಚಾಮುಂಡಿ ಬೆಟ್ಟ, ಬಣ್ಣ ಬಣ್ಣದ ಕಾಗದದ ಅಲಂಕರಣ, ಆಗಸದಿಂದ ದೇವದೂತರು ಪುಷ್ಪವೃಷ್ಟಿಗೈಯುತ್ತಿರುವುದು ಇವೆಲ್ಲ ಸಂಗತಿಗಳು ನಿರೂಪಿತವಾಗಿದ್ದು, ಕೃತಿಯಲ್ಲಿ ವಸ್ತು-ವ್ಯಕ್ತಿಗಳ ಸಂಯೋಜನೆ, ಹಿನ್ನೆಲೆ-ಮುನ್ನೆಲೆ ತೋರ್ಪಡಿಕೆಯಲ್ಲಿ ಯಥಾ ದರ್ಶನ ತತ್ವವನ್ನು ಉತ್ತಮವಾಗಿ ಅನುಸರಿಸಲಾಗಿದೆ. ಕುಸುರಿ ವಿನ್ಯಾಸ, ವಿವರವಾದ ನಿರೂಪಣೆಯಂತಹ ಜನಾಕರ್ಷಕ ಕಲಾತತ್ವ ಹೊಂದಿರುವ ಈ ಕಲಾಕೃತಿಯ ಛಾಯಾಚಿತ್ರದ ಅಳವಡಿಕೆಯನ್ನು ಈ ಕೃತಿಯ ಮುಖಪುಟಕ್ಕೆ ಮಾಡಿರುವುದರಿಂದ ಸಹಜವಾಗಿಯೇ ಮುಖಪುಟ ಜನಸಾಮಾನ್ಯ ಓದುಗರ ಗಮನಸೆಳೆಯುತ್ತದೆ.

---

೦೪. ಸಂದರ್ಶನ: ಡಾ. ಎಸ್. ಸಿ. ಪಾಟೀಲ (ಚಿತ್ರಕಲಾವಿದರು & ಪ್ರಾಧ್ಯಾಪಕರು, ಕ.ವಿ.ವಿ.,ಹಂಪಿ), ದಿ: ೨೦೧೬

### ೩.೩.೩. ಎಸ್. ಎನ್. ಸ್ವಾಮಿ (೧೯೮೯)

೧೯೮೯ರಲ್ಲಿ ಕರ್ನಾಟಕ ಕಲಾವಿದರ ಮಾಲೆ-೧೯ ಇದರಡಿಯಲ್ಲಿ ಎನ್. ಮರಿಶಾಮಾಚಾರ್‌ರವರು ಬರೆದ ಮತ್ತು ಚಿ.ಸು.ಕೃಷ್ಣಸೆಟ್ಟಿ ಇವರಿಂದ ವಿನ್ಯಾಸಗೊಳಿಸಲ್ಪಟ್ಟ 'ಎಸ್.ಎನ್.ಸ್ವಾಮಿ' ಎಂಬ ಕಿರುಪುಸ್ತಕ ಅಚ್ಚಾದುದು ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಪ್ರೈವೇಟ್ ಲಿಮಿಟೆಡ್ ಇವರಿಂದ.ಎಸ್.ಎನ್. ಸ್ವಾಮಿಯವರು ಬರೆದ ಮಹಾತ್ಮಾ ಗಾಂಧಿಯವರ ಭಾವಚಿತ್ರದ ಛಾಯಾಚಿತ್ರವನ್ನು ಮುಖಪುಟದಲ್ಲಿ ವಿನ್ಯಾಸಗೊಳಿಸಿ ಮುಖಪುಟ ರೂಪಿಸಲಾಗಿದೆ. 'ಬ್ರಿಟೀಷ್ ಮಾದರಿಯ (ಪಾಶ್ಚಾತ್ಯ ಮಾದರಿಯ) ನೈಜ ಶೈಲಿಯಲ್ಲಿ ರೂಪಿಸಲ್ಪಟ್ಟ'[೫] (ನಿರ್ಮಿತವಾದ) ಈ ಭಾವಚಿತ್ರದಲ್ಲಿ ಮಹಾತ್ಮರ ಮುಖಭಾವವನ್ನು ತುಂಬ ಮನೋಜ್ಞವಾಗಿ ಸೆರೆಹಿಡಿಯಲಾಗಿದೆ. ಎಸ್.ಎನ್.ಸ್ವಾಮಿಯವರ ಭಾವಚಿತ್ರ ರಚನಾ ಸಾಮರ್ಥ್ಯವನ್ನು, ನೈಜ ಕಲಾಸಿದ್ಧಿಯನ್ನು ಪರಿಚಯಿಸುವಂತಹ ಕೃತಿಯಾಗಿದ್ದು, ವಿನ್ಯಾಸಕಾರರು ಇಂತಹ ಉತ್ಕೃಷ್ಟ ಮಟ್ಟದ ಕಲಾಕೃತಿಯ ಭಾವಚಿತ್ರವನ್ನು ಮುಖಪುಟದಲ್ಲಿ ಸೊಗಸಾಗಿ ವಿನ್ಯಾಸಗೊಳಿಸಿರುವುದರಿಂದ ಮುಖಪುಟ ಚಿತ್ತಾಕರ್ಷಕವೆನಿಸಿದೆ, ಕಂದು ಹಳದಿ (Yellow ochre) ಬಣ್ಣದ ಮುಖಪುಟ ಹಾಳೆಯ ಸರಿಸುಮಾರು ಶೇ ೮೦ ರಷ್ಟು ಅವಕಾಶದಲ್ಲಿ ಅಳವಡಿಕೆಯಾಗಿರುವ ಈ ಭಾವಚಿತ್ರದ ಛಾಯಾಚಿತ್ರದ ಮೇಲ್ಭಾಗದಲ್ಲಿ ೧೮ ಗಾತ್ರ /ಅಳತೆಯ (Font size) ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಕಲಾವಿದರ ಮಾಲೆ-೧೯ ಎಂದು ಅಚ್ಚಿಸಿದ್ದು ಅದರ ಕೆಳಗಡೆ ಬಿಳಿಯ ಬಣ್ಣದ ಅವಕಾಶ ಪಟ್ಟಿಕೆಯಲ್ಲಿ ೩೦ ಅಳತೆಯ (Font size) ರೋಮನ್ ಮಾದರಿಯ ಕನ್ನಡ ಅಕ್ಷರಗಳಲ್ಲಿ (ದಟ್ಟ ಕಂದು ಬಣ್ಣದ) ಎಸ್.ಎನ್. ಸ್ವಾಮಿ ಎಂದು ನಮೂದಿಸಿದ್ದು, ಚಿತ್ರದ ಕೆಳಗಡೆ ದಟ್ಟಕಪ್ಪು ಬಣ್ಣದಲ್ಲಿ ೨೦ ಅಳತೆಯಲ್ಲಿ (Font size) ರೋಮನ್ ಶೈಲಿಯ ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಮುದ್ರಿಸಲಾಗಿದೆ.

### ೩.೪. ತೊಂಬತ್ತರ ದಶಕದಲ್ಲಿ ಮೂಡಿ ಬಂದ ಕನ್ನಡ ದೃಶ್ಯಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

### ೩.೪.೧. ಎ. ಸಿ. ಎಚ್. ಆಚಾರ್ಯ (೧೯೯೦)

ಕರ್ನಾಟಕ ಲಲಿತಕಲಾ ಅಕಾಡೆಮಿಯ ಕರ್ನಾಟಕ ಕಲಾವಿದರು ಮಾಲೆಯ ೨೩ನೆಯ ಪ್ರಕಟಣೆಯಾಗಿ ಹೊರಹೊಮ್ಮಿದುದು 'ಎ.ಸಿ.ಎಚ್ ಆಚಾರ್ಯ' ಎಂಬ ಹೆಸರಿನ ಕಿರುಪುಸ್ತಕ. ಇದನ್ನು ಬರೆದವರು ಬೆ.ಕಾ.ಮೂರ್ತೀಶ್ವರಯ್ಯ ಎನ್ನುವವರು. ಇದು ಪ್ರಥಮ ಮುದ್ರಣ ಕಂಡಿದ್ದು ೧೯೯೦ರಲ್ಲಿ ಬೆಂಗಳೂರಿನ ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ ಇವರಿಂದ. ತಿಳಿಹಳದಿ ಬಣ್ಣದ ಮುಖಪುಟ ಹಾಳೆಯ ಮೇಲೆ ಎ.ಸಿ.ಎಚ್. ಆಚಾರ್ಯರವರು ರಚಿಸಿದ ಕಲಾ ಮಾಧ್ಯಮದ 'ಭೂದೇವಿ' ಎಂಬ ಹೆಸರಿನ ಮೂರ್ತಿಶಿಲ್ಪದ ಛಾಯಾಚಿತ್ರವನ್ನು ಅಚ್ಚಿಸಿ, ಮುಖಪುಟವಿನ್ಯಾಸಗೊಳಿಸಲಾಗಿದೆ ಇದರ ಹಿಂಬದಿ ರಕ್ಷಾಪುಟವೂ ಸಹ ತಿಳಿಹಳದಿಬಣ್ಣದಲ್ಲಿದ್ದು, ಅದರ ಕೆಳಗಡೆಯ ಅವಕಾಶದಲ್ಲಿ ಪ್ರಸ್ತುತ ಪುಸ್ತಕದಲ್ಲಿ ಬರೆಯಲಾದ ಬರಹದ ಒಂದು ಪುಟ್ಟ ಪ್ಯಾರಾ ಮುದ್ರಿಸಿರುವುದು ಗಮನಿಸತಕ್ಕ ಅಂಶವಾಗಿದೆ.

---

೦೫ ಪಿ.ಆರ್ ತಿಪ್ಪೇಸ್ವಾಮಿ (ಪ್ರ.ಸಂ.) : ಕಲಾಕೋಶ, ಪು-೨೦೮-೨೧೯

ಈ ಕೃತಿಯ ಮುಖಪುಟಕ್ಕೆ ವಿನ್ಯಾಸಗೊಳಿಸಿರುವ ಭೂದೇವಿ ಕಲಾಕೃತಿಯ ಛಾಯಾಚಿತ್ರದಲ್ಲಿ 'ಚೋಳ ಸಂಪ್ರದಾಯಬದ್ಧ ಶೈಲಿಯಲ್ಲಿರುವ'[೬] ಭೂದೇವಿ ಬಲಗೈಯಲ್ಲಿ ಕಮಲದ ಮೊಗ್ಗನ್ನು ಹಿಡಿದಿದ್ದು ಆಕೆಯ ಎಡಗೈ ಕೆಳಕ್ಕೆ ಇಳಿಬಿಟ್ಟಿದ್ದು ಕಮಲ ಪುಷ್ಪಲತೆಯನ್ನು ಸ್ಪರ್ಶಿಸಿದೆ. ಇದರ ಛಾಯಾಚಿತ್ರ ಮುಖಪುಟದಲ್ಲಿ ಎದ್ದು ಕಾಣುತ್ತದೆ. ಶಿಲ್ಪದಲ್ಲಿ ಅಡಕಗೊಂಡಿರುವ ಕೋಮಲತ್ವ, ಸೌಂದರ್ಯಪ್ರಜ್ಞೆ, ಸಾಂಪ್ರದಾಯಿಕತೆ, ಬಾಗು, ಬಳುಕು ವಿನ್ಯಾಸ, ಮುಖದಲ್ಲಿ ಕಂಡರಿಸಿದ ಮಾತೃಭಾವ ಈ ಎಲ್ಲ ಸುಲಕ್ಷಣಗಳಿಂದಾಗಿ ಚಿತ್ರ ಈ ಪುಸ್ತಕದ ಮುಖಪುಟದತ್ತ ಗಮನಹರಿಸಿದ ಕಲಾ ರಸಿಕರ ಮನವನ್ನು ಸೆಳೆಯುತ್ತದೆ. ಇಲ್ಲಿನ ಛಾಯಾಚಿತ್ರದ ಮೇಲ್ಭಾಗದಲ್ಲಿ ಪುಟ್ಟದಾದರೂ ಸ್ಪಷ್ಟವಾಗಿ ಗಮನಸೆಳೆಯತಕ್ಕಂತಹ ಕನ್ನಡ ಅಕ್ಷರಗಳಲ್ಲಿ ಕಲಾವಿದರ ಮಾಲೆ ೨೩ ಎಂದು ನಮೂದಿಸಿದ್ದು (ಆ ಅಕ್ಷರಗಳು ಸಾಮಾನ್ಯ ಶೈಲಿಹೊಂದಿವೆ ಮತ್ತು ೧೨ ಅಳತೆ (Font size) ಯವು) ಅದರ ಕೆಳಗಡೆ ಬಿಳಿಯ ಪಟ್ಟಿಕೆಯಂತಹ ಆವರಣದಲ್ಲಿ ಕಡುಕಪ್ಪು ಬಣ್ಣದಲ್ಲಿ ಕನ್ನಡ ಭಾಷೆಯಲ್ಲಿ ಎ.ಸಿ.ಎಚ್. ಆಚಾರ್ಯ ಎಂದು ಆ ಪುಸ್ತಕದ ಗಾತ್ರಕ್ಕೆ ಒಪ್ಪುವಂತಹ ಅಳತೆಯಲ್ಲಿ (26 Font size) ರೋಮನ್ ಸಾಮಾನ್ಯ ಮಾದರಿಯ ಅಕ್ಷರಗಳ ಮೂಲಕ ಬರೆಯಲಾಗಿದೆ. ಛಾಯಾಚಿತ್ರದ ಕೆಳಗಡೆ ತುಸು ಚಿಕ್ಕದಾದರೂ ಅತ್ಯಂತ ಸ್ಪಷ್ಟವಾಗಿ ಕಡುಕಪ್ಪುಬಣ್ಣದಲ್ಲಿಯೇ ಗಮನ ಕೇಂದ್ರೀಕರಿಸಬಲ್ಲ ಅಥವ ನೋಡುಗರ ಸಹಜ ಗಮನಸೆಳೆಯಬಲ್ಲ ಸಾಮಾನ್ಯ ಶೈಲಿ ವಿನ್ಯಾಸದ ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ನಮೂದಿಸಲಾಗಿದೆ.

**೩.೪.೨. ರುಮಾಲೆ ಚನ್ನಬಸವಯ್ಯ (೧೯೯೨)** 

ಕೆ.ಎಸ್. ಶ್ರೀನಿವಾಸ ಮೂರ್ತಿಯವರು ಬರೆದ ಬೃಂದಾವನ ಮುದ್ರಣದಿಂದ ೧೯೯೨ರಲ್ಲಿ ಅಚ್ಚಾಗಿರುವ 'ರುಮಾಲೆ ಚನ್ನಬಸವಯ್ಯ' ಕೃತಿಯ ಮುಖಪುಟ ೧೮ ಸೆ.ಮೀ ಉದ್ದ ಮತ್ತು ೧೨ ಸೆ.ಮೀ ಅಗಲ ಅಳತೆಯದು. ರುಮಾಲೆ ಚನ್ನಬಸವಯ್ಯನವರ 'ವರ್ಣಮೈತ್ರಿ' ಶೀರ್ಷಿಕೆಯ ಭಾವಮುದ್ರಾಪಂಥ (Impressionism) ಅಭಿವ್ಯಕ್ತಿ ಲಕ್ಷಣಗಳಿಗನುಗುಣವಾದ ಒಂದು ಕಲಾಕೃತಿಯನ್ನು ಅಚ್ಚಿಸಿ, ಮುಖಪುಟ ವಿನ್ಯಾಸಗೊಳಿಸಲಾಗಿದೆ.

'೧೯ನೆಯ ಶತಮಾನದ ಆದಿಭಾಗದಲ್ಲಿ ಫ್ರಾನ್ಸಿನಲ್ಲಿ ಪ್ರಾರಂಭವಾದ ಈ ಪಂಥದಲ್ಲಿ ಚಿತ್ರ ಬರೆಯುವ ರೀತಿ ಬೇರೆಯಾಯಿತು. ಒಂದು ವಸ್ತುವನ್ನು ನೋಡಿದಾಗ ಮನಸ್ಸಿನಲ್ಲಿ ಆಗುವ ಅನುಭವವನ್ನು ಚಿತ್ರಿಸುವುದು, ಮನಸ್ಸಿನಲ್ಲಾದ ಪರಿಣಾಮ ಹಾಗೂ ದೃಷ್ಟಿ ಕೇಂದ್ರವನ್ನು ಬದಲಾಯಿಸುತ್ತ ಹೋದಂತೆ ಬೇರೆ ಬೇರೆ ಅಂಶಗಳು ಕಂಡು, ಎಲ್ಲವನ್ನು ಒಟ್ಟಿಗೆ ಗ್ರಹಿಸಲು ಅನುಕೂಲವಾಗುವಂತೆ ವಿವರಗಳನ್ನು ಚಿತ್ರಿಸುವುದು, ಬಣ್ಣಗಳನ್ನು ಬಳಸುವ ವಿಧಾನದಲ್ಲೂ ವ್ಯತ್ಯಾಸವಾಗಿ ಕಲಾವಿದರಿಗೆ ಮನಸೆಳೆದ ವಸ್ತುವು ಚಿತ್ರಕ್ಕೆ ಸಮ್ಮತ ವಸ್ತುವಾಗಿ ದೈನಂದಿನ ಜೀವನದ ವಿಷಯಗಳೆಲ್ಲವೂ ಮುಖ್ಯವಾಯಿತು.'[೭] ತಿಳಿಬೂದು ಬಣ್ಣದ ಮುಖಪುಟ

---

೦೬. ಡಾ. ಜಿ.ಜ್ಞಾನಾನಂದ: ಶಿಲ್ಪಾದರ್ಶನ, ಪು-೧೮೬-೧೯೪

೦೭. ಪಿ. ಆರ್. ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು-೩೬

ಹಾಳೆಯ ಮೇಲೆ ಈ ಕಲಾವಿದರ ಕಲಾಕೃತಿ ಅಚ್ಚಿಸಲ್ಪಟ್ಟಿದ್ದು ಕಲಾವಿದರು ಕೃತಿಯಲ್ಲಿ ಪಟ್ಟಕೇಸರಿ, ದಟ್ಟಕಪ್ಪು, ದಟ್ಟಬಿಳಿ ಬಣ್ಣಗಳ ಜೊತೆ ಹದಬರಿತ ವರ್ಣಸಾಂಗತ್ಯ ಏರ್ಪಡಿಸಿರುವುದರ ಜೊತೆಗೆ ದಟ್ಟ ಕೇಸರಿ ಬಣ್ಣವುಳ್ಳ ಎಲೆಗಳನ್ನು ಎದ್ದು ಕಾಣುವಂತೆ ತೋರ್ಪಡಿಸಿರುವುದಲ್ಲದೆ ಸುತ್ತೆಲ್ಲ ಗಾಢವಾದ ಕಪ್ಪು ಬಣ್ಣ ಲೇಪಿಸಿ ಮಾಧ್ಯಮದ ತುಂಬೆಲ್ಲ ಬಿಳಿಬಣ್ಣದ ಎಲೆ ಬಳ್ಳಿಗಳನ್ನು ಹರಿದಾಡಿಸಿರುವುದರಿಂದ ಕಲಾಕೃತಿ ಮುಖಪುಟದಲ್ಲೇ ಎದ್ದು ಕಾಣುತ್ತಿದೆ.

ಇದರ ಮುಖಪುಟದ ಮೇಲಿನ ಮೂಲೆಯಲ್ಲೂ ಪುಟ್ಟ ಕನ್ನಡ ಅಕ್ಷರಗಳಲ್ಲಿ 'ಕರ್ನಾಟಕ ಕಲಾವಿದರ ಮಾಲೆ' ಎಂದು ಬರೆದಿದ್ದು ಅದರ ಕೆಳಗಡೆ ಬಿಳಿಯ ಪಟ್ಟಿಕೆಯಲ್ಲಿ ದಟ್ಟ ಆಕಾಶನೀಲಿ ಬಣ್ಣದಲ್ಲಿ ಸ್ಪಷ್ಟವಾಗಿ ಓದುಗರ ಗಮನ ಹರಿಯುವಂತೆ ದೊಡ್ಡದಾಗಿ ಕನ್ನಡ ಅಕ್ಷರಗಳಲ್ಲಿ ರುಮಾಲೆ ಚೆನ್ನಬಸವಯ್ಯ ಎಂದು ಬರೆದಿದೆ. ಮುಖಪುಟದ ತಳಭಾಗದಲ್ಲಿ ಕಪ್ಪು ಬಣ್ಣದಲ್ಲಿ ಪುಟ್ಟ ಆದರೆ ಸರಾಗವಾಗಿ ಲಕ್ಷ್ಯ ಸೆಳೆಯಬಲ್ಲ ಗಾತ್ರದ ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ನಮೂದಿಸಿಲಾಗಿದೆ. ಒಟ್ಟಿನಲ್ಲಿ ಈ ಮುಖಪುಟದಲ್ಲಿ ಮೂರು ರೀತಿಯ ಗಾತ್ರದ/ನಮೂನೆಯ ಅಕ್ಷರ ಮಾದರಿಗಳಿವೆ. ಅವುಗಳೆಂದರೆ ಕರ್ನಾಟಕ ಕಲಾವಿದರ ಮಾಲೆ ಎಂಬ ಪದ ಸಮೂಹಗಳ ಅಕ್ಷರ ಗಾತ್ರ ೧೦ (Font size) ಮತ್ತು ರುಮಾಲೆ ಚೆನ್ನಬಸವಯ್ಯ ಎಂಬ ಪದಗಳು ರೋಮನ್ ಶೈಲಿಯಲ್ಲಿವೆ. ಗಾತ್ರ ೨೮ (Font size) ಕರ್ನಾಟಕ ಲಲಿತಕಲಾ ಅಕಾಡೆಮಿ ಎಂಬ ಅಕ್ಷರ ಸಮೂಹಗಳು ೧೬ ಅಳತೆ (Font size) ಮಾದರಿಯದು.

**೩.೪.೩. ಪಾವಂಜೆ ಗೋಪಾಲಕೃಷ್ಣಯ್ಯ (೧೯೯೪)**

೧೯೯೪ರಲ್ಲಿ ಲಾವಣ್ಯ ಮುದ್ರಣ ಇವರಿಂದ ಅಚ್ಚಾದ 'ಪಾವಂಜೆ ಗೋಪಾಲಕೃಷ್ಣಯ್ಯ' ಎಂಬ ಕಿರುಪುಸ್ತಕದ ಲೇಖಕರು ಬಾ.ನಾ.ಶಾಂತಪ್ರಿಯ ಎನ್ನುವವರು ಪಾವಂಜೆ ಗೋಪಾಲ ಕೃಷ್ಣಯ್ಯರವರೇ ರಚಿಸಿದ ಜಲವರ್ಣ ಮಾಧ್ಯಮದ 'ಶಂಕರಾಚಾರ್ಯರು ಮತ್ತು ಶಿಷ್ಯರು' ಎಂಬ ಶೀರ್ಷಿಕೆಯ ಕೃತಿಯ ಛಾಯಾಚಿತ್ರವನ್ನೆ ಮುಖಪುಟದಲ್ಲಿ ಅಚ್ಚಿಸಿ ವಿನ್ಯಾಸಗೊಳಿಸಲಾಗಿದೆ. ನೀಲಿ ಬಣ್ಣದ ಅವಕಾಶದಲ್ಲಿ ಈ ಚಿತ್ರ ಮುದ್ರಿಸಲ್ಪಟ್ಟಿದ್ದು ಚಿತ್ರದ ಅಂಚುಗಳು ದಪ್ಪನಾದ ಅಂಚುರೇಖೆಗಳಿಂದ ಆವೃತವಾಗಿರುವುದರಿಂದ ಚಿತ್ರಕ್ಕೆ ಮತ್ತು ಮುಖಪುಟಕ್ಕೆ ಮೆರುಗು ಬಂದಿದೆ. ಯತಿಗಳು ರಾಜನಿಂದ ಅರಮನೆಯಲ್ಲಿ ಪೂಜೆ ಸ್ವೀಕರಿಸುತ್ತಿರುವ ದೃಶ್ಯವಿದು. ಮಧ್ಯದಲ್ಲಿ ಆಚಾರ್ಯರು ಸಿಂಹಾಸನದ ಮೇಲೆ ಕುಳಿತು ಎಡಗೈ ಹಸ್ತ ಮೇಲೆತ್ತಿ ಬಲಗೈಯಲ್ಲಿ ಬ್ರಾಹ್ಮಣನೊಬ್ಬನಿಗೆ ಪ್ರಸಾದ ನೀಡುತ್ತಿದ್ದಾರೆ. ಅವರ ಆಚೀಚೆ ಚಾಮರ ಸೇವಕರು ಚಾಮರ ಬೀಸುತ್ತಿದ್ದು, ರಾಜ ಅವನ ಮಂತ್ರಿ, ರಾಜ ಪುರೋಹಿತ ವರ್ಗ ಕೈ ಮುಗಿದು ವಿನೀತಭಾವದಿಂದ ನಿಂತಿದೆ. ಆಚಾರ್ಯರು ಕುಳಿತ ಸಿಂಹಾಸನದ ಎದುರಿಗೆ ಅಗ್ನಿಕುಂಡವೂ ಇದ್ದು ನಾಗಗಳು ಕಾಣಿಸಿಕೊಂಡಿವೆ. ಆಕೃತಿಗಳು ಶೈಲಿಯ ದೃಷ್ಟಿಯಿಂದ ನೈಜ. ಇಲ್ಲಿನ ಗುಂಪಿನ / ಸಮೂಹದ ಪ್ರತಿಯೊಂದು ಆಕೃತಿಯನ್ನು ಲಕ್ಷ್ಯವಹಿಸಿ ನಿರೂಪಿಸಲಾಗಿದೆ. ರಾಜಸಭಾಂಗಣದ ಸ್ಪಷ್ಟಕಲ್ಪನೆ ಮೂಡುವಂತೆ ಒಟ್ಟಾರೆ ಸಂಯೋಜನೆ ರೂಪಿತವಾಗಿದ್ದು ಹಿನ್ನೆಲೆ ಮುನ್ನೆಲೆಗಳ ಚಿತ್ರಣ, ವರ್ಣಲೇಪನದಲ್ಲಿ ಸಮತೋಲನ, ಆಕೃತಿ ಸ್ವರೂಪಗಳಲ್ಲಿ

(ಲಕ್ಷಣಗಳಲ್ಲಿ) ವೈವಿಧ್ಯತೆ, ಯಥಾದರ್ಶನ ತತ್ವದ ಅನುಸರಣೆ ಈ ಎಲ್ಲ ರೀತಿಯ ಕಲಾಮೌಲ್ಯಗಳೂ ಇಲ್ಲಿ ಮನೋಜ್ಞವಾಗಿ ಸಮೀಕರಣಗೊಂಡಿವೆ.

ಕೃತಿಯ ಹಿನ್ನೆಲೆಯಲ್ಲಿ ಕಮಾನುಗಳ, ಕಂಬಗಳ ಅಲಂಕರಣ ಮುನ್ನೆಲೆಯಲ್ಲಿ ನೆಲದ ಅಲಂಕೃತ ವಿನ್ಯಾಸದ ತೋರ್ಪಡಿಕೆ ಇವೆಲ್ಲವೂ ವಿವರಪೂರ್ಣವಾಗಿ ಚಿತ್ರಿಸಲ್ಪಟ್ಟಿದ್ದು; ಅಲ್ಲಿ ಚಿತ್ರಿಸಿರುವ ಪ್ರತಿಯೊಂದು ವ್ಯಕ್ತಿಯ ಮುಖದಲ್ಲೂ ಸೂಕ್ತ ರೀತಿಯ ಭಾವ ನಿರೂಪಣೆ ಮಾಡಿರುವುದು ಕಂಡು ಬರುತ್ತದೆ. ಸುವರ್ಣ ಬಣ್ಣವೇ ಈ ಒಟ್ಟಾರೆ ಕೃತಿಯಲ್ಲಿ ಪ್ರಧಾನ ಬಣ್ಣವಾಗಿ ತೋರಿಬರುತ್ತದೆ. ಹಾಗಾಗಿ ದಟ್ಟ ನೀಲಿಬಣ್ಣದಿಂದ ಕೂಡಿರುವ ಮುಖಪುಟ ಕಾಗದದ ಮೇಲೆ ದಪ್ಪನಾದ ಅಚ್ಚ ಬಿಳಿಬಣ್ಣದ ಅಂಚನ್ನು ಹೊಂದಿರುವ ಈ ಕೃತಿ ಎದ್ದು ಕಾಣುತ್ತದೆ, ಗಮನ ಸೆಳೆಯುತ್ತದೆ. ತನ್ಮೂಲಕ ಮುಖಪುಟವನ್ನು ಸುಂದರವನ್ನಾಗಿ ಮಾಡಿದೆ. ಈ ಚಿತ್ರದ ಮೇಲ್ಭಾಗದಲ್ಲಿ ಅಚ್ಚಬಿಳಿಬಣ್ಣದಲ್ಲಿ ಕಣ್ನೋಟಕ್ಕೆ ಹಿತಕರವೆನಿಸುವಂತಹ ಗಾತ್ರದ ಅಕ್ಷರಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಕೃತಿ ಶೀರ್ಷಿಕೆ ನಮೂದಿಸಿದ್ದು, ಅದರ ಕನ್ನಡ,ಇಂಗ್ಲಿಷ್ ಅಕ್ಷರ ರೋಮನ್ ಮಾದರಿಯಲ್ಲಿವೆ. ಚಿತ್ರದ ಕೆಳಗಡೆ ಅಚ್ಚ ಬಿಳಿಬಣ್ಣದಲ್ಲಿಯೇ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಕನ್ನಡ ಮತ್ತು ಇಂಗ್ಲಿಷ್ ಅಕ್ಷರಗಳಲ್ಲಿ ನಮೂದಿಸಿದ್ದು, ಅದರ ಕನ್ನಡ ಅಕ್ಷರಗಳ ವಿನ್ಯಾಸ ಮತ್ತು ಇಂಗ್ಲಿಷ್ ಅಕ್ಷರ ವಿನ್ಯಾಸ ರೋಮನ್ ಬಗೆಯದು ಈ ಕೃತಿಯ ಮುಖಪುಟದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಲೋಗೊ (ಚಿನ್ಹೆ) ಮುದ್ರಿಸಿಲ್ಲ.

**೩.೪.೪. ಎಸ್. ನಂಜುಡಸ್ವಾಮಿ (೧೯೯೪)**

ಎಸ್.ನಂಜುಂಡಸ್ವಾಮಿ (೧೯೯೪) ಎಂಬ ಪುಸ್ತಕದ ಮುಖಪುಟದಲ್ಲಿ ಅವರೇ ರಚಿಸಿದ ಜಲವರ್ಣ ಮಾಧ್ಯಮದ ವ್ಯಕ್ತಿಚಿತ್ರದ ಛಾಯಾಚಿತ್ರವನ್ನು ವಿನ್ಯಾಸ ಮಾಡಲಾಗಿದೆ. ಮೇಲ್ತುದಿಯಲ್ಲಿ ಪುಸ್ತಕದ ಶೀರ್ಷಿಕೆ ಮತ್ತು ತಳಭಾಗದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಉಲ್ಲೇಖ ಇವಿಷ್ಟು ಪದಗಳನ್ನು ಹೊಂದಿರುವ ಈ ಕೃತಿಯ ಮುಖಪುಟದ ಉಳಿದೆಲ್ಲ ಭಾಗಗಳಲ್ಲೂ ಈ ಕಲಾಕೃತಿಯ ಛಾಯಾಚಿತ್ರ ಅಚ್ಚಿಸಲ್ಪಟ್ಟಿದೆ. ಬ್ರಿಟಿಷ್ ಮಾದರಿ ನೈಜ ಶೈಲಿಯಲ್ಲಿ ರಚಿತವಾದ ಮಹಿಳೆಯೊಬ್ಬಳ ಈ ವ್ಯಕ್ತಿಚಿತ್ರ ಕಲಾಮೌಲ್ಯಗಳ ದೃಷ್ಟಿಯಿಂದ ಅತ್ಯಂತ ಶ್ರೇಷ್ಠ ಮಟ್ಟದಲ್ಲಿ ನಿಲ್ಲುತ್ತದೆ. ಮಹಿಳಾ ರೂಪದರ್ಶಿಯ ಮುಖದಲ್ಲಿನ ಮುಗ್ಧತೆ, ಕೋಮಲತೆ, ಮೈಬಣ್ಣದ ಸಹಜ ಅಭಿವ್ಯಕ್ತಿ, ಸೂಕ್ತ ರೀತಿಯಲ್ಲಿ ತೋರ್ಪಡಿಕೆಯಾದ ಸೀರೆಯ ಛಾಯಾಕರಣ ಅತಿ ರಭಸವೆನಿಸದ ಹಾಗೂ ಕ್ಯಾಲೆಂಡರ್ ಕಲೆಯಂತೆಯೇ ಅತಿ ನವಿರಾದ ನಿರೂಪಣೆಯೆನಿಸಿದ ಮಧ್ಯಮಗತಿಯ ಲಯಯುಕ್ತ ಕುಂಚ ಬೀಸುಗಳು, ರೂಪದರ್ಶಿಯನ್ನು ತಿಳಿ ವರ್ಣಗಾರಿಕೆಯಲ್ಲಿ ನಿರ್ವಹಿಸಿ, ಹಿನ್ನೆಲೆಯಲ್ಲಿ, ದಟ್ಟಕಪ್ಪು ಮಿಶ್ರಿತ ಬೂದುಬಣ್ಣದಲ್ಲಿ ನಿರ್ವಹಿಸಿದ್ದರಿಂದ ಮುನ್ನೆಲೆಯಲ್ಲಿನ ರೂಪದರ್ಶಿಯ ವ್ಯಕ್ತಿಚಿತ್ರ ಸ್ಫುಟವಾಗಿ ಎದ್ದು ಕಾಣುತ್ತದೆ. ಅಲ್ಲದೆ ಮಾಧ್ಯಮದಲ್ಲಿ ಮಾಡಿಕೊಂಡ ಅವಕಾಶ ವಿಂಗಡಣೆಯು ಸಹ ತುಂಬ ಹಿತಕರ ನೋಟಕ್ಕೆ ಪೂರಕವಾಗಿ ಪರಿಣಮಿಸಿರುವುದೂ ಸಹ ಗಮನಿಸತಕ್ಕ ಅಂಶ.

ಹೀಗೆ ಕಲಾತ್ಮಕ ಔನ್ನತ್ಯದಲ್ಲಿರುವ ಈ ಕಲಾ ಕೃತಿಯನ್ನು ಮುಖಪುಟಕ್ಕೆ ಬಳಸಿರುವುದರಿಂದ

ಮತ್ತು ತಿಳಿಗಂದು ಬಣ್ಣದ ಕಾಗದ ಮುಖಪುಟಕ್ಕೆ ಬಳಕೆಯಾಗಿರುವುದರಿಂದ ಕೃತಿಯ ಬಣ್ಣಗಾರಿಕೆ ಮತ್ತು ಮುಖಪುಟದ ಹಾಳೆಯ ಬಣ್ಣಗಾರಿಕೆಯ ನಡುವೆ ಒಂದು ಅನನ್ಯಸಾಹಚರ್ಯ, ಸಮತೋಲನ ಏರ್ಪಟ್ಟಿದೆ ಎನ್ನಬಹುದು. ಮುಖಪುಟದ ಅಗ್ರಭಾಗದಲ್ಲಿ (ಮೇಲ್ತುದಿ) ಸ್ಪಷ್ಟವಾಗಿ ಓದುಗರ ಕಣ್ಣಿಗೆ ಕಾಣುವಂತೆ ಕನ್ನಡ ಮತ್ತು ಇಂಗ್ಲಿಷ್‌ನಲ್ಲೂ ಎಸ್.ನಂಜುಂಡಸ್ವಾಮಿ ಎಂದು ಬರೆದಿದ್ದು ಅದರ ಕನ್ನಡ ಅಕ್ಷರ ವಿನ್ಯಾಸ ರೋಮನ್ ಹಾಗೂ ಇಂಗ್ಲಿಷ್ ಅಕ್ಷರಗಳು ಗೋಥಿಕ್ (ಶೈಲಿ) ಮಾದರಿಯಲ್ಲಿದೆ.

ಕೆಳಭಾಗದಲ್ಲಿ/ತಳಭಾಗದಲ್ಲಿ ಕೃತಿ ಶೀರ್ಷಿಕೆಯ ಅಕ್ಷರಗಳಿಗಿಂತ ಚಿಕ್ಕದಾದರೂ ಸ್ಪಷ್ಟವಾಗಿ ಕಾಣಬಲ್ಲಂತಹ/ಓದಬಲ್ಲಂತಹ ಗಾತ್ರದ ಕನ್ನಡ ಮತ್ತು ಇಂಗ್ಲಿಷ್ ಅಕ್ಷರ ಮಾದರಿಗಳನ್ನು ಬಳಸಿದ್ದು ಅವುಗಳು ಸಹ ರೋಮನ್, ಗೋಥಿಕ್ ಶೈಲಿಯ ಮಾದರಿಯವುಗಳು. ಮುಖಪುಟ ಹಾಳೆಯ ಅಳತೆ ೧೮x೧೨ ಸೆ.ಮಿ ಈ ಪುಸ್ತಕದ ಲೇಖಕರು ಪಿ. ಆರ್. ತಿಪ್ಪೇಸ್ವಾಮಿ ಮತ್ತು ಮುದ್ರಕರು ಬೃಂದಾವನ ಮುದ್ರಣ.

**೩.೪.೫. ಪಿ. ಸುಬ್ಬರಾವ್ (೧೯೯೪)**

'ಪಿ.ಸುಬ್ಬರಾವ್' ಪುಸ್ತಕ ೧೯೯೪ರಲ್ಲಿ ಎಂ.ಎಸ್.ನಂಜುಂಡರಾವ್ ರವರಿಂದ ರಚಿಸಲ್ಪಟ್ಟ ಮಯೂರ ಪ್ರಿಂಟ್ಸ್ ಆ್ಯಡ್ಸ್ ಇವರಿಂದ ಮುದ್ರಣಗೊಂಡಿದ್ದು. ಪಿ.ಸುಬ್ಬರಾವ್‌ರವರ ಕಲಾಕೃತಿ 'ನಾಗಾಲೋಟ' (ತೈಲವರ್ಣ ಮಾಧ್ಯಮ) ಇದರ ಛಾಯಾಚಿತ್ರವನ್ನೇ ಮುಖಪುಟಕ್ಕೆ ಬಳಸಿಕೊಂಡು ವಿನ್ಯಾಸಗೊಳಿಸಲಾಗಿದೆ. ಇದು ನವ್ಯ ಶೈಲಿಯ ಕಲಾಕೃತಿ 'ಭಾವಮುದ್ರಾಪಂಥ'[೮] (impressionism)ದ ಲಕ್ಷಣಗಳಿಂದೊಡಗೂಡಿದ ಈ ಕೃತಿಯಲ್ಲಿ ನಿಸರ್ಗದ ಮಧ್ಯೆ ಹಳ್ಳಿಯ ರೈತನೊಬ್ಬ ಬಲಶಾಲಿ ಎತ್ತುಗಳನ್ನು ಕಟ್ಟಿದ ಬಂಡಿಯ ಮೇಲೆ ನಿಂತು ಅತ್ಯಂತ ತುರುಸಿನಿಂದ ಬಂಡಿಯನ್ನು ಓಡಿಸುತ್ತಿರುವ ದೃಶ್ಯವಿದೆ. ಹಿನ್ನೆಲೆಯಲ್ಲಿ ಮಸುಕಾಗಿರುವ ಹಸಿರಿನಿಂದ ಕೂಡಿರುವ ವನವಿದೆ.

ಚಿತ್ರದ ಮುಂಭಾಗದಲ್ಲಿ ಬೆಳೆದು ನಿಂತಿರುವ ಮರಗಳು ಇದ್ದು, ತರ ತರದ (ಬಗೆಬಗೆಯ ಹಸಿರು ಬಣ್ಣಗಳ ಲೇಪನದ ಮೂಲಕ ದಟ್ಟಹಸಿರು, ಕಂದುಹಸಿರು, ಮಂದಹಸಿರು ಹೀಗೆ) ಒಟ್ಟಾರೆ ಕೃತಿಯ ಗರಿಷ್ಠ ಭಾಗ ಪೂರ್ತಿಗೊಂಡಿದ್ದು ಸರಳವಾದ ಆಕಾರ ಮತ್ತು ವಿನ್ಯಾಸದಿಂದ ಕೂಡಿರುವ ಬಿಳಿಯ ಬಣ್ಣದ ಚಕ್ಕಡಿ ಗಾಡಿ (ಬಂಡಿ) ಪರಿಸರದ ಮಧ್ಯೆ ಚಿತ್ರಸಲ್ಪಟ್ಟು ವೈವಿಧ್ಯಮಯ ಹಸಿರುಬಣ್ಣಗಳ ನಡುವೆ ಎದ್ದು ಕಾಣುತ್ತದೆ. ಇಲ್ಲಿ ಒಟ್ಟು ಕೃತಿನಿರ್ವಹಣೆ ಬಣ್ಣಲೇಪನ ಆಕಾರ ನಿರೂಪಣೆ, ಸಂಯೋಜನಾ ವೈಖರಿ ಇವೆಲ್ಲಾ ನವ್ಯದ ಶೈಲಿಯಲ್ಲಿವೆ ಹಳದಿಬಣ್ಣದ ಮುಖಪುಟ ಹಾಳೆಯ ಮೇಲೆ ಬಿಳಿಯ ಚೌಕಟ್ಟು ರೇಖೆಗಳನ್ನು ಹೊಂದಿ ವಿನ್ಯಾಸಗೊಂಡಿರುವ ಈ ಚಿತ್ರಕ್ಕೂ ಮುಖಪುಟ ಬಣ್ಣಕ್ಕೂ ಮತ್ತು ಅಳತೆಗೂ ಅನೂಚಾನ ಸಾಂಗತ್ಯ ಏರ್ಪಟ್ಟಿದ್ದು, ಚಿತ್ರದ ಮೇಲ್ಭಾಗದಲ್ಲಿ ಕಡುನೀಲಿಬಣ್ಣದಲ್ಲಿ ಎದ್ದು ಕಾಣುವಂತೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಕೃತಿಶೀರ್ಷಿಕೆ ಅಚ್ಚಿಸಿದ್ದು ಅವು ರೋಮನ್‌ಶೈಲಿಯ/ ವಿನ್ಯಾಸದ ಅಕ್ಷರಗಳಲ್ಲಿವೆ

---

೦೮. ಡಾ. ಅ.ಲ. ನರಸಿಂಹನ್: ಆಲೇಖ್ಯ ಪು-೫೩-೫೮

ಚಿತ್ರದ ಕೆಳಭಾಗದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಕಡು ನೀಲಿಬಣ್ಣದ ಪುಟ್ಟ ಅಕ್ಷರಗಳಲ್ಲಿ ಕರ್ನಾಟಕ ಲಲಿತ ಕಲಾ ಅಕಾಡೆಮಿ ಎಂದು ನಮೂದಿಸಲಾಗಿದ್ದು ಅವುಗಳು ಕ್ರಮವಾಗಿ ರೋಮನ್, ಗೋಥಿಕ್ ಮಾದರಿ ಅಕ್ಷರ ವಿನ್ಯಾಸ ಹೊಂದಿವೆ. ಈ ಮುಖಪುಟದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆ ಎಲ್ಲಿಯೂ ಮುದ್ರಿಸಿಲ್ಲ.

### ೩.೪.೬. ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ (೧೯೬೪)

'ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ' ಎಂಬ ಪುಸ್ತಕದ ಲೇಖಕರು ಅ.ಸುಂದರ ಅವರು ಇದನ್ನು ೧೯೬೪ ರಲ್ಲಿ ಮುದ್ರಿಸಿದವರು ಬೃಂದಾವನ ಮುದ್ರಣದವರು. ಈ ಪುಸ್ತಕದ ಮುಖಪುಟದ ಹಾಳೆಯ ಬಣ್ಣ ತಿಳಿನೀಲಿ ಅದರ ಮೇಲೆ ಕರ್ನಾಟಕದಲ್ಲಿ ಪತ್ತೆಯಾದ ಒಂದು ಪ್ರಾಗಿತಿಹಾಸ ಕಾಲದ ಚಿತ್ರಕಲೆಯ ಛಾಯಾಚಿತ್ರವನ್ನು ಅಚ್ಚಿಸಲಾಗಿದೆ. ತನ್ಮೂಲಕ ಈ ಪುಸ್ತಕದ ಒಳಗಿನ ಬರಹದ ಸಾರ ಏನು ಎನ್ನುವುದನ್ನು ಪ್ರಜ್ಞಾವಂತ ಓದುಗರು ಅರಿತುಕೊಳ್ಳಲು ಅನುಕೂಲವಾಗಿದೆ. ಮತ್ತು ಚಿತ್ತಾರದ ಕಡೆಗೆ ಲಕ್ಷ್ಯ–ಕೇಂದ್ರೀಕರಿಸುವವರಿಗೂ ಈ ಹೊತ್ತಗೆಯ (ಪುಸ್ತಕದ) ತಿರುಳನ್ನು ಅರುಹುವ ಉದ್ದೇಶ ಇದರಿಂದ ಸಾಬೀತಾದಂತಾಗಿದೆ. 'ಇಲ್ಲಿ ಅಚ್ಚಿಸಲ್ಪಟ್ಟಿರುವ ಚಿತ್ರ ಇತಿಹಾಸ ಪೂರ್ವಕಾಲದಲ್ಲಿ ಕರ್ನಾಟಕ ಭಾಗದಲ್ಲಿನ ಬಂಡೆಯಾಸರೆಯೊಂದರ ಮೇಲೆ ಚಿತ್ರಿಸಲ್ಪಟ್ಟಿರುವಂತಹುದು'.[೯] ಕೆಂಪು, ಕಂದು ಮಿಶ್ರಿತ ಬಂಡೆಯಾಸರೆಯಲ್ಲಿ ಕಡವೆಗಳನ್ನು ಹೋಲುವ (ಕಡವೆಗಳ ಹಿಂಡು) ಪ್ರಾಣಿಗಳ ಗುಂಪು ಚಿತ್ರಿಸಿದ್ದು ಅವುಗಳಿಗೆ ನೈಸರ್ಗಿಕ ಕೆಂಪುಬಣ್ಣ (ಬಹುಶಃ ಪ್ರಾಣಿಯ ರಕ್ತ ಲೇಪಿಸಿರಬಹುದು) ಬಳಿಯಲಾಗಿದೆ. ಇದಿರು ನೋಟದಲ್ಲಿದ್ದಂತೆ ಅವುಗಳನ್ನು ಚಿತ್ರಿಸಲಾಗಿದೆ.

ಆದಿಮ ಚಿತ್ರಗಳಾದ್ದರಿಂದ ಕೃತ್ರಿಮತೆ ಇಲ್ಲದೆ ಸಹಜ ಸ್ಫುರಣೆನೆಗೊಂಡು ನಿರೂಪಿಸಲ್ಪಟ್ಟ ಚಿತ್ರಗಳಿವು. ಅವುಗಳು ಗಾಬರಿಗೊಂಡು ನೋಡುತ್ತಿರುವಂತೆ ಭಾಸವಾಗುತ್ತದೆ. ಶರೀರಶಾಸ್ತ್ರ ರೀತ್ಯಾ ಅಂಗಾಂಗ ನಿರೂಪಣೆ ಇಲ್ಲಿ ಇಲ್ಲದಿದ್ದರೂ ಒಂದು ಭಾವಪೂರಿತ ಅಭಿವ್ಯಕ್ತತೆಯನ್ನು ಇಲ್ಲಿನ ಚಿತ್ರದಲ್ಲಿನ ಬೆಳೆದು ನಿಂತ ಕಡವೆಗಳ ನೋಟದಲ್ಲಿ ಮನಗಾಣಬಹುದು. ಬೆಳೆದು ನಿಂತ ಕಡವೆಗಳಷ್ಟು ಭಾವಸಹಜವಾಗಿ ಮರಿಕಡವೆಗಳು ಮೂಡಿಬಂದಿಲ್ಲ, ಇಲ್ಲಿನ ಚಿತ್ರವನ್ನು ಗಮನಿಸಿದರೆ ಆಕೃತಿಗಳ ಬಣ್ಣ ಹಿನ್ನೆಲೆಯ ಬಣ್ಣ ಒಂದು ಅನಾಯಾಸ ಹೊಂದಾಣಿಕೆಗೊಂಡಿವೆ. ತಿಳಿನೀಲಿ ಬಣ್ಣದ ಹಿನ್ನೆಲೆಯಲ್ಲಿ ದಟ್ಟ ಬಿಳಿ ಬಣ್ಣದ ಅಂಚುರೇಖೆಗಳನ್ನೆಳೆದು ಈ ಚಿತ್ರವನ್ನು ವಿನ್ಯಾಸಗೊಳಿಸಿರುವುದರಿಂದ ಸಹಜವಾಗಿಯೇ ಕೆಂಪು ಕಂದು ವರ್ಣಯುಕ್ತ ಈ ಚಿತ್ರ ಮುಖಪುಟದಲ್ಲಿ ಪ್ರಧಾನವಾಗಿ ಕಾಣುತ್ತದೆ. ಇದು ಉತ್ತಮ ಮುಖಪುಟ ವಿನ್ಯಾಸಗಾರಿಕೆಯ ಪ್ರಮುಖ ಲಕ್ಷಣವೂ ಹೌದು. ಮುಖಪುಟದ ಮಧ್ಯದಲ್ಲಿ ಪ್ರಾಗಿತಿಹಾಸ ಕಾಲದ ಚಿತ್ತಾರ ಅಳವಡಿಸಿದ್ದು ಅದರ ಮೇಲ್ಗಡೆ ಮತ್ತು ಕೆಳಗಡೆ ಸಮಾನ ಅಂತರ ಬಿಟ್ಟು ಅಕ್ಷರಗಳನ್ನು ಅಚ್ಚಿಸಲಾಗಿದೆ.

ಮುಖಪುಟದ ಮೇಲ್ಭಾಗದಲ್ಲಿ 'ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ' ಎಂದು ತುಸು ಒತ್ತೊತ್ತಾಗಿ

---

೧೯. ಅ. ಸುಂದರ : ಇತ್ತೀಚಿನ ಕೆಲವು ಮುಖ್ಯ ಪುರಾತತ್ವ ಶೋಧನೆಗಳು. ಸಂಪುಟ–೮ ಸಂಚಿಕೆ–೨. ಪು–೨೫

ಬರೆಯಲಾಗಿದೆ. ಇಲ್ಲಿನ ಅಕ್ಷರಗಳು ಓದುಗರ ಲಕ್ಷ್ಯಕ್ಕೆ ಸರಾಗವಾಗಿ ಬರುವಷ್ಟು ದೊಡ್ಡದಿವೆ. ಅಕ್ಷರಗಳ ಅಳತೆ ೩೬ (Font size) ಹಾಗೂ ಇಟಾಲಿಕ್ ಕ್ಯಾಲಿಗ್ರಾಫ್ ಮಾದರಿ ಶೈಲಿಹೊಂದಿವೆ. ಕೆಳಭಾಗದಲ್ಲಿ/ತಳಭಾಗದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ 'ಕರ್ನಾಟಕ ಲಲಿತಕಲಾ ಅಕಾಡೆಮಿ' ಎಂದು ಬರೆಯಲಾಗಿದ್ದು ಅವು ಕೃತಿ ಶೀರ್ಷಿಕೆಯ ಅಕ್ಷರಗಳಿಗೆ ತುಲನೆ ಮಾಡಿದರೆ ತುಂಬ ಚಿಕ್ಕವು. ಅದು ಸೂಕ್ತವೂ ಆದ ಕ್ರಮ. ಏಕೆಂದರೆ ಆ ರೀತಿಯಾಗಿ ಅಕಾಡೆಮಿಯ ಹೆಸರು ಉಲ್ಲೇಖಿಸದಿದ್ದರೆ ಕೃತಿ ಶೀರ್ಷಿಕೆಗಿಂತಲೂ ಅಕಾಡೆಮಿಯ ಹೆಸರೇ ಎದ್ದು ಕಾಣುವಂತಾಗುತ್ತದೆ. ಅವುಗಳು (ಅಕ್ಷರ ಮಾದರಿ) ಕನ್ನಡ ಅಕ್ಷರಗಳು ರೋಮನ್ ಸಾಮಾನ್ಯ ಶೈಲಿಯಲ್ಲಿವೆ ಹಾಗೂ ಇಂಗ್ಲಿಷ್ ಅಕ್ಷರಗಳು ಗೋಥಿಕ್ ನಮೂನೆಯಲ್ಲಿವೆ.

**೩.೪.೭. ಡಾ. ಸ್ವೆಟಾಸ್ಲಾವ್ ರೋರಿಕ್ (೧೯೯೪)**

ಎಂ.ಎಸ್. ನಂಜುಂಡರಾವ್ ಅವರು ಬರೆದಿರುವ ಡಾ.ಸ್ವೆಟಾಸ್ಲಾವ್ ರೋರಿಕ್ ಎಂಬ ಕಿರುಪುಸ್ತಕ ೧೯೯೪ರಲ್ಲಿ ಮಯೂರ್ ಪ್ರಿಂಟ್ಸ್ ಆ್ಯಡ್ಸ್ ಇವರಿಂದ ಅಚ್ಚಾಗಿದ್ದು; ಈ ಕೃತಿಯ ಮುಖಪುಟಕ್ಕೆ ಸ್ವೆಟಾಸ್ಲಾವ್ ರೋರಿಕ್ ಅವರು ಬರೆದ ಒಂದು ಚಿತ್ರದ ಛಾಯಾಚಿತ್ರವನ್ನೇ ವಿನ್ಯಾಸಗೊಳಿಸಲಾಗಿದೆ. ತಿಳಿಗಂದು ಮುಖಪುಟ ಹಾಳೆಯಲ್ಲಿ ದಟ್ಟವರ್ಣಗಳಿಂದೊಡಗೂಡಿದ ಈ ಕಲಾಕೃತಿಯ ವಿನ್ಯಾಸ ಮುಖಪುಟಕ್ಕೆ ಅಂದವನ್ನು ತಂದಿದೆ. ಕುಲ್ಲುಕಣಿವೆಯಂತಹ ರಮಣೀಯ ಕಣಿವೆಯ ಪ್ರದೇಶದಲ್ಲಿ ಆಧ್ಯಾತ್ಮಿಕ ಸಾಧಕನನ್ನು ಹೋಲುವ ವ್ಯಕ್ತಿಯೊಬ್ಬ ಮಂಡಿಯೂರಿ ಕುಳಿತು ತನ್ನೆರಡೂ ಕೈಗಳನ್ನು ದಿಗಂತದತ್ತ ಚಾಚಿ ಆರ್ತನಾಗಿ ಮೊರೆಯಿಡುತ್ತಿದ್ದಾನೆ. 'ಇಲ್ಲಿನ ಕೃತಿಯಲ್ಲಿ ಒಂದು ರೀತಿಯ ಕಾವ್ಯಾತ್ಮಕ ಲಯ ಬದ್ಧತೆಯಿದ್ದು ಆಕರ್ಷಣೀಯ ಮತ್ತು ತೇಜಃಪುಂಜ ವರ್ಣ ಮೇಳವಿದೆ'[೧೦]. ಆಧ್ಯಾತ್ಮಿಕ ಗುಣ, ನಿಸರ್ಗ ಸೌಂದರ್ಯ, ಯಥಾದರ್ಶನದ ಮನೋಜ್ಞ ನಿರೂಪಣೆ–ಇವೇ ಮೊದಲಾದ ಕಲಾತ್ಮಕ ಮೌಲ್ಯಗಳನ್ನು ಇಲ್ಲಿನ ಕಲಾಕೃತಿಯ ಛಾಯಾಚಿತ್ರದಲ್ಲಿ ಕಾಣಬಹುದು ಚಿತ್ರದ ಅಂಚಿಗೆ ರೂಪಿಸಿರುವ ಅಚ್ಚಬಿಳಿ ಬಣ್ಣದ ಚೌಕಟ್ಟು ಚಿತ್ರಕ್ಕೆ ಮತ್ತು ಇಡೀ ಮುಖಪುಟಕ್ಕೆ ವಿಶಿಷ್ಟ ಮೆರುಗು ತಂದಿದೆ ಅಚ್ಚ ಬಿಳಿ ವರ್ಣದಲ್ಲಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಸರಾಗವಾಗಿ ನೋಟಕರ ದೃಷ್ಟಿಗೆ ಬೀಳುವಂತೆ ಕೃತಿ ಶೀರ್ಷಿಕೆಯನ್ನು ಚಿತ್ರದ ಮೇಲ್ಭಾಗದಲ್ಲಿ ಮತ್ತು ಅದೇ ಬಿಳಿಬಣ್ಣದಲ್ಲಿ ತುಂಬ ಪುಟ್ಟದಾಗಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂಬ ಹೆಸರನ್ನು ಚಿತ್ರದ ಕೆಳಗಡೆ ಮುದ್ರಿಸಿರುವುದು ತಿಳಿಕಂದುಬಣ್ಣದ ಮುಖಪುಟದ ಹಾಳೆಯಲ್ಲಿ ಪ್ರಕಾಶಮಾನವಾಗಿ ಸ್ಪಷ್ಟವಾಗಿ ಗೋಚರಿಸುತ್ತದೆ. ಮತ್ತು ವರ್ಣ ಸಾಮರಸ್ಯವನ್ನು ಸಹ ಸಂಕೇತಿಸುತ್ತಿದೆ. ಇಲ್ಲಿನ ಕೃತಿಶೀರ್ಷಿಕೆಯ ಕನ್ನಡ ಅಕ್ಷರಗಳ ಶೈಲಿ ರೋಮನ್ ಮಾದರಿಯ ಲಕ್ಷಣಗಳನು ಹೊಂದಿವೆ. ಹಾಗೂ ಕೃತಿಶೀರ್ಷಿಕೆಯ ಇಂಗ್ಲಿಷ್ ಅಕ್ಷರಗಳ ಶೈಲಿ ಆಂಗ್ಲ ಭಾಷೆಯ ಶೆರಿಫ್ (Serif) ಮಾದರಿಯದು. ಕರ್ನಾಟಕ ಲಲಿತಕಲಾ ಅಕಾಡೆಮಿ ಎಂಬ ಪದಗಳ ಕನ್ನಡ ಅಕ್ಷರ ಶೈಲಿ ರೋಮನ್, ಕರ್ನಾಟಕ ಲಲಿತ ಕಲಾ ಅಕಾಡೆಮಿ ಎಂಬ ಪದಗಳ ಇಂಗ್ಲಿಷ್ ಅಕ್ಷರ ಶೈಲಿ ಗೋಥಿಕ್ ಸ್ವರೂಪದ್ದಾಗಿದೆ.

---

೧೦. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ; ದಿ. ೨೦೧೬

### ೩.೪.೮. ಜನಪ್ರಿಯ ಕಲಾಮಾಲಿಕೆ (೧೯೯೫)

೧೯೯೫ ನೆಯ ಇಸ್ವಿಯಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ಜನಪ್ರಿಯ ಕಲಾಮಾಲಿಕೆಯಡಿಯಲ್ಲಿ ೧೫ ಪುಸ್ತಕಗಳನ್ನು ಪ್ರಕಟಿಸಿದ್ದು, ಅವುಗಳೆಂದರೆ ಡಾ. ಎಸ್. ಸಿ. ಪಾಟೀಲ್ ಬರೆದ 'ಜನಪದ ಕಲೆ' ಡಾ. ಅ. ಲ. ನರಸಿಂಹನ್ ಬರೆದ 'ಇಂಪ್ರೆಶನಿಸಂ', (ಇದರ ಮುಖಪುಟ ಕೃತಿ ರುಮಾಲೆ ಚನ್ನಬಸವಯ್ಯನವರದು), ನೇಮಿರಾಜ ಶೆಟ್ಟಿ ಎನ್ನುವವರು ಬರೆದ 'ಪೋಸ್ಟ್ ಮಾಡರ್ನಿಸಂ' ಡಾ. ಅ. ಲ. ನರಸಿಂಹನ್‌ರವರಿಂದ ಬರೆಯಲ್ಪಟ್ಟ 'ದೃಶ್ಯಕಲೆಗಳ ಗುಣಗ್ರಹಣ' (ಇದರ ಮುಖಪುಟ ಕೃತಿ ಎಸ್.ಜಿ.ವಾಸುದೇವ್ ಅವರದು). ಆರ್. ಎ. ಶಾಂತರಾಜ್ ಅವರಿಂದ ರಚಿತವಾದ 'ಅಬ್‌ಸ್ಟ್ರಾಕ್ಟ್ ಕಲೆ' (ಇದರ ಮುಖಪುಟ ಕೃತಿ ಪಾಲ್ ಕ್ಲೇ), ಡಾ. ಸಿ. ಆರ್. ಚಂದ್ರಶೇಖರ್‌ರವರಿಂದ ಬರೆಯಲ್ಪಟ್ಟ 'ಚಿತ್ರಕಲೆ ಮತ್ತು ಮನೋವಿಕಾಸ' (ಇದರ ಮುಖಪುಟ ಕೃತಿ ಐದು ವರ್ಷದ ಮಗು ರಚಿಸಿದ ಚಿತ್ರ), ಚಿ. ಸು. ಕೃಷ್ಣಸೆಟ್ಟಿ ಇವರು ಬರೆದ 'ದೃಶ್ಯಕಲೆ ಎಂದರೇನು?' (ಇದರ ಮುಖಪುಟಕ್ಕೆ ಎನ್ ಪುಷ್ಪಮಾಲ ಅವರ ಕಲಾಕೃತಿಯ ಛಾಯಾಚಿತ್ರವಿದೆ), ಕೆ. ವಿ. ಸುಬ್ರಹ್ಮಣ್ಯಂ ಅವರು ಬರೆದ 'ಫೋಟೋ ರಿಯಲಿಸಂ' (ಇದರ ಮುಖಪುಟಕ್ಕೆ ರಿಚರ್ಡ್.ಎಸ್ ರಚಿತ ಕಲಾಕೃತಿಯ ಛಾಯಾಚಿತ್ರವಿದೆ), ಜೆ.ಮಲ್ಲಿಕಾರ್ಜುನ ಬರೆದ 'ಚಿತ್ರಕಲೆ ಮತ್ತು ಸಂವಹನ' (ಇದರ ಮುಖಪುಟಕ್ಕೆ ಪ್ರಾಚೀನ ಚಿತ್ರಲಿಪಿಯೊಂದರ ಫೋಟೊ ಇದೆ), ಪ್ರೊ. ಶೀಲಾಕಾಂತ ಪತ್ತಾರ ರಚಿಸಿದ 'ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲೆ' (ಇದರ ಮುಖಪುಟಕ್ಕೆ ಚಾಲುಕ್ಯರ ಕಾಲದ ಶಿಲ್ಪಕಲೆಯ ಛಾಯಾಚಿತ್ರವಿದೆ), ರವಿಕುಮಾರ್ ಕಾಶಿ ಬರೆದ 'ಪಾಪ್ ಕಲೆ', ಎನ್.ಮರಿಶಾಮಾಚಾರ್ ಬರೆದ 'ಸರ್‍ರಿಯಲಿಸಂ' (ಇದರ ಮುಖಪುಟಕ್ಕೆ ಸಾಲ್ಬಡಾರ್ ಡಾಲಿ ರಚಿತ ಕಲಾಕೃತಿಯ ಛಾಯಾಚಿತ್ರವಿದೆ), ಆರ್.ಜಿ.ರಾಯಕರ್ ಬರೆದ 'ಭಾರತೀಯ ಚಿತ್ರಕಲೆ', ವಿಜಯರಾವ್ ಅವರು ರಚಿಸಿದ 'ಶಿಲ್ಪಕಲೆ', ರವಿಕುಮಾರ್ ಕಾಶಿ ಬರೆದ 'ಗ್ರಾಫಿಕ್ ಕಲೆ' (ಇದರ ಮುಖಪುಟ ಕೃತಿ ಶ್ರೀ ಚಂದ್ರನಾಥ ಆಚಾರ್ಯ). ಇಲ್ಲಿ ಗಮನಿಸತಕ್ಕ ಅಂಶವೆಂದರೆ ಈ ಮೇಲೆ ಹೆಸರಿಸಿದ ಈ ಎಲ್ಲ ಗ್ರಂಥಗಳ ಪ್ರಕಟಣೆಗಳು ಹಾಗೂ ಮುಖಪುಟವಿನ್ಯಾಸ ೧೯೯೫ ರಲ್ಲಿ ಮಾಡಿದವುಗಳು. ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಮುಖಪುಟದಲ್ಲಿ ಅಚ್ಚಿಸಿದ ಛಾಯಾಚಿತ್ರ ಮತ್ತು ಮುಖಪುಟಕ್ಕೆ ಹಾಕಿದ ಬಣ್ಣ ಹಾಗೂ ಅಕ್ಷರ ಶೈಲಿ ಬೇರೆ ಬೇರೆಯಾಗಿದೆ ಎಂಬ ಅಂಶವನ್ನು ಬಿಟ್ಟರೆ ಈ ಎಲ್ಲ ಪುಸ್ತಕಗಳ ಒಟ್ಟಾರೆ ಮುಖಪುಟವಿನ್ಯಾಸ ಒಂದು ಏಕರೂಪತೆಯಿಂದ ಕೂಡಿದುದಾಗಿದೆ.

ಈ ಎಲ್ಲ ಪ್ರಕಟಣೆಗಳ ಮುಖಪುಟಗಳಲ್ಲಿ ಮೂರೂ (ಭಾಗಗಳು) ಆವರಣಗಳು ರೂಪುಗೊಂಡಿದ್ದು ಈ ಮೂರು ಆವರಣಗಳನ್ನು ಅವುಗಳ ನಡುವೆ ಇರುವ ಸ್ಥಳಾವಕಾಶ ಬೇರ್ಪಡಿಸಿದೆ. ಮೇಲಿನ ಕಿರಿದಾದ ಅಂಕು ಡೊಂಕಿನ ಆವರಣದಲ್ಲಿ ಜನಪ್ರಿಯ ಕಲಾಮಾಲಿಕೆಯೆಂಬ ಶೀರ್ಷಿಕೆ ಇದೆ. ಕೆಳಗಿನ ಅಂಕು ಡೊಂಕಿನ ಆವರಣ ಅವಕಾಶದೊಳಗೆ ಅಕಾಡೆಮಿಯ ಲಾಂಛನ ಮತ್ತು ಪದನಾಮ ಕನ್ನಡದಲ್ಲಿ ಮುದ್ರಣವಾಗಿರುತ್ತದೆ. ಅದರ ಮೇಲೆ ಲೇಖಕರ ಹೆಸರುಗಳನ್ನು ಬರೆದಿದ್ದಾರೆ. ಮಧ್ಯದ ಆವರಣದಲ್ಲಿ ಪುಸ್ತಕದ ವಿಷಯಕ್ಕೆ ಸಂಬಂಧಿಸಿದಂತೆ ಸೂಕ್ತವಾದೊಂದು ಛಾಯಾಚಿತ್ರ (ಏಕವರ್ಣದ) ಹೊಂದಿದೆ.

ಮತ್ತು ಮೇಲ್ಗಡೆ ತಲೆಬರಹ/ಶೀರ್ಷಿಕೆ ವಿವಿಧ ಶೈಲಿ ಅಕ್ಷರಗಳಲ್ಲಿ ರಚನೆಯಾಗಿದ್ದು, ಇಲ್ಲಿನ ವಿನ್ಯಾಸದ ಕುರಿತು ಸೂಕ್ಷ್ಮವಾಗಿ ಆಲೋಚಿಸಿದರೆ ಈ ಪುಸ್ತಕಗಳ ಮುಖಪುಟಗಳಲ್ಲಿ ಏಕರೂಪತೆ ಮತ್ತು ಜನಪ್ರಿಯ ಕಲಾಮಾಲಿಕೆಯಡಿಯಲ್ಲಿ ಪ್ರಕಟಗೊಂಡ ಪ್ರಕಟಣೆಯೆಂಬುದನ್ನು ಧ್ವನಿಸಬೇಕನ್ನುವುದು ಅಕಾಡೆಮಿಯ ಆಶಯವಾಗಿದ್ದಿರಬಹುದೆಂದು ಎನಿಸುತ್ತದೆ.

**೩.೪.೯. ಎಂ. ಜಿ. ಶುದ್ಧೋದನ (೧೯೯೫)**

ಕರ್ನಾಟಕ ಕಲಾವಿದರು ಮಾಲೆಯ ೩೫ನೆಯ ಪುಸ್ತಕವಾಗಿ ಎಚ್.ಎಂ.ಪರಮೇಶ ಎನ್ನುವವರಿಂದ ಬರೆಯಲ್ಪಟ್ಟ ಎಂ.ಜೆ.ಶುದ್ಧೋದನ ಎಂಬ ಚಿತ್ರ ಕಲಾವಿದರ ಜೀವನ ಮತ್ತು ಕಲೆಯ ಪರಿಚಯ ನೀಡುವಂತಹ 'ಎಂ.ಜೆ.ಶುದ್ಧೋದನ' ಎಂಬ ಕಿರು ಪುಸ್ತಕವನ್ನು ೧೯೯೫ರಲ್ಲಿ ಸತ್ಯಶ್ರೀ ಪ್ರಿಂಟರ್ಸ್ ಇವರು ಮುದ್ರಿಸಿದ್ದಾರೆ. ಶುದ್ಧೋದನರಿಂದಲೇ ರಚಿತವಾದ ಜಲವರ್ಣ/ತೈಲವರ್ಣ ಮಾಧ್ಯಮದ 'ಜ್ಞಾನೋದಯ' ಎಂಬ ಕಲಾಕೃತಿಯ ಛಾಯಾಚಿತ್ರವನ್ನು ಈ ಪುಸ್ತಕದ ಮುಖಪುಟಕ್ಕೆ ವಿನ್ಯಾಸಗೊಳಿಸಲಾಗಿದೆ.

ಕಡುನೀಲಿ ಬಣ್ಣದಿಂದಾವೃತವಾದ ದಟ್ಟ ಮಂಜಿನ ವಾತಾವರಣದಲ್ಲಿ (ದಟ್ಟ ಮಂಜು ಅಜ್ಞಾನದ ದ್ಯೋತಕವೆಂಬಂತೆ ಕಲಾವಿದರು ಇಲ್ಲಿ ಚಿತ್ರಿಸಿದ್ದಾರೆ) ಕಾವಿ ಬಟ್ಟೆಯನ್ನುಟ್ಟ ವ್ಯಕ್ತಿಯೊಬ್ಬ ಸೋಪಾನಗಳನ್ನು ಹತ್ತಿ ಮೇಲಕ್ಕೆ ಸಾಗುತ್ತಿದ್ದಾನೆ. (ಇಲ್ಲಿ–ಸೋಪಾನಗಳು ಮೆಟ್ಟಿಲುಗಳು–ಜ್ಞಾನ ಪ್ರಾಪ್ತಿಯ ಹಂತಗಳ ಸಂಕೇತಗಳು) ಮಂಜಿನಿಂದಾವೃತವಾದ ಅವಕಾಶದಲ್ಲಿ ಮೇಲಕ್ಕೆ ಸೂರ್ಯ ಬೆಳಗಿನ ಬಣ್ಣದಲ್ಲಿ ಅಷ್ಟಿಷ್ಟು ಗೋಚರವಾಗತೊಡಗಿದ್ದಾನೆ. (ಸೂರ್ಯ ಗೋಚರವಾಗತೊಡಗಿದ್ದುದು ಇಲ್ಲಿ ಜ್ಞಾನ ಸಿದ್ಧಿಸುತ್ತಿರುವುದರ ಸಂಕೇತ) ಆತ ಏರುತ್ತಿರುವ ಸೋಪಾನಗಳ ಆಚೀಚೆ ಗಿಡಗಳು ಆವರಿಸಿದ್ದು ಅವೆಲ್ಲಾ ಮಂಜಿನಿಂದಾವೃತವಾಗಿವೆ. 'ನೈಜ ಶೈಲಿಯಲ್ಲಿ ರೂಪಿತಗೊಂಡಿರುವ ಕೃತಿಯಿದು. ತಿಳಿಕೇಸರಿ ಬಣ್ಣದ ಮುಖಪುಟದಲ್ಲಿ ದಟ್ಟನೀಲಿ ಬಣ್ಣದಿಂದೊಡಗೂಡಿದ ಈ ಕಲಾಕೃತಿಯ ಛಾಯಾಚಿತ್ರ ಗಾಢ ಬಿಳಿಬಣ್ಣದ ಚೌಕಟ್ಟಿನಿಂದಾಗಿ ಮುಖಪುಟದಲ್ಲಿ ತುಂಬ ಒಪ್ಪವಾಗಿ ಕಾಣುವುದರಿಂದ ನೋಡುಗರ ಕಣ್ಮನ ಸೆಳೆಯುವುದರಲ್ಲಿ ಸಫಲವಾಗಿದೆ ಎನ್ನಬಹುದು'.[೧೧]

ಬಿಳಿಯ ಬಣ್ಣದಲ್ಲಿ ರೋಮನ್ ಶೈಲಿಯ ಕನ್ನಡ ಅಕ್ಷರಗಳಲ್ಲಿ ಮುಖಪುಟ ಚಿತ್ರದ ಮೇಲ್ಭಾಗದಲ್ಲಿ ತುಸು ಪುಟ್ಟದಾಗಿ ೨೦ ಅಳತೆ (Font size) ಯಲ್ಲಿ ಕೃತಿ ಶೀರ್ಷಿಕೆ ಬರೆದಿದ್ದು ಅದರ ಕೆಳಗಡೆಯೇ ಕನ್ನಡ ಅಕ್ಷರಕ್ಕಿಂತಲೂ ತುಸುದೊಡ್ಡ ೨೨ ಅಳತೆ (Font size)ಯಲ್ಲಿ ಇಂಗ್ಲಿಷಿನ ರೋಮನ್ ಶೈಲಿಯ ಅಕ್ಷರಗಳಲ್ಲಿ ಅದನ್ನೇ (ಕೃತಿ ಶೀರ್ಷಿಕೆ) ಬರೆಯಲಾಗಿದೆ. ಚಿತ್ರದ ಕೆಳಗಡೆ ಬಿಳಿಬಣ್ಣದಲ್ಲಿಯೇ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಕನ್ನಡ ಮತ್ತು ಇಂಗ್ಲಿಷಿನಲ್ಲಿ ರೋಮನ್ ಶೈಲಿಯ ಅಕ್ಷರಗಳಲ್ಲಿ ತುಂಬಾಪುಟ್ಟದಾಗಿ ೧೪ ಅಳತೆ (Font size) ಯಲ್ಲಿ ಬರೆಯಲಾಗಿದ್ದು, ಆ ಬರಹಗಳು ಮುಖಪುಟ ವರ್ಣ, ಅಚ್ಚಿಸಿರುವ ಕಲಾಕೃತಿಯ ಛಾಯಾಚಿತ್ರ ಇವುಗಳೊಟ್ಟಿಗೆ ತುಂಬ ಸೊಗಸಾಗಿ ಹೊಂದಾಣಿಕೆಯಾಗಿವೆ ಅಥವಾ ಬೆರೆತಿವೆ ಎಂದು ಭಾವಿಸಬಹುದು.

---
೧೧. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ; ದಿ ೨೦೧೬

### ೩.೪.೧೦. ಬಾನಯ್ಯ ಗರುಡಾದ್ರಿ (೧೯೭೫)

ಸುರಪುರ ಶೈಲಿಯ ಚಿತ್ರ ಕೃತಿಯ ಛಾಯಾಚಿತ್ರ ಹೊಂದಿರುವ ಶ್ರೀರಾಮ ಪಟ್ಟಾಭಿಷೇಕ ಸನ್ನಿವೇಶದ 'ಬಾನಯ್ಯ ಗರುಡಾದ್ರಿ' ಎಂಬ ಶೀರ್ಷಿಕೆಯ ಕಿರು ಹೊತ್ತಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯ ಕರ್ನಾಟಕ ಕಲಾವಿದರು ಮಾಲಿಕೆಯಲ್ಲಿ; ಲೇಖಕ ಬಸವರಾಜ ಉಪ್ಪಿನ ಇವರಿಂದ ರಚಿತವಾಗಿ, ೧೯೭೫ ರಲ್ಲಿ ಇಳಾ ಪ್ರಿಂಟರ್ಸ್ ಇವರಿಂದ ಮುದ್ರಣ ಕಂಡುದಾಗಿದೆ. ಹಸಿರು ಬಣ್ಣದ ಮುಖಪುಟ ಹಾಳೆಯ ಮೇಲೆ ಬಾನಯ್ಯ ಗರುಡಾದ್ರಿಯವರ 'ಶ್ರೀರಾಮ ಪಟ್ಟಾಭಿಷೇಕ' ಎಂಬ ಕೃತಿಯ ಭಾವಚಿತ್ರ ಅಚ್ಚಿಸಿರುವುದು ಈ ಕೃತಿಯ ಮುಖಪುಟದ ವಿಶೇಷತೆ ಮಧ್ಯದಲ್ಲಿ ಸಿಂಹಾಸನದ ಮೇಲೆ ಆಸೀನನಾಗಿ ತೊಡೆಯ ಮೇಲೆ ಸೀತಾಮಾತೆಯನ್ನು ಕುಳ್ಳಿರಿಸಿಕೊಂಡು ಅಭಯವರದಹಸ್ತನಾಗಿರುವ ಶ್ರೀರಾಮನ ಎದುರಿಗೆ ಹನುಮಂತ ಕೈಮುಗಿದು ಕುಳಿತಿದ್ದಾನೆ. ಅಕ್ಕಪಕ್ಕಗಳಲ್ಲಿ ಲಕ್ಷ್ಮಣ, ಭರತ, ಶತ್ರುಘ್ನರು, ಮುನಿಜನರು, ಪರಿವಾರ ಕೈಮುಗಿದು ಸ್ತುತಿಸುತ್ತಿದೆ.

ಆಕೃತಿಗಳಲ್ಲಿ ವಿಜಯನಗರ ಶೈಲಿಯ ಪ್ರಭಾವ ಸ್ಪಷ್ಟವಾಗಿ ಕಂಡು ಬರುವುದಲ್ಲದೆ ವರ್ಣಗಾರಿಕೆಯಲ್ಲಿ ಅಪ್ಪಟ ದೇಸೀತನ ಮೇಳೈಸಿದೆ. ಸೀತಾ ಸಹಿತ ಶ್ರೀರಾಮ ಮತ್ತು ಆಂಜನೇಯ ಆಕೃತಿಗಳು ಕೃತಿಯಲ್ಲೇ ಉಳಿದೆಲ್ಲ ಆಕಾರಗಳಿಗಿಂತಲೂ ಗಾಢ ಬಣ್ಣಗಾರಿಕೆಯಿಂದ ಕೂಡಿರುವುದರಿಂದ ಎದ್ದು ಕಾಣುತ್ತವೆ. ಆಕೃತಿಗಳಿಗೆ ಅವುಗಳ ಪ್ರಾಮುಖ್ಯತೆ ಆಧರಿಸಿ ಆಕೃತಿ ಅಂಚುರೇಖೆ ಎಳೆದಂತೆ ಕಂಡು ಬರುತ್ತದೆ. 'ವಿಜಯನಗರ ಶೈಲಿಯ'[೧೨] ಜೊತೆಗೆ ತನ್ನದೇ ಆದ ಜಾನಪದೀಯ ಲಕ್ಷಣಗಳಿಂದ ಕೂಡಿದಂತಹ ಶೈಲಿಯ ಪ್ರಸಿದ್ಧ ಕಲಾವಿದರೆನಿಸಿದ ಬಾನಯ್ಯ ಗರುಡಾದ್ರಿಯವರೇ ರಚಿಸಿದಂತಹ ಈ ಕಲಾಕೃತಿಯ ಛಾಯಾಚಿತ್ರದಿಂದಾಗಿ ಈ ಕೃತಿಯ ಮುಖಪುಟ ಮಹತ್ವಪೂರ್ಣವೆನಿಸುತ್ತದೆ. ಮೂಲ ಕೃತಿಯು ತುಂಬ ಜೀರ್ಣವಾಗಿದ್ದರೂ ಅದರ ಛಾಯಾಚಿತ್ರವನ್ನು ಸ್ಫುಟವಾಗಿ /ಸ್ಪಷ್ಟವಾಗಿ ರೂಪಿಸಿ, ಮುಖಪುಟಕ್ಕೆ ಅಚ್ಚುಕಟ್ಟಾಗಿ ವಿನ್ಯಾಸಗೊಳಿಸಿದ್ದುದರಿಂದ ಈ ಇಡೀ ಕೃತಿಯೇ ಆಕರ್ಷಕವೆನಿಸಿದೆ. ಮುಖಪುಟದ ಹಾಳೆಯ ಬಣ್ಣಕ್ಕೆ ಅನುಗುಣವಾಗಿ ನೋಡುಗರ ದೃಷ್ಟಿಗೆ ಸುಲಭವಾಗಿ ಕಾಣುವಂತಹ ಅಕ್ಷರ ವಿನ್ಯಾಸಗಳು (ಕೃತಿ ಶೀರ್ಷಿಕೆ ಮತ್ತು ಕರ್ನಾಟಕ ಲಲಿತಕಲಾ ಅಕಾಡೆಮಿಯ) ಇಲ್ಲಿರುವುದು ಗಮನಕ್ಕೆ ಬರುವ ಅಂಶ. ಇಲ್ಲಿನ ಕೃತಿ ಶೀರ್ಷಿಕೆಯು ಕಪ್ಪುಬಣ್ಣದ ಕನ್ನಡ ಅಕ್ಷರಗಳ ಶೈಲಿ ಮತ್ತು ಇಂಗ್ಲಿಷ್ ಅಕ್ಷರಗಳ ಶೈಲಿ ರೋಮನ್ ಸ್ವಭಾವದ್ದಾಗಿವೆ. ಕರ್ನಾಟಕ ಲಲಿತ ಕಲಾ ಅಕಾಡೆಮಿ ಎಂಬ ಕನ್ನಡ ಪದಗಳು ರೋಮನ್ ಶೈಲಿಯಲ್ಲಿವೆ ಬಗೆಯದು ಮತ್ತು ಅದೇ ಬಣ್ಣದಲ್ಲಿರುವ ಅದರ ಇಂಗ್ಲಿಷ್ ಪದಗಳ ಶೈಲಿಯೂ ಸಹ ಅದೇ ಮಾದರಿಯದ್ದು.

### ೩.೪.೧೧. ಜಿ. ಎಸ್. ಶೆಣೈ (೧೯೭೫)

ಜಿ.ಎಸ್.ಶೆಣೈರವರ (ಜಿ.ಎಸ್.ಶಣೈ ಕರ್ನಾಟಕ ಖ್ಯಾತಚಿತ್ರಕಾರರು, ಕಲಾವಿದ ಸಂಘಟಕರು ಮತ್ತು ಭಿತ್ತಿಚಿತ್ರಕಾರರು ಎಂದು ಪ್ರಸಿದ್ಧರಾಗಿದ್ದವರು) ಪ್ರಕೃತಿ ಚಿತ್ರವೊಂದರ ಛಾಯಾಚಿತ್ರವನ್ನು ಹೊಂದಿರುವ

೧೨. ಡಾ. ಜಿ. ಜ್ಞಾನಾನಂದ: ಶಿಲ್ಪಾದರ್ಶನ, ಪು-೧೯೭-೨೦೧

ಮುಖಪುಟವಿರುವ ಪುಸ್ತಕ 'ಜಿ. ಎಸ್. ಶೆಣೈ' ಎಂಬುದು. ಇದು ೧೯೯೫ರಲ್ಲಿ ಪ್ರಕಟಗೊಂಡಿದೆ. ತಾಂತ್ರಿಕತೆಯ ಪರಾಕಾಷ್ಠ ಮಟ್ಟದಲ್ಲಿರುವ ಕೃತಿಯೆಂದರೂ ಒಪ್ಪಬಹುದಾದ ಈ ಚಿತ್ರದಲ್ಲಿ ಬಣ್ಣದ ಮೇಲೆ ತಮ್ಮ ಛಾಪು ಮೂಡಿಸಿರುವ ಓರೆಕೋರೆ ಮೈವಳಿಕೆಗಳು, 'ದಾದಾಯಿಸಂ ಮತ್ತು ಸರ್ರಿಯಲಿಸಂ'[೧೩] ಕಲಾವಿದರು ಬಳಸುತ್ತಿದ್ದ ವಿಧಾನವಾದ ಬಣ್ಣ ಹಚ್ಚಲ್ಪಟ್ಟ ಹಾಳೆಗಳನ್ನು ಮಾಧ್ಯಮದ ಮೇಲೆ ಒಂದಕ್ಕೊಂದು ಒತ್ತಿ ತೆಗೆಯುವ ವಿಧಾನಾನುಸಾರದಲ್ಲಿ ಮೂಡಿಸಿದ ಮೈವಳಿಕೆ ಕೆಲವೆಡೆ ಪಾಲಿಥಿನ್ ಹಾಳೆಗಳನ್ನು ಬಣ್ಣದಲ್ಲದ್ದಿ ಸೃಷ್ಟಿಸಿದ ಮೈವಳಿಕೆಗಳು ಅದರ ಮೇಲೆ ಅಗತ್ಯವಿದ್ದಲ್ಲೆಲ್ಲ ಕುಂಚದ ಮೂಲಕ ಬಣ್ಣಗಳೊಡನೆ ಕ್ರೀಡಿಸಿದಂತಿರುವ ನಿಬ್ಬೆರಗಾಗಿಸುವ ವರ್ಣ ವೈವಿಧ್ಯತೆಯಿಂದ ಕೂಡಿದ ಈ ಚಿತ್ರದ ಛಾಯಾಚಿತ್ರ ತಿಳಿಕಂದು ಮಿಶ್ರಿತ ತಿಳಿಹಸಿರು ಬಣ್ಣದಲ್ಲಿ ಕೂಡಿರುವುದರಿಂದ ತುಂಬ ಸೌಮ್ಯ ಮಂದ ನೋಟ ಉಂಟುಮಾಡುತ್ತಿದ್ದು ಆ ಮುಖಪುಟ ಕಾಗದದ ಮೇಲೆ ಈ ಮೇಲೆ ಉಲ್ಲೇಖಿಸಿದಂತೆ ಬಹುವರ್ಣೀಯ ಸಂಗಮದಿಂದ ಕೂಡಿರುವಂತಹ ಈ ಅಮೂರ್ತ (Abstract painting) ಚಿತ್ರದ ಛಾಯಾಚಿತ್ರ ಸಹಜವಾಗಿಯೇ ಎದ್ದು ಕಾಣುತ್ತದೆ. ಮತ್ತು ಬಣ್ಣಗಳೆಡೆಗೆ ಆಕರ್ಷಿತರಾಗಬಲ್ಲ ಸಹೃದಯ ನೋಟಕ/ಓದುಗರ ಮನಸ್ಸನ್ನು ಸೆಳೆಯಬಲ್ಲಂತಹ ಮುಖಪುಟ ಈ ಪುಸ್ತಕದ್ದು ಎನ್ನಬಹುದು.

ಈ ಪುಸ್ತಕವನ್ನು ಬರೆದವರು ಡಾ॥ ಕಾಸರವಳ್ಳಿ ಜಿ. ರವೀಶ್ ಎನ್ನುವವರು. ೧೯೯೫ರಲ್ಲಿ ಇದನ್ನು ಮೊಟ್ಟಮೊದಲಿಗೆ ಮುದ್ರಿಸಿದವರು ಬೆಂಗಳೂರಿನ ಬೃಂದಾವನ ಪ್ರಿಂಟರ್ಸ್. (ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಕೃತಿಯ ಲೇಖಕರೇ ಈ ಪುಸ್ತಕವನ್ನು ವಿನ್ಯಾಸಗೊಳಿಸಿದುದು ಛಾಯಾಚಿತ್ರ, ಟೈಪ್ಸೆಟ್ಟಿಂಗ್ ಮಾಡಿರುವವರೂ ಈ ಕೃತಿಯ ಲೇಖಕರೇ ಆಗಿದ್ದಾರೆ) ಅಚ್ಚುಕಟ್ಟಾದ ವಿನ್ಯಾಸದಿಂದೊಡಗೂಡಿದ ಈ ಪುಸ್ತಕ ಮುಖಪುಟದಲ್ಲಿ ಮುದ್ರಿಸಿದ ಛಾಯಾಚಿತ್ರದ ಮೇಲ್ಗಡೆ ಕೃತಿಯ ಶೀರ್ಷಿಕೆಯನ್ನು ಕನ್ನಡ ಮತ್ತು ಇಂಗ್ಲಿಷಿನಲ್ಲಿ ಬರೆಯಲಾಗಿದೆ ಅದರ ಕನ್ನಡ ಅಕ್ಷರಗಳು ೨೮ ಗಾತ್ರದಲ್ಲಿವೆ (Font size) ಮತ್ತು ಅವುಗಳ ಶೈಲಿ ರೋಮನ್. ಅಂತೆಯೇ ಇಂಗ್ಲಿಷಿನಲ್ಲಿ ಬರೆಯಲಾದ ಶೀರ್ಷಿಕೆಯ ಅಕ್ಷರಗಳ ವಿನ್ಯಾಸ ಸಹ ರೋಮನ್ ಮಾದರಿಯವೇ ಮತ್ತು ಗಾತ್ರ ೨೮ (Font size) ಅಳತೆಯದಾಗಿದೆ.ಛಾಯಾಚಿತ್ರದ ಕೆಳಗಡೆ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಬರೆದಿದ್ದು, ಆ ಹೆಸರಿನ ಕನ್ನಡ ಅಕ್ಷರಗಳ ಗಾತ್ರ ೧೮ (Font size) ಮತ್ತು ಅವುಗಳ ವಿನ್ಯಾಸ ರೋಮನ್‌ಶೈಲಿಯದು ಹಾಗೂ ಇಂಗ್ಲಿಷ್ ಅಕ್ಷರಗಳ ಗಾತ್ರ ೧೮ (Font size) ಮತ್ತು ಅವುಗಳ ವಿನ್ಯಾಸ ಗೋಥಿಕ್ ಶೈಲಿಯದಾಗಿವೆ.

**೩.೪.೧೨. ಎಸ್.ಎಸ್. ಕುಕ್ಕೆ (೧೯೯೭)**

ಚಿತ್ರಕಾರ ಎಸ್.ಎಸ್.ಕುಕ್ಕೆಯವರ ಜೀವನ ಮತ್ತು ಸಾಧನೆ ಕುರಿತು ಕಿರು ಹೊತ್ತಿಗೆ 'ಎಸ್.ಎಸ್.ಕುಕ್ಕೆ' ಎಂಬ ಕೃತಿಯನ್ನು ವಿ.ಟಿ.ಎಸ್. ರಾವ್ ಎನ್ನುವವರು ಬರೆದಿದ್ದು. ಅದನ್ನು ರಶ್ಮಿ ಮುದ್ರಣದವರು ೧೯೯೭ರಲ್ಲಿ ಪ್ರಕಟಿಸಿದ್ದಾರೆ. ತಿಳಿಬೂದುಬಣ್ಣದ ಮುಖಪುಟ ಹಾಳೆಯ ಮೇಲ್ತುದಿಯಲ್ಲಿ ಸ್ಪಷ್ಟವಾಗಿ ಓದುಗರಿಗೆ ಕಾಣುವಂತೆ ಎಸ್.ಎಸ್.ಕುಕ್ಕೆ ಎಂದು ಕಪ್ಪುಬಣ್ಣದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಅಕ್ಷರಗಳಲ್ಲಿ

೧೩. ಹಿ. ಆರ್ ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು–೧೮೦–೧೮೨

ಬರೆಯಲಾಗಿದೆ. ಅಂತೆಯೇ ಮುಖಪುಟ ಹಾಳೆಯ ತಳಭಾಗದಲ್ಲಿ ಕರ್ನಾಟಕ ಲಲಿತಕಲಾ ಅಕಾಡಮಿ ಎಂದು ಕನ್ನಡ ಮತ್ತು ಇಂಗ್ಲಿಷ್ ನಲ್ಲಿ ರೋಮನ್ ಶೈಲಿಯ ಅಕ್ಷರಗಳಲ್ಲಿ ಕಪ್ಪುಬಣ್ಣದಲ್ಲಿ ಪುಟ್ಟ ಅಳತೆಯಲ್ಲಿ ಬರೆಯಲಾಗಿದೆ. ಮಧ್ಯದ ಅವಕಾಶ ಎಸ್.ಎಸ್.ಕುಕ್ಕೆ ಅವರಿಂದ ರಚಿತವಾದ ಜಲವರ್ಣ ಮಾಧ್ಯಮ ಕೃತಿ 'ಮೇಘ ಸಂದೇಶ'ದ ಛಾಯಾಚಿತ್ರವನ್ನು ಶಿಸ್ತಾಗಿ ವಿನ್ಯಾಸಗೊಳಿಸಲಾಗಿದೆ. ಮೇಘರಾಜ ಮೇಘ ಸಂದೇಶವನ್ನು (ಮಳೆಯ ವಾರ್ತೆಯನ್ನು/ಮಳೆಯ ಸೂಚನೆಯನ್ನು) ಮಾನವರೂಪಿಯಾಗಿ ಎಲ್ಲೆಡೆ ಪಸರಿಸುತ್ತಾ ಸಾಗಿದ್ದಾನೆ. ಪರಿಣಾಮವಾಗಿ ಹಿನ್ನೆಲೆಯಲ್ಲಿ ದಟ್ಟ(ಕಾರ್ಮೋಡ) ಮೋಡದ ಅಲೆಗಳು ಉಂಟಾಗಿವೆ ಹಂಸಪಕ್ಷಿಗಳು ಹಾರಿ ಹೋಗುತ್ತಿವೆ.

ಇಡೀ ಕೃತಿಯುದ್ದಕ್ಕೂ ಗಾಢವಾದ ಮೋಡ ಆಗಸದಲ್ಲಿ ದಟ್ಟೈಸಿದಾಗ ಉಂಟಾಗುವ ಮಬ್ಬುಗತ್ತಲವಾತಾವರಣ ಕಂಡುಬರುತ್ತಿದ್ದು, ಕೃತಿಯ ನಿರ್ವಹಣಾ ಶೈಲಿ ಬಂಗಾಳ ಪುನರುಜ್ಜೀವನ ಶೈಲಿಗೆ ಅನುಗುಣವಾದುದು. ವಾಷ್ (wash) ತಂತ್ರಗಾರಿಕೆಯಲ್ಲಿ ಆಕಾರಗಳಿಗೆ ವರ್ಣಲೇಪನ ನಡೆದಿದೆ. 'ಬಂಗಾಳಿ ಪುನರುಜ್ಜೀವನ ಶೈಲಿ ಅಜಂತ ಚಿತ್ರಗಳ ಆಕೃತಿ ಸ್ವರೂಪವುಳ್ಳದ್ದು ನಂದಲಾಲ್ ಬೋಸ್, ಅವನೀಂದ್ರನಾಥ ಟ್ಯಾಗೋರ್' ಅಸಿತ್ ಕುಮಾರ್ ಅಲ್ದಾರ್, ಕರ್ನಾಟಕದ ಕೆ.ವೆಂಕಟಪ್ಪ ಇವರೆಲ್ಲಾ ಈ ಶೈಲಿಯಲ್ಲಿ ನುರಿತವರು ಎಂದು ಹೆಸರಾಗಿದ್ದಾರೆ.'[೧೪] ತಿಳಿಬಣ್ಣದ ಮುಖಪುಟ ಹಾಳೆಯ ಮೇಲೆ ಅಚ್ಚ ಬಿಳಿಯ ಬಣ್ಣದ ಚೌಕಟ್ಟು ರೇಖೆಗಳನ್ನು ರೂಪಿಸುವುದರ ಮೂಲಕ ಕೃತಿಯ ಛಾಯಾಚಿತ್ರ ಸ್ಫುಟವಾಗಿ, ಮನೋಹರವಾಗಿ ಕಾಣುವಂತೆ ವಿನ್ಯಾಸಗೊಳಿಸಿರುವುದು ವಿಶೇಷವಾಗಿ ಗಮನಕ್ಕೆ ಬರುವ ಸಂಗತಿ.

### ೩.೪.೧೩. ಅ.ನ. ಸುಬ್ಬರಾವ್ (೧೯೯೭)

ಹರಿಹರಪ್ರಿಯ ಎಂಬ ಲೇಖಕರಿಂದ ರಚಿತವಾದ 'ಅ.ನ.ಸುಬ್ಬರಾವ್' ಎಂಬ ಪುಸ್ತಕ ಬೆಂಗಳೂರಿನ ಬಸವನಗುಡಿಯ ಲಿಪಿ ಮುದ್ರಣ ಇವರಿಂದ ೧೯೯೭ರಲ್ಲಿ ಪ್ರಥಮ ಮುದ್ರಣ ಕಂಡಿದ್ದು, ಈ ಪುಸ್ತಕದ ಮುಖಪುಟಕ್ಕೆ ಅ.ನ.ಸುಬ್ಬರಾವ್ ರವರ ಶಿಷ್ಯ, ಕರ್ನಾಟಕದ ಹೆಸರಾಂತ ಶಿಲ್ಪಕಲಾವಿದರಾದ ವೆಂಕಟಾಚಲಪತಿಯವರಿಂದ ಕಂಚಿನ ಎರಕದಲ್ಲಿ ಮೂಡಿಸಲ್ಪಟ್ಟ ಅ.ನ.ಸುಬ್ಬರಾವ್ ಅವರ ಭಾವಶಿಲ್ಪದ ಛಾಯಾಚಿತ್ರವನ್ನೇ ಮುದ್ರಿಸಿ ವಿನ್ಯಾಸಗೊಳಿಸಿರುವುದು ವಿಶೇಷ ಅಂಶ. ತಿಳಿನೀಲಿಬಣ್ಣದ ಮುಖಪುಟ ಕಾಗದದ ಮೇಲೆ ವಿನ್ಯಾಸಗೊಂಡಿದುದರಿಂದ ಇಲ್ಲಿ ಈ ಭಾವಶಿಲ್ಪದ ಛಾಯಾಚಿತ್ರ ಓದುಗರ ಹೆಚ್ಚಿನ ಗಮನವನ್ನು ತನ್ನತ್ತ ಸೆಳೆದುಕೊಳ್ಳುತ್ತದೆ ಎನ್ನಬಹುದು.

ಇದರ ಜೊತೆಗೆ 'ಈ ಭಾವಶಿಲ್ಪ ಕಂಡರಿಸಿದ ಬಗೆಯೂ ಕೂಡ ವಿಶಿಷ್ಟವಾದುದು ಮತ್ತು ಭಾವಪೂರ್ಣತೆಯಿಂದ ಕೂಡಿರುವುದರಿಂದ ಕಲಾರಂಗದಲ್ಲಿ ಆಸಕ್ತರಾದ, ಸಕ್ರೀಯರಾದ ಪ್ರಾಜ್ಞ ಕಲಾವಿದ ಬಳಗವನ್ನು ಹೆಚ್ಚಿನ ರೀತಿಯಲ್ಲಿ ಆಕರ್ಷಿಸುವಂತಹುದು. ವೆಂಕಟಾಚಲಪತಿ ಯವರಿಂದ ನಿರ್ಮಿತವಾದ ಈ ಭಾವ ಶಿಲ್ಪದಲ್ಲಿ ತೋರ್ಪಡಿಕೆಯಾಗಿರುವ ಮುಖದ ಏರಿಳಿತಗಳು, ಮೈವಳಿಕೆಗಳನ್ನು ಸೃಷ್ಟಿಸಿದ ರೀತಿ

೧೪ ಪಿ. ಆರ್ ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು–೨೧೭–೨೧೮

ತುಂಬ ಸೃಜನಶೀಲವಾಗಿರುವುದಲ್ಲದೆ, ಸಂಯೋಜನೆ, ತಂತ್ರಗಾರಿಕೆ, ಉಬ್ಬು-ತಗ್ಗು ಮೈವಳಿಕೆ ಮಾಧ್ಯಮವನ್ನು ದುಡಿಸಿಕೊಳ್ಳುವಿಕೆ ಇವುಗಳ ಸಮ್ಮಿಲನ ಕೌಶಲ್ಯದಲ್ಲಿ ಅವರದೇ ಆದ ಒಂದು ಅನನ್ಯ ಅಭಿವ್ಯಕ್ತಿ ಮೇಳೈಸಿರುವುದರಿಂದ ಮತ್ತು ಒಬ್ಬ ನುರಿತ ಶಿಲ್ಪಿಯ ಕೃತಿಯಲ್ಲಿ ಹುದುಗಿದ ವಿಶಿಷ್ಟ ಕಲಾಮೌಲ್ಯಗಳನ್ನು ಕಲಾರಸಿಕರಿಗೆ ಒದಗಿಸಬಲ್ಲ ಸಾಧ್ಯತೆ ಇಲ್ಲಿರುವುದರಿಂದಲೂ ಕೂಡ ಈ ಪುಸ್ತಕದ ಮುಖಪುಟ ಮಹತ್ವ ಪೂರ್ಣವಾದುದೆನಿಸಿದೆ.'[೧೫]

ಮುಖಪುಟದಲ್ಲಿ ವಿನ್ಯಾಸಗೊಳಿಸಿದ ಛಾಯಾಚಿತ್ರಕ್ಕೂ ಮತ್ತು ಮುಖಪುಟ ಹಾಳೆಯ ಬಣ್ಣಕ್ಕೂ ಒಂದು ಅನ್ಯೋನ್ಯ ಸಮತೋಲನ ಏರ್ಪಟ್ಟಿರುವದೂ ಸಹ ಇಲ್ಲಿ ಗಮನಿಸತಕ್ಕ ಅಂಶ. ಕಪ್ಪು ಬಣ್ಣದಲ್ಲಿ ೩೨ ಅಳತೆಯ/ಗಾತ್ರದ (Font size) ಗೋಥಿಕ್ ಶೈಲಿಯ ಕನ್ನಡ ಅಕ್ಷರಗಳಲ್ಲಿ ಕೃತಿಶೀರ್ಷಿಕೆ ಬರೆಯಲಾಗಿದ್ದು ಅದರ ಕೆಳಗಡೆ ಕಪ್ಪುಬಣ್ಣದಲ್ಲಿಯೇ ಸರಳ ರೇಖೆಯನ್ನು ರೂಪಿಸಿ ಆ ರೇಖೆಯ ಕೆಳಗೆ ೧೬ ಗಾತ್ರದ/ಅಳತೆ (Font size)ಯಲ್ಲಿ ಕನ್ನಡ ಅಕ್ಷರಗಳಲ್ಲಿ ರೋಮನ್ ಶೈಲಿಯಲ್ಲಿ ಕೃತಿಕಾರರ ಹೆಸರನ್ನು ಮುದ್ರಿಸಲಾಗಿದೆ. ಛಾಯಾಚಿತ್ರದ ಕೆಳಗಡೆ (ಮುಖಪುಟದ ತಳಭಾಗ) ಕನ್ನಡದಲ್ಲಿಯೇ ೧೪ ಅಳತೆ(Font size)ಯಲ್ಲಿ ರೋಮನ್ ಶೈಲಿಯ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ನಮೂದಿಸಲಾಗಿದೆ. ಈ ಕೃತಿಯ ಮುಖಪುಟದಲ್ಲಿ ಇಂಗ್ಲಿಷ್ ಅಕ್ಷರಗಳಲ್ಲಿ ಕೃತಿ ಶೀರ್ಷಿಕೆ, ಕೃತಿಕಾರರ ಹೆಸರು, ಕರ್ನಾಟಕ ಲಲಿತಕಲಾ ಅಕಾಡೆಮಿಯ ಹೆಸರನ್ನು ನಮೂದಿಸದೇ ಇರುವುದು ಮತ್ತು ಕರ್ನಾಟಕ ಲಲಿತಕಲಾ ಅಕಾಡೆಮಿಯ ಲಾಂಛನವನ್ನು (Logo) ಮುದ್ರಿಸದೇ ಇರುವುದು ಉಲ್ಲೇಖನೀಯ ಅಂಶ.

### ೩.೪.೧೪. ದೇವಲಕುಂದ ವಾದಿರಾಜ್ (೧೯೯೭)

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟಗೊಂಡ ಇನ್ನೊಂದು ಮಹತ್ವಪೂರ್ಣ ಕಿರು ಹೊತ್ತಗೆಯೆಂದರೆ 'ದೇವಲಕುಂದ ವಾದಿರಾಜ' ಎಂಬುದು. ಕನ್ನಡ ನಾಡಿನ ಹೆಸರಾಂತ ಶಿಲ್ಪ ದೇವಲಕುಂದ ವಾದಿರಾಜರ ಜೀವನ ಮತ್ತು ಸಾಧನೆಯನ್ನು ಕುರಿತಾದ ಈ ಪುಸ್ತಕವನ್ನು, ಬರೆದವರು ಹೆಚ್.ಎನ್.ಸುರೇಶ ಎನ್ನುವವರು. ಇದು ೧೯೯೭ ರಲ್ಲಿ ಬೆಂಗಳೂರಿನ ರಶ್ಮಿ ಮುದ್ರಣ ಇವರಿಂದ ಪ್ರಥಮ ಮುದ್ರಣ ಕಂಡುದಾಗಿದೆ. ತಿಳಿಗಂದು ಹಳದಿ ಬಣ್ಣದ ಕಾಗದದ ಮೇಲೆ ದೇವಲಕುಂದ ವಾದಿರಾಜರು ಶಿಲೆಯಲ್ಲಿ ರಚಿಸಿದ 'ಹೊಯ್ಸಳ ಶೈಲಿಯ'[೧೬] ವಿಷ್ಣು ಮೂರ್ತಿಯ ಒಂದು ಭಾಗದ ವಿವರದ ಛಾಯಾಚಿತ್ರವನ್ನು ವಿನ್ಯಾಸಗೊಳಿಸಿ ಮುಖಪುಟ ರಚಿಸಲಾಗಿದೆ. ಶುದ್ಧ ಹೊಯ್ಸಳ ಸಂಪ್ರದಾಯ ಲಕ್ಷಣಗಳುಳ್ಳ ಶಿಲ್ಪವಿದು ಇದನ್ನು ಅಚ್ಚಬಿಳಿ ಬಣ್ಣದ ಅಂಚುರೇಖೆಗಳನ್ನು ನಿರ್ಮಿಸಿ, ವಿನ್ಯಾಸಗೊಳಿಸಿರುವುದರಿಂದ ಮುಖಪುಟದ ಸೌಂದರ್ಯವನ್ನು ಹೆಚ್ಚಿಸಿದೆ. ಈ ಛಾಯಾಚಿತ್ರದ ಮೇಲ್ಗಡೆ ಕೃತಿಯ ಶೀರ್ಷಿಕೆಯನ್ನು ಕಪ್ಪುಬಣ್ಣದಲ್ಲಿ ೨೬ ಅಳತೆಯ/ಗಾತ್ರದ (Font size) ರೋಮನ್ ಶೈಲಿಯ ಕನ್ನಡ ಅಕ್ಷರಗಳಲ್ಲಿ ಮತ್ತು ೨೮ ಅಳತೆಯ (Font size) ಶೆರಿಫ್ ರೋಮನ್

---

೧೫. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ; ದಿ ೨೦೧೬

೧೬. ಡಾ.ಅಂಬಳಿಕೆ ಹಿರಿಯಣ್ಣ: ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ೯೫೧-೯೫೨

ಶೈಲಿಯ ಇಂಗ್ಲಿಷ್ ಅಕ್ಷರಗಳಲ್ಲಿ ನಮೂದಿಸಿದ್ದು, ಛಾಯಾಚಿತ್ರದ ಕೆಳಗಡೆ ಅಷ್ಟೇ ಪ್ರಮಾಣದ ಕಪ್ಪುಬಣ್ಣದಲ್ಲಿ ಪುಟ್ಟದಾಗಿ ೧೪ ಅಳತೆಯ/ಗಾತ್ರದ ಸಾಮಾನ್ಯ ಶೈಲಿಯ ಕನ್ನಡ ಮತ್ತು ಇಂಗ್ಲಿಷ್ ಭಾಷೆಯ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಬರೆಯಲಾಗಿದೆ.

**೩.೪.೧೫. ಕಲಾವಿದರ ವಿಳಾಸ ಕೈಪಿಡಿ (೧೯೯೭)**

'ಕಲಾವಿದರ ವಿಳಾಸ ಕೈಪಿಡಿ' (Artists mailing List) ೧೯೯೭ರಲ್ಲಿ ಸಿ. ಚಂದ್ರಶೇಖರ್‌ರವರ ಸಂಪಾದಕತ್ವದಲ್ಲಿ ಶ್ರೀರಂಗರವರಿಂದ ಮುದ್ರಿತಗೊಂಡಿದೆ. ಅದರ ಮುಖಪುಟದಲ್ಲಿ ಏಕವರ್ಣ ಗ್ರಾಫಿಕ್ ಕೃತಿಯೊಂದನ್ನು ಮುದ್ರಿಸಲಾಗಿದ್ದು ಅದರ ಬಾಹ್ಯರೂಪು-ರೇಷೆ ಹೀಗಿದೆ ಬಣ್ಣದ ಪ್ಯಾಲೇಟ್, ಅದಕ್ಕೆ ಸಿಕ್ಕಿಸಿದ ಎರಡು ಕುಂಚಗಳು ಈ ಬಣ್ಣದ ಪ್ಯಾಲೇಟಿನ ಹಿನ್ನೆಲೆಯಲ್ಲಿ ಬಿಳಿಯ ಚುಕ್ಕೆಗಳುಳ್ಳ ಕಂದು ಬಣ್ಣದ ಜಡೆಯಂತಹ ಎರಡು ಸಮತಳಗಳನ್ನು ಹೊಲಿದು ಪೋಣಿಸಲಾಗಿದೆ.

ಮೇಲ್ಗಡೆಯಲ್ಲಿ ಘನದ ಕಲ್ಪನೆಯನ್ನು ಕೊಡುವಂತಹ (ಕಲ್ಲಿನಂತಹ) ಕಂದು ಬಣ್ಣದ ಆಕೃತಿಯಿದ್ದು ಅದಕ್ಕೂ ಒಂದಿಷ್ಟು ಬಿಳಿಯ ಕಲೆಗಳಿವೆ. ಇವಿಷ್ಟು ಆಕಾರಗಳನ್ನು ಹೊಂದಿದ ಚಿತ್ರಕ್ಕೆ ಅದರ ಮೇಲಕ್ಕೆ ಕೆಳಕ್ಕೆ ಎಡ ಬಲಗಳಲ್ಲೂ ಸಮತೋಲಯುಕ್ತ ಪ್ರಮಾಣದಲ್ಲಿ ಖಾಲಿಜಾಗ ಉಳಿಸಿಕೊಂಡು ಹೊರಗಡೆ ಅಂಚನ್ನು ಕಪ್ಪು ಅಂಚುರೇಖೆಯೊಂದಿಗೆ ಅಚ್ಚಿಸಲಾಗಿದೆ. ಈ ಕೃತಿಯ ಶೈಲಿ, ತಂತ್ರಗಾರಿಕೆ, ಮೈವಳಿಕೆ ತೋರ್ಪಡಿಕೆ, ಹೊಲಿಗೆ, ಮಾದರಿ ಇವೆಲ್ಲವನ್ನು ಗಮನಿಸಿದರೆ ಇದು ಕರ್ನಾಟಕದ ಖ್ಯಾತ ಗ್ರಾಫಿಕ್ (ಮುದ್ರಣ) ಕಲಾವಿದರಾದ ಸಿ.ಚಂದ್ರಶೇಖರ್ ರವರ ಕಲಾಕೃತಿಯೆಂದು ಊಹಿಸಲು ಸಾಧ್ಯವಿದೆ.

ಚಿತ್ರದಲ್ಲಿ ಅಳವಡಿಸಿದ ಆಕಾರಗಳು, ತೋರ್ಪಡಿಸಿದ ಗ್ರಾಫಿಕ್ ತಂತ್ರಕಲ್ಪನೆ, ಇವುಗಳ ಆಧಾರದಿಂದಲೇ ಸೂಕ್ಷ್ಮ ಪ್ರಜ್ಞೆಯುಳ್ಳ ಓದುಗರು ಇದು ಕಲೆಗೆ / ಕಲಾವಿದರಿಗೆ ಸಂಬಂಧಿಸಿದ್ದು ಎಂದು ಸ್ಥೂಲವಾಗಿಯಾದರೂ ತೀರ್ಮಾನಕ್ಕೆ ಬರಲು ಸಹಕಾರಿಯಾಗುವಂತಿದೆ. ಕೃತಿಯ ಶೀರ್ಷಿಕೆ ಮತ್ತು ಮುಖಪುಟ ಚಿತ್ರಕ್ಕೆ ತುಂಬ ಹೊಂದಾಣಿಕೆಯನ್ನು ಇಲ್ಲಿ ನಾವು ಕಾಣಬಹುದು. ಮುಖಪುಟದ ಹಾಳೆಯ ಅತಿ ಮಂದ ಬಣ್ಣ ಮತ್ತು ಚೌಕಟ್ಟಿನೊಳಗಿರುವ ಕಲಾಕೃತಿಯ (ಚಿತ್ರದ) ಗಾಢ ಬಣ್ಣ ಆಚೀಚೆ ಏರ್ಪಾಡಾಗಿರುವ ಅಚ್ಚ ಬಿಳಿ ಬಣ್ಣದ ಕೆಂಪು ಕಲಾಕೃತಿಯ ಮಧ್ಯದಲ್ಲಿ ಏರ್ಪಟ್ಟಿರುವ ಬಿಳಿಯ ಅವಕಾಶ ಇವೆಲ್ಲವುಗಳ ಸಂಯೋಜನೆಯಲ್ಲಿ ಒಂದು ಸಂತುಲನೆ ಏರ್ಪಟ್ಟಿರುವುದರಿಂದ ಮುಖಪುಟ ವಿನ್ಯಾಸ ಕಣ್ಣಿಗೆ ಹಿತವಾದ ನೋಟವನ್ನು ಒದಗಿಸುತ್ತದೆ.

ಇಲ್ಲಿ ನಮೂದಿಸಿದ ಕಲಾವಿದರ ವಿಳಾಸ ಕೈಪಿಡಿ ಎಂಬ ಪದಗಳ ಅಕ್ಷರಗಳ ವಿನ್ಯಾಸ ರೋಮನ್ ಬಗೆಯದು, ಶೀರ್ಷಿಕೆಯ ಅಡಿಯಲ್ಲಿಯೇ ಕಂಸದೊಳಗೆ ಇರುವ ಇಂಗ್ಲಿಷ್ ಅಕ್ಷರಗಳ ಶೈಲಿ ಸಾಮಾನ್ಯ ರೋಮನ್ ಮಾದರಿಯದು, ಕರ್ನಾಟಕ ಲಲಿತಕಲಾ ಅಕಾಡೆಮಿ ಎಂಬ ಪದ ಸಮೂಹದ ಅಕ್ಷರ ವಿನ್ಯಾಸ ಹಾಗೂ ಅದರ ಕೆಳಗಡೆಯೇ ಅಚ್ಚಿಸಿರುವ ಬೆಂಗಳೂರು ಎಂಬ ಪದದ ಅಕ್ಷರಗಳು ಗೋಥಿಕ್ ಮಾದರಿ ನಮೂನೆಯಲ್ಲಿವೆ.

### ೩.೪.೧೬. ಮಧುಗಿರಿ ರಾಮು (೧೯೯೭)

ಹೆಸರಾಂತ ಚಿತ್ರಕಾರ ಮಧುಗಿರಿ ರಾಮುರವರ ಜೀವನ ಪರಿಚಯ ಮತ್ತು ಕಲಾಸಾಧನೆಯ ಪರಿಚಯ ನೀಡುವ 'ಮಧುಗಿರಿ ರಾಮು' ಪುಸ್ತಕವನ್ನು ಯು.ಎಸ್.ವೆಂಕಟರಾಮನ್ ಎಂಬ ಲೇಖಕರು ಬರೆದಿದ್ದು, ಬೆಂಗಳೂರಿನ ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಇವರು ಅದನ್ನು ೧೯೯೭ ರಲ್ಲಿ ಪ್ರಥಮ ಬಾರಿಗೆ ಮುದ್ರಿಸಿರುತ್ತಾರೆ. (ಇದೂ ಸಹ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದಲೇ ಆದ ಕಾರ್ಯ) ಮಧುಗಿರಿ ರಾಮುರವರೇ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ ವಾಲ್ಮೀಕಿ ಮಹರ್ಷಿಗಳ ಭಾವಚಿತ್ರದ ಛಾಯಾಚಿತ್ರವನ್ನೇ ಈ ಕೃತಿಯ ಮುಖಪುಟದಲ್ಲಿ ಮುದ್ರಿಸಿ, ಮುಖಪುಟ ರೂಪಿಸಲಾಗಿದೆ.

ಚಿತ್ರದ ವಿವರ ಇಂತಿದೆ ಕಾವಿವಸ್ತ್ರದಿಂದ ಸುಶೋಭಿತನಾದ ವಾಲ್ಮೀಕಿ ಮಹರ್ಷಿ ತುಸು ಓರೆಯಾಗಿ ಚಕ್ಕಳ ಬಕ್ಕಳ ಹಾಕಿ ಮೃಗಚರ್ಮದ ಮೇಲೆ ಕುಳಿತಿದ್ದು ಬಲತೊಡೆಯ ಮೇಲೆ ತಾಳೆಗರಿಯನ್ನಿರಿಸಿಕೊಂಡು ರಾಮಾಯಣದ ಬರವಣಿಗೆಯಲ್ಲಿ ತೊಡಗಿದ್ದಾರೆ. ಬಿಳಿಕೂದಲು ಮತ್ತು ನೆರೆತ ಗಡ್ಡಧಾರಿಯಾದ ಅವರು ಹಣೆಯ ಮೇಲೆ ಮುದ್ರಾಭೂಷಿತರಾಗಿದ್ದು ತುಂಬ ಪ್ರಸನ್ನ ಚಿತ್ತದಿಂದಿದ್ದಾರೆ. ಕೊರಳಲ್ಲಿ ಜಪಮಾಲೆಗಳು ಪಕ್ಕದಲ್ಲಿ ದಂಡ ಕಮಂಡಲು, ತಾಳೆ ಗರಿಕಟ್ಟುಗಳು ಇವೆ. ಜಿಂಕೆ ಮೊಲಗಳೇ ಮೊದಲಾದ ಜೀವಿಸಂಕುಲಗಳಿಂದಲೂ, ಪುಷ್ಪರಾಜಿಗಳಿಂದಲೂ ಆವೃತವಾಗಿರುವ ವನ ಮಹರ್ಷಿಗಳ ಹಿನ್ನೆಲೆಯಲ್ಲಿ ರಚನೆಯಾಗಿರುವುದಲ್ಲದೆ, ಸೀತಾಮಾತೆಯೊಡಗೂಡಿದ ಲವ-ಕುಶರು ಧನುರ್ವಿದ್ಯಾಭ್ಯಾಸದಲ್ಲಿ ತಲ್ಲೀನರಾಗಿರುವ ದೃಶ್ಯದ ಜೊತೆಗೆ ಮಹರ್ಷಿಯ ಆಶ್ರಮವೂ ಚಿತ್ರಿಸಲ್ಪಟ್ಟಿದೆ.

ಒಟ್ಟಿನಲ್ಲಿ ಈ ಕೃತಿಯಲ್ಲಿ ಚಿತ್ರಿಸಿದ ಆಕೃತಿಗಳ ಚಿತ್ರದಲ್ಲಿ ರೂಪಿಸಿದ ಮುನ್ನೆಲೆ ಹಿನ್ನೆಲೆಯ ಸಂಯೋಜನೆ ತೋರ್ಪಡಿಸಿದ ಯಥಾದರ್ಶನ ನಿರೂಪಣೆ ಅಲ್ಲದೆ ಕೃತಿಯಲ್ಲಿ ಒಳಗೊಳ್ಳಬಹುದಾದ ಪ್ರತಿ ಅಂಶಗಳನ್ನು 'ಪಾಶ್ಚಾತ್ಯ ನೈಜಶೈಲಿ'[೧೭] ಪದ್ಧತಿಯ ಅನುಸಾರ ತುಂಬ ಕೌಶಲ್ಯಪೂರ್ಣವಾಗಿ, ಆಸಕ್ತಿ ಪೂರ್ಣವಾಗಿ, ಸವಿವರವಾಗಿ ರೂಪಿಸಿದ್ದುದು ಇವೆಲ್ಲವೂ ಗಮನಿಸತಕ್ಕಂತಹ. ಕಲಾವಿದರ ಕಲಾ ಪ್ರಾವೀಣ್ಯತೆಯನ್ನು ನಿರ್ದೇಶಿಸಬಲ್ಲಂತಹ (ಸೂಚಿಸಬಲ್ಲಂತಹ) ಅಂಶಗಳು. ಶ್ರೀಸಾಮಾನ್ಯರಿಗೂ ಸಂತೋಷ ನೀಡಬಲ್ಲ, ಇಂತಹ ಕಲಾಕೃತಿಯ ಛಾಯಾಚಿತ್ರವನ್ನು ಮುಖಪುಟದಲ್ಲಿನ ಅವಕಾಶದಲ್ಲಿ ಅದರ ಎಡ-ಬಲ, ಮೇಲಕ್ಕೆ ಕೆಳಕ್ಕೆ ಸಮಪ್ರಮಾಣದ ಅಂತರವನ್ನು ಬಿಟ್ಟು ವಿನ್ಯಾಸಗೊಳಿಸಿರುವುದು ಸೂಕ್ತವಾದಂತಹ ಅಂಶ. ಹಳದಿಬಣ್ಣದ ಮುಖಪುಟ ಹಾಳೆಯ ಮೇಲೆ ಮನೋಹರ ನಿಸರ್ಗ ಸನ್ನಿವೇಶವನ್ನು ಹಿನ್ನೆಲೆಯಾಗಿ ಹೊಂದಿರುವ ಈ ಕಾರಣದಿಂದಾಗಿ ಈ ಕೃತಿಯ ಛಾಯಾಚಿತ್ರ ಇಡಿಯ ಮುಖಪುಟದ ಆಕರ್ಷಣೆಗೆ ಕಾರಣವಾಗಿದೆ. (ಚಿತ್ರದಲ್ಲಿ ಮಹರ್ಷಿಯ ಪಾದದ ಕೆಳಗಡೆ ಶ್ರೀರಾಮರಕ್ಷಾ ಸ್ತೋತ್ರದಲ್ಲಿನ ಒಂದು ಶ್ಲೋಕವಾದ 'ಕೂಜಂತಂ ....... ವಾಲ್ಮೀಕಿ ಕೋಕಿಲಂ' ಅನ್ನು ಬರೆದಿದ್ದು (ಕನ್ನಡ ಅಕ್ಷರಗಳಲ್ಲಿ) ಅದರ ಸನಿಹ ಮೂಲೆಯಲ್ಲಿ ಕಲಾವಿದರ ಹೆಸರು, ಸ್ಥಳ ಸಹ ನಮೂದಾಗಿರುವುದು ಗಮನೀಯ ಅಂಶವಾಗಿದೆ) ಕಡುಕಪ್ಪು

೧೭ ಹಿ. ಆರ್ ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ-೨೦೮-೨೧೯

ಬಣ್ಣದಲ್ಲಿ ಕನ್ನಡದ ೨೮ ಅಳತೆಯ (Font size) ಯಲ್ಲಿ ಗೋಥಿಕ್ ಮಾದರಿಯ ಅಕ್ಷರಗಳಲ್ಲಿ ಅಲ್ಲದೆ ಇಂಗ್ಲಿಷಿನ ೨೮ ಅಳತೆಯ (Font size) ಯಲ್ಲಿ ರೋಮನ್ ಶೈಲಿಯ ಅಕ್ಷರಗಳಲ್ಲಿ ಕೃತಿಶೀರ್ಷಿಕೆ ನಮೂದಿಸಲಾಗಿದೆ. ಮುಖಪುಟದ ತಳಭಾಗದಲ್ಲಿ ಕಡುಕಪ್ಪು ಬಣ್ಣದಲ್ಲಿ ಕನ್ನಡದ ೧೮ ಗಾತ್ರದ (Font size) ರೋಮನ್ ಶೈಲಿಯ ಅಕ್ಷರಗಳಲ್ಲಿ ಹಾಗೂ ಇಂಗ್ಲಿಷಿನ ೧೬ ಗಾತ್ರದ (Font size) ರೋಮನ್ ಶೈಲಿಯ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಮುದ್ರಿಸಲಾಗಿದೆ.

### ೩.೪.೧೭. ಎಫ್. ಎಂ. ಸೂಫಿ (೧೯೯೮)

ನಾಡಿನ ಹೆಸರಾಂತ ನಿಸರ್ಗ ಚಿತ್ರಕಾರ ಮತ್ತು ಕಲಾ ಬರಹಗಾರರಾದ ಪಿ.ಆರ್. ತಿಪ್ಪೇಸ್ವಾಮಿಯವರಿಂದ ರಚನೆಗೊಂಡ 'ಎಫ್.ಎಂ.ಸೂಫಿ' ಎಂಬ ಪುಸ್ತಕ ೧೯೯೮ರಲ್ಲಿ ಸಿಂಧು ಗ್ರಾಫಿಕ್ಸ್ ಇವರಿಂದ ಮೊದಲ ಮುದ್ರಣ ಕಂಡುದಾಗಿದೆ. ಈ ಕೃತಿಯ ಮುಖಪುಟಕ್ಕೆ ಸೂಫಿಯವರು ಬರೆದ 'ದಿ ಜಿಪ್ಸಿಕುಕ್' ಎಂಬ ಶೀರ್ಷಿಕೆಯುಳ್ಳ ಕಲಾಕೃತಿಯ ಛಾಯಾಚಿತ್ರವನ್ನೇ ಮುದ್ರಿಸಿ ವಿನ್ಯಾಸಗೊಳಿಸಲಾಗಿದೆ. ಇಲ್ಲಿ ಆಯಾಸಗೊಂಡ ಓರ್ವ ಕಡುಬಡವಿ ಅಡುಗೆ ಕೆಲಸದಲ್ಲಿ ತೊಡಗಿದ್ದಾಳೆ. ಕಟ್ಟಿಗೆಯ ಒಲೆಯ ಮೇಲೆ ಅಡುಗೆ ಮಾಡಿಕೊಳ್ಳುತ್ತಿದ್ದು, ಊದು ಕೊಳವೆ ಮೂಲಕ ಒಲೆಯಲ್ಲಿನ ಬೆಂಕಿಯನ್ನು ಗಾಳಿಹಾಕಿ ಊದುತ್ತಿದ್ದಾಳೆ. ಅಡುಗೆಯ ಒಲೆಯ ಬೆಂಕಿಯಿಂದ ಉತ್ಪನ್ನವಾದ ನಸು ಮಬ್ಬು ಬೆಳಕು ಆಕೆಯ ಬಾಡಿದ ಮುಖವನ್ನು ಸ್ಪಷ್ಟವಾಗಿ ತೋರಿಸುತ್ತಿದ್ದು, ಒಲೆಯ ಮೇಲಿಟ್ಟಿರುವ ಪಾತ್ರೆಯ ಮೇಲೆ ಹೊಗೆ ಆವರಿಸಿದೆ.

'ಇಲ್ಲಿ ಕಲಾವಿದರು ಆ ಬಡ ಹೆಣ್ಣುಮಗಳು ಉಟ್ಟ ಚಿಂದಿಯಾದ ಬಟ್ಟೆ, ಅಡುಗೆಗೆ ಬಳಸಲ್ಪಟ್ಟಿರುವ ಮಾಸಿದ ತೀರ ಹಳೆಯದಾದ ಮಣ್ಣಿನ ಮಡಕೆ, ಸೌಟು, ಒಲೆಯಿಂದ ಬೆಂಕಿ ಉತ್ಪನ್ನವಾದುದು ಕಟ್ಟಿಗೆ ಒಲೆಯಿಂದ ಅನ್ನ ಬೇಯುವಾಗ ಏರ್ಪಡುವ ಹೊಗೆಯುಕ್ತ ವಾತಾವರಣ ಇವೆಲ್ಲ ಸೂಕ್ಷ್ಮ ಸಂಗತಿಗಳನ್ನು ಸ್ವಾಭಾವಿಕ ಬಣ್ಣಗಳಲ್ಲಿ ಮನತಟ್ಟುವಂತೆ ಅಭಿವ್ಯಕ್ತಿಸಿದ್ದು ವಿಶೇಷ ಅಂಶ.'[೧೮] ತಿಳಿ ಕಂದು ಬಣ್ಣದ ಮುಖಪುಟ ಕಾಗದದ ಮೇಲೆ ಅಚ್ಚುಕಟ್ಟಾದ ಚೌಕಟ್ಟಿನಲ್ಲಿ ಇಂತಹ ಹೃದಯಸ್ಪರ್ಶಿ ಕಲಾಕೃತಿಯ ಛಾಯಾಚಿತ್ರವನ್ನು ಮುದ್ರಿಸಿರುವುದರಿಂದ ಮತ್ತು ಪುಸ್ತಕದ ಆಕಾರ, ಗಾತ್ರಕ್ಕೆ ಅನುಗುಣವಾಗಿ ಓದುಗರಿಗೆ ಕೃತಿ ಶೀರ್ಷಿಕೆ ಸರಳವಾಗಿ ಸ್ಪಷ್ಟವಾಗಿ ಗೋಚರಿಸಲಿ ಎಂಬ ಉದ್ದೇಶದಿಂದ ಈ ಕೃತಿಯ ಶೀರ್ಷಿಕೆಯನ್ನು ಸಾಕಷ್ಟು ಗಮನಾರ್ಹ ಪ್ರಮಾಣದ ಅಳತೆಯ ಕನ್ನಡ ಮತ್ತು ಇಂಗ್ಲಿಷ್ ಅಕ್ಷರಗಳಲ್ಲಿ ಮುದ್ರಿಸಲಾಗಿದ್ದು ಕನ್ನಡ ಅಕ್ಷರಗಳು ೩೦ (Font size) ಅಳತೆಯಲ್ಲಿ/ಗಾತ್ರದಲ್ಲಿ ರೋಮನ್ ಶೈಲಿಯಲ್ಲಿವೆ. ಅದರ ಕೆಳಗಡೆ ಇರುವ ಇಂಗ್ಲಿಷ್ ಅಕ್ಷರಗಳು ಸಹ ೩೦ ಅಳತೆ(Font size)ಯಲ್ಲಿ ಮತ್ತು ರೋಮನ್ ಶೈಲಿಯಲ್ಲಿವೆ. ಚಿತ್ರದ ಕೆಳಗಡೆ ಪುಟ್ಟದಾದ ಆದರೆ ಸ್ಪಷ್ಟವಾಗಿ ಗುರ್ತಿಸಬಲ್ಲುದಾದ ಕನ್ನಡ ಮತ್ತು ಇಂಗ್ಲೀಷ್ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಬರೆದಿದ್ದು, ಅದರ ವಿಳಾಸವೂ ನಮೂದಿಸಲ್ಪಟ್ಟಿದೆ, ಇಲ್ಲಿ

---

೧೮. ಸಂದರ್ಶನ: ಡಾ. ಎಸ್. ಸಿ. ಪಾಟೀಲ (ಚಿತ್ರಕಲಾವಿದರು & ಪ್ರಾಧ್ಯಾಪಕರು, ಕ.ವಿ.ವಿ.,ಹಂಪಿ), ದಿ: ೨೦೧೬

ಕರ್ನಾಟಕ ಲಲಿತಕಲಾ ಅಕಾಡೆಮಿ ಎಂಬ ಪದದ ಕನ್ನಡ ಅಕ್ಷರಗಳು ೧೬ ಅಳತೆ(Font size)ಯಲ್ಲಿದ್ದು ರೋಮನ್ ಶೈಲಿಯಲ್ಲಿವೆ. ಅದರ ಇಂಗ್ಲಿಷ್ ಅಕ್ಷರಗಳು ೧೪ ಅಳತೆ(Font size)ಯಲ್ಲಿದ್ದು ಅವುಗಳು ಸಹ ರೋಮನ್ ಶೈಲಿಯಲ್ಲಿವೆ. ಕನ್ನಡ ಮತ್ತು ಇಂಗ್ಲಿಷ್ ಭಾಷೆಯ ವಿಳಾಸದ ಅಕ್ಷರಗಳು ಸಾಮಾನ್ಯ ಮಾದರಿಯಲ್ಲಿದ್ದು ಅವುಗಳು ೧೦ ಅಳತೆ(Font size)ಯಲ್ಲಿವೆ. ಮುಖಪುಟದಲ್ಲಿ ಅಚ್ಚಿಸಿದ ಚಿತ್ರದ ಛಾಯಾಚಿತ್ರದ ಮೇಲೆ ಕೆಳಗೆ ಎಡಬಲಗಳಲ್ಲಿ ರೂಪಿಸಿದ ಸಂತುಲನಯುಕ್ತ ಅವಕಾಶ ವಿಂಗಡಣೆಯಿಂದಾಗಿ ಈ ಮುಖಪುಟ ಆಕರ್ಷಣೆ ಹೆಚ್ಚಿಸಿಕೊಂಡಿದೆ ಎಂದು ಅಭಿಪ್ರಾಯಪಡಬಹುದು.

**೩.೪.೧೮. ನೋಟ ಪಲ್ಲಟ (೧೯೯೮)**

'ನೋಟ ಪಲ್ಲಟ' ಎಂಬ ಪುಸ್ತಕದ ಲೇಖಕರು ಎಚ್. ಎ. ಅನಿಲ್‌ಕುಮಾರ್. ಈ ಕೃತಿಯನ್ನು ಮೊದಲು ಮುದ್ರಿಸಿದವರು ಬೆಂಗಳೂರಿನ ರಶ್ಮಿ ಪ್ರಿಂಟ್ ಸರ್ವೀಸ್ ಇವರು. ಸುರೇಖಾರವರ ಕಲಾಕೃತಿಯ (ಇನ್‌ಸ್ಟಾಲೇಶನ್ ಕಲಾಕೃತಿ) ವರ್ಣಛಾಯಾಚಿತ್ರವನ್ನು ರಕ್ಷಾಪುಟಕ್ಕೆ ಬಳಸಿಕೊಂಡು ಈ ಪುಸ್ತಕಕ್ಕೆ ರಕ್ಷಾಪುಟ ವಿನ್ಯಾಸಗೊಳಿಸಲಾಗಿದ್ದು, ರಕ್ಷಾಪುಟ ವಿನ್ಯಾಸಗಾರಿಕೆ ಭರತೇಶ ಯಾದವ್ ಮತ್ತು ಸುರೇಖರವರುಗಳದ್ದಾಗಿದೆ. 'ಇನ್‌ಸ್ಟಾಲೇಶನ್ ಕಲಾಕೃತಿ'[೯೯] ಕಂಪ್ಯೂಟರ್ ತಂತ್ರಜ್ಞಾನವನ್ನು ಬಳಸಿಕೊಂಡು ರೂಪಿತವಾದ ಈ ಪುಸ್ತಕದ ರಕ್ಷಾಪುಟದಲ್ಲಿ ದಟ್ಟಹಸಿರು ಬಣ್ಣದ್ದೇ ಪಾರಮ್ಯವಿದೆ. ರಕ್ಷಾಪುಟದ ಮೇಲ್ತುದಿಯ ಅಂಚಿನಲ್ಲಿ ಕಂಪ್ಯೂಟರ್ ನೆರವಿನಿಂದ ನಿರ್ಮಿತ ಚಲನಾಪೂರ್ಣ ಕೆಂಪು ಬಣ್ಣದ ಅಲೆಗಳು ಮತ್ತು ಕೆಳಗೂ ಸಹ (ತಳಭಾಗದಲ್ಲಿ) ಅಷ್ಟೇ ಚಲನಾತ್ಮಕವಾದ ತಿಳಿಹಸಿರು ಬಣ್ಣದ ಅಲೆಗಳು ತೋರ್ಪಡಿಕೆಯಾಗಿದ್ದು; ಅವುಗಳು ದಟ್ಟ ಹಸಿರುಬಣ್ಣದಲ್ಲೇ ಸಂಲಗ್ನಗೊಂಡಿವೆ.

ರಕ್ಷಾಪುಟದಲ್ಲಿನ ಇಡಿಯ ಅವಕಾಶದಲ್ಲಿ ಒಂದು ಬದಿಯಲ್ಲಿ ಹೆಚ್ಚು ಅಂತರ ಬಿಟ್ಟು, ಇನ್ನೊಂದು ಪಾರ್ಶ್ವದ ಅಂಚಿಗೆ ತಾಗಿ, ವಿನ್ಯಾಸಗೊಂಡಿರುವ ಕಲಾಕೃತಿಯ ವರ್ಣಛಾಯಾಚಿತ್ರ ನಡುಮಧ್ಯದಲ್ಲಿ ಪ್ರಖರ ಹಳದಿ, ಕೆಂಪು, ಕಪ್ಪು ವರ್ಣಗಳ ಸಮ್ಮಿಶ್ರಣದಿಂದ ಅತ್ಯಂತ ಜ್ವಾಜ್ವಲ್ಯಮಾನವಾಗಿ ಗೋಚರಿಸುತ್ತಿದ್ದು, ಅದರ ಸುತ್ತೆಲ್ಲ ತುಂಬಿರುವ (ಕವಿದಿರುವ) ಗಾಢಕಪ್ಪು ಬಣ್ಣದ ಅವಕಾಶದಿಂದಾಗಿ ಮತ್ತಷ್ಟು, ಮಗದಷ್ಟು ಪ್ರಖರವೆನಿಸಿ, ಪೂರ್ತಿ ರಕ್ಷಾಪುಟದಲ್ಲಿ ನೋಡುಗನ ದೃಷ್ಟಿಯನ್ನು ಸಂಪೂರ್ಣವಾಗಿ ತನ್ನೆಡೆಗೆ ಅದು ಸೆಳೆದುಕೊಂಡು ಬಿಡುತ್ತದೆ. ಶೀರ್ಷಿಕೆಯ ಕೆಳಗಡೆ ಹಾಯ್ದುಹೋಗಿರುವ (ರಕ್ಷಾಪುಟದ ದಟ್ಟಹಸಿರು ಮತ್ತು ತಿಳಿಹಸಿರು ಅಲೆಗಳ ನಡುವಿನಲ್ಲಿ) ಕೆಂಪು ಬಣ್ಣದ ಸರಳ ರೇಖ ಮುಖಪುಟದ ಅವಕಾಶದಲ್ಲಿ ವರ್ಣ ಸಮತೋಲನ ದೃಷ್ಟಿಯಿಂದಷ್ಟೇ ರೂಪಿತವಾದುದಂತೆನಿಸುತ್ತದೆ. ಇದರ ಹಿಂಬದಿ ರಕ್ಷಾಪುಟವನ್ನು ಸಹ ಕಂಪ್ಯೂಟರ್ ತಂತ್ರಜ್ಞಾನ ಬಳಕೆ ಮಾಡಿಕೊಂಡು ರೂಪಿಸಲಾಗಿದ್ದು, ಈ ರಕ್ಷಾಪುಟದ ಅವಕಾಶ ಕಪ್ಪು, ಕಪ್ಪು ಮಿಶ್ರಿತ ಕಡು ಹಸಿರು, ಕಂದು ಬೆರೆತ ಹಸಿರು, ಜೊತೆಗೆ ಅಲ್ಲಲ್ಲಿ ಮಂದಪ್ರಕಾಶ ಬೀರುವ ತಿಳಿಹಸಿರು ಚಿಕ್ಕ, ದೊಡ್ಡ ಚುಕ್ಕೆಗಳು–ಹೀಗೆ ಹಸಿರಿನ ತರತರದ (ಬಗೆಬಗೆಯ) ಬಣ್ಣದೋಕುಳಿ ಏರ್ಪಟ್ಟಿದೆ.

---

೯೯. ಕೆ. ವಿ.ಸುಬ್ರಹ್ಮಣ್ಯ: ಇನ್‌ಸ್ಟಾಲೇಷನ್ ಕಲಾಪ್ರಪಂಚ, ಪು ೧–೨

ಪೂರ್ತಿ ಮೇಲ್ಭಾಗವೂ ಅಲ್ಲದೆ, ಪೂರ್ತಿ ತಳಭಾಗವೂ ಎನಿಸಿದ ಅವಕಾಶದಲ್ಲಿನ ಒಂದು ಅಂಚಿನಲ್ಲಿ ಪಾಸ್‌ಪೋರ್ಟ್ ಅಳತೆಯಲ್ಲಿ ರಕ್ಷಾಪುಟದಲ್ಲಿ ಅಚ್ಚಿಸಿದ ವರ್ಣಛಾಯಾಚಿತ್ರದ ಕೇಂದ್ರ/ಪ್ರಖರ ನೋಟ ಬೀರುವ ಭಾಗವನ್ನು ಮಾತ್ರ ಅಚ್ಚಿಸಲಾಗಿದೆ. ಆ ಫೋಟೋದ ಕೆಳಗಡೆ ಕಂಪ್ಯೂಟರ್ ತಂತ್ರಜ್ಞಾನದಿಂದಲೇ ಕಡುನೀಲಿ, ತಿಳಿನೀಲಿ, ತಿಳಿಹಸಿರು, ಕಡುಕೆಂಪು, ತಿಳಿಗೆಂಪು ವರ್ಣಯುಕ್ತ ಚಲನಾಪೂರ್ಣ ತರಂಗಗಳನ್ನು ರೂಪಿಸಿ, ಅವಕಾಶದಲ್ಲಿ ಸಂಲಗ್ನಗೊಳಿಸಲಾಗಿದೆ. ಇಲ್ಲೂ ಸಹ ತಳಭಾಗದಲ್ಲಿ ಒಂದು ಪಾರ್ಶ್ವದಿಂದ ಮತ್ತೊಂದು ಪಾರ್ಶ್ವದೆಡೆಗೆ ಕೆಂಪು, ಕೇಸರಿ ಬಣ್ಣದಲ್ಲಿರುವ ಸರಳ ರೇಖಾತ್ಮಕ ಅಂಚುಪಟ್ಟಿ ಹಾದುಹೋಗಿದ್ದು, ಅದೂ ಸಹ ಆ ರಕ್ಷಾಪುಟದ ಅವಕಾಶದ ಕಡು ಹಸಿರು ಬಣ್ಣ/ಕಪ್ಪು ಹಸಿರು ಬಣ್ಣದೊಂದಿಗೆ ವಿಲೀನಗೊಂಡಿದೆ. ಆ ರೇಖೆ ಆ ರಕ್ಷಾಪುಟದಲ್ಲಿ ಸಾಧಿತಗೊಳ್ಳಬೇಕಾದ ವರ್ಣ ಸಮತೋಲನದ ದೃಷ್ಟಿಯಿಂದಷ್ಟೇ ರೂಪಿತವಾದುದೆನಿಸುತ್ತದೆ. ಈ ಪುಸ್ತಕದ ರಕ್ಷಾಪುಟ ನಿರ್ಮಾಣ ಸದ್ಯದ ದಿನಮಾನದ ಸಿದ್ಧ ಮಾದರಿಯಂತೆ ತೋರಿಬರುತ್ತದೆ.

### ೩.೪.೧೯. ಎಸ್. ಎಸ್. ಮುನೋಳಿ (೧೯೯೮)

'ಎಸ್.ಎಸ್.ಮುನೋಳಿ' ಎಂಬ ತಲೆಬರಹವುಳ್ಳ ಎಸ್.ಎಸ್.ಮುನೋಳಿಯವರ ಜೀವನ ಮತ್ತು ಕಲಾಸಾಧನೆಯ ಪರಿಚಯವುಳ್ಳ ಪುಸ್ತಕ ಕೂಡ ಕರ್ನಾಟಕ ಲಲಿತಕಲಾ ಅಕಾಡೆಮಿಯ ಮಹತ್ವಪೂರ್ಣ ಪ್ರಕಟಣೆ. ಈ ಪುಸ್ತಕದ ಲೇಖಕರು ಮಮತಾ ಜಿ.ಸಾಗರ ಎನ್ನುವವರು. ೧೯೯೮ರಲ್ಲಿ ಈ ಪುಸ್ತಕದ ರಕ್ಷಾಪುಟ ವಿನ್ಯಾಸ ರಚಿಸಿ ಮತ್ತು ಪ್ರಥಮವಾಗಿ ಮುದ್ರಣಗೊಳಿಸಿದವರು ಬೆಂಗಳೂರಿನ ಮಯೂರ ಪ್ರಿಂಟ್ ಆ್ಯಡ್ಸ್ ಇವರು. ಎಸ್.ಎಸ್. ಮುನೋಳಿಯವರು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ 'ಡ್ರೀಮ್ ಸಿಟಿ' ಪ್ರಕೃತಿ ಚಿತ್ರವೊಂದರ ಛಾಯಾಚಿತ್ರವನ್ನೇ ಇಲ್ಲಿನ ರಕ್ಷಾಪುಟಕ್ಕೆ ಬಳಸಿಕೊಳ್ಳಲಾಗಿದೆ. ಇಲ್ಲಿ ಮುದ್ರಿಸಿರುವ ಪ್ರಕೃತಿ ದೃಶ್ಯ ಚಿತ್ರ ನವ್ಯಶೈಲಿಯಲ್ಲಿದೆ ನವ್ಯಕಲಾ ಪ್ರಕಾರದಲ್ಲಿ ಒಂದೆನಿಸಿರುವ 'ಅಮೂರ್ತ ಶೈಲಿ'[೨೦] (Abstract Art) ಗೆ ಸೇರುವ ಕಲಾ ಕೃತಿಯಿದು.

ಈ ಚಿತ್ರದಲ್ಲಿ ಬಣ್ಣಗಳ ಪಾರದರ್ಶಕತೆ ಒಂದರ ಮೇಲೊಂದು ಹಬ್ಬಿ – ಒಂದು ಬಣ್ಣಕ್ಕೆ ಇರುವ ಹಲವಾರು ಸಾಧ್ಯತೆಗಳು ಅನಾವರಣಗೊಂಡಿವೆ. ವಿಶಾಲ ಆಕಾಶದ ನೀಲಿಯಲ್ಲಿ ಮಂಜುಮುಸುಕಿದ ಅನುಭವ ನೀಡುವ ಗಗನಚುಂಬಿಗಳಂತೆ ಸಾಗಿದ ವೃಕ್ಷಗಳ ಕಾಂಡಗಳಾಕಾರಗಳು ಹಸಿರು, ಕಂದು, ನೀಲಿ ಬಿಳಿ ಮಿಶ್ರಿತ ಒಂದಿಷ್ಟು ಮೈವಳಿಕೆಗಳೋಪಾದಿಯಾದ ವಿನ್ಯಾಸಗಳು, ಗುಂಪುಗುಂಪಾಗಿರುವ ಬಣ್ಣ ಬಣ್ಣದ ಚೌಕಗಳು ಹಸಿರು ಹಳದಿಯುಕ್ತ ಅವಕಾಶದಲ್ಲಿ ಅಲ್ಲಲ್ಲಿ ಆ ಬಣ್ಣದ ಚೌಕಗಳ ಮಸು ಮಸುಕಾದ ಪಾರದರ್ಶಕತೆಯ ಚಿತ್ರಣ, ಹೀಗೆ ಇಲ್ಲಿ ಬಗೆಬಗೆಯ ವರ್ಣಜಾಲವೇ ಮೇಳೈಸಿದ್ದು, ಅಸ್ಪಷ್ಟ ಆಕೃತಿಗಳ ಸಂಗಮ ಏರ್ಪಟ್ಟಿದೆ. ಇಲ್ಲಿ ವಿನ್ಯಾಸಗೊಳಿಸಲ್ಪಟ್ಟ ಈ ಚಿತ್ರ ಅರ್ಥವಾಗಬೇಕಾದರೆ ಕಲಾವಿದ್ಯಾಭ್ಯಾಸ ಕಲಾವ್ಯಾಕರಣದ ಕುರಿತು ಒಂದಿಷ್ಟಾದರೂ ತಿಳಿವಳಿಕೆ ನೋಡುಗರಿಗೆ ಇರಬೇಕಾಗುತ್ತದೆ. ಈ ಚಿತ್ರ

---

೨೦. ಆರ್. ಎ. ಶಾಂತರಾಜ್: ಆಬ್‌ಸ್ಟ್ರಾಕ್ಟ್ ಕಲೆ, ಪು ೨೦

ಶ್ರೀಸಾಮಾನ್ಯರಿಗೆ ಅರ್ಥವಾಗಲಾರದು ಎಂದು ಅಭಿಪ್ರಾಯ ಪಡಬಹುದಾದರೂ ಈ ಪುಸ್ತಕದಲ್ಲಿ ಇದಕ್ಕೆ ರೂಪಿಸಿದ ಬಿಳಿ ಅಂಚುರೇಖೆ ತುಸು ಅಂತರ ಬಿಟ್ಟು ಅಲಂಕರಣಯುಕ್ತವಾಗಿ ರೂಪಿಸಿದ ಕಂದುಬಣ್ಣದ ಜೋಡಿ ಅಂಚುರೇಖೆಗಳು ಆಚೀಚೆ ಹೊಂದಿಸಿದ ಅವಕಾಶ ಈ ಎಲ್ಲ ಅಂಶಗಳ ಕಾರಣದಿಂದಾಗಿ, ಮುದ್ರಣ ತಾಂತ್ರಿಕ ಕೌಶಲ್ಯದಿಂದಾಗಿ ಒಂದು ವಿಶಿಷ್ಟವಾದ ಮುದನೀಡುವ ಚಿತ್ರ ಎನಿಸಿಕೊಳ್ಳುತ್ತದೆ. ಮುಖಪುಟದ ಕಾಗದದ ಬಣ್ಣ ಮಂದ ಜಾಂಬಳಿ ಇರುವುದರಿಂದ ಹಾಗೂ ಕೃತಿಯ ಹೆಸರು ಕೆಂಪುಬಣ್ಣದಲ್ಲಿ ಶೈಲೀ ಕೃತವಾಗಿ ಬರೆಯಲ್ಪಟ್ಟಿರುವುದೂ ಸಹ (ಕನ್ನಡ ಮತ್ತು ಇಂಗ್ಲಿಷಿನಲ್ಲಿ) ಮುಖಪುಟಕ್ಕೆ ಆಕರ್ಷಕ ನೋಟ ಸಿಗಲು ಕಾರಣವಾಗಿದೆ ಎನ್ನಬಹುದು. ಮುಖಪುಟದಲ್ಲಿ ಕೃತಿಯ ಹೆಸರನ್ನು ಕೆಂಪುಬಣ್ಣದಲ್ಲಿ ಕನ್ನಡದಲ್ಲಿ ೨೬ ಅಳತೆ(Font size)ಯ ಅಕ್ಷರಗಳಲ್ಲಿ ಮತ್ತು ಕಟ್ ಲೆಟರ್ (Cut letter) ಶೈಲಿಯ ಅಕ್ಷರಗಳಲ್ಲಿ ಬರೆಯಲಾಗಿದ್ದು ಅದನ್ನೇ ಅದೇ ಬಣ್ಣದಲ್ಲಿ ಇಂಗ್ಲಿಷಿನಲ್ಲಿ ೩೨ ಅಳತೆಯ (Font size) ಅಕ್ಷರಗಳಲ್ಲಿ ಮತ್ತು ಕ್ಯಾಲಿಗ್ರಾಫಿಕ್ ಶೈಲಿಯ ಅಕ್ಷರಗಳಲ್ಲಿ ನಮೂದಿಸಲಾಗಿದೆ. ಅಲ್ಲೇ ಕೆಳಗೆ ತುಸು ಅಂತರ ಬಿಟ್ಟು ೧೪ ಅಳತೆ (Font size) ಯ ಕನ್ನಡ ಅಕ್ಷರಗಳಲ್ಲಿ ಮತ್ತು ರೋಮನ್ ಶೈಲಿಯಲ್ಲಿ ಹಾಗೂ ೧೪ ಅಳತೆ(Font size) ಯ ಮತ್ತು ರೋಮನ್ ಶೈಲಿಯ ಇಂಗ್ಲಿಷ ಅಕ್ಷರಗಳಲ್ಲಿ ಕೃತಿಯ ಲೇಖಕರ ಹೆಸರು ಮುದ್ರಿಸಲಾಗಿದೆ.

ಚಿತ್ರದ ಕೆಳಗೆ ಸ್ವಲ್ಪ ಅಂತರ ಬಿಟ್ಟು ಕಪ್ಪು ವರ್ಣದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆ ನಮೂದಿಸಲಾಗಿದೆ ಮತ್ತು ೧೬ ಗಾತ್ರದ (Font size) ಲ್ಲಿ ಮತ್ತು ರೋಮನ್ ಶೈಲಿಯ ಕನ್ನಡ ಅಕ್ಷರಗಳು ಹಾಗೂ ೧೬ ಅಳತೆಯ (Font size) ಗೋಥಿಕ್ ಶೈಲಿಯ ಇಂಗ್ಲಿಷ್ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಕಪ್ಪು ಬಣ್ಣದಲ್ಲಿ ನಮೂದಿಸಲಾಗಿದೆ. ಗಮನಿಸತಕ್ಕ ಅಂಶವೆಂದರೆ ಈ ಪುಸ್ತಕದ ಹಿಂಬದಿಯ ರಕ್ಷಾಪುಟಕ್ಕೆ ಎಸ್.ಎಸ್.ಮನೋಳಿಯವರ ನವ್ಯಶೈಲಿಯ ಎರಡು ಕಲಾಕೃತಿಗಳ ಛಾಯಾಚಿತ್ರಗಳನ್ನು ('ಎಚ್ಚಿಂಗ್ ಕೃತಿ ಮತ್ತು 'ಫಾರ್ಮ್ಸ್' [forms] ಎಂಬ ಕೃತಿ) ಮುದ್ರಿಸಲಾಗಿದೆ ಹೀಗೆ ಈ ಪುಸ್ತಕದ ರಕ್ಷಾಪುಟಕ್ಕೆ ನವೀನ ಸ್ಪರ್ಶ ಸಿಕ್ಕಿದೆ ಎನ್ನಬಹುದು.

**೩.೪.೨೦. ಎಂ. ಟಿ. ಭೋಪಲೆ (೧೯೯೯)**

'ಎಂ.ಟಿ. ಭೋಪಲೆ' ಎಂಬ ಕಿರು ಪುಸ್ತಕವೂ ಸಹ ಕರ್ನಾಟಕ ಲಲಿತ ಕಲಾ ಅಕಾಡೆಮಿಯಿಂದ ದಿಕ್ಸೂಚಿ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಇವರ ಮೂಲಕ ೧೯೯೯ರಲ್ಲಿ ಮುದ್ರಣಗೊಂಡ ಮಹತ್ವದ ಪ್ರಕಟಣೆಯಾಗಿದ್ದು, ಇದನ್ನು ಬರೆದವರು ಡಿ.ಎನ್.ಅಕ್ಕಿ ಎನ್ನುವವರು. ಈ ಪುಸ್ತಕದ ಮುಖಪುಟವನ್ನು ಎಂ.ಟಿ. ಭೋಪಲೆಯವರ ತೈಲವರ್ಣ ಮಾಧ್ಯಮದಲ್ಲಿ ರಚನೆಗೊಂಡ 'ಇಕ್ಕಟ್ಟಾದ ಓಣಿ' ಎಂಬ ಶೀರ್ಷಿಕೆಯ ಕಲಾಕೃತಿಯ ಛಾಯಾಚಿತ್ರವನ್ನು ಮುದ್ರಿಸಿ ವಿನ್ಯಾಸಗೊಳಿಸಲಾಗಿದೆ. 'ಇಲ್ಲಿ ಅಚ್ಚಾದ ಕೃತಿ ನೈಜ ಶೈಲಿಯಲ್ಲಿದ್ದರೂ ಇದು ಆಂಶಿಕವಾಗಿ ಪಾಶ್ಚಾತ್ಯ ನವ್ಯ ಕಲಾ ಪಂಥಗಳಲ್ಲಿ ಬರುವ 'ಇಂಪ್ರೆಶನಿಸಂ' ಮತ್ತು 'ಕ್ಯೂಬಿಸಂ' (ಘನಾಕೃತಿ ಪಂಥ)ದ ಪ್ರಭಾವದಿಂದ ಕೂಡಿದಂತೆ ಕಂಡುಬರುತ್ತದೆ.'[೨೧] ತಿಳಿಕಂದು, ದಟ್ಟ ನೀಲಿ, ಬೂದು,

೨೧. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು) ದಿ:೨೦೧೨-೧೩

ಕಂದು ಮಿಶ್ರಿತ ಕೆಂಪು ಬಣ್ಣಗಳ ಮೂಲಕ ಕಲಾಕೃತಿ ರಚಿಸಲಾಗಿದ್ದು ಒಟ್ಟಾರೆ ಸಂಯೋಜನೆ ಆಕೃತಿ ದಟ್ಟಣೆಯ ಅನುಭವವನ್ನು ನೀಡುತ್ತದೆ. ಚರಂಡಿಯ ಇಕ್ಕೆಲಗಳಲ್ಲಿ ಹಳೆಯ ಕಟ್ಟಡಗಳ ವಿಪರೀತ ದಟ್ಟಣೆ ಏರ್ಪಟ್ಟಿದೆ ಕೊಳಚೆ ನೀರು ಚರಂಡಿಯಲ್ಲಿ (ನಾಲೆಯಲ್ಲಿ) ಹರಿಯುತ್ತಿದ್ದು, ಒಂದೆಡೆ ಕಾರ್ಖಾನೆ ಕೊಳವೆಯಿಂದ ಹೊಗೆ ಬರುತ್ತಿದೆ, ಸಂಯೋಜನೆಯಲ್ಲೂ ಕಟ್ಟಡಗಳ ಹಿಂದೆ ಸಣ್ಣ ಗುಡ್ಡವಿದ್ದು ಅದೂ ಸಹ ಒಣಗಿದ ಮರಗಳಿಂದ ಕೂಡಿದ್ದು ಒಟ್ಟಾರೆ ಕೃತಿಯುದ್ದಕ್ಕೂ ತುಂಬ ಮಂದವಾದ ನೋಟ ಬೀರಬಲ್ಲ ವರ್ಣಮೇಳ ತುಂಬಿದ್ದು, ಮಬ್ಬುಗತ್ತಲ ವಾತಾವರಣ ಆವರಿಸಿದೆ. ಇಕ್ಕಟ್ಟಾದ ಓಣಿಯ ಸ್ಥಿತಿ-ಗತಿಯನ್ನು ಬಹಳ ಮಾರ್ಮಿಕವಾಗಿ ತೋರ್ಪಡಿಸುವ ಈ ಕೃತಿಯ ಛಾಯಾಚಿತ್ರವನ್ನು ತಿಳಿಕಂದು ಬಣ್ಣದ ಮುಖಪುಟ ಹಾಳೆಗೆ ವಿನ್ಯಾಸಗೊಳಿಸಿರುವುದರಿಂದ ಇಡಿಯ ಮುಖಪುಟ ಮಂದವರ್ಣಗಳ ಸಂಗಮವಾಗಿ ಪರಿಣಮಿಸಿದೆ.

ಮುಖಪುಟ ಗಾತ್ರಕ್ಕೆ ಅನುಗುಣವಾಗಿ ಸಾಕಷ್ಟು ದೊಡ್ಡದಾಗಿಯೇ (ಅಕ್ಷರಗಳ ಅಳತೆ ೩೦ Font size) ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕೃತಿ ಶೀರ್ಷಿಕೆ ಬರೆದಿದ್ದು ಕಪ್ಪು ಬಣ್ಣದಲ್ಲಿ ಕನ್ನಡ ಅಕ್ಷರಗಳು ರೋಮನ್ ಮಾದರಿಯ ವಿನ್ಯಾಸದಲ್ಲಿಯೂ, ಇಂಗ್ಲಿಷ್ ಅಕ್ಷರಗಳು ಸಾಮಾನ್ಯ ರೋಮನ್ ಮಾದರಿಯ ವಿನ್ಯಾಸದಿಂದಲೂ ಕೂಡಿವೆ. ಚಿತ್ರದ ಕೆಳಗಡೆ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕಪ್ಪು ಬಣ್ಣದಲ್ಲಿಯೇ ತುಸು ಚಿಕ್ಕ ಅಕ್ಷರಗಳಲ್ಲಿ (ಆ ಅಕ್ಷರಗಳು ೧೬ ಅಳತೆಯ/ಗಾತ್ರದವು) ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಮುದ್ರಿಸಲಾಗಿದ್ದು, ಆ ಪದಗಳ ಕನ್ನಡ ಅಕ್ಷರ ವಿನ್ಯಾಸ ಮತ್ತು ಇಂಗ್ಲಿಷ್ ಅಕ್ಷರ ವಿನ್ಯಾಸ ರೋಮನ್ ಸಹಜ ಶೈಲಿಯದು.

**೩.೪.೨೧. ಬಿ. ಕೆ. ಹುಬಳಿ (೧೯೯೯)**

ಅನುಭವ ಪ್ರಿಂಟರ್ಸ್‌ದಿಂದ ಮುದ್ರಣಗೊಂಡಿರುವ 'ಬಿ.ಕೆ.ಹುಬಳಿ'ಎಂಬ ಕಿರುಪುಸ್ತಕ ಬಿ.ಕೆ.ಹುಬಳಿಯವರಿಂದ ರಚಿತವಾದ ಮಹಿಳೆಯೊಬ್ಬಳ ವ್ಯಕ್ತಿಚಿತ್ರದ ಛಾಯಾಚಿತ್ರವನ್ನು ಮುಖಪುಟ ಚಿತ್ರವಾಗಿ ಹೊಂದಿರುವಂತಹುದು. ಇದನ್ನು 'ಸಂಯೋಜನಾ ಚಿತ್ರವೆಂತಲೂ ಪರಿಭಾವಿಸಲು ಅವಕಾಶವಿದೆ. ಏಕೆಂದರೆ ಕೇವಲ ರೂಪದರ್ಶಿ ಮಾತ್ರ ಅಲ್ಲಿ ಚಿತ್ರಿಸಲ್ಪಟ್ಟಿರದೆ; ಹಿನ್ನೆಲೆಯಲ್ಲಿ ಮತ್ತು ರೂಪದರ್ಶಿಯ ಪಕ್ಕದಲ್ಲೇ ನಿಸರ್ಗವೂ ಚಿತ್ರಿಸಲ್ಪಟ್ಟಿದೆ.'[೨೨] (ಇದರ ಲೇಖಕರು ಡಿ.ಎಸ್.ಚೌಗಲೆ) ಈ ಕಲಾಕೃತಿಯ ಛಾಯಾಚಿತ್ರದ ಹಿನ್ನೆಲೆಯಲ್ಲಿ ಮಂದ ನೇರಳೆ ಬಣ್ಣದ ಅವಕಾಶವಿರುವುದರಿಂದ ಗಾಢ ಮತ್ತು ತಿಳಿ ಹೀಗೆ ಎರಡೂ ಬಗೆಯ ಬಣ್ಣಗಳ ಸಂಯುಕ್ತತೆಯಿಂದ ಕೂಡಿರುವ ಈ ಕೃತಿ (ಮುಖಪುಟದ ಒಟ್ಟಾರೆ ಅವಕಾಶದಲ್ಲಿ ಸರಿಸುಮಾರು ಶೇ ೮೦ ಭಾಗದಲ್ಲಿ ವಿನ್ಯಾಸಗೊಂಡಿರುವ ಚಿತ್ರವಿದು) ಸ್ವಾಭಾವಿಕವಾಗಿ ಮುಖಪುಟದ ಆಕರ್ಷಣೆಯಾಗಿದೆ.

ಮಹಿಳಾ ರೂಪದರ್ಶಿಯನ್ನು ತಿಳಿಬಣ್ಣದಿಂದ ನಿರ್ವಹಿಸಿದ್ದು ಆಕೆ ಕೈಯಿರಿಸಿಕೊಂಡಿರುವ ಮರದಕಾಂಡ ಮತ್ತು ಆ ಮರದ ಸುತ್ತಲಿನ ಸಸ್ಯ ಇವೆಲ್ಲ ದಟ್ಟವರ್ಣಗಳಿಂದ ನಿರೂಪಿಸಲ್ಪಟ್ಟಿವೆ. ರೂಪದರ್ಶಿಯ

೨೨. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು) ದಿ:೨೦೧೨-೧೩

ಹಿಂಗಡೆಯ ವೃಕ್ಷ ಮತ್ತು ಮನೆ ರೂಪದರ್ಶಿಯ ಮೈಗೆ ಲೇಪಿಸಲ್ಪಟ್ಟ ವರ್ಣ ತೇಜಸ್ಸಿನ ಹದದಲ್ಲೇ ನಿರ್ವಹಿಸಲ್ಪಟ್ಟಿದ್ದುದರಿಂದ ಒಟ್ಟಾರೆಯಾಗಿ ಈ ಕಲಾಕೃತಿಯಲ್ಲಿ ನೆರಳು ಬೆಳಕಿನಾಟದ ಸುಂದರ ಸಂಯೋಜನೆ ಏರ್ಪಟ್ಟಿದೆ. ಹಳ್ಳಿಗಾಡಿನ ಮುಗ್ಧ ಹೆಣ್ಣುಮಗಳ ಮುಖದಲ್ಲಿ ಹೊಸದನ್ನು ಕಂಡಾಗ ವ್ಯಕ್ತಗೊಳ್ಳುವ ಕುತೂಹಲಭಾವ, ಕೊಂಚ ಗಾಬರಿ ನಾಚಿಕೆ ಇವೆಲ್ಲವೂ ಆಕೆಯನ್ನು ಚಿತ್ರಿಸಿದ ಭಂಗಿಯಲ್ಲಿ ಮನೋಜ್ಞವಾಗಿ ಮೂಡಿಬಂದಿವೆ. ತುಂಬಮಂದ ವರ್ಣಹೊಂದಿರುವ ಮುಖಪುಟವೆಂಬ ಭಿತ್ತಿಯ ಮೇಲೆ ಚೆಂದದ ನೆರಳು ಬೆಳಕಿನಾಟದ ಜೊತೆಗೆ ಗಾಢ ಮತ್ತು ತಿಳಿ ವರ್ಣಮೇಳವನ್ನು ಒಂದು ಸಮತೋಲನದಲ್ಲಿ ಹೊಂದಿರುವಂತಹ ಈ ಕಲಾಕೃತಿಯನ್ನು ವಿನ್ಯಾಸಗೊಳಿಸಿರುವುದರಿಂದ ಈ ಪುಸ್ತಕದ ಮುಖಪುಟ ಒಂದು ವಿಶಿಷ್ಟ ಮೆರುಗು ಪಡೆದುಕೊಂಡಿದೆ ಎನ್ನಬಹುದು. ಇಂತಹ ಪುಸ್ತಕ ಮಾಲೆಯ ಎಂದಿನ ಕ್ರಮದಂತೆಯೆ ಇಲ್ಲೂ ಸಹ ಮುಖಪುಟದಲ್ಲಿ ಮುದ್ರಿಸಿದ ಕಲಾಕೃತಿಯ ಛಾಯಾಚಿತ್ರದ ಮೇಲ್ಗಡೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಕೃತಿ ಶೀರ್ಷಿಕೆ ಬರೆದಿದ್ದು ಅದರ ಕನ್ನಡ ಅಕ್ಷರಗಳು ರೋಮನ್ ಶೈಲಿಯಲ್ಲಿವೆ. ಇಂಗ್ಲಿಷ್ ಅಕ್ಷರಗಳು ಅಲಂಕಾರಿಕ ರೋಮನ್ ಶೈಲಿಯಲ್ಲಿವೆ. ಈ ಕಲಾಕೃತಿಯ ಕೆಳಗಡೆ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಕನ್ನಡ ಮತ್ತು ಇಂಗ್ಲಿಷ್ ಈ ಎರಡೂ ಭಾಷೆಯಲ್ಲಿ ಬರೆಯಲಾಗಿದ್ದು ಕನ್ನಡದ ಮತ್ತು ಇಂಗ್ಲಿಷಿನ ಆ ಪದ ಗುಂಪುಗಳ ಶೈಲಿ ರೋಮನ್ ಮಾದರಿಯದಾಗಿದೆ.

**೩.೪.೨೨. ಯೂಸಫ್ ಅರಕ್ಕಲ್ (೧೯೯೯)**

ಮೂಲತಃ ಎಚ್.ಎ.ಎಲ್ (ಹಿಂದೂಸ್ತಾನ್ ಏರೊನಾಟಿಕ್ಸ್ ಲಿಮಿಟೆಡ್) ಕಂಪನಿಯಲ್ಲಿ ಉದ್ಯೋಗಿಯಾಗಿ ನಂತರ ೧೯೭೦-೮೦ರ ದಶಕದಲ್ಲಿ ಕಲೆಯನ್ನೇ ವೃತ್ತಿ ಮತ್ತು ಪ್ರವೃತ್ತಿಯಾಗಿ ಮೈಗೂಡಿಸಿ-ಕೊಂಡು ಸೃಜನಶೀಲ ಮತ್ತು ಸಮಕಾಲೀನ ಕಲಾಮೌಲ್ಯಯುಕ್ತ ಕಲಾಕೃತಿಗಳನ್ನು ದೇಶ-ವಿದೇಶಗಳ ಪ್ರಮುಖ ಕಲಾಪ್ರದರ್ಶನಗಳಲ್ಲಿ ಪ್ರದರ್ಶಿಸಿ ಪ್ರಶಸ್ತಿ-ಪುರಸ್ಕಾರಕ್ಕೆ ಭಾಜನರಾದ, ರಾಜ್ಯದ ಕಲಾರಂಗದಲ್ಲಿ ಪ್ರಸಿದ್ಧರಾಗಿರುವ ಯೂಸುಫ್ ಅರಕ್ಕಲ್‌ರವರ ಜೀವನ ಮತ್ತು ಕಲೆಯ ಕುರಿತಾಗಿನ ಪರಿಚಯಾತ್ಮಕ ಪುಸ್ತಕವೂ ಸಹ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಬಿಡುಗಡೆಗೊಂಡಿದ್ದು ಅದರ ಶೀರ್ಷಿಕೆ 'ಯೂಸುಫ್ ಅರಕ್ಕಲ್' ಎಂದು ಇದೆ.

೧೯೯೯ರಲ್ಲಿ ಸತ್ಯಶ್ರೀ ಪ್ರಿಂಟರ್ಸ್ ಪ್ರೈ.ಲಿಮಿಟೆಡ್, ಬೆಂಗಳೂರು ಇವರಿಂದ ಮೊದಲ ಮುದ್ರಣ ಕಂಡ ಈ ಪುಸ್ತಕವನ್ನು ಬರೆದವರು ಚಿ.ಸು.ಕೃಷ್ಣಸೆಟ್ಟರು. ಮುಖಪುಟಕ್ಕೆ ಮತ್ತು ಹಿಂಬದಿಯ ಪುಟಕ್ಕೆ ಗಾಢ ಕಪ್ಪು ಬಣ್ಣವನ್ನು ಹೊಂದಿರುವ ಈ ಪುಸ್ತಕದ ಕೃತಿಯ ಮುಖಪುಟದಲ್ಲಿ ಯೂಸುಫ್ ಅರಕ್ಕಲ್‌ರವರು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ ಹೆಣ್ಣು ಕೃತಿ ಸರದಿಯಲ್ಲಿನ ಒಂದು ಕಲಾಕೃತಿಯ ಛಾಯಾಚಿತ್ರವನ್ನು ಮುದ್ರಿಸಿ, ಮುಖಪುಟ ರೂಪಿಸಲಾಗಿದೆ.

ಇಲ್ಲಿನ ಕೃತಿಯಲ್ಲಿ ಕಪ್ಪು, ಕಂದು, ಹಸಿರು, ನೀಲಿ ಈ ಕೆಲವೇ ಬಣ್ಣಗಳು ಬಳಸಲ್ಪಟ್ಟಿವೆ. ಅಗತ್ಯಕ್ಕೆ ತಕ್ಕಂತೆ ಲಿನ್‌ಸೀಡ್ ಆಯಿಲ್ ಮತ್ತು ಟರ್ಪಂಟೈನ್‌ಗಳನ್ನು ಮಿಶ್ರ ಮಾಡಿಕೊಂಡು ನಂತರ ಕುಂಚದಲ್ಲಿ

ಸ್ವಲ್ಪ ಸ್ವಲ್ಪವೇ ಅವುಗಳನ್ನು ತೆಗೆದುಕೊಂಡು ವರ್ಣಮಿಶ್ರಣ ಮಾಡಿಕೊಂಡು ಅಲ್ಲಲ್ಲಿ ಅವುಗಳನ್ನು ಲೇಪಿಸುತ್ತಾ ಕಲಾಕೃತಿ ನಿರ್ವಹಿಸಲಾಗಿದ್ದು, ಕೆಲವೆಡೆ ವರ್ಣಗಳು ದಪ್ಪನಾಗಿ ಲೇಪಿಸಲ್ಪಟ್ಟಿವೆ. ಇನ್ನು ಕೆಲವೆಡೆ ವರ್ಣಗಳು ಹೆಚ್ಚು ತೈಲ ಮಿಶ್ರಣಗೊಂಡು ಜಲವರ್ಣದ ರೀತಿಯಲ್ಲಿ ತುಂಬಾ ತೆಳುವಾಗಿ ಲೇಪಿಸಲ್ಪಟ್ಟಿವೆ 'ಬಣ್ಣ ಒಣಗುವುದಕ್ಕಿಂತ ಮೊದಲೇ ಪ್ಲಾಸ್ಟಿಕ್ ಹಾಳೆಯನ್ನೊ, ಒಣ ಕುಂಚವನ್ನೋ, ಕಾಗದವೊ, ಬಟ್ಟೆಯ ಚೂರನ್ನೊ, ಸ್ಪಂಜನ್ನೊ ವರ್ಣ ಲೇಪಿಸಲ್ಪಟ್ಟ ಜಾಗದಲ್ಲಿ ಒತ್ತಿ ವರ್ಣವನ್ನು ತೆಗೆಯುತ್ತಾ ಆಗಮೂಡಿದ ಇಷ್ಟವಾದ ಮೈವಳಿಕೆಯನ್ನು ಉಳಿಸಿಕೊಳ್ಳುತ್ತಾ ನಿರ್ವಹಣೆ ಮಾಡುವುದು ಈ ಕಲಾವಿದರ ಆಗಿನ (೭೦–೮೦ ರ ದಶಕದಲ್ಲಿ) ಪದ್ಧತಿಯಾಗಿತ್ತು.'[೨೩]

ಈ ಕೃತಿಯಲ್ಲಿ ಬೆಳಕಿನ ತೋರ್ಪಡಿಕೆ ಆ ಅವಕಾಶದಲ್ಲಿ ಈ ಮೊದಲು ಲೇಪಿಸಿದ್ದ ಬಣ್ಣವನ್ನು ತೆಗೆಯುವುದರ ಮೂಲಕ ಏರ್ಪಡಿಸಲಾಗಿದೆ. ಬಣ್ಣ ಯಾವ ಭಾಗದಲ್ಲಿ ಉಳಿದಿದೆಯೊ ಅದು ಕೃತಿಯಲ್ಲಿ ನೆರಳಿನ ಭಾಗವಾಗಿ ರೂಪುಗೊಂಡಿದೆ (ರೂಪಾಂತರಗೊಂಡಿದೆ). ತನ್ಮೂಲಕ ಈ ಕಲಾಕೃತಿಯಲ್ಲಿ ನೆರಳು–ಬೆಳಕು ನಾಟಕೀಯ ಪರಿಣಾಮ ಪಡೆದುಕೊಂಡಿದೆ. ಅಲ್ಲದೆ, ಇಲ್ಲಿ ಆಕೃತಿಗಳ ಸ್ಪಷ್ಟ ಬಾಹ್ಯರೇಖೆ ಇಲ್ಲ. ಕೇವಲ ನೆರಳು–ಬೆಳಕಿನ ನಾಟಕೀಯ/ಚಮತ್ಕಾರಿಕ ಹೊಂದಾಣಿಕೆಯೇ ಆಕೃತಿಗಳ ಆಕೃತಿಯ ಅರ್ಥವಂತಿಕೆಯನ್ನು ಹೆಚ್ಚಿಸಿದೆ. ಈ ಒಟ್ಟಾರೆ ಚಿತ್ರಕ್ಷೇತ್ರದಾದ್ಯಂತ ಅಭಿವ್ಯಕ್ತಗೊಂಡಿರುವ ವೈವಿಧ್ಯಪೂರ್ಣ ಮೈವಳಿಕೆಯೂ ಸಹ ನೋಡುಗನ ದೃಷ್ಟಿಯನ್ನು ಹಿಡಿದಿಡುವಲ್ಲಿ ಬಹಳ ಮುಖ್ಯಪಾತ್ರ ನಿರ್ವಹಿಸಿದ್ದು, ಗಾಢ ಕಪ್ಪು ಬಣ್ಣದ ಹಾಳೆಗೆ ಅಚ್ಚ ಬಿಳಿಯ ಬಣ್ಣದ ಚೌಕಟ್ಟು ಪಡೆದುಕೊಂಡು ಆಕರ್ಷಕಯುಕ್ತ ನೋಟವನ್ನು ಈ ಮುಖಪುಟದಲ್ಲಿ ಸಾಧ್ಯವಾಗಿಸಿದೆ (ಬಹುಶಃ ಛಾಯಾಗ್ರಹಣದ/ದೌರ್ಬಲ್ಯ/ನ್ಯೂನತೆಯೋ ಏನೋ ಈ ಛಾಯಾಚಿತ್ರ ಮೇಲ್ಭಾಗದಲ್ಲಿ ಹೆಚ್ಚು ಅಗಲವಿದ್ದು, ಕೆಳಭಾಗದಲ್ಲಿ ಅಗಲ ಕಿರಿದಾಗಿದೆ).

ಮುಖಪುಟದ ಮೇಲ್ಭಾಗದ ಮೂಲೆಯಲ್ಲಿ ಕಂದು ಹಳದಿ ಬಣ್ಣದಲ್ಲಿ (Yellow ochre) ಕನ್ನಡ ಮತ್ತು ಇಂಗ್ಲಿಷಿನಲ್ಲಿ ಪುಸ್ತಕದ ಹೆಸರನ್ನು ಬರೆಯಲಾಗಿದೆ. ಅದರ ಕೆಳಗಡೆಯೇ ತಿಳಿನೀಲಿ ಬಣ್ಣದಲ್ಲಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಈ ಪುಸ್ತಕದ ಲೇಖಕರ ಹೆಸರನ್ನು ಮುದ್ರಿಸಲಾಗಿದೆ. ಮುಖಪುಟದಲ್ಲಿ ಅಚ್ಚಾದ ಕಲಾಕೃತಿಯ ಛಾಯಾಚಿತ್ರದ ಕೆಳಗಡೆ ಅಚ್ಚ ಬಿಳಿಯ ಬಣ್ಣದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆಯನ್ನು ಮತ್ತು ಕನ್ನಡ ಹಾಗೂ ಇಂಗ್ಲಿಷಿನಲ್ಲಿ ಅಕಾಡೆಮಿಯ ಹೆಸರನ್ನು ಮುದ್ರಿಸಲಾಗಿದೆ. ಈ ಪುಸ್ತಕದ ಮುಖಪುಟದಲ್ಲಿ ಮುದ್ರಿತವಾದ ಪುಸ್ತಕದ ಹೆಸರಿನ ಕನ್ನಡದ ಅಕ್ಷರಗಳು ೩೦ ಗಾತ್ರದ ಅಳತೆ ಮತ್ತು ಇಟಾಲಿಕ್ ಶೈಲಿಯನ್ನು ಹೊಂದಿವೆ. ಈ ಕೃತಿಯ ಮುಖಪುಟದಲ್ಲಿ ಅಚ್ಚಾದ ಛಾಯಾ ಚಿತ್ರದ ಅಳತೆಯ ನ್ಯೂನತೆ (ಮೇಲ್ಭಾಗ ಮತ್ತು ಕೆಳಭಾಗದ ಅಳತೆಯ ವ್ಯತ್ಯಾಸ)ಯನ್ನು ಹೊರತುಪಡಿಸಿದರೆ, ಮುಖಪುಟದ ವರ್ಣ, ಸ್ಥಳವಕಾಶ ವಿಂಗಡಣೆ, ಪದಗಳ ಅಕ್ಷರ ಹೊಂದಾಣಿಕೆ, ಶೈಲಿಯ ಆಯ್ಕೆ, ಅವುಗಳಲ್ಲಿ ತೋರ್ಪಡಿಸಿದ ವರ್ಣ ಸಾಮರಸ್ಯ ಪ್ರಜ್ಞೆ, ಇವೆಲ್ಲವೂ ಇಲ್ಲಿ ಅನಾವರಣಗೊಂಡರೀತಿ ಮೆಚ್ಚಿಕೊಳ್ಳತಕ್ಕ ಕಲಾತ್ಮಕ ಅಂಶಗಳು.

೨೩. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾಇತಿಹಾಸ ಉಪನ್ಯಾಸಕರು), ದಾವಣಗೆರೆ; ದಿ ೨೦೧೬

### ೩.೪.೨೩. ಜೆ.ಎಸ್. ಖಂಡೇರಾವ್ (೧೯೯೯)

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದಲೇ ಹೊರಬಂದಿರುವ 'ಜೆ.ಎಸ್.ಖಂಡೇರಾವ್' ಎಂಬ ಪುಸ್ತಕ ಕುಪ್ಪಣ್ಣ ಕಂದಗಲ್ ಎನ್ನುವವರಿಂದ ಬರೆಯಲ್ಪಟ್ಟಿದ್ದು; ೧೯೯೯ ರಲ್ಲಿ ಪ್ರಥಮ ಮುದ್ರಣ ಮಾಡಿರುವುದು ಬೆಂಗಳೂರಿನ ಮಯೂರ ಪ್ರಿಂಟ್ ಆಡ್ಸ್. ಈ ಪುಸ್ತಕದ ಮುಖಪುಟಕ್ಕೆ ಜೆ.ಎಸ್.ಖಂಡೇರಾವ್ ಅವರು ತೈಲವರ್ಣಮಾಧ್ಯಮದಲ್ಲಿ ರಚಿಸಿದ 'ವಿಂಡೋ ಶ್ರೇಣಿ'ಯ ಸರಣಿ ಚಿತ್ರಗಳಲ್ಲಿ ಒಂದು ಚಿತ್ರವನ್ನು ಆಯ್ದು ಅದರ ಛಾಯಾಚಿತ್ರವನ್ನು ಮುದ್ರಿಸಿ "೭ x ೯.೫" ಅಳತೆಯ ಮುಖಪುಟ ವಿನ್ಯಾಸ ಮಾಡಲಾಗಿದೆ. ನವ್ಯಕಲಾ ಪ್ರಕಾರಗಳಲ್ಲಿ ಬರುವ 'ಅಮೂರ್ತ ಶೈಲಿಯಲ್ಲಿ ಈ ಚಿತ್ರವಿದೆ. ತಂತ್ರ ಮತ್ತು ವರ್ಣ ಬಳಕೆಯಲ್ಲಿ ಪ್ರಯೋಗಾತ್ಮಕತೆ (ಪ್ರಯೋಗಶೀಲತೆ) ಧ್ವನಿಸುವ ಈ ಚಿತ್ರ ಸಮಕಾಲೀನ ಚಿತ್ರಕಲಾ ಪರಂಪರೆಗೆ ಅತ್ಯಂತ ನಿಷ್ಠವಾದುದು. ಶುದ್ಧ ವರ್ಣಮೇಳ, ಲಯಬದ್ಧತೆಯಿಂದ ಕೂಡಿರುವ ಈ ಚಿತ್ರದಲ್ಲಿ ವಿಭಿನ್ನ ಆಕಾರದ ಅದರಲ್ಲೂ ವಿಶೇಷವಾಗಿ ಜ್ಯಾಮಿತಿಯ ಆಕೃತಿಗಳನ್ನು ರೂಪಿಸಿರುವುದರ ಜೊತೆಗೆ ಕ್ಯಾನ್ವಾಸಿನ ಬಿಳಿಯ ಭಾಗವನ್ನೇ ವಿಂಗಡಿಸಿ ರೇಖೆಯಂತೆ ದುಡಿಸಿಕೊಳ್ಳಲಾಗಿದೆಯಲ್ಲದೆ, ಮೊನೋಕ್ರೊಮೆಟಿಕ್ ಬಣ್ಣಗಾರಿಕೆಯಲ್ಲಿ ಅಭಿವ್ಯಕ್ತಿಸಿದ ಪಾರದರ್ಶಕತೆ ಕಲಾಕೃತಿಯಲ್ಲಿನ ಅಮೋಘ ಕಲಾತ್ಮಕ ಮತ್ತು ಚಮತ್ಕಾರಿಕ ಅಂಶವಾಗಿ ಪರಿಗಣಿತವಾಗುತ್ತದೆ.'[೨೪]

ಕಲಾವ್ಯಾಕರಣ ಬಲ್ಲವರಿಗೆ ಅಥವಾ ನವ್ಯ-ನವ್ಯೋತ್ತರ ಶೈಲಿಯ ಕುತೂಹಲಗಳಿಗೆ ಮಾತ್ರ ಎಟುಕಬಲ್ಲಂತಹ ಕಲಾಕೃತಿ ಮಾದರಿ ಇದು ಎನಿಸಿದರೂ ಇಲ್ಲಿನ ಕೃತಿಯಲ್ಲಿ ಅತ್ಯಂತ ಮಿತ ಸಂಖ್ಯೆಯ ಮತ್ತು ಮಂದನೋಟದ ಬಣ್ಣಗಳ ಮೂಲಕ ಸಾಧಿಸಿದ ಗರಿಷ್ಠ ಪ್ರಮಾಣದ ವರ್ಣಸಾಧ್ಯತೆಗಳು ಶ್ರೀಸಾಮಾನ್ಯನನ್ನೂ ಸಹ ಒಂದು ಮಿತಿಯಲ್ಲಾದರೂ ತಲುಪಬಲ್ಲಷ್ಟು ಸಮರ್ಥವಾಗಿವೆ. ಕೆಂಪು ಬಣ್ಣದ ಪ್ರಖರ ವರ್ಣದ ಹಾಳೆಯ ಮೇಲೆ ಈ ಚಿತ್ರವನ್ನು ಅಚ್ಚಬಿಳಿ ಅಂಚುರೇಖೆ ನೀಡಿ ಮುದ್ರಿಸಿರುವುದರಿಂದ ಹಾಗೂ ತಿಳಿಹಳದಿಯಲ್ಲಿ ಕೃತಿಶೀರ್ಷಿಕೆ ಬರೆದಿರುವುದರಿಂದ ಮುಖಪುಟದಲ್ಲಿ ಪ್ರಖರ ಮತ್ತು ಮಂದ ವರ್ಣ ಸಂಯೋಜನೆ ಸಮರಸಯುಕ್ತವಾಗಿ ಬೆರೆತಂತಾಗಿ ಒಟ್ಟಾರೆ ನೋಟಕ್ಕೆ ಆಕರ್ಷಕ ಎನಿಸುತ್ತದೆ.

ಮುಖಪುಟದಲ್ಲಿ ಅಚ್ಚಿಸಿದ ಕಲಾಕೃತಿಯ ಛಾಯಾಚಿತ್ರದ ಸುತ್ತ ನಿರ್ಮಿಸಿದ ಶಿಸ್ತಾದ ಮತ್ತು ಸಮತೋಲನಯುಕ್ತವಾದ ಅಂತರ (space) ಕೂಡ ಇಲ್ಲಿ ಪರಿಗಣನೆಗೆ ಯೋಗ್ಯವಾದ ಅಂಶ ಇಲ್ಲಿ ನಮೂದಿಸಿದ ಕೃತಿಶೀರ್ಷಿಕೆಯ ಹಾಗೂ ಕೃತಿಕಾರರ ಹೆಸರಿನ ಕನ್ನಡ ಮತ್ತು ಇಂಗ್ಲಿಷ್ ಅಕ್ಷರಗಳು ೨೮ (Font size) ಗಾತ್ರದವು ಮತ್ತು ಕಟ್ (cut) ಶೈಲಿಯವು. ಮುಖ ಪುಟದ ತಳಭಾಗದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆಯನ್ನು ನಮೂದಿಸಿದ್ದು ಅದರ ಪಕ್ಕದಲ್ಲೇ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಮುದ್ರಿಸಿದ್ದು ಅದರ ಕನ್ನಡ ಅಕ್ಷರಗಳ ಅಳತೆ ೧೬ (Font size) ಇದೆ ಮತ್ತು ರೋಮನ್ ಶೈಲಿಯಲ್ಲಿವೆ ಇಂಗ್ಲೀಷ್ ಅಕ್ಷರಗಳ ಅಳತೆ ೧೬ (Font size) ಮತ್ತು ಶೈಲಿ ಗೋಥಿಕ್ ಲಕ್ಷಣಹೊಂದಿದ್ದುದಾಗಿವೆ.

---

೨೪. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾಇತಿಹಾಸ ಉಪನ್ಯಾಸಕರು), ದಾವಣಗೆರೆ; ದಿ ೨೦೧೬

### ೩.೪.೨೪. ವಿಜಯ ಸಿಂಧೂರ (೨೦೦೦)

'ವಿಜಯ ಸಿಂಧೂರ' ಈ ಕೃತಿಯು ಬೆಂಗಳೂರಿನ ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿಮಿಟೆಡ್ ಇವರಿಂದ ೨೦೦೦ ದಲ್ಲಿ ಮೊದಲ ಮುದ್ರಣಗೊಂಡ ಪುಸ್ತಕ. ನಾಡಿನ ಪ್ರಸಿದ್ಧ ಭಾವಚಿತ್ರ/ವ್ಯಕ್ತಿ ಚಿತ್ರಕಲಾವಿದರಾದ ವಿಜಯ ಸಿಂಧೂರರ ಕಲೆ ಮತ್ತು ಬದುಕನ್ನು ಪರಿಚಯಿಸುವ ಪುಸ್ತಕವಾಗಿದ್ದು ಇದೂ ಸಹ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದಲೇ ಹೊರಬಂದಿದ್ದು, ಇದರ ಲೇಖಕರು ಕೆ.ವಿ. ಸುಬ್ರಹ್ಮಣ್ಯಂ. ತಿಳಿಬೂದು ಬಣ್ಣದ ರಕ್ಷಾಪುಟ ಹಾಳೆಯ ಮೇಲೆ ವಿಜಯ ಸಿಂಧೂರರು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ ಕಲಾಕೃತಿಯೊಂದರ ಛಾಯಾಚಿತ್ರ ಮುದ್ರಿಸಿ, ರಕ್ಷಾಪುಟ ವಿನ್ಯಾಸಗೊಳಿಸಲಾಗಿದ್ದು. ಇಡೀ ಕೃತಿ ಅವಕಾಶದ ತುಂಬ ವ್ಯಾಪಿಸಿರುವ ಕಲಾಪ್ರತಿಮೆಗಳ ಬೃಹತ್ತತೆ ಮತ್ತು ಭವ್ಯತೆಯ ಜೊತೆಗೆ ರೇಖೆಗಳಿಗೆ ಬಹಳಷ್ಟು ಪ್ರಾಧಾನ್ಯತೆ ದೊರಕಿರುವ ಕಾರಣದಿಂದ ಸಹ ಇಲ್ಲಿನ ಕೃತಿಯ ಛಾಯಾಚಿತ್ರ ಗಮನ ಸೆಳೆಯುತ್ತದೆ. ತಿಳಿನೇರಳೆ, ತಿಳಿಹಸಿರು, ದಟ್ಟಹಸಿರು ವರ್ಣಗಳೊಂದಿಗೆ ಸರಾಗವಾಗಿ ಆಕೃತಿಗಳ ಅಂಚುಗಳಲ್ಲಿ ಹಾಯುವ ನೀಲಿಬಣ್ಣದ ರೇಖೆಗಳ ಲಾಲಿತ್ಯ ನೋಡುಗರ ಮನದಾಳಕ್ಕೆ ಇಳಿಯುವಂತಹುದು.

ಒಟ್ಟಾರೆ ಶಿಸ್ತಾಗಿ ಅಚ್ಚ ಬಿಳಿಯ ಬಣ್ಣದ ಚೌಕಟ್ಟು ಪಟ್ಟಿ ಹೊಂದಿರುವ ಈ ಛಾಯಾಚಿತ್ರದ ಮೇಲ್ಭಾಗದಲ್ಲಿ ಮುದ್ರಿಸಿರುವ ಅಚ್ಚಬಿಳಿ ಬಣ್ಣದ ಕನ್ನಡ ಅಕ್ಷರಗಳುಳ್ಳ 'ವಿಜಯ ಸಿಂಧೂರ' ಎಂಬ ತಲೆಬರಹದ ಅಕ್ಷರಗಳ ಗಾತ್ರ ೩೪(Font size)ಮತ್ತು ವಿನ್ಯಾಸ ಉಬ್ಬು ಮಾದರಿಯದಾಗಿದ್ದರೆ, ಅದೇ ಹೆಸರಿನ ನೀಲಿಬಣ್ಣದ ಇಂಗ್ಲಿಷ್ ಅಕ್ಷರಗಳ ಗಾತ್ರ ೩೨ (Font size) ಮತ್ತು ಅವುಗಳು ರೋಮನ್ ಶೈಲಿಯ ಅಕ್ಷರಗಳಾಗಿವೆ. ರಕ್ಷಾಪುಟದಲ್ಲಿ ಮುದ್ರಿಸಿದ ಛಾಯಾಚಿತ್ರದ ಕೆಳಗಡೆ ಕ.ಲ. ಅಕಾಡೆಮಿಯ ಚಿಹ್ನೆಯನ್ನು ಮುದ್ರಿಸಲಾಗಿದ್ದು, ಅದರ ಪಕ್ಕದಲ್ಲೇ ತಿಳಿನೇರಳೆ ರೇಖೆಯ ಮೇಲ್ಗಡೆ ಕಪ್ಪು ಬಣ್ಣದಲಿ ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ನಮೂದಿಸಿದ್ದು, ತಿಳಿನೇರಳೆ ಬಣ್ಣದ ಪಟ್ಟಿಯ ಕೆಳಭಾಗದಲ್ಲಿ ಅದೇ ಹೆಸರನ್ನೇ ಅದೇ ಕಪ್ಪು ಬಣ್ಣದಲ್ಲಿಯೇ ಇಂಗ್ಲಿಷ್ ಅಕ್ಷರಗಳಲ್ಲಿ ನಮೂದಿಸಲಾಗಿದೆ.

ಹಿಂಬದಿ ರಕ್ಷಾಪುಟದಲ್ಲೂ ಸಹ ವಿಜಯ ಸಿಂಧೂರರವರು ೩೩"x೪೦" ಅಳತೆಯ ಕ್ಯಾನ್ವಾವಸಿನ ಮೇಲೆ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ 'ಸೂರ್ಯಾಸ್ತ, ಸೂರ್ಯೋದಯಗಳ ಗ್ರಹಿಕೆಗಳು' ಎಂಬ ಶೀರ್ಷಿಕೆಯ ಸರಣಿ ಕೃತಿಯಲ್ಲಿನ ಒಂದು ಕಲಾಕೃತಿಯ ವರ್ಣಛಾಯಾಚಿತ್ರವನ್ನು ದಟ್ಟಕಪ್ಪು ಬಣ್ಣದ ಅಂಚುರೇಖೆಗಳ ಮೂಲಕ ವಿನ್ಯಾಸಗೊಳಿಸಲಾಗಿದೆ. ನಿಸರ್ಗದ ಬೆಡಗು-ವರ್ಣ ವೈವಿಧ್ಯತೆ ಹಲವು ಮಜಲುಗಳ ಹೊರ ಮತ್ತು ಒಳನೋಟವುಳ್ಳ ಈ ಕೃತಿಯಲ್ಲಿ 'ರೋಮ್ಯಾಂಟಿಕ್ ಭಾವ ಲಹರಿಯಿದೆ.'[೨೫] ಕೆಂಪು, ಕೇಸರಿ, ದಟ್ಟ ನೀಲಿ, ತಿಳಿನೀಲಿ, ಬೂದು, ಬಿಳಿ ವರ್ಣಗಳ ಸಂಯೋಜನೆಯಿಂದ ಮೈದುಂಬಿರುವ ಈ ಕಲಾಕೃತಿಯಲ್ಲಿ ಸೂರ್ಯೋದಯ ಮತ್ತು ಸೂರ್ಯಾಸ್ತಗಳ ಸನ್ನಿವೇಶಗಳಲ್ಲಿ ಪ್ರಕೃತಿಯಲ್ಲಿ ಉಂಟಾಗುವ ಶಾಂತ-ಸುಂದರ-ಆಹ್ಲಾದಕರ ವಾತಾವರಣದ ಅನುಭವ ಸಂವೇದನಾಪೂರ್ಣವಾಗಿ ಅಭಿವ್ಯಕ್ತಗೊಂಡಿದೆ.

---

೨೫. Sir Larence Gowing : A History of Art, p.no.746

ನವ್ಯ ಕಲಾ ಪ್ರಕಾರದಲ್ಲಿ ಒಳಗೊಳ್ಳುವ ಅಮೂರ್ತ ಶೈಲಿಗೆ ಸೇರುವ ಈ ಕಲಾಕೃತಿಯ ಛಾಯಾಚಿತ್ರವನ್ನು ಎಡಬಲ ಮಗ್ಗಲುಗಳಲ್ಲಿ ೩.೩ ಸೆ.ಮೀ ಅಳತೆಯ ಅಂತರ ಬಿಟ್ಟು ಮುದ್ರಿಸಿರುವುದಲ್ಲದೆ ಕೆಳಗಡೆ ಕಪ್ಪು ಬಣ್ಣದಲ್ಲಿ ಕನ್ನಡ ಅಕ್ಷರಗಳಲ್ಲಿ ಈ ಕೃತಿಯ ಲೇಖಕರ ಬರಹದ ಪ್ಯಾರಾವೊಂದನ್ನು ದಾಖಲಿಸಲಾಗಿದ್ದು, ಅದರ ಕೆಳಗಡೆ ಅವರ ಹೆಸರನ್ನು ಕನ್ನಡ ಅಕ್ಷರಗಳಲ್ಲಿ ನಮೂದಿಸಲಾಗಿದೆ. ಒಟ್ಟಾರೆಯಾಗಿ ಈ ಪುಸ್ತಕದ ಮುಖಪುಟ ಮತ್ತು ಹಿಂಬದಿಯ ರಕ್ಷಾಪುಟ ವಿನ್ಯಾಸಗಾರಿಕೆ ತುಂಬಾ ಕರಾರುವಾಕ್ಕಾಗಿಯೂ, ಸೃಜನಶೀಲವಾಗಿಯೂ, ಅಷ್ಟೇ ಆಕರ್ಷಕವಾಗಿಯೂ ಸಿದ್ಧಗೊಂಡಿದೆಯೆಂದು ಅಭಿಪ್ರಾಯಪಡಬಹುದು.

**೩.೪.೨೫. ಕೆ.ಟಿ. ಶಿವಪ್ರಸಾದ್ (೨೦೦೦)**

ಕೆಂಪು ಬಣ್ಣದಲ್ಲಿ ಮುದ್ರಿಸಿದ ೪೮ ಅಳತೆಯ (Font size) ಮತ್ತು ರೋಮನ್ ಶೈಲಿಯ ಕನ್ನಡ ಅಕ್ಷರಗಳಲ್ಲಿ ಕೆ.ಟಿ. ಶಿವಪ್ರಸಾದ್ ಎಂದು ತಲೆಬರಹ/ಶೀರ್ಷಿಕೆ ಬರೆದಿರುವ, ಇಂಗ್ಲಿಷಿನಲ್ಲಿಯೂ ೩೬ ಅಳತೆಯ (Font size) ಮತ್ತು ಶೆರಿಫ್ ರೋಮನ್ ಶೈಲಿಯ ಇಂಗ್ಲಿಷ್ ಅಕ್ಷರಗಳಲ್ಲಿ ಅದನ್ನೇ (ಕೆ.ಟಿ.ಶಿವಪ್ರಸಾದ್ ಎಂಬ ಹೆಸರನ್ನೇ) ಬರೆದಿರುವ ಮುಖಪುಟ ಹೊಂದಿರುವ ಕ.ಲ. ಅಕಾಡೆಮಿಯಿಂದ ಹೊರಬಂದಿರುವ ಪುಸ್ತಕ, ಬರೆದವರು ಎಚ್.ಎ.ಅನಿಲ್ ಕುಮಾರ್. ಸ್ವಲ್ಪ ಗಾಢವೆನಿಸುವ ಬೂದು ಬಣ್ಣದ ಮುಖಪುಟ ಹಾಳೆಯ ಮೇಲೆ ಕೆ.ಟಿ.ಶಿವಪ್ರಸಾದ್‌ರವರು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ (೧೯೯೭ರಲ್ಲಿ ರಚಿಸಿದ ಚಿತ್ರವಿದು) 'ಟೈಗರ್ ಪೇಂಟಿಂಗ್' ಎಂಬ ಶೀರ್ಷಿಕೆಯ ಕೃತಿಯ ಛಾಯಾಚಿತ್ರವನ್ನು ವಿನ್ಯಾಸಗೊಳಿಸಿ ಮುಖಪುಟ ರಚಿಸಲಾಗಿದೆ.

'ಹುಲಿಚಿತ್ರ'ದಲ್ಲಿ ಹುಲಿವೇಷದವನೊಬ್ಬ ಚಿತ್ರದಲ್ಲಿ ಮುನ್ನೆಲೆಯಲ್ಲಿ ನಿಂತಿದ್ದು ಆತನ ಹಿಂದೆ ಮೇಕೆಗಳ ಕಾದಾಟ ಚಿತ್ರಿಸಿದ್ದು, ಅದರ ಹಿಂಗಡೆ ಮಾಂಸದಂಗಡಿಯಿದೆ. ಈ ಮಾಂಸದಂಗಡಿಯ ಎದುರಿಗೇ ಕಾರೊಂದು ನಿಂತಿದೆ. ಈ ಚಿತ್ರದ ಚೌಕಟ್ಟಿನ ಬಲಭಾಗದಲ್ಲಿರುವ ಬಾಗಿಲಿನಂತಹ ಅವಕಾಶ, ಹುಲಿವೇಷದವನ ಎಡಗಡೆಯಿರುವ ಕಂದು-ಕಪ್ಪನೆಯಜಾಗ ಹಳದಿಬಣ್ಣದ್ದು ಬಹುಮಟ್ಟಿಗೆ ಏಕವರ್ಣೀಯ ವೇಷಗಾರನ ಪರಿಣಾಮದೊಂದಿಗೆ ಸಮೀಕರಣಗೊಳಿಸಿಕೊಂಡು ಪರಿವೀಕ್ಷಿಸಿದಾಗ ಕಪ್ಪಾದ ಭಾಗಗಳನ್ನೆಲ್ಲ ಹೊರತು ಪಡಿಸಿದರೆ 'ಕಟೌಟ್' ಎಂದು ಭಾವಿಸಲು ಅವಕಾಶವಿರುವ ಚಿತ್ರವೆನಿಸುವ ಇದರಲ್ಲಿನ ಆಕಾರ ನಿರ್ಮಿತಿ ನೈಜ ಶೈಲಿಯದು. ಇಲ್ಲಿ ಹುಲಿವೇಷಗಾರನ ಮೇಲಿಂದ ನಿಜ ಚರ್ಮಕ್ಕೆ ಮತ್ತು ಚಿತ್ರಿತ ತೈಲವರ್ಣ ಚರ್ಮಕ್ಕೆ ಬಿಸಿಲಿನ ನಾಟಕೀಯ ಸ್ಪರ್ಶವಿದ್ದು, ಆದಕಾರಣವೇ ನೆರಳು ಆತನ ಮೈಮೇಲೆ ಬಿದ್ದಿದೆ. 'ತೈಲವರ್ಣಚಿತ್ರಣ ಕ್ರಮದಲ್ಲಿ ಇದನ್ನೂ ಚೆರಸ್ಕ್ಯುರೊ' ಎಂದು ಕರೆಯಲಾಗುತ್ತದೆ.

ಒಟ್ಟಿನಲ್ಲಿ ಮಂದ ವರ್ಣೀಯ ಮುಖಪುಟದ ಮೇಲೆ ಜಾನಪದೀಯ ವಿಷಯ ಹೊಂದಿರುವ ಈ ಚಿತ್ರದ ಛಾಯಾಚಿತ್ರ ಗಾಢವರ್ಣದ್ದೆನಿಸಿ ಎದ್ದು ಕಾಣುವುದರಿಂದ ವೀಕ್ಷಕರ ಗಮನ ಸೆಳೆಯಬಲ್ಲದು.ಇಲ್ಲಿ ತಲೆಬರಹದ/ಶೀರ್ಷಿಕೆಯ ಕೆಳಗಡೆ ಕನ್ನಡ ಅಕ್ಷರಗಳಲ್ಲಿ ಮತ್ತು ಇಂಗ್ಲಿಷ್ ಅಕ್ಷರಗಳಲ್ಲಿ ಈ ಕೃತಿ ಲೇಖಕರ ಹೆಸರನ್ನು ರೋಮನ್ ಶೈಲಿಯಲ್ಲಿ ೧೬ ಅಳತೆ (Font size) ಯಲ್ಲಿ ನಮೂದಿಸಲಾಗಿದೆ. ಚಿತ್ರದ ಕೆಳಗಡೆ

ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿಹ್ನೆಯನ್ನು ಬಿಳಿ ಬಣ್ಣದಲ್ಲಿ ನಮೂದಿಸಲಾಗಿದ್ದು, ಅದರ ಪಕ್ಕದಲ್ಲೇ ಅದೇ ಬಿಳಿ ಬಣ್ಣದಲ್ಲಿಯೇ ಕನ್ನಡ ಅಕ್ಷರಗಳಲ್ಲಿ ಹಾಗೂ ಇಂಗ್ಲಿಷ್ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಅಚ್ಚಿಸಲಾಗಿದೆ. ಅವುಗಳು ೧೪ ಅಳತೆ (Font size) ಯಲ್ಲಿದ್ದು ರೋಮನ್ ಶೈಲಿ ಹೊಂದಿವೆ.

ಈ ಕೃತಿಯ ಹಿಂಬದಿಯ ರಕ್ಷಾಪುಟವೂ ಮುಖಪುಟದ ಬಣ್ಣವನ್ನೇ ಹೊಂದಿದ್ದು, ಸೃಜನಶೀಲವಾದುದು ಎಂದೇ ಅಭಿಪ್ರಾಯಪಡಬಹುದು. ಏಕೆಂದರೆ ಇಲ್ಲಿ ಮೇಲ್ಭಾಗದಲ್ಲಿ ಈ ಕೃತಿಯ ಕೇಂದ್ರ ಬಿಂಧುವಾದ / ವಿಷಯವಾದ ಕೆ.ಟಿ.ಶಿವಪ್ರಸಾದ್‌ರವರ ೪.೫ x ೫ ಸೆ.ಮೀ ಅಳತೆಯ ಕಪ್ಪು-ಬಿಳುಪು ಛಾಯಾಚಿತ್ರ ಮುದ್ರಿಸಲಾಗಿದ್ದು ಅದರ ಕೆಳಗಡೆ ಕೃತಿಯ ಲೇಖಕರು ಪುಸ್ತಕದಲ್ಲಿ ಬರೆದ ಕನ್ನಡ ಬರಹದ ತುಣುಕನ್ನು (ಬ್ಲರ್ಬ್) ಮುದ್ರಿಸಲಾಗಿದೆ. ಕೆಳಗೆ ಈ ಕೃತಿ ಲೇಖಕರ ಹೆಸರನ್ನು ಸಾಮಾನ್ಯ ಶೈಲಿಯ ಕನ್ನಡ ಅಕ್ಷರಗಳಲ್ಲಿ ಮುದ್ರಿಸಲಾಗಿದೆ. ಈ ಬರಹದ ಕೆಳಗೆ ಕೆ. ಟಿ. ಶಿವಪ್ರಸಾದ್‌ರವರು ೧೯೮೫ರಲ್ಲಿ ತೈಲ ವರ್ಣ ಮಾಧ್ಯಮದಲ್ಲಿ ರಚಿಸಿದ 'ಟೈಗರ್ ಪೇಂಟಿಂಗ್' ಶೀರ್ಷಿಕೆಯ ಚಿತ್ರದ ಛಾಯಾಚಿತ್ರವನ್ನು ಮುದ್ರಿಸಲಾಗಿದೆ. ಈ ಚಿತ್ರದಲ್ಲಿ ಮೂವರು ಹುಲಿವೇಷಗಾರರ ಭಾವಚಿತ್ರ 'ಪಾಶ್ಚಾತ್ಯ ಮಾದರಿಯ ನೈಜ ಶೈಲಿಯಲ್ಲಿ ಚಿತ್ರಿಸಲಾಗಿದ್ದು'[೨೬] ಮಂದ ಹಸಿರು ಮಿಶ್ರಿತ ಬೂದುಬಣ್ಣದ ಹಿನ್ನೆಲೆಯಲ್ಲಿ ಈ ಭಾವಚಿತ್ರಗಳು ಚಿತ್ರಿತವಾಗಿವೆ.

ಹುಲಿವೇಷಗಾರರ ಜಾನಪದೀಯ ಸಂಸ್ಕೃತಿಯ ವಿಶಿಷ್ಟತೆ, ಈ ವೇಷಗಾರರ ಅಂತರಂಗದ ದುಗುಡ, ಮುಗ್ಧತೆ ಈ ಎಲ್ಲ ಭಾವತೀವ್ರತೆಗಳು ಸತ್ವಪೂರ್ಣವಾಗಿ ನಿರೂಪಿಸಲ್ಪಟ್ಟಿದ್ದು, ಆ ಕಾರಣಕ್ಕಾಗಿ ಈ ಪುಸ್ತಕದ ಹಿಂಬದಿ ರಕ್ಷಾಪುಟವೂ ಚಿತ್ತಾಕರ್ಷಕವೆನಿಸುತ್ತದೆ. ದೇವರಾಜ್ ಬಿ. ಇವರು ಈ ಪುಸ್ತಕದ ಮುಖಪುಟ ಮತ್ತು ಹಿಂಬದಿ ರಕ್ಷಾಪುಟದ ವಿನ್ಯಾಸ ರಚಿಸಿದ್ದು, ಬೆಂಗಳೂರಿನ ಧಾರಿಣಿ ಗ್ರಾಫಿಕ್ಸ್ ಇವರು ೨೦೦೦ನೇ ಇಸ್ವಿಯಲ್ಲಿ ಇದನ್ನು ಮೊದಲ ಬಾರಿಗೆ ಮುದ್ರಿಸಿರುತ್ತಾರೆ. ಈ ಪುಸ್ತಕದ ಮುಖಪುಟ ಮತ್ತು ಹಿಂಬದಿ ರಕ್ಷಾಪುಟದ ರಚನೆ ನವ್ಯ/ನವ್ಯೋತ್ತರ ಕಾಲಘಟ್ಟದ ಸಂದರ್ಭದಲ್ಲಿ ಉತ್ತಮ ನೆಲೆಯಲ್ಲಿರುವಂತಹುದು ಎಂದು ಅಭಿಪ್ರಾಯಪಡಬಹುದಾಗಿದೆ.

**೩.೪.೨೬. ಶಾಂತಲಿಂಗಪ್ಪ ಪಾಟೀಲ್ (೨೦೦೦)**

ಕರ್ನಾಟಕ ಲಲಿತಕಲಾ ಅಕಾಡೆಮಿಗಾಗಿ ಹೆಚ್.ವಿ.ಮಂತಟ್ಟಿ ಎನ್ನುವವರಿಂದ ಬರೆಯಲ್ಪಟ್ಟ ಪ್ರಸಿದ್ಧ ಚಿತ್ರಕಲಾವಿದ ಶಿಲ್ಪಕಾರ, ಛಾಯಾಚಿತ್ರಕಾರ ಶಾಂತಲಿಂಗಪ್ಪ ಪಾಟೀಲರ ಚಿತ್ರಕಲೆ ಮತ್ತು ಅವರ ಜೀವನದ ಕುರಿತಾದ ಪುಸ್ತಕ 'ಶಾಂತಲಿಂಗಪ್ಪ ಪಾಟೀಲ' ಎಂಬುದು ಇದನ್ನು ೨೦೦೦ನೇ ಇಸ್ವಿಯಲ್ಲಿ ಪ್ರಥಮವಾಗಿ ಮುದ್ರಿಸಿದ್ದು ಬೆಂಗಳೂರಿನ ಅನುಭವ ಪ್ರಿಂಟರ್ಸ್ ಈ ಪುಸ್ತಕದ ಮುಖಪುಟಕ್ಕೆ ಶಾಂತಲಿಂಗಪ್ಪ ಪಾಟೀಲರು ರಚಿಸಿದ ಬಾಲಕನೊಬ್ಬನ ವ್ಯಕ್ತಿಚಿತ್ರ ಬೀದರ್ ಜಿಲ್ಲೆಯ ದುಬಲಗುಂಡಿಯ ಶಂಕರಪ್ಪ ಫತ್ತೇಪೂರ ಎನ್ನುವವರ

೨೬. ಪಿ. ಆರ್ ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು-೯೫-೯೬

ವ್ಯಕ್ತಿಚಿತ್ರದ ಛಾಯಾಚಿತ್ರವನ್ನು ವಿನ್ಯಾಸಗೊಳಿಸಿ ಮುಖಪುಟ ರಚಿಸಲಾಗಿದೆ. ಇಲ್ಲಿ ಮುದ್ರಿಸಿದ ಚಿತ್ರ 'ಪಾಶ್ಚಾತ್ಯ ನೈಜ ಶೈಲಿಯಲ್ಲಿ ರೂಪಿತವಾಗಿದೆ'[೨೭] ಬಾಲಕನ ಮುಖದಲ್ಲಿ ಮುಗ್ಧತೆ, ಕೋಮಲತೆ, ಗಂಭೀರತೆ ಈ ಎಲ್ಲ ಗುಣಗಳೂ ತುಂಬ ಸಹಜವಾಗಿ ಅಭಿವ್ಯಕ್ತವಾಗಿವೆ. ಅತ್ಯಂತ ಕೌಶಲ್ಯಪೂರ್ಣವಾಗಿ ರೂಪದರ್ಶಿಯನ್ನು ಮತ್ತು ಅಷ್ಟೇ ಶ್ರದ್ಧಾಸಕ್ತಿಗಳಿಂದ, ಕುಶಲತೆಯಿಂದ ಹಿನ್ನೆಲೆಯ ವಿವರಗಳನ್ನು ಚಿತ್ರಿಸಲಾಗಿದೆ (ಉದಾ:- ಹಿನ್ನೆಲೆಯಲ್ಲಿ ರಚಿಸಿರುವ ಕೈ ಚಿತ್ರ, ಕಂಪೌಂಡ್ ಸನ್ನಿವೇಶ) ರೂಪದರ್ಶಿಯ ಚಿತ್ರಕ್ಕೆ ಭಂಗಬರದ ರೀತಿಯಲ್ಲಿ ಪೇಸ್ಟಲ್‌ನಿಂದ ತಿಳಿವರ್ಣದಲ್ಲಿ (ತಿಳಿನೀಲಿ, ತಿಳಿಕಂದು, ತಿಳಿಹಳದಿ) ನಿರ್ವಹಿಸಿರುವುದರಿಂದ ಮುನ್ನೆಲೆಯಲ್ಲಿರುವ ರೂಪದರ್ಶಿಯ ವ್ಯಕ್ತಿತ್ವ ಎದ್ದು ಕಾಣುತ್ತದೆ. ತಿಳಿನೇರಳೆ ಬಣ್ಣದ ಮುಖಪುಟ ಕಾಗದದ ಮೇಲೆ ಈ ಕಲಾಕೃತಿಯ ಛಾಯಾಚಿತ್ರ ಅಚ್ಚಿಸಿ, ಅಚ್ಚಬಿಳಿ ಬಣ್ಣದ ಚೌಕಟ್ಟು ರೇಖೆಗಳನ್ನು ಅದಕ್ಕೆ ರೂಪಿಸಿರುವುದರಿಂದ ಮತ್ತು ಮುಖಪುಟದ ಮೇಲ್ತುದಿ ಹಾಗೂ ಕೆಳಗಡೆಯಲ್ಲಿ (ತಳಭಾಗದಲ್ಲಿ) ಹಳದಿಬಣ್ಣದಲ್ಲಿ ಕೃತಿಶೀರ್ಷಿಕೆ ಮತ್ತು ಕರ್ನಾಟಕ ಲಲಿತಕಲಾ ಅಕಾಡೆಮಿಯ ಹೆಸರು ಮುದ್ರಿಸಿರುವುದರಿಂದ ಅಕ್ಷರ ವಿನ್ಯಾಸಗಾರಿಕೆಯ ದೃಷ್ಟಿಯಿಂದಲೂ ಇಲ್ಲಿ ಒಂದು ಶಿಸ್ತು ಬದ್ಧ ಆಯೋಜನೆ ಏರ್ಪಟ್ಟಿರುವುದರಿಂದ ಒಟ್ಟಾರೆಯಾಗಿ ಈ ಕೃತಿಯ ಮುಖಪುಟ ವಿನ್ಯಾಸ ಆಕರ್ಷಣೀಯವೆನಿಸುತ್ತದೆ.

ಕೃತಿ ಶೀರ್ಷಿಕೆ ಮತ್ತು ಕರ್ನಾಟಕ ಲಲಿತ ಕಲಾ ಅಕಾಡೆಮಿ ಹೆಸರನ್ನು ಕನ್ನಡ ಮತ್ತು ಇಂಗ್ಲಿಷ ಭಾಷೆಯಲ್ಲಿ ನಮೂದಿಸಲಾಗಿದೆ. ಮುಖಪುಟದಲ್ಲಿ ವಿನ್ಯಾಸಗೊಳಿಸಿದ ಕನ್ನಡ ಭಾಷೆಯ ಕೃತಿ ಶೀರ್ಷಿಕೆಯ ಅಕ್ಷರಗಳು ೨೨ ಅಳತೆಯಲ್ಲಿದ್ದು (Font size) ಗೋಥಿಕ್ ಶೈಲಿಯಲ್ಲಿವೆ ಹಾಗೂ ಇಂಗ್ಲಿಷ್ ಭಾಷೆಯಲ್ಲಿರುವ ಇದರ ಅಕ್ಷರ ಅಳತೆ/ಗಾತ್ರ ೨೪(Font size) ಮತ್ತು ರೋಮನ್ ಮಾದರಿಯದು. ಕರ್ನಾಟಕ ಲಲಿತಕಲಾ ಅಕಾಡೆಮಿ ಎಂಬ ಪದಗಳ ಕನ್ನಡ ಅಕ್ಷರಗಳು ೨೪ ಗಾತ್ರ/ಅಳತೆಯವು (Font size) ಮತ್ತು ಅವುಗಳ ಶೈಲಿ ರೋಮನ್. ಇದೇ ಪದದ ಇಂಗ್ಲಿಷ್ ಅಕ್ಷರಗಳ ಅಳತೆ/ಗಾತ್ರ ೧೪ (Font size) ಮತ್ತು ಅವುಗಳ ಶೈಲಿಯೂ ರೋಮನ್ ಮಾದರಿಯದು.ಮುಖಪುಟದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆಯನ್ನು ಮುದ್ರಿಸಿರುವದು ವಿಶೇಷವಾಗಿ ಗಮನಿಸತಕ್ಕ ಅಂಶ.

**೩.೪.೨೭. ಬಸವರಾಜ ಹಳಿಜೋಳ (೨೦೦೦)**

ಆರ್.ಜಿ.ರಾಯಕರ ಎನ್ನುವವರು ಬರೆದ ಬಸವರಾಜ ಹಳಿಜೋಳರ ಕುರಿತಾದ ಪುಸ್ತಕ 'ಬಸವರಾಜ ಹಳಿಜೋಳ' ಸಿಂಧು ಗ್ರಾಫಿಕ್ಸ್ ಇವರಿಂದ ಮುದ್ರಣ ಕಂಡಿದ್ದು ಈ ಕೃತಿಯ ಮುಖಪುಟಕ್ಕೆ ಕಲಾವಿದ ಬಸವರಾಜ ಹಳಿಜೋಳರು ರಚಿಸಿದ ಅ.ನ.ಸುಬ್ಬರಾವ್ ಅವರ ತೈಲವರ್ಣ ಮಾಧ್ಯಮದ ಭಾವಚಿತ್ರದ ಛಾಯಾಚಿತ್ರವನ್ನೇ ಅಚ್ಚಿಸಿ ವಿನ್ಯಾಸಗೊಳಿಸಲಾಗಿದೆ. 'ಇಂಪ್ರೆಶನಿಸಂ'[೨೮] ಛಾಯೆಯುಳ್ಳ (ಪ್ರಭಾವವುಳ್ಳ) ಕಲಾಕೃತಿಯಿದು. ನವಿರಾದ /ಸವಿವರವಾದ ನಯವಾದ ವರ್ಣಲೇಪನವಿಲ್ಲ. ಒರಟಾದ ಕುಂಚ ಬೀಸುಗಳಿಂದ ಭಾವಚಿತ್ರರಚಿಸಲಾಗಿದೆ. ಇಂಪ್ರೆಶನಿಸಂ ಕಲಾವಿದರ ಕೃತಿನಿರ್ವಹಣಾಕ್ರಮವಾದ ಬಣ್ಣಗಳನ್ನು ಒಂದಕ್ಕೊಂದು

---

೨೭. ಓ. ಆರ್ ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು-೯೫-೯೬

೨೮. ಡಾ. ಅ. ಲ. ನರಸಿಂಹನ್ : ಇಂಪ್ರೆಶನಿಸಂ, ಪು-೫

ನಾಜೂಕಾಗಿ ಸಮೀಕರಿಸದೆ, ಕುಂಚದ ಬೀಸುಗಳನ್ನು ಹಾಗೆಯೇ ಉಳಿಸಿಕೊಳ್ಳುವಿಕೆಯನ್ನು ಈ ಭಾವಚಿತ್ರಕೃತಿಯಲ್ಲಿ ಕಾಣಬಹುದು.

ಮುಖ್ಯವಾಗಿ ಇಲ್ಲಿನ ಆಕರ್ಷಣೀಯ ಅಂಶವೆಂದರೆ ದಟ್ಟ ಕಂದು ಬಣ್ಣದ ಲೇಪನದಲ್ಲಿಯೇ ಮುಖದ ಭಾಗಗಳ ವಿವರಗಳನ್ನು ರೂಪಿಸಿ, ಅಗತ್ಯವೆನಿಸಿದಲ್ಲಿ ಮಾತ್ರ ಮಂದಬಿಳಿ ಬಣ್ಣದ ಮೂಲಕ ಮುಖದ ಹೈಲೈಟ್ ತೋರಿಸಿರುವುದು. ರೂಪದರ್ಶಿಯ ಎಡಗೈಯ ಅಂಚಿಗೆ ಮತ್ತು ಕಾಲರ್‌ಗೆ ಒರಟಾದ ಕಪ್ಪು ಬಣ್ಣದ ಬೂದು ಬಣ್ಣ ಕುಂಚ ಬೀಸುಗಳನ್ನಷ್ಟೆ ಎಳೆದು ಒಳಭಾಗವನ್ನು ಖಾಲಿಬಿಡಲಾಗಿದೆ. ಹಿನ್ನೆಲೆಯೂ ಸಹ ಖಾಲಿಯಿದೆ. ರೂಪದರ್ಶಿಯ ಬಲಪಾರ್ಶ್ವದಲ್ಲಿ / ಬಲ ಭುಜದ ಮೇಲ್ಗಡೆ ಬೂದು ಬಣ್ಣದಲ್ಲಿ ಒಂದು ರೇಖೆ ಎಳೆಯಲಾಗಿದೆ. (ಬಹುಶಃ ಅದು ಸಮತೋಲನಾ ದೃಷ್ಟಿಯಿಂದ ನಿರ್ವಹಿಸಿದುದಾಗಿರಬೇಕು) ಇಲ್ಲಿನ ಪ್ರಧಾನ ಲಕ್ಷ್ಯ ರೂಪದರ್ಶಿಯ ಮುಖಮಾತ್ರ, ಉಳಿದೆಲ್ಲವೂ ಗೌಣ. ಕಡುಕಂದು ಬಣ್ಣದಿಂದ ರಚಿತವಾದ ಈ ಕೃತಿಯ ಛಾಯಾಚಿತ್ರ ತಿಳಿ ಗುಲಾಬಿ ಬಣ್ಣದ ಮುಖಪುಟ ಹಾಳೆಯ ಮೇಲೆ ಅಚ್ಚಾಗಿರುವುದರಿಂದ ಎದ್ದುಕಾಣುತ್ತದೆ. ಈ ಚಿತ್ರದ ಮೇಲ್ಭಾಗದಲ್ಲಿ ೩೦ ಅಳತೆಯಲ್ಲಿ (Font size) ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಕಪ್ಪು ಬಣ್ಣದಲ್ಲಿ (ಕನ್ನಡ ಅಕ್ಷರಗಳ ಮತ್ತು ಇಂಗ್ಲಿಷ್ ಅಕ್ಷರಗಳ ಮಾದರಿ ರೋಮನ್ ಶೈಲಿ) ಕೃತಿಯ ಶೀರ್ಷಿಕೆ ಬರೆಯಲಾಗಿದೆ. ಇದೇ ಚಿತ್ರದ ಕೆಳಗಡೆ ದಟ್ಟಕಪ್ಪು ಬಣ್ಣದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು (ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ) ಪುಟ್ಟ ಅಕ್ಷರಗಳಲ್ಲಿದ್ದರೂ ಸ್ಪಷ್ಟವಾಗಿ ಲಕ್ಷ್ಯಕ್ಕೆ ಬರುವಂತೆ ಮುದ್ರಿಸಲಾಗಿದ್ದು, ಸಾಮಾನ್ಯ ಬಣ್ಣ ಮತ್ತು ವಿನ್ಯಾಸಯುಕ್ತ ಅಕ್ಷರಗಳ ಮೂಲಕ (Normal colour and normal size) ಕನ್ನಡ ಮತ್ತು ಇಂಗ್ಲಿಷ್ ನಲ್ಲಿ ವಿಳಾಸವನ್ನು ನಮೂದಿಸಲಾಗಿದೆ. (ಕನ್ನಡ ಮತ್ತು ಇಂಗ್ಲೀಷ್‌ನಲ್ಲಿ ವಿಳಾಸಕ್ಕೆ ಬಳಸಿದ ಅಕ್ಷರಗಳು ಸಾಮಾನ್ಯ ನಮೂನೆಯನ್ನು ಹೊಂದಿವೆ) ಈ ಪುಸ್ತಕದ ಮುಖಪುಟದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆ (logo) ಮುದ್ರಿಸಿಲ್ಲ.

**೩.೪.೨೮. ಪರಿಚಯ (೨೦೦೦)**

ಮಯೂರ ಪ್ರಿಂಟ್ ಆ್ಯಡ್ಸ್ ೨೦೦೦ ದಲ್ಲಿ ಮುದ್ರಿಸಿರುವ ಹೆಚ್.ಶಂಕ್ರಪ್ಪನವರಿಂದ ಸಂಗ್ರಹಿಸಲ್ಪಟ್ಟ 'ಪರಿಚಯ' ಕೃತಿ ಅಕಾಡೆಮಿಯ ಮಾಹಿತಿ ಸಂಗ್ರಹವಾಗಿದ್ದು ತುಂಬ ಸರಳವಾದ ಆದರೆ ಆಕರ್ಷಣೆಯನ್ನು ಉಂಟುಮಾಡುವ ಮುಖಪುಟ ಹೊಂದಿದೆ. ಕಡುಕೆಂಪು ಬಣ್ಣದ ಅವಕಾಶವನ್ನೇ ಬಹುಪಾಲು ಹೊಂದಿರುವ ಇದರ ಮುಖಪುಟ ಹಾಳೆಯ ತಳಭಾಗದಲ್ಲಿ ಕಡುಗಂದು ಬಣ್ಣದ ಸಮ್ಮಿಳನವಿದೆ.

ಮುಖಪುಟದ ಒಂದು ಅಂಚಿಗೆ ನೀಲಿಬಿಳಿ ಒಳಗೊಂಡ ತೆಳುವಾದ ನಿಖರವಾದ ನೇರವಾದ ರೇಖೆಯೊಂದು ಮೇಲ್ತುದಿಯಿಂದ ಕೆಳತುದಿಯ ತನಕವೂ ಎಳೆಯಲ್ಪಟ್ಟಿದೆ. ಸರಳಗೈ (free hand style) ನಲ್ಲಿ ಮುಖಪುಟ ಹಾಳೆಯ ಮೇಲ್ತುದಿಗೆ ತುಸು ಅವಕಾಶ ಬಿಟ್ಟು 'ಪರಿಚಯ' ಎಂದು ಕನ್ನಡದಲ್ಲಿ ಬಿಳಿಯ ಬಣ್ಣದಲ್ಲಿ ಬರೆಯಲಾಗಿದ್ದು ಅದರ ಕೆಳಗಡೆ ಕೃತಿಶೀರ್ಷಿಕೆಯ ವ್ಯಾಪ್ತಿಯಷ್ಟೆ ಜಾಗ ಕ್ರಮಿಸಿದ

ನೇರವಾದೊಂದು ಬಿಳಿಯಬಣ್ಣದ ತಳರೇಖೆ ಶೀರ್ಷಿಕೆಯ ಅಕ್ಷರಗಳ ಕೆಳಗೆ ಎಳೆಯಲ್ಪಟ್ಟಿದೆ. ಅದರ ಕೆಳಗಡೆ ಕಂಸದೊಳಗೆ ಪುಟ್ಟ ಕನ್ನಡ ಅಕ್ಷರಗಳಲ್ಲಿ ಸರಳಗೈ (free hand) ಶೈಲಿ 'ಅಕಾಡೆಮಿಯ ಮಾಹಿತಿ ಸಂಗ್ರಹ ಎಂದು ನಮೂದಿಸಲಾಗಿದ್ದು ನೀಲಿ ಮತ್ತು ಬಿಳಿಬಣ್ಣದ ಲಂಬ ರೇಖೆಯ ವಿರುದ್ಧ ಪಾರ್ಶ್ವದಲ್ಲಿ ಶೀರ್ಷಿಕೆಗಿಂತಲೂ ತುಸು ಕೆಳಗಿನ ಅವಕಾಶದಲ್ಲಿ ತೀರ ಚಿಕ್ಕ ಅಕ್ಷರಗಳಲ್ಲಿ 'ಸಂಗ್ರಹ' ಎಂದು ಬರೆದಿದ್ದು. ಕೆಳಗಡೆ ಪುಟ್ಟ ಅಕ್ಷರಗಳಲ್ಲಿ ಸಂಗ್ರಹಕಾರರ ಹೆಸರು ಅಚ್ಚಾಗಿದೆ. ನಡುವಿನ ಮುಖ ಪುಟ ಆವರಣವೆಲ್ಲ ಖಾಲಿ ಬಿಡಲ್ಪಟ್ಟಿದ್ದ; ತಳಭಾಗದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆ (logo) ಮತ್ತು ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಮುದ್ರಿಸಲಾಗಿದೆ. ಅವುಗಳು ರೋಮನ್ ಮಾದರಿಯ ಅಕ್ಷರಗಳು.

ಮುಖಪುಟದಲ್ಲಿ ಅಚ್ಚಿಸಿದ ಪದಗಳ ಅಕ್ಷರ ವಿನ್ಯಾಸ, ಅವುಗಳನ್ನು ಮುಖಪುಟ ಅವಕಾಶದಲ್ಲಿ ಸೂಕ್ತ ಸ್ಥಳದಲ್ಲಿ ಹೊಂದಿಸಿದ ಪರಿ ಮತ್ತು ಮುಖಪುಟದ ವಿಶಾಲ ಅವಕಾಶವೇ ತನ್ನ ಗಾಢ ಬಣ್ಣದಿಂದಾಗಿ ಕಲಾಪ್ರಜ್ಞೆ ಹೊಂದಿದ ಕಣ್ಣುಗಳನ್ನು ಆಕರ್ಷಿಸಿದ ಬಗೆ ಮತ್ತು ಮುಖಪುಟದ ಅಂಚನ್ನು ರೂಪಿಸುವಲ್ಲಿ ತೋರಿಸಿದ ನಾವೀನ್ಯತೆ ಈ ಎಲ್ಲ ಅಂಶಗಳ ಕಾರಣದಿಂದ ಈ ಕೃತಿಯ ಮುಖಪುಟ ಸೊಗಸಾದುದೆನಿಸುತ್ತದೆ.

**೩.೪.೨೯. ಎಂ. ಬಿ. ಪಾಟೀಲ (೨೦೦೦)**

ರಕ್ಷಾಪುಟದ ಮೇಲ್ಭಾಗದಲ್ಲಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಎಂ.ಬಿ. ಪಾಟೀಲ ಎಂದು ಕೃತಿಯ ಹೆಸರು ಹೊಂದಿರುವ ಹಾಗೂ ಎಂ.ಬಿ. ಪಾಟೀಲರಿಂದ ನಿರ್ಮಿತವಾದ ತೈಲವರ್ಣ ಮಾಧ್ಯಮದ ಸಂಯೋಜನಾ ಕೃತಿಯ ವರ್ಣಛಾಯಾಚಿತ್ರವನ್ನು ಮುಖಪುಟದಲ್ಲಿ ಹೊಂದಿರುವ ಎಂ.ಬಿ.ಪಾಟೀಲರ ಬದುಕು ಮತ್ತು ಕಲಾ ಸಾಧನೆಯ ಪರಿಚಯ ನೀಡುವ ಈ ಪುಸ್ತಕ ಬರೆದವರು ಬಿ.ಎಸ್.ವೆಂಕಟಲಕ್ಷ್ಮೀ ಎನ್ನುವವರು. ಇದು ೨೦೦೦ನೆಯ ಇಸ್ವಿಯಲ್ಲಿ ಬೆಂಗಳೂರಿನ ಸತ್ಯಶ್ರೀ ಪ್ರಿಂಟರ್ಸ್ ಇವರಿಂದ ಮೊದಲ ಬಾರಿಗೆ ಮುದ್ರಣ ಕಂಡುದಾಗಿದೆ.

ಈ ಪುಸ್ತಕದ ರಕ್ಷಾಪುಟದಲ್ಲಿ ವಿನ್ಯಾಸಗೊಳಿಸಿದ ಚಿತ್ರ ಜಾನಪದೀಯ ವಿಷಯ ಸಂಬಂಧಿಯಾಗಿದ್ದು ಪಾಶ್ಚಾತ್ಯ ನವ್ಯ ಕಲಾ ಪ್ರಕಾರಗಳಲ್ಲಿ ಒಂದಾದ ಕ್ಯೂಬಿಸಂ (ಘನಾಕೃತಿ ಪಂಥ) ಪ್ರಭಾವದಡಿಯಲ್ಲಿ ಮಾಡಿದುದು(ಸೃಷ್ಟಿಯಾದುದು). ಕೆಂಪು,ಹಸಿರು,ಕಪ್ಪು, ಬಿಳಿಬಣ್ಣಗಳು ಹೆಚ್ಚಾಗಿ ಬಳಕೆಗೊಂಡಿರುವ ಈ ಚಿತ್ರದಲ್ಲಿ ಆದಿಮ ಸತ್ವವೂ ತುಂಬಿದೆ. ಹಿನ್ನೆಲೆ ಮತ್ತು ಮುನ್ನೆಲೆಯನ್ನು ಸಮೀಕರಿಸದೆ ಮುನ್ನೆಲೆಯ ಆಕೃತಿಗಳು ಹಿನ್ನೆಲೆಯಿಂದ ಹೊರಬಂದಂತೆ ಭಾವನೆ ಮೂಡಿಸುವ ಆಕೃತಿ ಸಂಯೋಜನೆ ಮತ್ತು ವರ್ಣಲೇಪನ ಪದ್ಧತಿಯಿಂದ (ಚಪ್ಪಟೆ ವರ್ಣಲೇಪನದ ಹೊರತಾಗಿಯೂ) ಕೂಡಿದ ಈ ಚಿತ್ರ 'ರಿನೈಸಾನ್ಸ್'[೨೯] ಅವಧಿಯ ಕೆಲವು ಕಲಾವಿದರುಗಳೂ ಈ ರೀತಿಯ ಕ್ರಮ ಅನುಸರಿಸಿರುವರೆಂಬುದು ಇಲ್ಲಿ ಉಲ್ಲೇಖನೀಯ (ಈ ರೀತಿಯ ತಂತ್ರಗಾರಿಕೆಗೆ ಸ್ಫುಮಾಟೊ ತಂತ್ರಗಾರಿಕೆ ಎಂದು ಕರೆಯುತ್ತಾರೆ) ಮೂವರು ಸ್ತ್ರೀ ಆಕಾರಗಳ

೨೯. ಡಾ. ಡಿ. ಎ. ಉಪಾಧ್ಯ: ಪಾಶ್ಚಾತ್ಯ ದೃಶ್ಯಕಲೆಗಳು, ಪು -೪೮-೫೭

ಕೂದಲಿಗೆ ಬಳಿದ ಕಪ್ಪುಬಣ್ಣ ಚಿತ್ರದ ಸಮತಲದಲ್ಲಿ ರೂಪಿಸಿದ ಆಕೃತಿಗಳು ಮುನ್ನೆಲೆಗೆ ಬಂದಿರುವಂತೆ ಗೋಚರಿಸುವಿಕೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದು ಚಿತ್ರದ ಮುಂಭಾಗದಲ್ಲಿರುವ ಎರಡು ಕೋಳಿಗಳ ಆಕಾರಗಳು ಚಿತ್ರದ ಪ್ರಮುಖ ಆಶಯವನ್ನು ಧ್ವನಿಸುವ ಪ್ರತಿಮೆಗಳಾಗಿಯೂ ತೋರಿಬಂದಿವೆ. ಈ ಚಿತ್ರದ ವರ್ಣಛಾಯಾಚಿತ್ರವನ್ನು ಕಪ್ಪುಬಣ್ಣದ ಮುಖಪುಟದಲ್ಲಿ ಸಮತೋಲನದಿಂದ ಕೂಡಿದ ಅವಕಾಶದ ನಡುವೆ ತಿಳಿ ಜಾಂಬಳಿ ಬಣ್ಣದ ಚೌಕಟ್ಟಿನಲ್ಲಿ ರೂಪಿಸಿರುವುದು ಈ ಹಾಳೆಗೆ ಗಾಢವರ್ಣದ ಸಮರಸದ ನಡುವೆಯೂ ನುರಿತ ಮುಖಪುಟ ವಿನ್ಯಾಸಕಾರ/ಕೃತಿಕಾರರ ಕೈಚಳಕದಲ್ಲಿ ಎಷ್ಟೊಂದು ಪರಿಣಾಮಕಾರಿಯಾಗಿ ಪ್ರಸ್ತುತಗೊಳ್ಳಲು ಸಾಧ್ಯವಿದೆ ಎಂಬುದನ್ನು ಸಾಕ್ಷೀಕರಿಸುವುದಲ್ಲದೆ, ಮುಖಪುಟದಲ್ಲಿ ಅಚ್ಚಾದ ಕಲಾಕೃತಿಯ ಆಶಯದ ಪೋಷಕ ಧ್ವನಿಯಾಗಿಯೂ ಹೊರಹೊಮ್ಮಿದೆ ಎಂದು ಅಭಿಪ್ರಾಯ ಪಡಬಹುದು. ಮುಖಪುಟದಲ್ಲಿ ಅಚ್ಚ ಬಿಳಿಬಣ್ಣದಲ್ಲಿ ಮುದ್ರಿಸಿದ ಕೃತಿಯ ಹೆಸರಿನ ಕನ್ನಡದ ಅಕ್ಷರಗಳ ಅಳತೆ ೩೬ (Font size) ಮತ್ತು ವಿನ್ಯಾಸ ರೋಮನ್ ಶೈಲಿಯದು ಅದರ ಇಂಗ್ಲಿಷ್ ಹೆಸರಿನ ಅಕ್ಷರಗಳ ಅಳತೆ ೩೬ (Font size) ಮತ್ತು ಕುಂಚ ಬೀಸು (Brush stroke) ಗಳಿಂದ ಕೂಡಿದುದು. ಅಲ್ಲೇ ಕೆಳಗಿನ ಮೂಲೆಯಲ್ಲಿ ಅಚ್ಚಿಸಿರುವ ಈ ಕೃತಿಯ ಲೇಖಕರ ಹೆಸರನ್ನು ಕನ್ನಡದಲ್ಲಿ ಕಂದುಹಳದಿ ಅಕ್ಷರಗಳಲ್ಲಿ (Yellow ochre) ಇಂಗ್ಲಿಷ್‌ನ ಅಕ್ಷರಗಳನ್ನು ತಿಳಿಜಾಂಬಳಿ ಬಣ್ಣದಲ್ಲಿ ನಮೂದಿಸಲಾಗಿದೆ.

ಚಿತ್ರದ ಕೆಳಗಡೆ ಬಿಳಿ ಬಣ್ಣದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆ ಮುದ್ರಿಸಲಾಗಿದ್ದು, ಅದರ ಕೆಳಗೆ ಕಂದು ಹಳದಿ (Yellow ochre) ಬಣ್ಣದಲ್ಲಿ ಕನ್ನಡದಲ್ಲಿ ಮತ್ತು ಅಚ್ಚ ಬಿಳಿಬಣ್ಣದಲ್ಲಿ ಇಂಗ್ಲಿಷಿನಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಮುದ್ರಿಸಿದೆ. ಹಾಗೂ ಈ ಪುಸ್ತಕದ ಹಿಂಬದಿ ರಕ್ಷಾಪುಟವು ಕಪ್ಪು ಬಣ್ಣದಲ್ಲಿದ್ದು ಇದರ ಮೇಲ್ಭಾಗದ ಪಾರ್ಶ್ವದಲ್ಲಿ ಈ ಪುಸ್ತಕದ ವಿಷಯವಾದ ಕಲಾವಿದರ ೬.೫ ಉದ್ದ ೮.೫ ಎತ್ತರ ಸೆ.ಮೀ ಅಳತೆಯ ವರ್ಣಭಾವಚಿತ್ರವನ್ನು ಮುದ್ರಿಸಿ ಬೂದು ಬಣ್ಣದ ಅಂಚು ರೇಖೆಗಳಿಂದ ವಿನ್ಯಾಸಗೊಳಿಸಲಾಗಿದೆಯಲ್ಲದೆ; ಅದರ ಕೆಳಗೆ ಬಿಳಿಯ ಬಣ್ಣದಿಂದ ಕೂಡಿದ ಮತ್ತು ರೋಮನ್ ಶೈಲಿಯಲ್ಲಿರುವ ಕನ್ನಡ ಅಕ್ಷರಗಳಲ್ಲಿ ಕಲಾವಿದರ ಹೆಸರನ್ನು ನಮೂದಿಸಲಾಗಿದೆ.

ಇಲ್ಲಿಯೇ ಕೆಳಗಡೆ (ತಳಭಾಗದಲ್ಲಿ) ಸ್ವಲ್ಪ ಅಂತರದಲ್ಲಿ ಹಳದಿ ಬಣ್ಣದ ಸರಳ ರೇಖೆ ರೂಪಿಸಿದ್ದು ಅದರ ಮುನ್ನೆಲೆಯಲ್ಲಿ ಎಂ.ಬಿ. ಪಾಟೀಲರು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ ಜಾನಪದೀಯ ವಿಷಯ ಸಂಬಂಧಿತವಾದ ನವ್ಯ ಶೈಲಿಯ ಆಕಾಶ ನೀಲಿ, ಬಿಳಿ, ಹಳದಿ, ಕೆಂಪು, ಕಂದು ಬಣ್ಣ ಲೇಪಿತ ಕಲಾ ಕೃತಿಯ ೫ ಸೆ.ಮೀ ಉದ್ದ ೬.೫ ಸೆ.ಮೀ ಎತ್ತರ ಅಳತೆಯ ವರ್ಣಛಾಯಚಿತ್ರವನ್ನು ಸಹ ಮುದ್ರಿಸಲಾಗಿದೆ. ಈ ಚಿತ್ರದಲ್ಲೂ ಸಹ ಗ್ರಾಮೀಣ ಸ್ತ್ರೀಯ ಮನೋಭೂಮಿಕೆ, ಬದುಕಿನ ಒಂದು ಮಗ್ಗುಲಿನ ಸ್ಥಿತಿಯ ಅನಾವರಣದ ಪ್ರಯತ್ನವಿದೆ. ರಕ್ಷಾಪುಟ ವರ್ಣವಿನ್ಯಾಸ, ಸಂಯೋಜನೆ ಹಾಗೂ ಹಿಂಬದಿ ರಕ್ಷಾಪುಟದಚಿತ್ರ ಪರಿಕಲ್ಪನೆ, ಮುಖಪುಟದಲ್ಲಿ ಅಕ್ಷರ ಮುದ್ರಣಗೊಳಿಸುವಾಗ ಇರಬೇಕಾದ ಸಮತೋಲನ ಪ್ರಜ್ಞೆ (ಅಕ್ಷರ ವಿನ್ಯಾಸ ಮತ್ತು ಅಕ್ಷರ ವರ್ಣಗಾರಿಕೆ) ಸೌಂದರ್ಯ ಪ್ರಜ್ಞೆ ಈ ಎಲ್ಲ ನಿಟ್ಟಿನಿಂದಲೂ (ದೃಷ್ಟಿಕೋನ/ದಿಕ್ಕು) ಈ ಪುಸ್ತಕದ ರಕ್ಷಾಪುಟ ಚಿತ್ರ /ಮುಖಪುಟ ವಿನ್ಯಾಸ ಪ್ರಥಮ ದರ್ಜೆಯಲ್ಲಿ ನಿಲ್ಲುವಂತಹುದೆಂದು ಹೇಳಬಹುದಾಗಿದೆ.

### ೩.೪.೩೦. ಎಂ. ರಾಮನರಸಯ್ಯ (೨೦೦೦)

ಕಲಾವಿದ ಎಂ.ರಾಮನರಸಯ್ಯನವರ ಕುರಿತು ರಾಮದಾಸ್ ಅಡ್ಯಂತಾಯ ಅವರು ಬರೆದಿರುವ 'ಎಂ.ರಾಮನರಸಯ್ಯ' ಎಂಬ ಪುಸ್ತಕವು ೨೦೦೦ನೆಯ ಇಸ್ವಿಯಲ್ಲಿ ಪ್ರಗತಿ ಪ್ರಿಂಟರ್ಸ್ ಇವರಿಂದ ಮುದ್ರಿಸಲ್ಪಟ್ಟಿದ್ದು; ಈ ಕೃತಿಯ ಮುಖಪುಟ ಎಂ. ರಾಮನರಸಯ್ಯನವರಿಂದ ಚಿತ್ರಿತವಾದ (ತೈಲವರ್ಣ ಮಾಧ್ಯಮದಲ್ಲಿ) ಮೈಸೂರು ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್‌ರವರ ವ್ಯಕ್ತಿ ಚಿತ್ರದ ಛಾಯಾಚಿತ್ರವನ್ನು ಹೊಂದಿದೆ. ಮಹಾರಾಜರು ರಾಜಪೋಷಾಕಿನಲ್ಲಿ ಕುರ್ಚಿಯ ಮೇಲೆ ತಮ್ಮ ಬಲಗೈ ಇರಿಸಿ, ಅದಕ್ಕೆ ತಾಗಿ ಘನಗಂಭೀರವದನರಾಗಿ ನಿಂತಿರುವ ಕಲಾಕೃತಿಯ ಛಾಯಾಚಿತ್ರವಿದು. ಮೈಸೂರು ದೊರೆಗಳ ಸಾಂಪ್ರದಾಯಿಕ ರಾಜ ಮಕುಟ ಅಮೂಲ್ಯ ಆಭರಣಗಳು, ಬಂಗಾರ ವರ್ಣದ ಪಚ್ಚೆ ಪೀತಾಂಬರವನ್ನುಟ್ಟು ನಿಂತಿರುವ ಮಹಾರಾಜರ ಕರವಸ್ತ್ರ ಹೊಂದಿದ ಎಡಗೈ ಮಡಚಿ ಹೊಟ್ಟೆಯ ಭಾಗವನ್ನು ಸ್ಪರ್ಶಿಸಿದೆ. ಆಗಿನ ಕಾಲಾವಧಿಯಲ್ಲಿ ಮೈಸೂರು ಪ್ರಾಂತದಲ್ಲಿ ಪ್ರಚಲಿತದಲ್ಲಿದ್ದ 'ಬ್ರಿಟಿಷ್ ಮಾದರಿಯ ನೈಜ ಶೈಲಿಯಲ್ಲಿ'[೩೦](ಪಾಶ್ಚಾತ್ಯ ನೈಜ ಶೈಲಿ) ರಚನೆಯಾದ ಚಿತ್ರವಿದು. ಮಹಾರಾಜರ ದೇಹ ಕೊಂಚಮಟ್ಟಿಗೆ ಬದಿಗೆ ತಿರುಗಿದಂತಿದ್ದು ನೇರ ನೋಟದ ಮುಖವಿದೆ. ಈ ಕಲಾಕೃತಿಯಲ್ಲಿ ಮಹಾರಾಜರೇ ಕೇಂದ್ರ ವಸ್ತು, ರಾಜಪೋಷಾಕಿನ ವೈಭವ ಆ ಪೋಷಾಕಿನ ಮೇಲೆ ರೂಪಿಸಿದ ಮನಮೋಹಕ ನೆರಳು ಬೆಳಕು ಇವುಗಳ ನಿರ್ವಹಣೆಕಡೆಗೆ ಕಲಾವಿದರು ತುಂಬ ಲಕ್ಷ್ಯೀಕರಿಸಿದ್ದು ಕೃತಿಯಲ್ಲಿ ಉಳಿದೆಲ್ಲ ವಸ್ತು ವಿಷಯಗಳು (ಕುರ್ಚಿ, ಕುಂಡ, ಪರದೆ ಇತ್ಯಾದಿ) ತೀರಾ ಮಸುಕು ಮಸುಕಾಗಿ ನಿರ್ವಹಣೆಗೊಂಡಿವೆ.

ಇಲ್ಲಿನ ಈ ಕಲಾಕೃತಿಯಲ್ಲಿ ಬಣ್ಣಗಳು ಮತ್ತು ಆಕಾರಗಳ ನಡುವೆ ಒಂದು ವೈಶಿಷ್ಟ್ಯಪೂರ್ಣ ಸಾಂಗತ್ಯ ಏರ್ಪಾಡಾಗಿದ್ದು ತುಂಬ ಪರಿಣಿತಯುಕ್ತ ಕಲಾಕೃತಿ ಎಂದು ಅಭಿಪ್ರಾಯಪಡಬಹುದು. ತಿಳಿನೀಲಿ ಬಣ್ಣದ ಮುಖಪುಟ ಹಾಳೆಯಲ್ಲಿ ಈ ಕಲಾಕೃತಿಯ ಛಾಯಾಚಿತ್ರ ಮುಖಪುಟದ ತುಂಬ ವಿನ್ಯಾಸಗೊಂಡಿರುವುದರಿಂದ ಮುಖಪುಟ ಚಿತ್ತಾಕರ್ಷಕವೆನಿಸುತ್ತದೆ. ಮುಖಪುಟದ ಮೇಲ್ಭಾಗದಲ್ಲಿ ಕೆಂಪುಬಣ್ಣದಲ್ಲಿ ಕನ್ನಡ ಮತ್ತು ಇಂಗ್ಲೀಷ್ ಅಕ್ಷರಗಳಲ್ಲಿ ಕೃತಿಶೀರ್ಷಿಕೆ ಬರೆಯಲಾಗಿದ್ದು ಅವುಗಳು ಅಲಂಕಾರಿಕ ರೋಮನ್ ಮಾದರಿಯಲ್ಲಿವೆ. ಚಿತ್ರದ ಕೆಳಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆ (ಲೋಗೊ) ಮತ್ತು ಕರ್ನಾಟಕ ಲಲಿತಕಲಾ ಅಕಾಡೆಮಿ ಎಂಬ ಪದಗಳನ್ನು ಪುಟ್ಟದಾಗಿ ಕನ್ನಡ ಮತ್ತು ಇಂಗ್ಲಿಷ್ ಅಕ್ಷರಗಳಲ್ಲಿ ಕಪ್ಪು ಬಣ್ಣದಲ್ಲಿ ಬರೆದಿದ್ದು ಅವುಗಳು ರೋಮನ್ (ಶೆರಿಫ್) ಶೈಲಿಯಲ್ಲಿವೆ.

## ೩.೫. ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಚಿತ್ರಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

### ೩.೫.೧. ಎಸ್. ಜಿ. ವಾಸುದೇವ್ (೨೦೦೧)

ಭಾರತದ ಹೆಸರಾಂತ ನವ್ಯ ಕಲಾಕಾರರಾದ ಎಸ್.ಜಿ.ವಾಸುದೇವ್‌ರವರ ಜೀವನ ಮತ್ತು ಕಲಾಕೃತಿಗಳ ಕುರಿತಂತೆ ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಕೆ.ವಿ.ಸುಬ್ರಹ್ಮಣ್ಯಂ ಎನ್ನುವವರು ಬರೆದುಕೊಟ್ಟ ಪುಸ್ತಕ 'ಎಸ್. ಜಿ. ವಾಸುದೇವ್' ಎಂಬುದು. ೭೭x೯೦ ಸೆಂ.ಮೀ ಅಳತೆಯ ಕ್ಯಾನ್ವಾಸಿನ ಮೇಲೆ ತೈಲವರ್ಣ

೩೦. ಡಾ. ಡಿ. ಎ. ಉಪಾಧ್ಯ: ಪಾಶ್ಚಾತ್ಯ ದೃಶ್ಯಕಲೆಗಳು, ಪು-೯೫-೧೦೨

ಮಾಧ್ಯಮದಲ್ಲಿ ರಚಿಸಿದ 'ವೃಕ್ಷ' ಶೀರ್ಷಿಕೆಯ ಕಲಾಕೃತಿಯ ಛಾಯಾಚಿತ್ರವುಳ್ಳ ರಕ್ಷಾಪುಟ ಹೊಂದಿದ' ಈ ಪುಸ್ತಕವನ್ನು ೨೦೦೧ ರಲ್ಲಿ ಪ್ರಥಮವಾಗಿ ಮುದ್ರಿಸಿದವರು ಬೆಂಗಳೂರಿನ ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿಮಿಟೆಡ್ ಇವರು. 'ದಟ್ಟ ಜಾಂಬಳಿ ಅಥವಾ ಕಡು ನೇರಳೆ' ಬಣ್ಣದ ರಕ್ಷಾಪುಟ ಹಾಳೆಯ ಮೇಲೆ ಮುದ್ರಣಗೊಂಡ/ವಿನ್ಯಾಸಗೊಂಡ 'ವೃಕ್ಷ' ಕೃತಿಯಲ್ಲಿ ಪ್ರಾಣಿ, ಪಕ್ಷಿ, ಮೀನು, ಆಮೆ, ಗಂಡು-ಹೆಣ್ಣು, ಬೀಜ,ಫಲ ಹೀಗೆ ಬಗೆ ಬಗೆಯ ಜೀವ ವೈವಿಧ್ಯಗಳು ಕಲಾವಿದರ ಕಲ್ಪನಾಲೋಕದಿಂದ ಕ್ಯಾನ್ವಾಸಿನ ಮೇಲೆ ಕಲಾಕೃತಿಯಾಗಿ ಅನಾವರಣಗೊಂಡಿದ್ದು ವಿಶಿಷ್ಟತರ ಕಾವ್ಯಮಯ ಏರಿಳಿತಗಳ ಸಮ್ಮಿಳನವಿದೆ. ಕಂದು, ಕೆಂಪು ಹಸಿರು, ಹಳದಿ, ನೀಲಿ ಬಣ್ಣಗಳನ್ನು ಕ್ಯಾನ್ವಾಸಿನ ಅವಕಾಶದಲ್ಲಿ ಲೇಪಿಸಿ, ತಮ್ಮ ಆಶಯಕ್ಕೆ ತಕ್ಕಂತೆ ಕಾಣಿಸಿಕೊಂಡ ರೂಪಗಳನ್ನು ಶಾಶ್ವತಗೊಳಿಸಿಕೊಳ್ಳಲು (ಉಳಿಸಿಕೊಳ್ಳಲು) ಒರೆಸಿ, ಉಜ್ಜಿ, ತೀಡಿ ಮತ್ತು ಕೆಲವೆಡೆ ಅನಗತ್ಯವೆನಿಸಿದ ಬಣ್ಣಗಳನ್ನು ಒಂದಿಷ್ಟು ಹೊರತೆಗೆದು ಹೀಗೆ ಉಬ್ಬು ತಗ್ಗುಗಳ ಕಲ್ಪನೆ ಮೂಡಿಸುತ್ತಾ (relief effect) ಒಂದು ಅನನ್ಯ ತಂತ್ರಕೌಶಲ್ಯವನ್ನು ಪ್ರದರ್ಶಿಸುವ ಈ ಕೃತಿಯ ಛಾಯಾಚಿತ್ರ ದಟ್ಟವರ್ಣದ ಹಿನ್ನೆಲೆಗೆ ತುಂಬ ಪ್ರಕಾಶಮಾನವಾಗಿ ರಕ್ಷಾಪುಟದಲ್ಲಿ ಕಾಣುತ್ತಿರುವುದರಿಂದ ಕಣ್ಣುಗಳ ಕುತೂಹಲವನ್ನು ಮತ್ತು ಮಾನಸಿಕ ಸೆಳೆತವನ್ನು ಉಂಟು ಮಾಡುತ್ತದೆ. ವೃತ್ತಿಪರ ಆಯಾಮದಿಂದ ಕೂಡಿದ ಮುಖಪುಟವಿದು ಎಂದು ಅಭಿಪ್ರಾಯ ಪಡಬಹುದು.

ರಕ್ಷಾಪುಟದಲ್ಲಿ Yellow ochre ಬಣ್ಣದಲ್ಲಿ ೩೨ (Font size) ಅಳತೆಯ ಮತ್ತು ಸಾಮಾನ್ಯ ಮಾದರಿಯ (ಶೈಲಿ) ಕನ್ನಡ ಅಕ್ಷರಗಳಲ್ಲಿ ಎಸ್.ಜಿ.ವಾಸುದೇವ್ ಎಂದು ಬರೆದಿದ್ದಾರೆ, ಅದನ್ನೇ ಅಚ್ಚ ಬಿಳಿಯಬಣ್ಣದ ೩೨ (Font size) ಅಳತೆಯ ಹೆಲ್ವಿಟಿಕ್ ಶೈಲಿಯ ಇಂಗ್ಲೀಷ್ ಅಕ್ಷರಗಳಲ್ಲಿಯೂ ನಮೂದಿಸಲಾಗಿದೆ. ಕೆಳಗೆ ತಿಳಿನೀಲಿ ಬಣ್ಣದಲ್ಲಿ ೧೮ ಅಳತೆಯ ಮತ್ತು ರೋಮನ್ ಶೈಲಿಯ ಕನ್ನಡ ಅಕ್ಷರಗಳಲ್ಲಿ ಮತ್ತು ಬಿಳಿಯ ಬಣ್ಣದ ೧೮ ಅಳತೆಯ ಮತ್ತು ರೋಮನ್ ಶೈಲಿಯ ಇಂಗ್ಲೀಷ್ ಅಕ್ಷರಗಳಲ್ಲಿ ಕೃತಿ ಲೇಖಕರ ಹೆಸರು ಮುದ್ರಿಸಲಾಗಿದೆ. ರಕ್ಷಾಪುಟದಲ್ಲಿ ಮುದ್ರಿಸಿದ ಚಿತ್ರದ ಕೆಳಗಡೆ ಬಿಳಿಯ ಬಣ್ಣದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆ ಮುದ್ರಿಸಿದ್ದು ಅದರ ಪಕ್ಕದಲ್ಲಿ ಒಳಮೈಯಲ್ಲಿ ಆಕಾಶನೀಲಿ ಬಣ್ಣವಿರುವ (Cobalt blue) ಹೊರ ಅಂಚಿಗೆ ಕೆಂಪು ಬಣ್ಣವಿರುವ ೧೮ ಅಳತೆಯ ಮತ್ತು ರೋಮನ್ ಶೈಲಿಯ ಕನ್ನಡ ಅಕ್ಷರಗಳಲ್ಲಿ ಹಾಗೆ ಒಳಮೈಯಲ್ಲಿ ಅಚ್ಚ ಹಳದಿ ಬಣ್ಣವಿರುವ ಮತ್ತು ಹೊರ ಅಂಚಿಗೆ ಕೆಂಪು ಬಣ್ಣವಿರುವ ೧೮ ಅಳತೆಯ ಮತ್ತು ಗೋಥಿಕ್ ಶೈಲಿಯ ಇಂಗ್ಲೀಷ್ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ನಮೂದಿಸಲಾಗಿದೆ.

ಈ ಪುಸ್ತಕದ ಹಿಂಬದಿಯ ರಕ್ಷಾಪುಟದಲ್ಲಿಯೂ ಪ್ರಧಾನವಾಗಿ ನೀಲ ಬಣ್ಣದಲ್ಲಿಯೇ ನಿರ್ವಹಣೆಗೊಂಡ 'ಥಿಯೊಟರ್ ಆಫ್ ಲೈಫ್' ಎಂಬ ಶೀರ್ಷಿಕೆಯ ೧೯೬೬ರಲ್ಲಿ ರಚಿಸಲ್ಪಟ್ಟ ಕಲಾಕೃತಿಯ ಛಾಯಾಚಿತ್ರ ಬಳಸಿ ವಿನ್ಯಾಸಗೊಳಿಸಲಾಗಿದ್ದು (ಈ ಕೃತಿ ತೈಲವರ್ಣ ಮಾಧ್ಯಮದ್ದಾಗಿದ್ದು ಇದರ ಅಳತೆ ೧೮೦x೧೨೦. ಸೆ.ಮೀ ಇದೆ) ಮೊನೊಕ್ರೊಮೆಟಿಕ್ ವರ್ಣದಲ್ಲಿ ರಚನೆಯಾಗಿದೆ. ಇಲ್ಲಿ ಸಹ ನೀಲಿಬಣ್ಣವನ್ನು ಲೇಪಿಸಿ, ನಂತರ ತಮಗೆ ಅಪೇಕ್ಷೆ ಕಂಡಲ್ಲಿ ಬಣ್ಣವನ್ನು ಬಳಸಿಕೊಂಡು, ಕೆಲವೆಡೆ ಉಜ್ಜಿ, ತೀಡಿ, ತಾಂತ್ರಿಕ

ಕೌಶಲ್ಯವನ್ನು ತೋರ್ಪಡಿಸಿದ ಕೃತಿ ಇದಾಗಿದೆ. ಇದೂ ಸಹ 'ಸೃಜನಶೀಲತೆಯಿಂದಲೇ ಕೂಡಿದ್ದು ಸಮಕಾಲೀನ ಕಲಾ ತತ್ವಕ್ಕನುಗುಣವಾಗಿ ನಿರೂಪಿತವಾದುದು.'[೩೧] ಈ ಕಲಾಕೃತಿಯ ಛಾಯಾಚಿತ್ರದ ಕೆಳಗಡೆ ಕನ್ನಡದಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರ ಬರಹದಲ್ಲಿನ ಒಂದು ಪ್ಯಾರಾವನ್ನು ಆಯ್ದು ಮುದ್ರಿಸಲಾಗಿದೆ ಅದರ ಕೆಳಗಡೆ ಪಾರ್ಶ್ವದಲ್ಲಿ ಅಚ್ಚಹಳದಿ ಬಣ್ಣದಲ್ಲಿ ಕೃತಿ ಲೇಖಕರ ಹೆಸರನ್ನು ಮುದ್ರಿಸಲಾಗಿದೆ. ಈ ರಕ್ಷಾಪುಟದ ಹಾಳೆಯೂ ಸಹ ಮುಂಬದಿ ರಕ್ಷಾಪುಟ (ಮುಖಪುಟ)ದ ಬಣ್ಣದಲ್ಲಿಯೇ ಇದೆ.

### ೩.೫.೨. ವಿ. ಟಿ. ಕಾಳೆ (೨೦೦೪)

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಹೊರಬಂದಿರುವ ಮತ್ತೊಂದು ಪುಸ್ತಕ 'ವಿ.ಟಿ.ಕಾಳೆ' ಎಂಬುದು. ಇದರ ಲೇಖಕರು ಡಾ.ಎಸ್.ಸಿ.ಪಾಟೀಲರು. ಇದನ್ನು ಪ್ರಥಮವಾಗಿ ಮುದ್ರಿಸಿದವರು ಬೆಂಗಳೂರಿನ ಇಳಾ ಪ್ರಿಂಟರ್ಸ್ ಇವರು. ೨೦೦೪ ರಲ್ಲಿ ವಿ.ಟಿ. ಕಾಳೆಯವರಿಂದ ರಚಿತವಾದ 'ದಿವಾ' ಶೀರ್ಷಿಕೆಯ ಕಲಾಕೃತಿಯ ವರ್ಣಛಾಯಾಚಿತ್ರವನ್ನೇ ಬಳಸಿಕೊಂಡು ಈ ಪುಸ್ತಕದ ರಕ್ಷಾಪುಟ ವಿನ್ಯಾಸಗೊಳಿಸಿರುವುದು ಸುಧಾಕರ ದರ್ಬೆಯವರು. ಈ ಪುಸ್ತಕದ ರಕ್ಷಾಪುಟ ಹಿಂಬದಿಪುಟದುದ್ದಕ್ಕೂ ಏಕವರ್ಣದಲ್ಲಿ (ಮೊನೊಕ್ರೋಮ್) ಕಪ್ಪು–ಬಿಳಿ ಬಣ್ಣದಲ್ಲಿರುವ ಕೋಟೆಯ ಚಿತ್ರವನ್ನು ಬಳಸಿದ್ದಾರೆ. ಇದರ ಶೈಲಿ ಕಂಪನಿ ಶೈಲಿಯ ಚಿತ್ರಗಳನ್ನು ಹೋಲುತ್ತದೆ. ಈ ಪುಸ್ತಕದ ರಕ್ಷಾಪುಟದಲ್ಲಿ ಕಲಾಕೃತಿಯ ವರ್ಣಛಾಯಾಚಿತ್ರವನ್ನು ಚೌಕಟ್ಟಿನಲ್ಲಿರಿಸಿ ಸಂಯೋಜಿಸಿದ ಬಗೆ/ಪರಿ ರಘೋತ್ತಮ ಪುಟ್ಟಿ ಪುಸ್ತಕದ ಮುಖಪುಟವಿನ್ಯಾಸಗಾರಿಕೆಯ ಮಾದರಿಯಲ್ಲೇ ಇದೆ.

ಈ ಪುಸ್ತಕದ ರಕ್ಷಾಪುಟ ಮತ್ತು ರಘೋತ್ತಮ ಪುಟ್ಟಿ ಪುಸ್ತಕದ ರಕ್ಷಾಪುಟದಲ್ಲಿ ಪದನಾಮ ಮತ್ತು ಲಾಂಛನವನ್ನು ಮುದ್ರಿಸಿದ ಸ್ಥಳ, ಕೃತಿ ಶೀರ್ಷಿಕೆಯನ್ನು ರೂಪಿಸಿದ/ವಿನ್ಯಾಸಗೊಳಿಸಿದ ನಮೂನೆ ಮತ್ತು ಲೇಖಕರ ಹೆಸರನ್ನು ಮುದ್ರಿಸಿದ ಸ್ಥಳ, ಮತ್ತು ಅಡಕಗೊಳಿಸಿದ ಅಕ್ಷರಗಳು ಅಲ್ಲದೆ ಬಹುಮುಖ್ಯವಾಗಿ ರಕ್ಷಾಪುಟದಲ್ಲಿ ವಿನ್ಯಾಸಗೊಳಿಸಿದ ಕಲಾಕೃತಿಯ ವರ್ಣಛಾಯಾಚಿತ್ರದ ಮೇಲೆ–ಕೆಳಗೆ, ಎಡ–ಬಲ ಪಾರ್ಶ್ವಗಳಲ್ಲಿ ಆಯೋಜಿಸಿದ ಸ್ಥಳ ವಿಂಗಡಣೆ ಈ ಎಲ್ಲ ಅಂಶಗಳಲ್ಲೂ ಈ ಎರಡೂ ಪುಸ್ತಕಗಳಲ್ಲಿ ತುಂಬ ಸಾಮ್ಯತೆ, ಒಂದು ಏಕರೂಪತೆ ಕಂಡುಬರುತ್ತಿದೆ. ಜಲವರ್ಣ ಮಾಧ್ಯಮದಲ್ಲಿ ರಚಿತವಾದ ಕಲಾಕೃತಿಯು ಇದಾಗಿದ್ದು, ಯುವತಿಯೋರ್ವಳು ಎದುರು ಭಂಗಿಯಲ್ಲಿ ನಿಂತಿದ್ದು.ಮುಖವನ್ನು ಪಾರ್ಶ್ವಕ್ಕೆ ತಿರುಗಿಸಿ ನಿಂತು, ತನ್ನ ಬಲ ಪಾರ್ಶ್ವದಲ್ಲಿ ಇರುವ ಸಜ್ಜಿಕೆಯೊಂದರ ಮೇಲೆ ಇರುವ ಹಾಳೆಯ ಮೇಲೆ ಗರಿಯಿಂದ ಏನನ್ನೋ ಮೂಡಿಸುತ್ತಿರುವಂತಿದೆ. ಎಡಗೈಯಲ್ಲಿ ತನ್ನ ರವಿಕೆಯ ಸೆರಗನ್ನು ವೈಯ್ಯಾರದಿಂದೆತ್ತಿ ಹಿಡಿದುಕೊಂಡಿದ್ದಾಳೆ.ಕಂದುಬಣ್ಣದ ಪ್ರಾಧಾನ್ಯತೆಯೇ ದಟ್ಟೈಸಿರುವ ಇಡೀ ಚಿತ್ರದ ಅವಕಾಶದ ನೋಟ (ಯುವತಿಯನ್ನು ಪರಿಗಣಿಸಿ) ಮಂದವರ್ಣ ಸಾಂಗತ್ಯದಲ್ಲಿದ್ದು ಮುಸ್ಸಂಜೆಯಂತಹ ಕಾಲಘಟ್ಟವನ್ನು ಧ್ವನಿಸುತ್ತಲಿದೆ. ಈ ಚಿತ್ರದ ಶೀರ್ಷಿಕೆ 'ದಿವಾ'. ಇದು 'ಭಾರತೀಯ ಪ್ರಾಚೀನ ಋಷಿ ಪರಂಪರೆಯವರು

---

೩೧. ಸಂದರ್ಶನ: ಡಾ. ಎಸ್. ಸಿ. ಪಾಟೀಲ (ಚಿತ್ರಕಲಾವಿದರು & ಪ್ರಾಧ್ಯಾಪಕರು, ಕ.ವಿ.ವಿ.,ಹಂಪಿ), ದಿ: ೨೦೧೬

ನಿರ್ಣಯಿಸಿದ್ದ ದಿವಾ, ಸಂಧ್ಯಾ ಹಾಗೂ ನಿಶಾ ವಿಷಾ = ಬೆಳಿಗ್ಗೆ ದಿವಾ – ಹಗಲು, ಸಂಧ್ಯಾ = ಮುಸ್ಸಂಜೆ ನಿಶಾ=ಕತ್ತಲು/ರಾತ್ರಿ ಎಂಬ ದಿವಸವೊಂದರಲ್ಲಿ ಬರುವ ನಾಲ್ಕು ಪ್ರಕಾರದ ವೇಳೆಯಲ್ಲಿ ಬರುವ ಒಂದು ವೇಳಾ ಅವಧಿ.'[೩೨] ಪುಸ್ತಕದಲ್ಲಿ ಮುದ್ರಣಗೊಂಡಿರುವ ವಿ.ಟಿ. ಕಾಳೆಯವರ ಈ ಸಂಯೋಜನಾ ಚಿತ್ರದಲ್ಲಿ ಅಜಂತಾ, ರಜಪೂತ ಬಂಗಾಲಿ ಚಿತ್ರ ಶೈಲಿಯ ಚಿತ್ರಗಳ ಪ್ರಭಾವ ಮೇಳೈಸಿದೆ. ಆಂಶಿಕವಾಗಿ ಎಂ. ಆರ್. ಚುಗ್ತಾಯ್ (ಅಬ್ದುಲ್ ರೆಹಮಾನ್ ಚುಗ್ತಾಯ್) ಕ್ಷಿತೀಂದ್ರನಾಥ ಮಜುಂದಾರ್ ರಂತಹ ಕಲಾವಿದರ ಚಿತ್ರ ನಿರ್ವಹಣಾ ಕೌಶಲ್ಯವೂ ಸಹ ಆಗಿರುವುದು ಸುಸ್ಪಷ್ಟಗೊಳ್ಳುತ್ತಿದೆ. ಈ ಚಿತ್ರಕ್ಕೂ ಸಹ ಹಳದಿಬಣ್ಣದ ತೆಳು ಅಂಚುರೇಖೆಯ ಮೂಲಕ ಶಿಸ್ತಾದ ಚೌಕಟ್ಟು ರೂಪಿಸಲಾಗಿದೆ.

**೩.೫.೩. ರಘೋತ್ತಮ ಪುಟ್ಟಿ (೨೦೦೪)**

'ರಘೋತ್ತಮ ಪುಟ್ಟಿ' ಎಂಬ ಪುಸ್ತಕ ಮೊದಲು ಮುದ್ರಣಗೊಂಡಿದ್ದು ೨೦೦೪ ರಲ್ಲಿ, ಲಿಪಿ ಮುದ್ರಣ ಬೆಂಗಳೂರು ಇವರಿಂದ. ಈ ಪುಸ್ತಕದ ಲೇಖಕರು ದಿಲೀಪ ಕುಮಾರ ಕಾಳೆ ಎನ್ನುವವರು. ಇದಕ್ಕೆ ಮುಖಚಿತ್ರ ವಿನ್ಯಾಸಗೊಳಿಸಿದವರು ಸುಧಾಕರ ದರ್ಬೆ. ರಘೋತ್ತಮ ಪುಟ್ಟಿಯವರ ಕಲಾಕೃತಿಯ ವರ್ಣ ಛಾಯಾಚಿತ್ರವನ್ನೇ ಬಳಸಿಕೊಂಡು ಈ ಪುಸ್ತಕದ ರಕ್ಷಾಪುಟವಿನ್ಯಾಸ ಮಾಡಲಾಗಿದೆ.ತಿಳಿಹಳದಿ ಅಂಚುರೇಖೆಯ ಚೌಕಟ್ಟಿನಲ್ಲಿ ಸ್ಪಷ್ಟವಾಗಿ ಕಾಣುವ ಅಗಲ ಕಿರಿದಾದ ಎತ್ತರ ಹೆಚ್ಚಿರುವ 'ಬುದ್ಧ' ಕಲಾಕೃತಿಯ ವರ್ಣ ಛಾಯಾಚಿತ್ರವಲ್ಲದೆ, ಹಿನ್ನೆಲೆಯಲ್ಲಿ ರಕ್ಷಾಪುಟದ ಹಾಳೆಯ ಮೇಲೆ ಸಮೀಕರಣಗೊಂಡಿರುವ ಸಂಲಗ್ನಗೊಳಿಸಿರುವ ಹಸಿರು ಬಣ್ಣ ಪ್ರಧಾನ ನಿಸರ್ಗ ಚಿತ್ರವೂ ಸಹ (ಕಂಪ್ಯೂಟರ್ ತಂತ್ರಜ್ಞಾನದಿಂದ ಈ ರೀತಿ ಮಾಡಲಾಗಿದೆ.) ರಘೋತ್ತಮ ಪುಟ್ಟಿಯವರಿಂದ ಚಿತ್ರಿತವಾದುದೇ ಆಗಿದೆ.

ಈ ಹಾಳೆಯ ಮೇಲ್ಭಾಗದ ಮೂಲೆಯು ತಿಳಿನೀಲಿಯಿಂದ ಭರ್ತಿಯಾಗಿದೆ. ರಕ್ಷಾಪುಟದಲ್ಲಿ ಚೌಕಟ್ಟಿನಲ್ಲಿ ವಿನ್ಯಾಸಗೊಂಡಿರುವ ಚಿತ್ರದಲ್ಲಿ ಪ್ರಶಾಂತ, ಸುವದನ, ಧ್ಯಾನಮಗ್ನ ಬುದ್ಧ, ಬಾಣದಿಂದ ಗಾಯಗೊಂಡಿರುವ ಹಂಸಪಕ್ಷಿಯೊಂದನ್ನು ತನ್ನ ಕೋಮಲ ಕರಗಳಿಂದ ಹಿಡಿದೆತ್ತಿ ಸಂತೈಸುತ್ತಿದ್ದು, ಪಕ್ಷಿಯನ್ನು ಘಾಸಿಗೊಳಿಸಿರುವ ಬಾಣವನ್ನು ಪರೀಕ್ಷಿಸುತ್ತಿದ್ದಾನೆ. ಸುತ್ತೆಲ್ಲ ವೃಕ್ಷ ಪುಷ್ಪಗಳಿಂದ ಆವೃತವಾದ ಸಂಕುಲವಿದೆ, ಮೊಲಗಳಿವೆ. ಈ ಚಿತ್ರದ ಒಟ್ಟಾರೆ ಶೈಲಿ ಅಜಂತಾ ಚಿತ್ರ ಶೈಲಿಯಿಂದ ಪ್ರಭಾವಿತಗೊಂಡ 'ಬಂಗಾಳಿ ಕಲಾ'[೩೩] ಶೈಲಿಯನ್ನು ಹೋಲುತ್ತಿದೆ. ಬುದ್ಧನ ಆಕೃತಿ ನಿರೂಪಣೆ, ಮೈಬಣ್ಣ ಮುಖದಲ್ಲಿ ಸಮೂಹಗೊಳಿಸಿರುವ ಮುಗ್ಧತೆ, ದಯಾಪರತೆ ತಲೆಯ ಹಿಂಗಡೆ ತೋರಿಸಿರುವ ಹಳದಿ ಬಣ್ಣದ ಪ್ರಭಾಮಂಡಲ, ಹಂಸಪಕ್ಷಿಯ ಚಿತ್ರಣದಲ್ಲಿ, ಗಿಡಗಳ ತೋರ್ಪಡಿಕೆಯಲ್ಲಿ ಚಿತ್ರದ ಮುನ್ನೆಲೆಯಲ್ಲಿ ಇರುವ ಮೊಲಗಳು, ನೆಲ, ಹಸಿರುಗಳ ತೋರ್ಪಡಿಯಲ್ಲಿ ಹೀಗೆ ಇಲ್ಲಿ ನಿರೂಪಿತವಾದ ಪ್ರತಿಯೊಂದು ಆಕೃತಿ ಘಟಕದಲ್ಲೂ ಸವಿವರವಾದ ನಿರೂಪಣೆಯಿದೆ. ಅಜಂತಾ ಚಿತ್ರಗಳಲ್ಲಿ ಕಾಣುವ ಅಲಂಕರಣ ತಂತ್ರಜ್ಞತೆ (ಕೌಶಲ)

---

೩೨. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾಇತಿಹಾಸ ಉಪನ್ಯಾಸಕರು), ದಾವಣಗೆರೆ; ದಿ ೨೦೧೬

೩೩. Pran Nath Mago: Contemporary art in Indian a perspective, p 59-69

ಮೈದಳೆದಿದೆ.ತುಂಬ ಭಾವಪೂರ್ಣತೆಯಿಂದ ಕೂಡಿರುವ ಚಿತ್ರವಿದಾಗಿದ್ದು, ಮುಖಪುಟದ ಮೇಲ್ಗಡೆ ತುಸು ಹೆಚ್ಚು ಸ್ಥಳಾವಕಾಶ ಬಿಟ್ಟು, ಕೆಳಭಾಗದಲ್ಲಿ ಕಡಿಮೆ ಸ್ಥಳಾವಕಾಶವಿರಿಸಲಾಗಿದೆ. ಅಂತೆಯೆ ಚಿತ್ರದ ಎಡ-ಬಲ ಪಾರ್ಶ್ವಗಳ ಸ್ಥಳಾವಕಾಶದಲ್ಲಿ ಸಹ.ಅವಕಾಶ ವಿಂಗಡಣೆಯಲ್ಲಿ ಆಚೀಚೆ ಅಳತೆಯಲ್ಲಿ ತುಸು ವ್ಯತ್ಯಾಸ ಕಾಯ್ದುಕೊಳ್ಳಲಾಗಿದೆ.ಮುದ್ರಿತ ಚಿತ್ರದ ವರ್ಣ ಛಾಯಾಚಿತ್ರದ ಮೇಲ್ಗಡೆ ಬಿಳಿಯ ಬಣ್ಣದ ಕೃತಿಯ ಶೀರ್ಷಿಕೆ ಕನ್ನಡದಲ್ಲಿ ನಮೂದಿಸಿದ್ದರೆ, ಅದರ ಒಂದು ಪಾರ್ಶ್ವದಲ್ಲಿ ಅದೇ ಬಿಳಿಯ ಬಣ್ಣದಲ್ಲೇ ಇಂಗ್ಲಿಷಿನಲ್ಲಿ ಶೀರ್ಷಿಕೆ ಪುನರುಕ್ತಿಗೊಂಡಿದೆ. ಚಿತ್ರದ ತಳಭಾಗದಲ್ಲಿ ಬಿಳಿಯ ಬಣ್ಣದಲ್ಲಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಈ ಕೃತಿ ಲೇಖಕರ ಹೆಸರನ್ನು ಮುದ್ರಿಸಲಾಗಿದೆ. ಬಿಳಿಯ ಬಣ್ಣದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಪದನಾಮ ಮತ್ತು ಲಾಂಛನವನ್ನು ರಕ್ಷಾಪುಟದ ಮೇಲ್ಭಾಗದ ಒಂದು ಮೂಲೆಯಲ್ಲಿ ಮುದ್ರಿಸಲಾಗಿದೆ. ಹಿಂಬದಿ ರಕ್ಷಾಪುಟದಲ್ಲೂ ರಘೋತ್ತಮ ಪುಟ್ಟಿಯವರಿಂದ ರಚಿತವಾದ ನಿಸರ್ಗ ಚಿತ್ರವೊಂದರ ವರ್ಣಛಾಯಾಚಿತ್ರವನ್ನೇ ಬಳಸಿಕೊಂಡು ರಕ್ಷಾಪುಟದುದ್ದಕ್ಕೂ ವಿನ್ಯಾಸಗೊಳಿಸಲಾಗಿದೆ.

ಈ ರೀತಿ ವಿನ್ಯಾಸಗೊಳಿಸುವಲ್ಲಿ ಕಂಪ್ಯೂಟರ್ ನೆರವು ಪಡೆದುಕೊಂಡಿರುವುದು ಇಲ್ಲಿನ ಮುದ್ರಣದ ವೈಖರಿಯಿಂದಲೇ ಸ್ಪಷ್ಟಗೊಳ್ಳುತ್ತದೆ. ಹಾಗಾಗಿ ಚಿತ್ರಗಾರಿಕೆಯಲ್ಲಿ ಕಲಾವಿದರು ತೋರ್ಪಡಿಸಿದ ಕೈಚಳಕ ಕಂಪ್ಯೂಟರ್ ಟಚಪ್(Touchup)ನಿಂದ ವಿರೂಪಗೊಂಡಂತೆ ಕಾಣುತ್ತದೆ ಎಂಬುದೂ ಸಹ ಇಲ್ಲಿ ಉಲ್ಲೇಖನೀಯ. (ಕಲಾಕ್ಷೇತ್ರದಲ್ಲಿ ತೊಡಗಿಸಿಕೊಂಡ ಕಣ್ಣುಗಳಿಗೆ ಇದು ಎದ್ದು ಕಾಣುವ ನೋಟವು ಹೌದು) ಈ ಹಾಳೆಯ ತಳಭಾಗದ ಮೂಲೆಯೊಂದರಲ್ಲಿ ಬಿಳಿಬಣ್ಣದಿಂದ ಪದನಾಮ ಮತ್ತು ಲಾಂಛನವನ್ನು ಮುದ್ರಿಸಿರುವುದಲ್ಲದೆ, ಪಕ್ಕದಲ್ಲೇ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಹೆಸರು ಮತ್ತು ವಿಳಾಸ ಮುದ್ರಿಸಲಾಗಿದೆ. ಮುಖಪುಟ ಮತ್ತು ಹಿಂಬದಿಪುಟ ವಿನ್ಯಾಸಗಾರಿಕೆ ಇಲ್ಲಿ ಒಂದು ವೃತ್ತಿ ಪರ ಕೌಶಲ್ಯದಿಂದ ಪಡಿಮೂಡಿದೆ ಎನ್ನಬಹುದು.

ರಕ್ಷಾಪುಟದ ಅಂದ ನಿರೂಪಣೆ, ರಕ್ಷಾಪುಟ ವಿನ್ಯಾಸಗಾರಿಕೆಯಲ್ಲಿ ಕಾಯ್ದುಕೊಳ್ಳಬೇಕಾದ ಕೆಲವು ನಿಯಮಗಳ ಪಾಲನೆ (ಶಿಸ್ತು), ಓದುಗರನ್ನು ಪ್ರಥಮದಲ್ಲಿಯೇ ಸೆಳೆಯಬಲ್ಲ ಆಕರ್ಷಕತೆ,ಸೃಜನಶೀಲತೆ ಮತ್ತು ಎಲ್ಲ ಅಂಶಗಳಿಂದಲೂ ಇದು ಉತ್ತಮ ಸ್ತರದಲ್ಲಿ ನಿಲ್ಲಬಲ್ಲ (ಮುಖಪುಟ ಮತ್ತು ಹಿಂಬದಿಪುಟ) ರಕ್ಷಾಪುಟ ವಿನ್ಯಾಸಗಾರಿಕೆ ಎನ್ನಬಹುದು.

**೩.೫.೪. ಎಸ್. ಕಾಳಪ್ಪ (೨೦೦೪)**

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದಲೇ ಪ್ರಕಾಶನಗೊಂಡಿರುವ 'ಎಸ್.ಕಾಳಪ್ಪ' ಎಂಬ ಪುಸ್ತಕವೂ ೨೦೦೪ ರಲ್ಲಿ ಬೆಂಗಳೂರಿನ ಪರಿಶ್ರೀ ಪ್ರಿಂಟರ್ಸ್ ಇವರಿಂದ ಮೊದಲ ಮುದ್ರಣ ಕಂಡಿದುದಾಗಿದ್ದು, ಈ ಪುಸ್ತಕದ ಲೇಖಕರು ಎಲ್.ಶಿವಲಿಂಗಪ್ಪ ಎನ್ನುವವರಾಗಿದ್ದರೆ, ಈ ಪುಸ್ತಕಕ್ಕೆ ಮುಖಪುಟ ವಿನ್ಯಾಸಗೊಳಿಸಿದವರು ಸುಧಾಕರ ದರ್ಬೆಯವರೇ ಆಗಿದ್ದಾರೆ. ಎಸ್.ಕಾಳಪ್ಪರಿಂದಲೇ ರಚಿತವಾದ ಪೌರಾಣಿಕ ಸನ್ನಿವೇಶ ಆಧಾರಿತ ಸಂಯೋಜನಾ ಕಲಾಕೃತಿಗಳ ವರ್ಣಛಾಯಾಚಿತ್ರಗಳನ್ನು ಬಳಸಿಕೊಂಡು ಮುಖಪುಟ

ಮತ್ತು ಹಿಂಬದಿಪುಟಗಳನ್ನು ವ್ಯಾಪಿಸಿದೆ. ಮತ್ತು ನೈಜಶೈಲಿಯ ಭಾವಚಿತ್ರ ವಿನ್ಯಾಸಗೊಳಿಸಿದ ಮುಖಪುಟವಿದಾಗಿದ್ದು. ಒಟ್ಟಾರೆ ವಿನ್ಯಾಸ ಮಾದರಿಯಲ್ಲಿ ಈ ಮೇಲೆ ಉಲ್ಲೇಖಿಸಿದ ಎರಡೂ ಪುಸ್ತಕಗಳನ್ನೇ ಹೋಲುತ್ತಿದೆ.

ಇಲ್ಲಿನ ಹಿನ್ನೆಲೆ ಅವಕಾಶದಲ್ಲಿ ಸಂಯೋಜಿಸಿರುವ ಸಂಯೋಜನಾ ಚಿತ್ರದ ಭಾಗವಾಗಿ ಬಂದಿರುವ ಹಸಿರು ಬಣ್ಣದ ಪಾರಮ್ಯ ಹೊಂದಿರುವ ಮುಖಪುಟದ ಮುನ್ನೆಲೆಯಲ್ಲಿ ತೆಳುವಾದ ಬಿಳಿಯ ಚೌಕಟ್ಟುರೇಖೆಗಳೊಂದಿಗೆ (ಪ್ರಮುಖವಾಗಿ ನೋಡುಗನ ದೃಷ್ಟಿ ಕೇಂದ್ರವನ್ನು ಸೆಳೆಯುವ ಉದ್ದೇಶಕ್ಕೋಸ್ಕರ) ವಿನ್ಯಾಸಗೊಂಡಿರುವ ಭಾವಚಿತ್ರ ಈ ಪುಸ್ತಕದ ಗಮನ ಸೆಳೆಯುವಲ್ಲಿ ವಿಶೇಷವಾಗಿ ಗೋಚರಿಸುತ್ತದೆ./ ಕಂಡು ಬರುತ್ತದೆ. ತಿಳಿ ನೇರಳೆ ಮತ್ತು ಬೂದು ಬಣ್ಣದ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಭಾವಚಿತ್ರಣವಿದಾಗಿದ್ದು 'ವಿಕ್ಟೋರಿಯನ್ ಮಾದರಿಯ ನೈಜ ಶೈಲಿಯಲ್ಲಿ'[೩೪] ನಿರೂಪಣೆ ಇದೆ. ಈ ಭಾವಚಿತ್ರದ ಹಿನ್ನೆಲೆಯಲ್ಲಿ ವಿನ್ಯಾಸಗೊಳಿಸಿದ ಸಂಯೋಜನಾ ಚಿತ್ರವೂ ಸಹ ನೈಜಶೈಲಿಯಲ್ಲಿಯೇ ಇದ್ದು, ಅದರಲ್ಲಿ (ಜೈವಿಕ ಆಕಾರಗಳನ್ನು ತೋರಿಸುವಲ್ಲಿ) ರವಿವರ್ಮನಂತಹ ಕಲಾವಿದರುಗಳ ಕಲಾಕೃತಿಯ ಪ್ರಭಾವ ಮೇಳೈಸಿದೆ.ಇಲ್ಲಿನ ಮಾನವ ಆಕಾರ ಮಾದರಿ, ವಸ್ತ್ರ ವಿನ್ಯಾಸ ತೋರ್ಪಡಿಕೆ ಇತ್ಯಾದಿ ಅಂಶಗಳಲ್ಲಿ ಇದನ್ನು ಮನಗಾಣಬಹುದು. ಸಾಮಾನ್ಯ ಜನವರ್ಗವನ್ನು ಸಂತೋಷಪಡಿಸಬಲ್ಲ ಮಾದರಿ ಮತ್ತು ಗುಣಧರ್ಮ ಹೊಂದಿರುವ ಮುಖಪುಟವಿದಾಗಿದೆ.

**೩.೫.೫. ಎಚ್. ಎಸ್. ಇನಾಮತಿ (೨೦೦೪)**

ಕರ್ನಾಟಕ ಲಲಿತಕಲಾ ಅಕಾಡೆಮಿಗಾಗಿ ಎಲ್. ಶಿವಲಿಂಗಪ್ಪ ಅವರು ಬರೆದ 'ಎಚ್.ಎಸ್. ಇನಾಮತಿ' ಎಂಬ ಪುಸ್ತಕ ಬೆಂಗಳೂರಿನ ಪರಿಶ್ರೀ ಪ್ರಿಂಟರ್ಸ್ ಇವರಿಂದ ೨೦೦೪ರಲ್ಲಿ ಪ್ರಥಮ ಮುದ್ರಣ ಕಂಡಿದ್ದು, ಚಿತ್ರ ಕಲಾವಿದ ಎಚ್.ಎಸ್. ಇನಾಮತಿಯವರು ರಚಿಸಿದ 'ಯಂಗ್ ಪೇಂಟರ್' ಎಂಬ ಶೀರ್ಷಿಕೆಯ ಕಲಾಕೃತಿಯ ವರ್ಣಛಾಯಾಚಿತ್ರವನ್ನೇ ಉಪಯೋಗಿಸಿಕೊಂಡು ಸುಧಾಕರ ದರ್ಭೆ ಎನ್ನುವವರು ಈ ಪುಸ್ತಕದ ರಕ್ಷಾಪುಟ ವಿನ್ಯಾಸ ಮಾಡಿರುತ್ತಾರೆ. ಕಂಪ್ಯೂಟರ್ ಯಂತ್ರದ ಮೂಲಕ ವಿನ್ಯಾಸಗೊಂಡ ಮುಖಪುಟವಿದು ಕಂಪ್ಯೂಟರ್ ತಾಂತ್ರಿಕತೆಯ ಮೂಲಕ ಕಲಾವಿದ ಎಚ್.ಎಸ್. ಇನಾಮತಿಯವರ ನಿಸರ್ಗ ಚಿತ್ರವೊಂದನ್ನು ರಕ್ಷಾಪುಟ ಮತ್ತು ಹಿಂಬದಿಪುಟಗಳ ವ್ಯಾಪ್ತಿ ಯುದ್ಧಕ್ಕೂ ವಿನ್ಯಾಸಗೊಳಿಸಲಾಗಿದೆ.

ರಕ್ಷಾಪುಟ ಅವಕಾಶದ ವ್ಯಾಪ್ತಿಯಲ್ಲಿ ಆ ನಿಸರ್ಗ ಚಿತ್ರದ ತುಸು ಭಾಗ ಮಂದವಾಗಿ ಕಾಣುತ್ತಿದ್ದು ಅಲ್ಲಿನ ಬಹುತೇಕ ಅವಕಾಶ ಕಂದು ಬಣ್ಣ ಪ್ರಧಾನವೇ ಆಗಿದೆ. ನಿಸರ್ಗಚಿತ್ರ ಕಂದು ಬಣ್ಣದ ಅವಕಾಶದಲ್ಲಿ ಸಮರಸದಲ್ಲಿ ಬೆರೆತಿದೆ ಇಂತಹ ಹಿನ್ನೆಲೆಯುಳ್ಳ ಮುಖಪುಟ ಹಾಳೆಯ ಅವಕಾಶದಲ್ಲಿ ಕಲಾವಿದನು ಕಲಾಕೃತಿಯನ್ನು ಮೌಂಟ್ ಬೋರ್ಡಿಗೆ ಅಳವಡಿಸಬೇಕಾದರೆ ಅನುಸರಿಸುವ ಸಂಯೋಜನಾ ಪದ್ಧತಿಯನ್ನೇ ಇಲ್ಲೂ ಸಹ ಅನುಸರಿಸಿ ಎಚ್.ಎಸ್. ಇನಾಮತಿಯವರ 'ಯಂಗ್ ಪೇಂಟರ್' ಕಲಾಕೃತಿಯ ವರ್ಣಛಾಯಾ

೩೪. ಡಾ. ಡಿ. ಎ. ಉಪಾಧ್ಯ: ಪಾಶ್ಚಾತ್ಯ ದೃಶ್ಯಕಲೆಗಳು, ಪು-೯೫-೧೦೨

ಚಿತ್ರವನ್ನು ಮುಖಪುಟದಲ್ಲಿ ಒಪ್ಪವಾದ, ತೆಳುವಾದ ಬಿಳಿ ಅಂಚುರೇಖೆಯ ಚೌಕಟ್ಟು ಒದಗಿಸಿ, ವಿನ್ಯಾಸಗೊಳಿಸಲಾಗಿದೆ.

ಚಿತ್ರದ/ಕಲಾಕೃತಿಯ ಒಟ್ಟಾರೆ ನಿರ್ವಹಣೆಯನ್ನು ಲಕ್ಷ್ಯಿಸಿದರೆ ಕಲಾಕಲಿಕೆಯ ಸಂದರ್ಭದಲ್ಲಿ ಕಲಾಭ್ಯಾಸ ನಿಷ್ಠ ಕಲಾಗುರುವಿನಲ್ಲಿ ಶ್ರದ್ಧಾಭಕ್ತಿಯುಳ್ಳ ವಿಧೇಯ ವಿದ್ಯಾರ್ಥಿಯ ಕಲಾಕಲಿಕಾ ಶಿಸ್ತನ್ನು ಈ ಕಲಾಕೃತಿ ಮನಗಾಣಿಸುವಂತಿದೆ. ವರ್ಣಸಂಯೋಜನೆ ರೂಪದರ್ಶಿಯ ಮುಖಭಾವ, ಉಡುಗೆಯ ನೆರಿಗೆ, ಆಸನದ ವಸ್ತ್ರದ ನೆರಿಗೆಗಳು, ಮುಖ, ಉಡುಗೆಗಳ ಮೇಲಿನ ಛಾಯಾಕರಣ, ತೆಳ್ಳನೆಯ ಬಟ್ಟೆಯ ಪಾರದರ್ಶಕತ್ವ ಇವೆಲ್ಲವೂ ಬಹಳ ನೈಜವಾಗಿ ಚಿತ್ರಿತಗೊಂಡಿವೆ. ಚಿತ್ರದ ಹಿನ್ನೆಲೆಯಲ್ಲಿ ತೋರಿಸಿದ, ಚಿತ್ರಿಸಿದ ಕಟ್ಟಡ, ಮಾನವಾಕೃತಿಗಳು ಈ ಕಲಾಕೃತಿಯ ಕಲಾವಿದರ ಯಥಾದರ್ಶನ ಜ್ಞಾನ ಮತ್ತು ಅದರ ನಿರೂಪಣಾ ವಿಧಾನದಲ್ಲಿ ಗಳಿಸಿದ ಪ್ರೌಢಿಮೆಯನ್ನು ಸಾಕ್ಷೀಕರಿಸುತ್ತವೆ.

ಈ ಪುಸ್ತಕದ ಮುಖಪುಟ ಮತ್ತು ಹಿಂಬದಿಯ ರಕ್ಷಾಪುಟದಲ್ಲಿ ಗೋಚರಿಸುವ ಮುಖ್ಯ ನ್ಯೂನ್ಯತೆಯೆಂದರೆ ಕಂಪ್ಯೂಟರ್ ತಾಂತ್ರಿಕ ಕೌಶಲ ಬಳಕೆಯ ಮೂಲಕ ಕಲಾಕೃತಿಯನ್ನು ದೊಡ್ಡದು ಮಾಡಲು ಹೋಗಿ ಅದನ್ನು ವಿಕೃತಿಗೊಳಿಸಿರುವುದು. ಇಲ್ಲಿ ಉಂಟಾದ ಈ ಪ್ರಮಾದ ಪರಿಣಾಮವಾಗಿ ಕಲಾವಿದರು ಮೂಲ ಕೃತಿಯಲ್ಲಿ ತೋರ್ಪಡಿಸಿದ ಕಲಾಜಾಣ್ಮೆ ಕಂಪ್ಯೂಟರೀಕೃತಗೊಂಡ ಈ ಛಾಯಾಚಿತ್ರದಲ್ಲಿ ವಿರೂಪಕ್ಕೊಳಗಾಗಿದೆ. 'ಮೂಲಕೃತಿಯ ಒಂದು ನಿತ್ಯ ಸೊಬಗಿನ ನೋಟ ಈ ರಕ್ಷಾಪುಟದಲ್ಲಿ ನೀಡುತ್ತಿಲ್ಲ. ಹೀಗಾಗಿ ಕಲಾವಿದರ ಕಲಾಪ್ರೌಢಿಮೆ, ನಿಸರ್ಗ ಚಿತ್ರಣದಲ್ಲಿ ಅವರು ಗಳಿಸಿದ್ದ ವಿಶೇಷತೆಗಳ ಪರಿಚಯ ನೋಡುಗನಿಗೆ ಆಗುವುದಿಲ್ಲ, ಅಷ್ಟೇ ಅಲ್ಲ ಚಿತ್ರಾತ್ಮಕ ಸೌಂದರ್ಯಕ್ಕೂ ಬಹಳ ಭಂಗ ಉಂಟುಮಾಡಿದೆ ಎಂದೇ ಹೇಳಬೇಕಾಗುತ್ತದೆ.'[೩೫] ರಕ್ಷಾಪುಟದ ಮೇಲ್ತುದಿಯ ಒಂದು ಪಾರ್ಶ್ವದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಲಾಂಛನ ಮತ್ತು ಪದನಾಮ ಬಿಳಿಯ ಬಣ್ಣದಲ್ಲಿ ನಮೂದಾಗಿದೆ. ರಕ್ಷಾಪುಟದಲ್ಲಿ ಅಚ್ಚಿಸಿದ ಛಾಯಾಚಿತ್ರದ ಮೇಲ್ಗಡೆ ಕನ್ನಡದಲ್ಲಿ ಕೃತಿಯ ತಲೆಬರಹವಿದ್ದು ಕಲಾಕೃತಿಯ ಒಂದು ಮಗ್ಗುಲಲ್ಲಿ ಅಡ್ಡಲಾಗಿ ಅಂದರೆ ಮೇಲಿನಿಂದ ಕೆಳಕ್ಕೆ ಇಂಗ್ಲಿಷಿನಲ್ಲಿ ಬಿಳಿಯ ಬಣ್ಣದಲ್ಲೇ ಕೃತಿಯ ತಲೆಬರಹ ಮುದ್ರಿಸಲಾಗಿದೆ. ಕಲಾಕೃತಿಯ ಕೆಳಭಾಗದಲ್ಲಿ ಬಿಳಿಯ ಬಣ್ಣದಲ್ಲಿಯೇ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕೃತಿ ಲೇಖಕರ ಹೆಸರನ್ನು ನಮೂದಿಸಲಾಗಿದೆ. ಹಿಂಬದಿ ರಕ್ಷಾಪುಟದ ತಳಭಾಗದಲ್ಲಿಯ ಬಿಳಿಯ ಬಣ್ಣದಲ್ಲಿ ಲಲಿತಕಲಾ ಅಕಾಡೆಮಿಯ ಲಾಂಛನ ಪದನಾಮ ಮತ್ತು ವಿಳಾಸವನ್ನು ಕನ್ನಡ ಮತ್ತು ಇಂಗ್ಲಿಷಿನಲ್ಲಿ ಮುದ್ರಿಸಲಾಗಿದೆ.

### ೩.೫.೬. ಎಮ್. ಆರ್. ಬಾಳೀಕಾಯಿ (೨೦೦೪)

ಕರ್ನಾಟಕ ಲಲಿತಕಲಾ ಅಕಾಡೆಮಿಗೆಂದೇ ಸುರೇಶ ಡಿ. ಹಾಲಭಾವಿಯವರು ಬರೆದುಕೊಟ್ಟ 'ಎಮ್.ಆರ್.ಬಾಳೀಕಾಯಿ' ಎಂಬ ಶೀರ್ಷಿಕೆಯ ಪುಸ್ತಕ ೨೦೦೪ ರಲ್ಲಿ ಬೆಂಗಳೂರಿನ ಸಿದ್ಧೇಶ್ವರ ಪ್ರಿಂಟರ್ಸ್ ಇವರಿಂದ ಪ್ರಥಮ ಮುದ್ರಣ ಕಂಡಿದುದಾಗಿದ್ದು, ಇದರ ಮುಖಪುಟ ವಿನ್ಯಾಸವನ್ನು ಸುಧಾಕರ ದರ್ಬೆಯವರೇ

---

೩೫. ಸಂದರ್ಶನ: ಕೆ.ಕೆ.ಮಕಾಳಿ (ಮುಖಪುಟ ಕಲಾವಿದರು), ಕ.ವಿ.ವಿ. ಹಂಪಿ. ದಿ:೨೦೧೬

ಮಾಡಿದ್ದಾರೆ. ಮಂದ ಕಪ್ಪುಬಣ್ಣದ, ಮಂದ ಕೆಂಪುಬಣ್ಣದ ರೇಖೆಗಳು, ಅಂತರ್ಗತವಾಗಿರುವ ಬೂದು ಬಣ್ಣದ ಹಾಳೆಯ ಮೇಲೆ ಕೆಂಬಣ್ಣದ ರೇಖಾಚೌಕಟ್ಟಿನಲ್ಲಿ ಎಮ್.ಆರ್.ಬಾಳೀಕಾಯಿಯವರಿಂದ ರಚಿತವಾದ ನೀಲಿ, ಕೆಂಪು, ಕಪ್ಪು ವರ್ಣಗಳಲ್ಲಿರುವ ರೇಖಾಚಿತ್ರದ ವರ್ಣಛಾಯಾಚಿತ್ರವನ್ನು ವಿನ್ಯಾಸಗೊಳಿಸಿ ಮುಖಪುಟ ರೂಪಿಸಲಾಗಿದೆ.

'ನವ್ಯ ಶೈಲಿಯಲ್ಲಿ ರಚಿತವಾದ ರೇಖಾಚಿತ್ರವಿದು. ಮಾನವ ಮುಖವನ್ನು ಇಲ್ಲಿ ಎಂ. ಆರ್. ಬಾಳೀಕಾಯಿಯವರು ತಮ್ಮ ವ್ಯಕ್ತಿಗತ ಮನೋಭಾವನೆಗನುಸಾರವಾಗಿ ಕಲ್ಪಿಸಿದ್ದಾರೆ. ಒತ್ತೊತ್ತಾಗಿ ಎಳೆಯಲ್ಪಟ್ಟಿರುವ ಈ ಮೇಲೆ ಉಲ್ಲೇಖಿಸಿದ ವರ್ಣಗಳಿಂದ ಕೂಡಿದ ರೇಖಾಜಾಲದಿಂದಲೇ ಮಾನವ ಮುಖದ ಹೊರ ಮತ್ತು ಒಳ ಆವರಣ ನಿರ್ವಹಣೆಗೊಂಡಿದ್ದು, ವ್ಯಕ್ತಿತ್ವದಲ್ಲಿ ಅಡಕಗೊಳ್ಳಬಹುದಾದ ಬಹುಬಗೆಯ ಸಂಕೀರ್ಣ ಸ್ವಭಾವ ಗುಣಲಕ್ಷಣಗಳನ್ನು ಇಲ್ಲಿ ಸೃಜನಶೀಲ ಮಾದರಿಯಲ್ಲಿ ವ್ಯಕ್ತಿಗತ (Individual style) ಶೈಲಿಯಲ್ಲಿ ನಿರೂಪಿಸಲಾಗಿದೆ.'[೩೬] ಹಿಂಬದಿಪುಟದಲ್ಲೂ ಸಹ ಪುಟದ ಪೂರ್ತಿ ಅವಕಾಶದಲ್ಲಿ ಎಂ.ಆರ್.ಬಾಳೀಕಾಯಿಯವರು ರಚಿಸಿದ ರೇಖಾಚಿತ್ರವನ್ನು ವಿನ್ಯಾಸಗೊಳಿಸಲಾಗಿದೆ.

ಇಲ್ಲಿ ಶೇ ೧೦% ರಷ್ಟು ಭಾಗದ ತಿಳಿನೀಲಿ ಬಣ್ಣದ ಈ ಹಾಳೆಯಲ್ಲಿ ತುಸು ಗಾಢವಾದ ನೀಲಿ ಬಣ್ಣದ ರೇಖೆಗಳು ಸಮ್ಮಿಲನಗೊಂಡಿದ್ದು, ಉಳಿದೆಲ್ಲ ಭಾಗಕ್ಕೂ ಮಾನವ ಮುಖದ ರೇಖಾಚಿತ್ರ ಹರಡಿದೆ.ಇಲ್ಲಿನ ರೇಖಾಚಿತ್ರ ಬೂದು ಬಣ್ಣದ ಅವಕಾಶದಲ್ಲಿ ಕಪ್ಪು ಬಣ್ಣದ ರೇಖೆಗಳ ಮೂಲಕ ನಿರೂಪಿಸಲ್ಪಟ್ಟಿದ್ದು, ಶೈಲಿ ನವ್ಯವಾಗಿದೆ. ಈ ರೇಖಾಚಿತ್ರ ಯಾವುದೇ ಚೌಕಟ್ಟುಗಳಿಲ್ಲದೆ, ಹಿಂಬದಿ ಪುಟದುದ್ದಕ್ಕೂ ಹಬ್ಬಿಕೊಂಡಿರುವುದಲ್ಲದೆ, ನೋಡುಗನಲ್ಲಿ ಒಂದು ಭಯವಿಹ್ವಲತೆ ಮೂಡಿಸುವಷ್ಟು ಸೂಕ್ತವಾಗಿದೆ. ಇಲ್ಲಿ ನಿರೂಪಿತವಾದ ಮಾನವ ಮುಖದ ವಿಕೃತ ರೂಪ ಸಾಮಾನ್ಯ ನೋಡುಗ ವರ್ಗ/ಪ್ರೇಕ್ಷಕ ವರ್ಗವನ್ನು ಒಂದು ರೀತಿಯ ಅಸಹನಾಪೂರ್ಣ ದೃಷ್ಟಿಯಿಂದ ಅವಲೋಕನಕ್ಕೊಳಪಡಿಸಿಕೊಳ್ಳುವ ಸಾಧ್ಯತೆಯೂ ಇಲ್ಲದಿಲ್ಲ. ಈ ರೀತಿಯ ಕಲಾಭಿವ್ಯಕ್ತಿಯನ್ನು ಗಣಕಯಂತ್ರ ತಂತ್ರಜ್ಞಾನದ ಸಹಾಯದಿಂದ ಹಿಂಬದಿಯಪುಟದಲ್ಲಿ ಅಳವಡಿಸಿದ್ದುದು ಪುಸ್ತಕ ವಿನ್ಯಾಸಗಾರರ ಸೃಜನಾತ್ಮಕ ದೃಷ್ಟಿಕೋನವನ್ನು ಸಂಕೇತಿಸುವುದಾದರೂ ಸಾಮಾನ್ಯ ಓದುಗ ವಲಯದ ದೃಷ್ಟಿಯಿಂದ ಅನಪೇಕ್ಷಣಾವಾದುದೆನಿಸುತ್ತದೆ.

**೩.೫.೭. ಕೆ. ಕೇಶವಯ್ಯ (೨೦೦೪)**

ಕರ್ನಾಟಕ ಲಲಿತಕಲಾ ಅಕಾಡೆಮಿಗಾಗಿ ಎಸ್. ವೆಂಕಟೇಶ್ ಎನ್ನುವವರು ಬರೆದ ಹಾಗೂ ೨೦೦೪ ರಲ್ಲಿ ಬೆಂಗಳೂರಿನ ಪರಿಶ್ರೀ ಪ್ರಿಂಟರ್ಸ್ ಇವರಿಂದಲೇ ಮೊದಲ ಮುದ್ರಣ ಕಂಡ 'ಕೆ.ಕೇಶವಯ್ಯ' ಎಂಬ ಶೀರ್ಷಿಕೆ ಪುಸ್ತಕದ ಮುಖಚಿತ್ರ ವಿನ್ಯಾಸಕಾರರೂ ಸುಧಾಕರ ದರ್ಬೆಯವರೇ ಆಗಿದ್ದಾರೆ. ರಕ್ಷಾಪುಟ (ಮುಖಪುಟ- ಹಿಂಬದಿಪುಟಗಳೆರಡರ) ತಳಭಾಗದಿಂದ ಸರಿಸುಮಾರು ಅರ್ಧದಷ್ಟು ಅವಕಾಶದಲ್ಲಿ ಕಂದು ಹಳದಿ ಬಣ್ಣದ (yellow ocher) ಖಾಲಿ ತೆರಪು (ಅವಕಾಶ) ಹೊಂದಿರುವ ಈ ಪುಸ್ತಕದ

೩೬. ಸಂದರ್ಶನ : ಸುರೇಶ.ಡಿ. ಹಾಲಭಾವಿ (ಚಿತ್ರಕಲಾವಿದರು), ಧಾರವಾಡ, ದಿ. ೨೫.೦೮.೨೦೧೪

ಮುಖಪುಟದಲ್ಲಿ ಮತ್ತು ಹಿಂಬದಿ ರಕ್ಷಾಪುಟದಲ್ಲಿ ಕೆ. ಕೇಶವಯ್ಯನವರಿಂದಲೇ ರಚಿತವಾದ ದಸರಾ ಪ್ಯಾನಲ್‌ನ ದೃಶ್ಯದ (ಸನ್ನಿವೇಶ) ವರ್ಣಛಾಯಾಚಿತ್ರ ಬಳಸಿಕೊಂಡಿದ್ದು, ಮುಖಪುಟದ ಅವಕಾಶದಲ್ಲಿಯೇ ಒಂದು ಮೂಲೆ/ಪಾರ್ಶ್ವದಲ್ಲಿ ಎಡ ಮತ್ತು ಬಲಮಗ್ಗುಲಲ್ಲಿ ಸ್ವಲ್ಪ ಸ್ಥಳಬಿಟ್ಟು ಕೆ.ಕೇಶವಯ್ಯ ರಚಿಸಿದ 'ನಿರೀಕ್ಷೆ' ಎಂಬ ಶೀರ್ಷಿಕೆಯ ತೈಲವರ್ಣ ಮಾಧ್ಯಮದ ಕಲಾಕೃತಿಯ ವರ್ಣ ಛಾಯಾಚಿತ್ರವನ್ನು ತೆಳುವಾದ ಬಿಳಿಯ ಅಂಕುರೇಖೆಯ ಚೌಕಟ್ಟಿನಡಿಯಲ್ಲಿ ವಿನ್ಯಾಸಗೊಳಿಸಲಾಗಿದೆ. ಈ ಪುಸ್ತಕದ ರಕ್ಷಾಪುಟದಲ್ಲಿ ಹರವಿಕೊಂಡಿರುವ ಮುಖಪುಟದ ಮುನ್ನೆಲೆಯ ಚೌಕಟ್ಟಿನಲ್ಲಡಕ-ಗೊಂಡಿರುವ ವರ್ಣಛಾಯಾ ಚಿತ್ರ ಹಾಗೂ ಅದರ ಹಿನ್ನೆಲೆಯಲ್ಲಿರುವ ದಸರಾ ಪ್ಯಾನೆಲ್ ಈ ಎರಡೂ ಚಿತ್ರಗಳೂ ನೈಜವಾದ ವರ್ಣಕ್ರಮದವುಗಳಾಗಿವೆ. ಮುನ್ನೆಲೆಯ ಚೌಕಟ್ಟಿನಲ್ಲಿ ವಿನ್ಯಾಸಗೊಳಿಸಿರುವ 'ನಿರೀಕ್ಷೆ' ಕೃತಿಯಲ್ಲಿ ರವಿವರ್ಮನ ಪ್ರಭಾವ ದಟ್ಟೈಸಿರುವುದನ್ನು ಮನಗಾಣಬಹುದು (ರವಿವರ್ಮನ ಕಲಾಕೃತಿಗಳಲ್ಲಿ ಕಂಡುಬರುವ ನಾಟಕೀಯ ಪರಿಣಾಮ ಇಲ್ಲಿ ವ್ಯಕ್ತವಾಗಿದೆ. ಅಲ್ಲದೆ ಹಿನ್ನೆಲೆಯಲ್ಲಿ ಇಳಿಬಿದ್ದಿರುವ ತಂದೆಯ ಮಾದರಿ, ಸ್ತ್ರೀ ಆಕೃತಿ ನಿರೂಪಣೆ ಮತ್ತು ಕಲಾಕೃತಿಯಲ್ಲಿ ವ್ಯಕ್ತಗೊಂಡಿರುವ ಸಂಯೋಜನಾ ವೈಖರಿ ಇವೆಲ್ಲ ಅಂಶಗಳಲ್ಲಿ ರವಿವರ್ಮನ ಪ್ರಭಾವವನ್ನು ಈ ಕೃತಿಯಲ್ಲಿ ಗಮನಿಸಬಹುದು).

ಹಿನ್ನೆಲೆಯಲ್ಲಿರುವ ಮುಖಪುಟ ಮತ್ತು ಹಿಂಬದಿಪುಟ ಮೂಡಿಸುವ ದಸರಾ ಪ್ಯಾನೆಲ್ ಚಿತ್ರ 'ಬ್ರಿಟಿಷ್ ಮಾದರಿಯ ನೈಜಶೈಲಿಗೆ'[೩೭] ಅನುಗುಣವಾಗಿಯೇ ಮೂಡಿಬಂದಿದೆ. ಯಥಾದರ್ಶನ ತತ್ವದ ಯಥಾವತ್ ಅನುಸರಣೆ, ಛಾಯಾಕರಣ ತೋರ್ಪಡಿಕೆಯಲ್ಲಿಯೂ ವಾಸ್ತವಿಕತೆ ಕಾಯ್ದುಕೊಳ್ಳುವಿಕೆ, ಬೃಹತ್ ಸಮೂಹದ ಚಿತ್ರಣದಲ್ಲಿಯೂ ಸವಿವರವಾದ ನಿರೂಪಣಾ ಕ್ರಮ ಇವುಗಳೂ ಸಹ ಬ್ರಿಟಿಷ್ ಶೈಲಿ ಚಿತ್ರ ಕ್ರಮಾನುಸಾರವಾಗಿಯೇ ಮೂಡಿಬಂದಿರುವುದು ಈ ಚಿತ್ರದ ವಿಶೇಷ. (ಇಲ್ಲಿ ಚಿತ್ರಿತವಾಗಿರುವ ವ್ಯಕ್ತಿಗಳೆಲ್ಲ ಕಾಲ್ಪನಿಕವಲ್ಲ. ಆ ಕಾಲಘಟ್ಟದಲ್ಲಿ ಆ ಸಂದರ್ಭದಲ್ಲಿ ಉಪಸ್ಥಿತರಿದ್ದ ವ್ಯಕ್ತಿಗಳೇ ಅವರಾಗಿದ್ದಾರೆ ಎಂಬುದು ಕೂಡ ಇಲ್ಲಿ ವಿಶೇಷ ಗಮನೀಯ ಅಂಶವಾಗಿದೆ.) ಈ ಪುಸ್ತಕದ ಮುಖಪುಟ ವಿನ್ಯಾಸಗಾರಿಕೆಯಲ್ಲಿ ಕಂಪ್ಯೂಟರ್ ತಂತ್ರಜ್ಞಾನ ನೆರವನ್ನು ಧಾರಾಳವಾಗಿ ಪಡೆದಿರುವುದು ಈ ಪುಟದ ಹಾಳೆಯಲ್ಲಿ ಸಹಜವೆಂಬಂತೆ ಬೆರೆತಿರುವ ಕಲಾಕೃತಿಯ ವರ್ಣಛಾಯಾ ಚಿತ್ರದ ಆಕಾರಗಳು ಸ್ಪಷ್ಟೀಕರಿಸುತ್ತವೆ. ಇಲ್ಲಿ ಮುಖಪುಟ ಮತ್ತು ಹಿಂಬದಿಪುಟದುದ್ದಕ್ಕೂ ಹರಡಿಕೊಂಡಿರುವ ಚಿತ್ರವನ್ನು ವಿನ್ಯಾಸಗೊಳಿಸುವಲ್ಲಿ ವಿನ್ಯಾಸಕಾರರು ವಿಶೇಷ ಲಕ್ಷ್ಯವಹಿಸಿರುವುದು ಪ್ರಜ್ಞಾವಂತ ಓದುಗ/ಕಲಾ ವಿದ್ಯಾರ್ಥಿ/ಕಲಾ ರಸಿಕರ ಗಮನಕ್ಕೆ ಬಾರದೇ ಇರದು.

ಈ ಕೃತಿಯಲ್ಲಿನ ಸಮೂಹದಟ್ಟಣೆ, ವಿಷಯ/ವಸ್ತು ವೈವಿಧ್ಯತೆ, ಮುನ್ನೆಲೆ ಮತ್ತು ಹಿನ್ನೆಲೆಯ ನಿರೂಪಣೆಯಲ್ಲಿ, ನೆರಳಿನ ತೋರ್ಪಡಿಕೆಯಲ್ಲಿ ಕಲಾವಿದರು ತೋರ್ಪಡಿಸಿದ ಕಲಾಕೌಶಲ್ಯ ಮತ್ತು ಪ್ರಾವೀಣ್ಯತೆಗಳಿಂದಾಗಿ ಈ ಕೃತಿ ಅರಮನೆಯ ಪ್ಯಾನೆಲ್‌ಗಳಲ್ಲಿಯೇ ಉತ್ತಮದ್ದೆನಿಸುವ ಕಲಾಕೃತಿಯಾಗಿದ್ದು, ಅದನ್ನು ಅತ್ಯಂತ ಸಮರ್ಪಕವಾಗಿ, ಅಷ್ಟೇ ಮಾದರಿಯ ವಿನ್ಯಾಸಕ್ಕೊಳಪಡಿಸಿ, ಮುಖಪುಟದಲ್ಲಿ ಸಂಯೋಜಿಸಿರುವುದು ಈ ಕೃತಿಯ ಮುಖಪುಟವಿನ್ಯಾಸಗಾರರ ತಾಂತ್ರಿಕ ಕೌಶಲ್ಯಕ್ಕೂ ವೃತ್ತಿ ನೈಪುಣ್ಯಕ್ಕೂ ಸಾಕ್ಷೀಭೂತವೆನಿಸಬಲ್ಲ ಉದಾಹರಣೆಯಂತಿದೆ.

---

೩೭ ಡಾ. ಡಿ. ಎ.ಉಪಾಧ್ಯ: ಪಾಶ್ಚಾತ್ಯ ದೃಶ್ಯಕಲೆಗಳು, ಪು-೯೫-೧೦೨

### ೩.೫.೮. ಪುರುಷೋತ್ತಮ ಕಾರಂತ (೨೦೦೪)

'ಪುರುಷೋತ್ತಮ ಕಾರಂತ' ಎಂಬ ಪುಸ್ತಕವೂ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದಲೇ ಪ್ರಕಾಶನಗೊಂಡಿದ್ದು, ಈ ಪುಸ್ತಕ ಬರೆದವರು ಬಿ.ಗಣೇಶ ಸೋಮಯಾಜಿ. ೨೦೦೪ ರಲ್ಲಿ ಮೊದಲ ಬಾರಿಗೆ ಸಿದ್ಧೇಶ್ವರ ಪ್ರಿಂಟರ್ಸ್ ಬೆಂಗಳೂರು ಇವರು ಮುದ್ರಿಸಿರುವ ಈ ಕೃತಿಯ ರಕ್ಷಾಪುಟ ವಿನ್ಯಾಸಗೊಳಿಸಿದವರು ಸುಧಾಕರ ದರ್ಬೆ. ಪುರುಷೋತ್ತಮ ಕಾರಂತರ 'ಬುದ್ಧ ಪೂರ್ಣಿಮಾ' ಎಂಬ ಶೀರ್ಷಿಕೆಯ ಕಲಾಕೃತಿಯ ವರ್ಣ ಛಾಯಾಚಿತ್ರವನ್ನು ಹೊಂದಿರುವ ಈ ಪುಸ್ತಕದ ರಕ್ಷಾಪುಟ ಕಡುಕಂದು, ಕಪ್ಪು ಬಣ್ಣದ ತನ್ನ ಮೈಯಲ್ಲಿ ಈ ಪುಸ್ತಕದ ಕೇಂದ್ರಬಿಂದುವಾದ ಪುರುಷೋತ್ತಮ ಕಾರಂತರ ಒಂದು ಕಲಾಕೃತಿಯ ಛಾಯೆಯನ್ನೇ ಹೊಂದಿರುವುದು ವಿಶೇಷ. ರಕ್ಷಾಪುಟ ಕೆಳಭಾಗದ ಪಾರ್ಶ್ವದಲ್ಲಿ ೧೦x೧೦ ಸೆ.ಮೀ. ಅಳತೆಯ ವ್ಯಾಪ್ತಿಯಲ್ಲಿ ಬುದ್ಧ ಪೂರ್ಣಿಮಾ ಕೃತಿಯ ವರ್ಣ ಛಾಯಾಚಿತ್ರವನ್ನು ಬಿಳಿಯ ಅಂಚುರೇಖೆ ಚೌಕಟ್ಟಿನಲ್ಲಿ ವಿನ್ಯಾಸಗೊಳಿಸಿದ್ದುದಲ್ಲದೆ ಕೃತಿಯ ಮೂರು ಬದಿಗಳಲ್ಲಿ ಅಕ್ಷರ ಅಲಂಕರಣ ಸೇರಿರುವುದೂ ಕೂಡ ಮುಖಪುಟದ ಒಟ್ಟಾರೆ ರಚನಾ ಕ್ರಮದಲ್ಲಿ ಸೃಜನಶೀಲತೆಯನ್ನು ಪ್ರತಿಬಿಂಬಿಸಿದಂತಾಗಿದೆ ಎನ್ನಬಹುದು.

ಇಲ್ಲಿನ ಚಿತ್ರ ಎರಡು ಸ್ತರಗಳಲ್ಲಿ ವಿಂಗಡಣೆಗೊಂಡಿದ್ದು 'ಮೇಲಿನ ಸ್ತರದಲ್ಲಿ ಹುಣ್ಣಿಮೆಯ ಚಂದ್ರ ನೀಲಿ ಮಿಶ್ರಿತ ಕಪ್ಪು ಬಣ್ಣದ ಅವಕಾಶದಲ್ಲಿ ಬೆಳಗುತ್ತಿದ್ದು ಚಂದ್ರ ಮುಂಗಡೆ ನೀಲವರ್ಣದಿಂದ ಕೂಡಿರುವ ಬುದ್ಧ ತಿಳಿನೀಲಿ ಬಣ್ಣದ ಅಲೆಗಳ ಮಧ್ಯೆ ಪವಡಿಸಿದ್ದಾನೆ. ಈ ಸ್ತರದಲ್ಲಿನ ಆಕೃತಿ ನಿರೂಪಣೆ ನೈಜ ಶೈಲಿಗೆ ಹೆಚ್ಚು ಹತ್ತಿರವಾದುದು.ಅದರ ಕೆಳಗಿನ ಸ್ತರ ಕಂದು, ಹಸಿರು, ನೀಲಿ ಕಪ್ಪು ಬಣ್ಣಗಳ ಲೇಪನ ಮೂಲಕ ನಿರ್ವಹಣೆಗೊಂಡಿದ್ದು ಭಗ್ನಗೊಂಡ ಸ್ಮಾರಕಗಳ ಅವಶೇಷಗಳ/ಉಬ್ಬು ಶಿಲ್ಪಗಳ ಸಮೂಹವನ್ನು ನೆನಪಿಸುತ್ತದೆ.ಆದರೆ ಇವೆಲ್ಲ ಅಸ್ಪಷ್ಟ ಆಕೃತಿಗಳು. ಈ ಸಮೂಹದಲ್ಲಿಯೇ ತಿಳಿಗಂದು ಬಣ್ಣದಲ್ಲಿ ಪೂರ್ಣಚಂದ್ರನ ಛಾಯೆ ಗೋಚರಿಸಿದ್ದು, ಅದರಲ್ಲಿ ಅಸ್ಪಷ್ಟವಾಗಿ ಬುದ್ಧನನ್ನು ಹೋಲುವ ಆಕೃತಿಯೊಂದು ರೂಪುಗೊಂಡು, ಅದು ಜ್ಞಾನ ಮುದ್ರಾಧಾರಣೆಯಲ್ಲದೆ.'[೩೮] ಈ ಚಿತ್ರದ ಮೇಲುಗಡೆ ಕನ್ನಡ ಅಕ್ಷರಗಳಲ್ಲಿ ಪುಸ್ತಕದ ಹೆಸರು ನಮೂದಿಸಿದ್ದು, ಚಿತ್ರದ ಇನ್ನೊಂದು ಅಂಚಿನಲ್ಲಿ ಅದೇ ಹೆಸರೇ ಇಂಗ್ಲಿಷ್ ಅಕ್ಷರಗಳಲ್ಲಿ ಅಡ್ಡಲಾಗಿ ಬರೆಯಲ್ಪಟ್ಟಿದೆ. ಚಿತ್ರದ ಕೆಳಗಡೆ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಈ ಕೃತಿಯ ಲೇಖಕರ ಹೆಸರನ್ನು ಮುದ್ರಿಸಿದ್ದು, ಈ ಪುಟದ ಮೇಲುಗಡೆ ಪಾರ್ಶ್ವದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಲಾಂಛನ ಬಿಳಿಬಣ್ಣದಲ್ಲಿ ಮುದ್ರಣಗೊಳಿಸಲಾಗಿದೆ. ಇದರ ಹಿಂಬದಿ ರಕ್ಷಾಪುಟದಲ್ಲಿ ಪೂರ್ತಿ ಪುಟದ ವ್ಯಾಪ್ತಿಯಲ್ಲಿ ಇದೇ ಕಲಾವಿದರು ರಚಿಸಿದ 'ಬಯಲಿನಲ್ಲಿ' ಎಂಬ ಶೀರ್ಷಿಕೆಯುಳ್ಳ ಚಿತ್ರದ ವರ್ಣ ಛಾಯಾಚಿತ್ರವನ್ನೇ ಮುದ್ರಿಸಲಾಗಿದೆ. ಈ ಕೃತಿಯಲ್ಲಿನ ಆಕೃತಿಗಳು, ಒಟ್ಟಾರೆ ನಿರ್ವಹಣೆ ನವ್ಯ ಶೈಲಿಯಲ್ಲಿದ್ದು ಕಂದು, ಬೂದು, ಅಲ್ಲಲ್ಲಿ ತಿಳಿ ಹಳದಿ, ತಿಳಿ ಹಸಿರು, ಗುಲಾಬಿ ಹೀಗೆ ಪ್ರಖರವಲ್ಲದ, ಮನಸ್ಸನ್ನು ಸಮಾಧಾನದ ಸ್ತರಕ್ಕೆ ಒಯ್ಯಬಲ್ಲಂತಹ ಮಂದ ವರ್ಣಮೇಳ ಏರ್ಪಟ್ಟಿದೆ. ಇಲ್ಲಿ ತಳಭಾಗದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಲಾಂಛನ ಮುದ್ರಿತವಾಗಿದೆ.

---

೩೮. ಸಂದರ್ಶನ: ಮಲ್ಲಿಕಾರ್ಜುನ ಜಾಧವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ ದಿ: ೨೦೧೫

೩.೫.೯. ಸಿ. ಚಂದ್ರಶೇಖರ (೨೦೦೪)

ಕರ್ನಾಟಕ ಲಲಿತಕಲಾ ಅಕಾಡೆಮಿಗಾಗಿ ಸಾಹಿತಿ ರಾಜಪ್ಪ ದಳವಾಯಿ ಎನ್ನುವವರಿಂದ ಬರೆಯಲ್ಪಟ್ಟ ಮತ್ತು ೨೦೦೪ ರಲ್ಲಿ ಲಿಪಿ ಮುದ್ರಣ ಬೆಂಗಳೂರು ಇವರಿಂದ ಮೊದಲ ಮುದ್ರಣ ಕಂಡ 'ಸಿ.ಚಂದ್ರಶೇಖರ' ಎಂಬ ಪುಸ್ತಕಕ್ಕೆ ರಕ್ಷಾಪುಟ ವಿನ್ಯಾಸಗೊಳಿಸಿದವರು ಸುಧಾಕರ ದರ್ಬೆ ಎನ್ನುವವರಾಗಿದ್ದು, ಈ ಪುಸ್ತಕದ ರಕ್ಷಾಪುಟಕ್ಕೆ ಸಿ.ಚಂದ್ರಶೇಖರರವರು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ 'ಪಿನ್ಸ್ ಮತ್ತು ಫೋಲ್ಡ್' ಕಲಾಕೃತಿಯ ವರ್ಣ ಛಾಯಾಚಿತ್ರವನ್ನು ವಿನ್ಯಾಸಗೊಳಿಸಿ ರಕ್ಷಾಪುಟ ರಚಿಸಲಾಗಿದೆ.

ಪ್ರಸ್ತುತ ರಕ್ಷಾಪುಟದಲ್ಲಿ ವಿನ್ಯಾಸಗೊಳಿಸಿರುವ ಕಲಾಕೃತಿ ವರ್ಣ ಛಾಯಾಚಿತ್ರವನ್ನು ಗಮನಿಸಿದರೆ, ಕೃತಿಯಲ್ಲಿನ ಆಕೃತಿ ವಿನ್ಯಾಸಗಳು ನೈಜವಾಗಿದ್ದರೂ ಪ್ರಸ್ತುತಗೊಂಡ ರೀತಿ ಸಮಕಾಲೀನವಾದುದಾಗಿದೆ. ಭಿತ್ತಿಯ ಮೇಲೆ ಅಲ್ಲಲ್ಲಿ ಬಟ್ಟೆಯನ್ನು ತೇಪೆ ಹಚ್ಚಲಾಗಿದ್ದು (stitch ಮಾಡಲಾಗಿದ್ದು) ಅದೇ ಭಿತ್ತಿಗೆ ಒಂದು ದೊಡ್ಡ ಪಿನ್‌ನಲ್ಲಿ ಫೋಲ್ಡ್ ಒಂದನ್ನು ಚುಚ್ಚಿ ಆ ಪಿನ್ನನ್ನು ಭಿತ್ತಿಗೆ ಸಿಕ್ಕಿಸಲಾಗಿದೆ.ಇನ್ನೊಂದು ಸಣ್ಣದಾದ ಪಿನ್ ಮತ್ತು ಫೋಲ್ಡ್‌ನ್ನು ಹಾಗೆಯೇ ಇಡಲಾಗಿದ್ದು, ಅತ್ಯಂತ ಸಹಜಾನುಭವ ನೀಡಬಲ್ಲ ರೀತಿಯಲ್ಲಿ ಇವೆರಡರ ನೆರಳನ್ನು ತೋರಿಸಲಾಗಿದೆ. ಹಳದಿ, ಕಂದು, ಒಟ್ಟಾರೆ ಕೃತಿಯಲ್ಲಿ ಪ್ರಧಾನ ಬಣ್ಣಗಳಾಗಿ ಬಂದಿದ್ದರೂ ಅಲ್ಲಲ್ಲಿ ತಿಳಿ ಕೆಂಪು, ತಿಳಿಹಸಿರು ಬಣ್ಣಗಳು ಗೋಚರವಾಗುತ್ತಿದ್ದು, ಪಿನ್‌ಗಾಗಿ ಲೇಪಿತವಾದ ಬೂದುಬಣ್ಣ ಮತ್ತು ಫೋಲ್ಡ್‌ಗಳ ಹಿಂದಿರುವ ನೆರಳು ಹಾಗೂ ದೊಡ್ಡ ಪಿನ್ನಿಗೆ ಸಿಕ್ಕಿಸಲ್ಪಟ್ಟಿರುವ ದೊಡ್ಡ ಫೋಲ್ಡ್ ಎದ್ದುಕಾಣುವುದರ ಮೂಲಕ ನೋಡುಗರ ಗಮನ ಆ ಕಡೆಯೇ ಕೇಂದ್ರೀಕೃತವಾಗುವ ಸಾಧ್ಯತೆ ಇದೆ.'ತೀರ ಸಾಂಕೇತಿಕ ನಿರೂಪಣೆಯಿರುವ ಈ ಕೃತಿ ಸಾಮಾಜಿಕ ಸ್ತರದಲ್ಲಿನ ಅಸಮತ್ವವನ್ನು ನಿರೂಪಿಸುತ್ತಿದೆ'[೫೯] ಈ ಕೃತಿಯ ವರ್ಣ ಛಾಯಾಚಿತ್ರ ತೆಳುವಾದ ಕೆಂಪು ಅಂಚುರೇಖೆಗಳಿಂದ ಸಂಯೋಜಿಸಲ್ಪಟ್ಟಿದ್ದು ಸುತ್ತೆಲ್ಲಾ ಹಿನ್ನೆಲೆಯಲ್ಲಿ ಗಾಢ ಕಪ್ಪು ಬಣ್ಣಯುಕ್ತ ಹಾಳೆಯ ಮೇಲೆ ಬೂದು ಬಣ್ಣದಲ್ಲಿ ಕಪ್ಪು ಬಣ್ಣದ ಆವರಣದಿಂದ ಕೆಲವು ಅಸ್ಪಷ್ಟ ರೂಪಗಳು ಕಾಣಿಸುತ್ತಿದೆ.

ಈ ಪುಸ್ತಕದ ಹಿಂಬದಿಪುಟದಲ್ಲೂ ಪೂರ್ತಿ ಪುಟದಾದ್ಯಂತ ಕಂಪ್ಯೂಟರ್ ತಂತ್ರಜ್ಞಾನ ಬಳಸಿ, ದಟ್ಟಕಪ್ಪು ಬಣ್ಣದ ಸಮತಲದಲ್ಲಿ ಕೆಂಬಣ್ಣದ ಅಮೂರ್ತ ಆಕೃತಿಗಳು ಮೂಡಿದೋಪಾದಿಯಲ್ಲಿ (ಮೂಡಿದ ತರಹ) ವಿನ್ಯಾಸ ಮಾಡಲಾಗಿದೆ. ಇಲ್ಲಿ ಕೆಂಬಣ್ಣದ ಅಮೂರ್ತ ಆಕರಗಳು ಮೇಲಿನಿಂದ ಕೆಳಕ್ಕೆ ಜಾರಿ ಒಂದಕ್ಕೊಂದು ಗಂಟುಗಂಟಾಗಿ ಸೇರಿಕೊಂಡಿದ್ದು ಅಲ್ಲೇ ಮೇಲ್ಭಾಗದ ಪಾರ್ಶ್ವವೊಂದರಲ್ಲಿ ಮತ್ತು ಕೆಳಭಾಗದಲ್ಲಿ ಪಾರ್ಶ್ವವೊಂದರಲ್ಲಿ ಅದೇ ಬಣ್ಣದ ಬೀಸುಗಳು ಹಾಯ್ದಿವೆ. ಹಿನ್ನೆಲೆ ಪೂರ್ತಿ ಗಾಢ ಕಪ್ಪು ಮತ್ತು ಅದರೊಟ್ಟಿಗೆ ಕೊಂಚ ಮಟ್ಟಿಗೆ ಕೆಂಬಣ್ಣದ ಸೇರ್ಪಡೆಯಾಗಿ ಕೆಂಪು ಮಿಶ್ರಿತ ಕಪ್ಪುಬಣ್ಣದ ಛಾಯಾಕರಣ ಏರ್ಪಟ್ಟಿದೆ. ಆಕೃತಿಗಳನ್ನು ಹಿನ್ನೆಲೆಯೊಟ್ಟಿಗೆ ಸಮರಸಗೊಳಿಸಿದ ಬಗೆ/ರೀತಿ ವಿನ್ಯಾಸಕಾರರಿಗಿರುವ ಉತ್ಕೃಷ್ಟ ಮಟ್ಟದ ತಾಂತ್ರಿಕ ನೈಪುಣ್ಯತೆಗೆ ಸಾಕ್ಷಿಯಾಗುತ್ತದೆ.

ವಿ. ಟಿ. ಕಾಳೆ, ರಘೋತ್ತಮ ಪುಟ್ಟಿ, ಎಸ್. ಕಾಳಪ್ಪ, ಎಚ್. ಎಸ್. ಇನಾಮತಿ, ಎಮ್. ಆರ್.

೫೯. ದತ್ತಾತ್ರೇಯ ಎನ್. ಭಟ್ಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ; ದಿ ೨೦೧೬

ಬಾಳೀಕಾಯಿ, ಕೆ. ಕೇಶವಯ್ಯ, ಪುರುಷೋತ್ತಮ ಕಾರಂತ, ಸಿ. ಚಂದ್ರಶೇಖರ ಈ ಪುಸ್ತಕಗಳ ರಕ್ಷಾಪುಟಗಳ ವಿನ್ಯಾಸ ಮಾದರಿ, ವರ್ಣಛಾಯಾಚಿತ್ರ, ಸಂಯೋಜಿಸಿದ ಮಾದರಿ, ಅಕ್ಷರ ಶೈಲಿ, ಅಕಾಡೆಮಿಯ ಲಾಂಛನ/ಪದನಾಮ ಸ್ಥಳ ಇವೆಲ್ಲಾ ಏಕಮಾದರಿಯಲ್ಲಿವೆ ಮತ್ತು ಇವುಗಳ ವಿನ್ಯಾಸಗಾರರು ಒಬ್ಬರೆಯಾಗಿದ್ದಾರೆ.

**೩.೫.೧೦. ಜನಪ್ರಿಯ ದೇಶಿ ಕಲಾಮಾಲಿಕೆ (೨೦೦೪)**

ಬಿದರಿ ಚಿತ್ರಕಲೆ, ಹಚ್ಚೆ ಚಿತ್ರಕಲೆ, ಬೆಳದಿಂಗಳ ಚಿತ್ರಕಲೆ, ರಂಗೋಲಿ ಚಿತ್ರಕಲೆ, ನಾಗಾರಾಧನೆ ಮತ್ತು ಚಿತ್ರಕಲೆ, ಯಕ್ಷಗಾನ ಮತ್ತು ಚಿತ್ರಕಲೆ, ಶೀಗಿ ಚಿತ್ರಕಲೆ, ಚಿತ್ತಾರದ ಗೊಂಬೆ ಚಿತ್ರಕಲೆ ಈ ಎಂಟು ಕೃತಿಗಳ ಮುಖಪುಟರಚನೆ ಶ್ರೀ ಸುಧಾಕರ ದರ್ಬೆ ಎಂಬ ಕಲಾವಿದರಿಂದ ನಿರ್ಮಾಣಗೊಂಡಿವೆ. ಇಲ್ಲಿ ಕೃತಿಯ ಲೇಖಕರು ಮತ್ತು ಕೃತಿ ಶೀರ್ಷಿಕೆ ಹಾಗೂ ಮುಖಪುಟದಲ್ಲಿನ ಚಿತ್ರಗಳು ಬೇರೆ ಬೇರೆಯಾಗಿದುದ್ದನ್ನು ಬಿಟ್ಟರೆ ಉಳಿದೆಲ್ಲ ದೃಷ್ಟಿಕೋನದಿಂದ ಇವುಗಳು ಒಂದು ಸರಣಿಮಾಲಿಕೆಯಲ್ಲಿ ರಚನೆಗೊಂಡ ರಕ್ಷಾಪುಟವಿನ್ಯಾಸ ಎಂದು ಹೇಳಬಹುದು.

**೩.೫.೧೧. ಮುಖಗಳೊಂದಿಗೆ ಮುಖಾಮುಖಿ (೨೦೦೪)**

'ಮುಖಗಳೊಂದಿಗೆ ಮುಖಾಮುಖಿ' ಎಂಬ ಪುಸ್ತಕವೂ ಸಹ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದಲೇ ಹೊರಬಂದಿದ್ದು, ಈ ಪುಸ್ತಕದ ಲೇಖಕರು ಕೆ.ವಿ.ಸುಬ್ರಹ್ಮಣ್ಯಂ. ಇದು ಪ್ರಥಮ ಮುದ್ರಣಗೊಂಡಿದ್ದು ೨೦೦೪ ರಲ್ಲಿ, ಬೆಂಗಳೂರಿನ ಸಿದ್ಧೇಶ್ವರ ಪ್ರಿಂಟರ್ಸ್ ಇವರಿಂದ ೧೪x೨೧.೫ ಸೆ.ಮೀ ಅಳತೆಯ ಮತ್ತು ಅದೇ ಅಳತೆಯ ಹಿಂಬದಿ ರಕ್ಷಾಪುಟ ಹೊಂದಿರುವ ಈ ಕೃತಿಗೆ (ಪುಸ್ತಕಕ್ಕೆ) ರಕ್ಷಾಪುಟ ವಿನ್ಯಾಸಗೊಳಿಸಿದವರು ಪ.ಸ.ಕುಮಾರ್ ಅವರು. ತಿಳಿಗಂದು ಬಣ್ಣದ ಅವಕಾಶದಲ್ಲಿ ರಕ್ಷಾಪುಟಚಿತ್ರಗಳು ಮತ್ತು ಕೃತಿ ಶೀರ್ಷಿಕೆ ಹಾಗೂ ಕೃತಿಕಾರರ ಹೆಸರು ವಿನ್ಯಾಸಗೊಂಡಿದ್ದು ರಕ್ಷಾಪುಟದ ಮೇಲ್ತುದಿಯಲ್ಲಿ ರೆಂಬ್ರಾಂಟ್, ವ್ಯಾನ್‌ಗೊ ಮತ್ತು ಶಾಂತಲಿಂಗಪ್ಪ ಪಾಟೀಲ್ ಇವರುಗಳು ರಚಿಸಿದ ಭಾವಚಿತ್ರಗಳ ಪಾಸ್‌ಪೋರ್ಟ್ ಅಳತೆಗಿಂತಲೂ ತುಸು ಚಿಕ್ಕದಾದ ಛಾಯಾಚಿತ್ರಗಳನ್ನು ಮುದ್ರಿಸಲಾಗಿದ್ದು ಮೇಲ್ತುದಿಯ ಒಂದು ಮೂಲೆಯಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಚಿನ್ಹೆ ಮತ್ತು ಬಿಳಿಯ ಬಣ್ಣದಲ್ಲಿ ಕ್ಯಾಲಿಗ್ರಾಫಿಕ್ ಶೈಲಿಯಲ್ಲಿ ಕನ್ನಡದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ನಮೂದಿಸಲಾಗಿದೆ. ಕೆಳಗಡೆ ಒಂದಿಷ್ಟು ಅವಕಾಶ / ಅಂತರ ಬಿಟ್ಟು ನವ್ಯೋತ್ತರ ಕಲಾ ಸಂದರ್ಭಕ್ಕೊಪ್ಪುವ ಎರಡು ಮುಖಗಳನ್ನು ಚಿತ್ರಗಳನ್ನು ಅಳವಡಿಸಲಾಗಿದ್ದು ಆ ಚಿತ್ರಗಳ ಹಿನ್ನೆಲೆಯಲ್ಲಿ ತಂತ್ರಗಾರಿಕೆ ಮೂಲಕ ಮೈವಳಿಕೆ ತೋರ್ಪಡಿಸಲಾಗಿದೆ.

ಈ ನವ್ಯೋತ್ತರ ಶೈಲಿಯ ಮುಖಚಿತ್ರಗಳು ಕೆಂಬಣ್ಣದ ಅರ್ಧವೃತ್ತಾಕಾರದಲ್ಲಿ ಸಾಗಿದ ರೇಖೆಯೊಂದರಲಿವೆ. ಇಲ್ಲಿನ ರಕ್ಷಾಪುಟ ವಿನ್ಯಾಸ ಸೃಜನಶೀಲವಾದದ್ದು. ಜೊತೆಗೆ ಆಕರ್ಷಕವಾದುದೂ ಕೂಡ. ಅಲ್ಲದೆ ಕೃತಿಯ ಒಟ್ಟು ಸಾರಾಂಶವನ್ನು ವಿನ್ಯಾಸ ಮೂಲಕ ಸ್ಪಷ್ಟೀಕರಿಸುವಂತಹದೂ ಆಗಿದೆ. 'ಭಾವಚಿತ್ರರಚನೆ ಪರಂಪರೆ ಬೆಳೆದು ಬಂದ ಬಗೆಯನ್ನು ಮತ್ತು ಬೇರೆ ಬೇರೆ ಕಾಲ ಘಟ್ಟಗಳಲ್ಲಿ ಭಾವ

ಚಿತ್ರದ ಕುರಿತಾದ ಕಲ್ಪನೆ/ತಿಳಿವಳಿಕೆಯನ್ನು ಮತ್ತು ಭಾವಚಿತ್ರ ರಚನಾಕಾರರು ಪಡೆದ ಎದುರಿಸಿದ / ಹೊಂದಿಕೊಂಡ ಸಂದರ್ಭ ಸನ್ನಿವೇಶಗಳನ್ನು ಕುರಿತಾಗಿ ಈ ಕೃತಿಯ ಕೃತಿಕಾರರು ಇಲ್ಲಿ ವಿವರಿಸಿರುವರೆಂಬದು ಇಲ್ಲಿ ಗಮನಹರಿಸತಕ್ಕ ಅಂಶವಾಗಿದೆ ಹಾಗಾಗಿ ಈ ಪುಸ್ತಕದ ಮುಖಪುಟ ವಿನ್ಯಾಸ ೨೧ನೆಯ ಶತಮಾನದ ಕರ್ನಾಟಕ ದೃಶ್ಯಕಲಾ ಸಾಹಿತ್ಯ ಗ್ರಂಥಗಳ ಮುಖಪುಟ ರೂಪುರೇಷೆಯ ನಿರ್ಮಿತಿಯಲ್ಲಿ ಒಂದು ಮೈಲಿಗಲ್ಲು ಎನ್ನಬಹುದು.'[೪೦]

ಈ ಪುಸ್ತಕದ ಹೆಸರು ಕೆಂಪುಬಣ್ಣದಲ್ಲಿ ಬಳಿಬಣ್ಣದ ಅಂಚು ರೇಖೆಯೊಂದಿಗೆ ೩೦ ಅಳತೆ (Font size) ಯಲ್ಲಿ ಗೋಥಿಕ್‌ನಲ್ಲಿ ಉಬ್ಬು ಶೈಲಿಯ ಕನ್ನಡ ಅಕ್ಷರಗಳಿಂದ ಬರೆದುದಾಗಿದೆ. ಇದರ ಕೆಳಗಡೆ ಕಡು ಕಂದುಬಣ್ಣದಲ್ಲಿ ತೆಳುವಾದ ನೇರ ರೇಖೆಯೊಂದು ಹಾಯ್ದಿದ್ದು/ಎಳೆಯಲ್ಪಟ್ಟಿದ್ದು ಅದರ ಕೆಳಗಡೆ ಕನ್ನಡದಲ್ಲಿ ೧೬ ಗಾತ್ರದ / ಅಳತೆ (Font size) ಯಲ್ಲಿ ರೋಮನ್ಸ್ ಶೈಲಿಯ ಅಕ್ಷರಗಳಲ್ಲಿ ಲೇಖಕರ ಹೆಸರನ್ನು ನಮೂದಿಸಲಾಗಿದೆ. ಈ ಪುಸ್ತಕದ ಹಿಂಬದಿ ರಕ್ಷಾಪುಟವೂ ಸಹ ಎಡ ಬಲ ಅಂಚುಗಳಲ್ಲಿ ಕಂದು ಬಣ್ಣವನ್ನು ಹೊಂದಿದ್ದು ಇಲ್ಲಿ ಒಂದು ಅಂಚು ಮೈವಳಿಕೆ ವಿನ್ಯಾಸ ಹೊಂದಿದ್ದರೆ, ಇನ್ನೊಂದು ಅಂಚು ಕಡು ಕಂದು ಬಣ್ಣದ ದಪ್ಪ ತಟ್ಟೆಯನ್ನು ಹೊಂದಿದೆ ಅಲ್ಲದೆ ಈ ಭಾಗದಲ್ಲಿ ಕೃತಿಯ ಲೇಖಕರ ಪಾಸ್‌ಪೋರ್ಟ್ ಅಳತೆಗಿಂತಲೂ ತುಸು ದೊಡ್ಡದಾದ ಅಳತೆಯ ಭಾವಚಿತ್ರವನ್ನು ಮುದ್ರಿಸಲಾಗಿದ್ದು ಅದೇ ರಕ್ಷಾಪುಟದ ಮಧ್ಯಮ ಅವಕಾಶದಲ್ಲಿ ಕನ್ನಡದಲ್ಲಿ ಬೆನ್ನುಡಿಯು ಸಹ ಮುದ್ರಿಸಲ್ಪಟ್ಟಿದ್ದು ಇದರ ತಳಭಾಗದಲ್ಲಿ (ಹಿಂದಿನ ರಕ್ಷಾಪಟದ ತಳಭಾಗ) ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆಯೊಂದಿಗೆ ಕರ್ನಾಟಕ ಲಲಿತ ಕಲಾ ಅಕಾಡೆಮಿ ಎಂಬ ಕನ್ನಡ ಬರಹವೂ (ಅದರ ಕನ್ನಡ ಅಕ್ಷರಗಳು ೧೬ ಗಾತ್ರ (Font size) ಮತ್ತು ಸಹಜ ರೋಮನ್ ಶೈಲಿಯಲ್ಲಿವೆ ಎಂಬುದನ್ನು ಈ ಮೇಲೆಯೇ ಉಲ್ಲೇಖಿಸಿದೆಯಷ್ಟೆ) ಇದೆ. ಅದರ ಪಕ್ಕದಲ್ಲೇ ಕರ್ನಾಟಕ ಲಲಿತಕಲಾ ಅಕಾಡೆಮಿಯ ವಿಳಾಸ ನೀಡಲಾಗಿದ್ದು ಅದರಲ್ಲಿನ ಕನ್ನಡ ಅಕ್ಷರಗಳು ೧೪ ಗಾತ್ರ ಮತ್ತು ಸಾಮಾನ್ಯ ಶೈಲಿಯಲ್ಲಿವೆ ಒಟ್ಟಿನಲ್ಲಿ ವಿನ್ಯಾಸಗಾರಿಕೆ, ಮುಖಪುಟ ನಿರೂಪಣಾ ಪದ್ಧತಿ, ಮುಖಪುಟ ಅಲಂಕರಣಕ್ರಮ ಮುಂಬದಿಯ ರಕ್ಷಾಪಟ ಮತ್ತು ಹಿಂಬದಿಯ ರಕ್ಷಾಪುಟ ಸಂಯೋಜನೆಯಲ್ಲಿ ತೋರ್ಪಡಿಸಬೇಕಾದ ಕಾಳಜಿ ಈ ಎಲ್ಲ ಅಂಶಗಳಿಂದಲೂ ಇದು ಒಂದು ಪರಿಪೂರ್ಣವಾದ / ಪ್ರಬುದ್ಧ ಮಟ್ಟದ ರಕ್ಷಾಪುಟ ವಿನ್ಯಾಸ ಎನ್ನಬಹುದು.

**೩.೫.೧೨. ಶಂಕರಗೌಡ ಬೆಟ್ಟದೂರ (೨೦೦೭)**

ಕರ್ನಾಟಕದ ಲಲಿತಕಲಾ ಅಕಾಡೆಮಿಯಿಂದ ಬರೆಯಿಸಲ್ಪಟ್ಟ ಮತ್ತು ೨೦೦೭ ರಲ್ಲಿ ಯಶಸ್ವಿ ಪ್ರಿಂಟ್ ಆ್ಯಡ್ಸ್ ಬೆಂಗಳೂರು ಇವರಿಂದ ಪ್ರಥಮ ಮುದ್ರಣ ಕಂಡ ಪುಸ್ತಕವೆಂದರೆ 'ಶಂಕರಗೌಡ ಬೆಟ್ಟದೂರ' ಚಿತ್ರಕಲಾವಿದ ಶಂಕರಗೌಡ ಬೆಟ್ಟದೂರ ಇವರ ಜೀವನ ಮತ್ತು ಕಲೆಯ ಕುರಿತಂತೆ ವಿವರಣಾತ್ಮಕ ವಿಮರ್ಶಾತ್ಮಕ ನೋಟವುಳ್ಳ ಈ ಪುಸ್ತಕ ಬರೆದವರು ಎಚ್.ಎ. ಅನಿಲ್ ಕುಮಾರ್ ಅವರು ಇದಕ್ಕೆ

೪೦. ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ; ದಿ ೨೦೧೬

ಮುಖಪುಟ ವಿನ್ಯಾಸಗೊಳಿಸಿದವರು ಬಿ. ಎಲ್. ನರಸಿಂಹಮೂರ್ತಿ. ಶ್ಯಾಮಲ ಮತ್ತು ಬೂದು ಬಣ್ಣದ ಮಿಶ್ರಣದೊಂದಿಗೆ ಅಲ್ಲಲ್ಲಿ ಅತಿಮಂದ ಮೈವಳಿಕೆ ವಿನ್ಯಾಸಗಳನ್ನು ಹೊಂದಿರುವ ಮುಖಪುಟ ಹಾಳೆಯ ಮೇಲೆ ಶಂಕರಗೌಡ ಬೆಟ್ಟದೂರ ಅವರು ರಚಿಸಿದ ಬಂಗಾಲ್ ಶೈಲಿಯನ್ನು ಹೋಲುವ ಆಕಾರ ನಿರೂಪಣೆಯಲ್ಲಿ ರಚಿಸಿದ ಮಹಾತ್ಮಗಾಂಧಿಯವರು ಕುಳಿತಿರುವಂತಹ ಚಿಕಣಿ ಮಾದರಿಯ ಚಿತ್ರದ ಛಾಯಾಚಿತ್ರವನ್ನು ಮುಖಪುಟದಲ್ಲಿ ಮುದ್ರಿಸಿ ವಿನ್ಯಾಸಗೊಳಿಸಲಾಗಿದೆ.

ಆಶ್ರಮದ ಮುಂದುಗಡೆ ಬಲಗಾಲಮೇಲೆ ಎಡಗಾಲನ್ನಿಟ್ಟು ಎತ್ತರದ ಮಣೆಯ ಮೇಲೆ ಹಾಸಿದ ಚಾಪೆಯ ಮೇಲೆ ಎಡಗಾಲಿನ ಮೇಲೆ ಎಡಗೈ ಇಟ್ಟು ಬಲಗೈಯನ್ನು ಹಿಂದಕ್ಕೆ ಊರಿ ಕುಳಿತಿರುವ ಗಾಂಧೀಜಿಯ ಪಕ್ಕದಲ್ಲೇ ಜಪಮಾಲೆ ಮತ್ತು ಪುಸ್ತಕವಿದೆ. ಗಾಂಧೀಜಿಯ ಮೈಬಣ್ಣ ಸಹಜತೆಗೆ (ನೈಜತೆಗೆ) ಹತ್ತಿರವಾದುದು ಆದರೆ 'ದೇಹ ಆಕಾರ ಮಾನವ ಶರೀರ ಶಾಸ್ತ್ರದ ಪದ್ಧತಿಗನುಗುಣವಾದುದ್ದಲ್ಲ. ಅಲಂಕರಣ ಪದ್ಧತಿಯದು ಅಂತೆಯೇ ಆಶ್ರಮದ ಮಾಡು, ಕಂಬಗಳು ನೈಜಬಣ್ಣ (ಸಹಜಬಣ್ಣ)ದಿಂದಿದ್ದರೆ, ಹಿನ್ನೆಲೆಯಲ್ಲಿರುವ ಮರಗಳ ಎಲೆಗಳ ಬಣ್ಣ ನೈಜ ಪದ್ಧತಿಗೆ (ಶೈಲಿಗೆ) ಅನುಗುಣವಾಗಿಲ್ಲ. ಕಂದು ಬಣ್ಣವೇ ಈ ಕೃತಿಯಲ್ಲಿ ಪ್ರಧಾನ ಬಣ್ಣವಾಗಿ ಲೇಪಿಸಲ್ಪಟ್ಟಿದ್ದು ಒಟ್ಟು ಕೃತಿ ಮಂದ ನೋಟದಿಂದ ಕೂಡಿದೆ. ಒಂದು ರೀತಿಯ ನೀರವ ವಾತಾವರಣವನ್ನು ಧ್ವನಿಸುವ ವರ್ಣಸಮ್ಮಿಳನದಿಂದ ಕೂಡಿರುವ ಈ ಪುಸ್ತಕದ ಮುಖಪುಟ ತನ್ನಲ್ಲಡಗಿಸಿಕೊಂಡ ನೀರವತೆಯ ಲಕ್ಷಣದಿಂದಾಗಿಯೇ ವಿಶಿಷ್ಟತಮವಾದುದೆನಿಸುತ್ತದೆ.'[೪೧]

ಮುಖಪುಟದ ಮೇಲ್ಭಾಗದ ಮೂಲೆಯೊಂದರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಶೀರ್ಷಿಕೆ ಮತ್ತು ಚಿನ್ಹೆ ಮುದ್ರಿಸಲಾಗಿದೆ. ಅದರಲ್ಲಿ ಮುದ್ರಣಗೊಂಡ ಕರ್ನಾಟಕ ಲಲಿತಕಲಾ ಅಕಾಡೆಮಿಯ ಹೆಸರು ಕನ್ನಡ ಅಕ್ಷರಗಳಲ್ಲಿದ್ದು ಅವು ಕ್ಯಾಲಿಗ್ರಾಫಿಕ್ ಶೈಲಿಯವು, ಮುಖಪುಟದಲ್ಲಿ ಮುದ್ರಿಸಿದ ಕಲಾಕೃತಿಯ ಛಾಯಾಚಿತ್ರದ ಮೇಲ್ಗಡೆ ಕಡು ನೀಲಿ ಬಣ್ಣದಲ್ಲಿ ಕನ್ನಡದಲ್ಲಿ ಕೃತಿಶೀರ್ಷಿಕೆ ಮುದ್ರಿಸಿದ್ದು ಅದರ ಅಕ್ಷರಗಳು ೩೨ ಅಳತೆಯವು(Font size) ಮತ್ತು ಕ್ಯಾಲಿಗ್ರಾಫಿಕ್ ಶೈಲಿಯಲ್ಲಿವೆ. ಕೆಳಗಡೆ ಲೇಖಕರ ಹೆಸರನ್ನು ಕನ್ನಡದಲ್ಲಿ ಮುದ್ರಿಸಿದ್ದು ಆ ಅಕ್ಷರಗಳು ೧೬ (Font size) ಅಳತೆಯವು ಮತ್ತು ಅವುಗಳ ಶೈಲಿ ರೋಮನ್. ಕೃತಿಯ ಒಂದು ಪಾರ್ಶ್ವದಲ್ಲಿ ಅಡ್ಡಲಾಗಿ ಇಂಗ್ಲಿಷಿನಲ್ಲಿಯೂ ಸಹ ಕಂಡು ಕಾಣದಂತಹ ಮಂದ ವರ್ಣದಲ್ಲಿ (ಒಳಮೈಯಲ್ಲಿ ತಿಳಿನೀಲಿ ಬಣ್ಣದೊಂದಿಗೆ ತಿಳಿಗಪ್ಪು ಅಂಚು ಹೊಂದಿರುವ ಅಕ್ಷರಗಳು ಇವು) ಕೃತಿಶೀರ್ಷಿಕೆ ನಮೂದಿಸಿದ್ದು, ಆ ಅಕ್ಷರಗಳ ಗಾತ್ರ ೩೦ (Font size) ಮತ್ತು ಉಬ್ಬು ಶೈಲಿಹೊಂದಿವೆ. ಈ ಪುಸ್ತಕದ ಮುಖಪುಟದಲ್ಲಿ ಕೌಶಲ್ಯ ತಾಂತ್ರಿಕ ನೈಪುಣ್ಯತೆ ಸೌಂದರ್ಯ ಪ್ರಜ್ಞೆ ಇವೆಲ್ಲವೂ ಸಮರಸದಲ್ಲಿ ಬೆರೆತು ನವೀನ ಮಾದರಿಯಲ್ಲಿ ಪ್ರಸ್ತುತಗೊಂಡಿರುವುದರಿಂದ ತುಂಬ ಆಕರ್ಷಕವಾದ ಮುಖಪುಟ ಎನ್ನಬಹುದು. (ಇದರ ಹಿಂಬದಿರಕ್ಷಾ ಪುಟವೂ ಸಹ ಶ್ಯಾಮಲವರ್ಣ ಯುಕ್ತವಾಗಿದ್ದು ಒಂದು ಪಾರ್ಶ್ವದಲ್ಲಿ ಆಕಾಶ ನೀಲಿ ಬಣ್ಣ ಹೊಂದಿದೆ. ಕಲಾವಿದ ಶಂಕರಗೌಡ ಬೆಟ್ಟದೂರರಿಂದ ರಚಿತ ಬಂಡೆಗಳ ಚಿತ್ರದ ಮಂದಾತಿಮಂದ ಮುದ್ರಣವಿದೆ. ತಳಭಾಗಲ್ಲಿ ತಿಳಿಜಾಂಬಳಿ ಬಣ್ಣದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆ ಮತ್ತು

---

೪೧. ಸಂದರ್ಶನ: ಮಲ್ಲಿಕಾರ್ಜುನ ಜಾಧವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ ದಿ: ೨೦೧೫

ಪದನಾಮ ಮುದ್ರಿತವಾಗಿದೆ ಹಾಗೂ ಕನ್ನಡ ಮತ್ತು ಇಂಗ್ಲಿಷ್ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ವಿಳಾಸ ಮಂದವರ್ಣದಲ್ಲಿ ಮುದ್ರಿಸಲ್ಪಟ್ಟಿದೆ.

೩.೫.೧೩. ಸಿ. ಪಿ. ನಾಗೌಡ (೨೦೧೦)

ಕರ್ನಾಟಕ ಲಲಿತ ಕಲಾ ಅಕಾಡೆಮಿಯಿಂದಲೇ ಪ್ರಕಾಶಿತವಾಗಿರುವ, ಬೆಂಗಳೂರಿನ ರಶ್ಮಿ ಪ್ರಿಂಟ್ ಸರ್ವೀಸ್ ಇವರಿಂದಲೇ ಮುದ್ರಣಗೊಂಡಿರುವ ಆದರೆ ಯಾವ ವರ್ಷದಲ್ಲಿ ಇದು ತನ್ನ ಮೊದಲ ಮುದ್ರಣ ಕಂಡಿತು ಎಂಬ ಉಲ್ಲೇಖವಿಲ್ಲದಿರುವ ಪುಸ್ತಕ 'ಸಿ.ಪಿ.ನಾಗೌಡ' ಎಂಬುದು. ಡಾ.ಲಕ್ಷ್ಮೀದೇವಿ ಗವಾಯಿ ಎಂಬುವರಿಂದ ಬರೆಯಲ್ಪಟ್ಟು, ಆರ್.ಅನಿಲ್ ಎಂಬುವರಿಂದ ರಕ್ಷಾಪುಟ ವಿನ್ಯಾಸಗೊಳಿಸಲ್ಪಟ್ಟ ಪುಸ್ತಕವಿದು. ರಕ್ಷಾಪುಟದಲ್ಲಿ ಸಿ.ಪಿ.ನಾಗೌಡರಿಂದ ರಚಿತವಾದ ಅಡುಗೆ ಒಲೆಯ ಎದುರಿಗೆ ಕುಳಿತಿರುವ ತಾಯಿಯನ್ನು ತಬ್ಬಿರುವ ಹೆಣ್ಣುಮಗುವಿನ ಚಿತ್ರದ ವರ್ಣ ಛಾಯಾಚಿತ್ರವನ್ನು ವಿನ್ಯಾಸಗೊಳಿಸಲಾಗಿದೆ. ಸುತ್ತೆಲ್ಲ ಕಪ್ಪು ಬಣ್ಣ ಪ್ರಧಾನವಾಗಿದ್ದು, ಮಧ್ಯಾಂಕಣದಲ್ಲಿ ಹಳದಿ, ಕೆಂಪು, ನಸು ಹಸಿರು, ಬಿಳಿ, ಕಂದು ವರ್ಣಗಳಿಂದಾಚ್ಛಾದಿತವಾಗಿ ಸೂರ್ಯರಶ್ಮಿ ಹಾಯ್ದು ಬಂದ ಪರಿಣಾಮ ಕಟ್ಟಿಕೊಡುತ್ತಿರುವ ಈ ಮುಖಪುಟದಲ್ಲಿ ಸಂಯೋಜಿಸಿರುವ ನಾಗೌಡ ರಚಿತ ಈ ಮೇಲೆ ಉಲ್ಲೇಖಿಸಿದ ಚಿತ್ರವು ನೈಜ ಶೈಲಿಯಲ್ಲಿರುವುದರ ಜೊತೆಗೆ ಭಾವದುಂಬಿರುವುದರಿಂದ ಶ್ರೀಸಾಮಾನ್ಯ ಕಲಾಭಿಮಾನಿ ವರ್ಗವನ್ನು ಸಹಜವಾಗಿ ಆಕರ್ಷಿಸುವಂತಿದೆ.

ಇಲ್ಲೂ ಸಹ ವಿನ್ಯಾಸಗೊಳಿಸಿರುವ ಚಿತ್ರದ ವರ್ಣಛಾಯಾಚಿತ್ರವನ್ನು 'ಕಂಪ್ಯೂಟರ್ ತಂತ್ರಜ್ಞಾನದ ಮೂಲಕ ಮುಖಪುಟದಲ್ಲಿ ಸಮರ್ಥವಾಗಿ ಸಂಲಗ್ನಗೊಳಿಸಿರುವುದು ಮುಖಪುಟ ವಿನ್ಯಾಸಗಾರರ ತಾಂತ್ರಿಕ ನೈಪುಣ್ಯಕ್ಕೂ, ವೃತ್ತಿ ಪ್ರಾವೀಣ್ಯತೆಗೂ ಸ್ಪಷ್ಟ ದ್ಯೋತಕವಾಗಿ ಕಂಡುಬರುತ್ತದೆ.'[೮೨] ಕಂಪ್ಯೂಟರ್ ತಂತ್ರ ಕೌಶಲ್ಯದಿಂದ ಒಂದು ಬಣ್ಣದ ಜೊತೆಗೆ ಮಗದೊಂದು, ಇನ್ನೊಂದು ಹೀಗೆ ಬಹುವರ್ಣಗಳನ್ನು ಸಮೀಕರಿಸಿರುವುದು ಕುತೂಹಲ ಮನೋಭಾವದ ನೋಡುಗರಿಗೆ ತುಂಬ ಆಪ್ಯಾಯಮಾನವಾದದ್ದೆನಿಸುವ ನೋಟ ಒದಗಿಸಬಲ್ಲ ಮುಖಪುಟವಿದು. ಈ ಪುಸ್ತಕದ ಮುಖಪುಟದ ಮೇಲ್ತುದಿಯಲ್ಲಿ ಕೃತಿಯ ಶಿರೋನಾಮೆ ಬಿಳಿಯ ಬಣ್ಣದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಿಂದ ಮುದ್ರಿಸಲ್ಪಟ್ಟಿದ್ದು ಅಲ್ಲಿನ ಕನ್ನಡ ಅಕ್ಷರಗಳು ೪೮(Font Size) ಅಳತೆಯಲ್ಲಿವೆ ಮತ್ತು ಅವುಗಳ ಶೈಲಿ ಮಾರ್ಕರ್ ಪೆನ್ನಿಂದ ರಚನೆಗೊಂಡಂತಹ ಲಕ್ಷಣಹೊಂದಿವೆ. ಕೆಳಗಡೆ ಮೂಲೆಯಲ್ಲಿ ಅಕಾಡೆಮಿಯ ಪದನಾಮ (ಹೆಸರು ಮತ್ತು ಚಿಹ್ನೆ ಮುದ್ರಣಗೊಂಡಿದ್ದು) ಅದರ ಪಕ್ಕದಲ್ಲೇ ಇಂಗ್ಲಿಷ್‌ನ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಅಚ್ಚ ಬಿಳಿಯಬಣ್ಣದಲ್ಲಿ ಮುದ್ರಿಸಲಾಗಿದೆ. ಹಿಂಬದಿ ರಕ್ಷಾಪುಟವೂ ಸಹ ಸಿ.ಪಿ.ನಾಗೌಡರ ಪಾಸ್‌ಪೋರ್ಟ್ ಅಳತೆಯ ಕಪ್ಪು-ಬಿಳಿ ಭಾವಚಿತ್ರ ಮತ್ತು ಅವರಿಂದ ರಚಿತ ಹಳ್ಳಿಯ ಬದುಕಿನ ಸಂಯೋಜನಾ ಚಿತ್ರವೊಂದರ ವರ್ಣ ಛಾಯಾಚಿತ್ರದೊಂದಿಗೆ ವಿನ್ಯಾಸಗೊಂಡಿದುದಾಗಿದೆ.ಇಲ್ಲೂ ಡಿಜಿಟಲ್ ತಂತ್ರಜ್ಞಾನದ

---

೮೨. ಸಂದರ್ಶನ: ಕೆ. ಕೆ. ಮಕಾಳಿ (ಮುಖಪುಟ ಕಲಾವಿದರು), ಕ.ವಿ.ವಿ., ಹಂಪಿ. ದಿ:೨೦೧೬

ಮೂಲಕ ಪುಟವಿನ್ಯಾಸಗೊಳಿಸಿರುವುದು ಸುಸ್ಪಷ್ಟ. ಕಪ್ಪು ಪ್ರಧಾನ ಬಣ್ಣವಾಗಿರುವ ಈ ಹಾಳೆಯ ಮೇಲೆ ಅಲ್ಲಲ್ಲಿ ತಿಳಿ ನೀಲಿ, ಕಂದು ಹಸಿರು, ಕೆಂಪು ಬಣ್ಣಗಳು ಇಣುಕಿದ್ದು ಕಲಾವಿದರ ಕಪ್ಪು ಬಿಳಿ ಭಾವಚಿತ್ರ ಮತ್ತು ಕಲಾಕೃತಿಯ ವರ್ಣ ಛಾಯಾಚಿತ್ರವನ್ನು ಹಾಳೆಯ ಜೊತೆಗೆ ಸಮೀಕರಣಗೊಳಿಸಿರುವುದರಿಂದ ಅಂಚುರೇಖೆಯಿಲ್ಲದೆ, ಆ ಪುಟದ ಅವಿನಾಭಾವ ಅಥವಾ ಏಕೀಕೃತವಾದ ಭಾಗವಾಗಿ ತೋರಿ ಬಂದಿರುತ್ತದೆ.

ಕಲಾಶಾಲೆಗಳಲ್ಲಿ ಕಲಿಸುವ ನೈಜಶೈಲಿಯ ಸ್ಮರಣ ಚಿತ್ರಣ ಪ್ರಕಾರವನ್ನು ನೆನಪಿಸುವಂತಿರುವ ಸಂಯೋಜನಾ ಕ್ರಮದಲ್ಲಿರುವ ಈ ಕಲಾಕೃತಿಯು ಹಳ್ಳಿಯ ಜನಪದದ ದೈನಂದಿನ ವ್ಯವಹಾರದ/ದೈನಂದಿನ ಬದುಕಿನ ಒಂದು ನೋಟವನ್ನು ನೀಡುತ್ತಿದ್ದು, ಕೃತಿಯ ತುಂಬೆಲ್ಲಾ ಆ ಕಾಲಘಟ್ಟದ ಕಲಾ ವಿದ್ಯಾರ್ಥಿಯು ಪಾಲಿಸಬೇಕಾದ ಕಲಾನಿಯಮಗಳು ಯಾವ ತೆರನಾಗಿದ್ದು ಎಂಬುದರ ಕಿರು ಪರಿಚಯವನ್ನು ಸಹ ಈ ಕೃತಿಯ ಮೂಲಕ ಕುತೂಹಲ ಬುದ್ಧಿಯ ಕಲಾವಿದ್ಯಾರ್ಥಿ ಪಡೆದುಕೊಳ್ಳಲು ಸಾಧ್ಯವಿದೆ. ಇಲ್ಲಿ ತಳಭಾಗದಲ್ಲಿ ಕ.ಲ. ಅಕಾಡೆಮಿಯ ಲಾಂಛನ/ಪದನಾಮ ಹೆಸರು ಬಿಳಿ ಬಣ್ಣದಲ್ಲಿ ಮುದ್ರಿತವಾಗಿದ್ದು, ಅದರ ಕೆಳಗಡೆಯೇ ಇಂಗ್ಲಿಷ್ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಬಿಳಿಯ ಬಣ್ಣದಲ್ಲಿ ಮುದ್ರಿಸಲಾಗಿದೆ. ಇಲ್ಲಿ ಮುದ್ರಿತವಾದ ಲಾಂಛನದ ಮೇಲ್ಗಡೆ ಕೆಂಪು ಬಣ್ಣದ ಸರಳ ರೇಖಾತ್ಮಕ ಪಟ್ಟಿಯೊಂದು ಹಾಯ್ದು ಹೋಗಿರುವುದರಿಂದ ಮೇಲ್ಗಡೆಯಲ್ಲಿನ ಚಿತ್ರ ಮತ್ತು ಅಕಾಡೆಮಿಯ ಲಾಂಛನ ಸೂಕ್ತ ರೀತಿಯಲ್ಲಿ ನೋಡುಗರ ಗಮನಕ್ಕೆ ಬರುವಂತಾಗಿದೆ. ಇಲ್ಲಿನ ಒಟ್ಟಾರೆ ವಿನ್ಯಾಸ ಸುಧಾರಿತ ರೂಪದಲ್ಲಿರುವುದಲ್ಲದೆ ಸೃಜನಶೀಲ ಮತ್ತು ಸೌಂದರ್ಯಾತ್ಮಕ ಅಂಶಗಳ ದೃಷ್ಟಿಯಿಂದಲೂ ಉತ್ತಮ ಮಟ್ಟದ್ದಿದೆ. ರಕ್ಷಾಪುಟಚಿತ್ರ (ಮುಖಪುಟ ಹಿಂಬದಿಪುಟ ಇವರೆಡೂ) ಸಮಕಾಲೀನ ಗ್ರಂಥಪ್ರಕಟಣಾ ವ್ಯವಸಾಯಕ್ಕೆ ಮಾದರಿಯಾಗಬಲ್ಲವು ಎಂದು ಹೇಳಬಹುದು.

**೩.೫.೧೪. ಜಿ.ವೈ. ಹುಬ್ಳೀಕರ್ (೨೦೧೦)**

ಮೊದಲ ಮುದ್ರಣ ಎಂದು ಆಯಿತು ಎಂದು ಉಲ್ಲೇಖವಿಲ್ಲದ, ರಶ್ಮಿ ಪ್ರಿಂಟ್ ಸರ್ವೀಸ್, ಬೆಂಗಳೂರು ಇವರಿಂದ ಮುದ್ರಣಗೊಂಡಿರುವ ಹಾಗೂ ಕೋಟೆಕುಮಾರ್ ಎನ್ನುವವರಿಂದ ಬರಹಗೊಳಿಸಲ್ಪಟ್ಟ, ಭರತೇಶ ಯಾದವ್ ಎಂಬುವರಿಂದ ಮುಖಪುಟ ವಿನ್ಯಾಸಗೊಳಿಸಲ್ಪಟ್ಟ 'ಜಿ.ವೈ.ಹುಬ್ಳೀಕರ್' ಎಂಬ ಪುಸ್ತಕವೂ ಸಹ ಅಕಾಡೆಮಿಯಿಂದಲೇ ಪ್ರಕಾಶನ ಕಂಡಿರುವಂತಹುದು. ಈ ಪುಸ್ತಕದ ಮುಖಪುಟವಿನ್ಯಾಸಕ್ಕೆ ಕಲಾವಿದ ಜಿ.ವೈ. ಹುಬ್ಳೀಕರ್‌ರವರು ತೈಲವರ್ಣದಲ್ಲಿ ಚಿತ್ರಿಸಿದ ಕಲಾಕೃತಿಯೊಂದರ ಛಾಯಾಚಿತ್ರವನ್ನೇ ಬಳಸಿಕೊಳ್ಳಲಾಗಿದೆ. ಈ ಚಿತ್ರದಲ್ಲಿ ಕಸಬರಿಗೆ ಬುಟ್ಟಿಯನ್ನು ಕಂಕುಳಲ್ಲಿಟ್ಟುಕೊಂಡು ನಿಂತಿರುವ ಶ್ವೇತ ವಸ್ತ್ರಧಾರಿಯಾದ ಗ್ರಾಮೀಣ ಪ್ರದೇಶದ ಹೆಣ್ಣು ಮಗಳೊಬ್ಬಳ ಜೊತೆಯಲ್ಲೂ ಪುಟ್ಟ ಬಾಲಕನೋರ್ವ ಹಿಮ್ಮುಖನಾಗಿ ನಿಂತಿದ್ದಾನೆ. ಕೃತಿಯಲ್ಲಿ ಚಿತ್ರಿತವಾದ ಹೆಣ್ಣುಮಗಳು ಕಡುಗಪ್ಪು ವರ್ಣದಲ್ಲಿದ್ದು ಹಿಂಗಡೆ ಅವಕಾಶದ ಸರಿಸುಮಾರು ೯೫% ಭಾಗ ಕೆಂಪು ವರ್ಣದಿಂದಾವೃತವಾಗಿದ್ದು, ಅಲ್ಲಿ ಕೆಲವೆಡೆ ಮಂದ ಕಪ್ಪು ಬಣ್ಣದ ಲೇಪನವೂ ಮೇಳೈಸಿದೆ. ಚಿತ್ರದ ತಳಭಾಗ ಕಪ್ಪು ಮತ್ತು ಹಸಿರು ಬಣ್ಣದಿಂದ ಕೂಡಿದ್ದು,

ಕೃತಿಯಲ್ಲಿ ಲೇಪಿತವಾದ ಬಿಳಿ, ಕೆಂಪು ಮತ್ತು ಕಪ್ಪು ಬಣ್ಣಗಳು ನೋಡುಗರಿಗೆ ಗಾಢವಾಗಿ ತಟ್ಟುತ್ತವೆ. 'ಅಮೃತಾ ಶೇರಗಲ್'[೪೩] ಳಂತಹ ಕಲಾವಿದೆಯ ಕೃತಿಯ ಪ್ರಭಾವ ಇಲ್ಲಿ ಸ್ಪಷ್ಟವಾಗಿ ಕಂಡು ಬರುತ್ತಿದ್ದು, ಆಕೃತಿ ನಿರೂಪಣೆಯಲ್ಲಿ ಜಾನಪದೀಯ ಸೊಗಡು, ಗಡಸು, ಕಣ್ಣುಗಳಲ್ಲಿ ಹರಳುಗಟ್ಟಿಸಿರುವ ದುಮ್ಮಾನ ಈ ಕೆಲವು ವಿಶೇಷ ಕಲಾ ಮೌಲ್ಯಗಳಿಂದಾಗಿ ಗಮನ ಸೆಳೆಯುವ ಈ ಚಿತ್ರ ನವ್ಯ ಶೈಲಿಯಲ್ಲಿರುವಂತಹದು.

ಈ ಕಲಾಕೃತಿಯ ಛಾಯಾಚಿತ್ರದ ಅಂಚಿಗೆ ಅಂಚುರೇಖೆಗಳಿಲ್ಲದೆ, ಮುಖಪುಟದ ಹಾಳೆಯ ಏಕೀಕೃತ ಭಾಗವೆಂಬಂತೆ ವಿನ್ಯಾಸಗೊಳಿಸಲ್ಪಟ್ಟಿರುವುದು ವಿಶೇಷ. ಈ ಮುಖಪುಟವಿನ್ಯಾಸಗೊಳ್ಳುವಲ್ಲಿ ಗಣಕಯಂತ್ರದ/ ಡಿಜಿಟಲ್ ತಂತ್ರಜ್ಞಾನ ನೆರವು ಪಡೆದುಕೊಂಡಿರುವುದು ದಟ್ಟಕಪ್ಪು ಬಣ್ಣದ ಮುಖಪುಟದಲ್ಲಿ ರೂಪುಗೊಂಡಿರುವ ಹಾಗೂ ವಿಲೀನಗೊಂಡಿರುವ ನೀಲಿ, ಹಸಿರು ವರ್ಣಯುಕ್ತ ಸರಳ ರೇಖಾತ್ಮಕ ಪಟ್ಟಿಗಳು ಹಾಗೂ ನೀಲಿ ಕಡುಬೂದು ಬಣ್ಣದಲ್ಲಿರುವ ಸುರುಳಿ ಸುರುಳಿಯಾಗಿರದ ವಿನ್ಯಾಸಗಳಿಂದ ದೃಢಗೊಳ್ಳುತ್ತದೆ. ಇಲ್ಲಿ ಅಚ್ಚಿಸಿರುವ ಕಲಾಕೃತಿಯ ಛಾಯಾಚಿತ್ರದ ಪಕ್ಕದಲ್ಲಿಯೇ ಮೇಲಿಂದ ಕೆಳಕ್ಕೆ ೩೨ ಅಳತೆಯ (Font Size) ಹೆಲ್ವಿಟಿಕ್ ಶೈಲಿಯ ಇಂಗ್ಲಿಷ್ ಅಕ್ಷರಗಳಲ್ಲಿ ಅಚ್ಚ ಬಿಳಿಬಣ್ಣದಲ್ಲಿ ಈ ಪುಸ್ತಕದ ಶಿರೋನಾಮೆ ಮುದ್ರಿಸಲಾಗಿದೆ. ಅದರ ಕೆಳಗೆ ೪೮ ಅಳತೆಯ (Font Size) ಕ್ಯಾಲಿಗ್ರಾಫಿಕ್ ಮತ್ತು ಬ್ರಶ್‌ಸ್ಟ್ರೋಕ್ ಶೈಲಿಯಲ್ಲಿ ಅಚ್ಚಬಿಳಿಬಣ್ಣದ ಕನ್ನಡ ಅಕ್ಷರಗಳಲ್ಲಿ ಕೃತಿಯ ಶಿರೋನಾಮೆಯನ್ನು ಮುದ್ರಿಸಲಾಗಿದೆ. ಮುಖಪುಟದ ತಳಭಾಗದ ಪಾರ್ಶ್ವ(ಮೂಲೆ)ದಲ್ಲಿ ಕ.ಲ.ಅಕಾಡೆಮಿಯ ಹೆಸರಿನೊಂದಿಗೆ ಚಿಹ್ನೆಯನ್ನು ಬಿಳಿಯ ಬಣ್ಣದಲ್ಲಿಯೇ ಅಚ್ಚಿಸಿದ್ದು, ಅದರ ಪಕ್ಕದಲ್ಲಿ ಇಂಗ್ಲಿಷ್ ಅಕ್ಷರಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಮುದ್ರಿಸಲಾಗಿದೆ.ಒಟ್ಟಿನಲ್ಲಿ ಈ ಪುಸ್ತಕದ ಮುಖಪುಟ ವಿನ್ಯಾಸಗಾರಿಕೆ ಬಹಳಷ್ಟು ಆಧುನೀಕರಣಗೊಂಡಿದೆ ಎಂದು ಹೇಳಬಹುದು.

ಈ ಪುಸ್ತಕದ ಹಿಂಬದಿ ರಕ್ಷಾಪುಟವೂ ಆಕರ್ಷಕವಾಗಿಯೇ ರೂಪುಗೊಂಡಿದೆ.ಕಡುನೇರಳೆ ಬಣ್ಣದ ಹಾಳೆಯ ಮೇಲೆ (ಹಿಂಬದಿ ರಕ್ಷಾಪುಟದ ಮೇಲೆ) ಮೇಲ್ಭಾಗದ ಪಾರ್ಶ್ವದಲ್ಲಿ ಈ ಪುಸ್ತಕದ ವಿಷಯವಾದ ಕಲಾವಿದರ ಚಿಕ್ಕ ಅಳತೆಯ ಕಪ್ಪು-ಬಿಳಿ ಭಾವಚಿತ್ರ ವಿನ್ಯಾಸಗೊಳಿಸಲ್ಪಟ್ಟಿದ್ದು, ಅದರ ಪಕ್ಕದಲ್ಲೇ ಹೆಚ್ಚು ಕಡಿಮೆ ಹಿಂಬದಿ ರಕ್ಷಾಪುಟದ ಖಾಲಿ ಅವಕಾಶವನ್ನು ಸಂಯೋಜನೆಗೊಳಿಸುವುದಕ್ಕಾಗಿ ಜಿ.ವೈ. ಹುಬ್ಳೀಕರ್‌ರವರಿಂದಲೇ ರಚನೆಯಾದ 'ಚಿಂಗಾರಿ'ಯ ರೇಖಾಚಿತ್ರದ ಛಾಯಾಚಿತ್ರವನ್ನು ಮುದ್ರಿಸಲಾಗಿದೆ. ಅದರ ಕೆಳಗಡೆ ಮುಖಪುಟದಲ್ಲಿ ವಿಲೀನಗೊಂಡ ತಿಳಿನೀಲಿ ಬಣ್ಣದ ಕೆಲವು ಸರಳರೇಖಾ ಪಟ್ಟಿಕೆಗಳು, ನೀಲಿಬಣ್ಣದ ಅಲೆಗಳ ಮಾದರಿಗಳು ರೂಪಿಸಲ್ಪಟ್ಟಿದ್ದು ಅಲ್ಲೇ-ತಳಭಾಗದ ಪಾರ್ಶ್ವದಲ್ಲಿ ಅಕಾಡೆಮಿಯ ಚಿಹ್ನೆ ಮತ್ತು ಕನ್ನಡ, ಇಂಗ್ಲಿಷ್ ಅಕ್ಷರಗಳಲ್ಲಿ ಕ.ಲ. ಅಕಾಡೆಮಿಯ ಹೆಸರು ಮುದ್ರಿತವಾಗಿದೆ.

ಪುಸ್ತಕದ ವಿಷಯವೆನಿಸಿದ ಕಲಾವಿದರ ಭಾವಚಿತ್ರ ಈ ಪುಟದಲ್ಲಿ ಎದ್ದು ಕಾಣುತ್ತಿದ್ದು ಅವರಿಂದಲೇ ರಚಿತವಾದ 'ಚಿಂಗಾರಿ'ಯ ರೇಖಾಚಿತ್ರ ಮಂದ ಬಣ್ಣಯುಕ್ತ ಹಾಳೆಯ ಬಣ್ಣದೊಂದಿಗೆ ಮಂದ ಕಪ್ಪು

---

೪೩. Pran Nath Mago: Contemporary art in Indian a perspective, p 37-40

ಬಣ್ಣದಿಂದೊಡಗೂಡಿ ಮುದ್ರಿತವಾಗಿದ್ದು ಚಿತ್ರ ಮತ್ತು ಹಾಳೆಯ ಬಣ್ಣ ಇವು ಪರಸ್ಪರ ವಿಲೀನಗೊಂಡಿರುವುದರಿಂದ ಚಿತ್ರಾಕೃತಿ ಮುನ್ನೆಲೆಯಲ್ಲಿ ಕಾಣಿಸಿಕೊಳ್ಳದೆ ಕಲಾ ಬದುಕಿನ ಒಟ್ಟಾರೆ ನೈಜತೆಯನ್ನು ಅನಾವರಣಗೊಳಿಸುವಂತಿದೆ. ಮುಖಪುಟವಿನ್ಯಾಸ ಹಿಂಬದಿ ರಕ್ಷಾಪುಟ ರಚನೆ ಈ ಎರಡೂ ದೃಷ್ಟಿಗಳಿಂದಲೂ ಪುಸ್ತಕ ತುಂಬ ಮಹತ್ವಪೂರ್ಣವಾದುದು ಹಾಗೂ ಸೃಜನಶೀಲವೂ ಆದುದು ಎಂದು ಹೇಳಬಹುದು.

**೩.೫.೧೫. ಆರ್.ಎಸ್. ನಾಯ್ಡು (೨೦೧೦)**

ಕರ್ನಾಟಕ ಲಲಿತಕಲಾ ಅಕಾಡೆಮಿಗಾಗಿ ಕೆ.ವಿ.ಸುಬ್ರಹ್ಮಣ್ಯಂರವರಿಂದ ಬರೆಯಲ್ಪಟ್ಟ 'ಆರ್.ಎಸ್.ನಾಯ್ಡು' ಎಂಬ ಶೀರ್ಷಿಕೆಯ ಪುಸ್ತಕವು ಮೊದಲ ಮುದ್ರಣಗೊಂಡಿದುದು ಬೆಂಗಳೂರಿನ ರಶ್ಮಿ ಪ್ರಿಂಟ್ ಸರ್ವೀಸ್ ಇವರಲ್ಲಿ, (ಮೊದಲ ಮುದ್ರಣಗೊಂಡ ವರ್ಷ ದಾಖಲಾಗಿಲ್ಲ) ಆರ್.ಎಸ್.ನಾಯ್ಡುರವರಿಂದಲೇ ರಚಿತವಾದ ಕ್ಯಾರಿಕೇಚರ್‌ಗಳ ಛಾಯಾಚಿತ್ರಗಳನ್ನೇ ಉಪಯೋಗಿಸಿಕೊಂಡು ಈ ಪುಸ್ತಕದ ಮುಖಪುಟ ಮತ್ತು ಹಿಂಬದಿ ರಕ್ಷಾಪುಟವಿನ್ಯಾಸ ಮಾಡಲಾಗಿದ್ದು, ಇದರ ಮುಖಪುಟವಿನ್ಯಾಸ ಕಾರ್ಯ ವೇಣು ಎನ್ನುವವರು ಮಾಡಿದ್ದಾರೆ. ಈ ಕೃತಿಯ ಮುಖಪುಟದ ಹಾಳೆ ಬಿಳಿಯ ಬಣ್ಣದಿದ್ದು, ಅದರ ಮೇಲೆ ಆರ್.ಎಸ್. ನಾಯ್ಡುರವರ ಇಂಗ್ಲಿಷ್ ಭಾಷೆಯ ಕೈ ಬರಹ ಮಂದವಾಗಿ ಮುದ್ರಿಸಲಾಗಿದೆ. ಮುನ್ನೆಲೆಯಲ್ಲಿ ಆರ್.ಎಸ್.ನಾಯ್ಡು ರಚಿತ ಒಂದಿಷ್ಟು ಕ್ಯಾರಿಕೇಚರ್‌ಗಳ ವರ್ಣಛಾಯಾಚಿತ್ರಗಳನ್ನು ಅಡ್ಡಲಾಗಿ ಮಲಗಿಸಿದ ತ್ರಿಭುಜಾಕಾರದ ಮಾದರಿಯಲ್ಲಿ ವಿನ್ಯಾಸಗೊಳಿಸಲಾಗಿದೆ (ಹಿಂಬದಿಪುಟದಲ್ಲಿ ಹೀಗೆ ಮಾಡಲಾಗಿದೆ. ಅಲ್ಲಿ ಹಾಳೆಯ (ಪುಟದ) ಮೇಲ್ತುದಿಯ ಮೂಲೆಯೊಂದರಲ್ಲಿ ಮೋನೋಕ್ರೋಮ್ ಬಣ್ಣದಲ್ಲಿರುವ ಆರ್.ಎಸ್.ನಾಯ್ಡುರವರ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಚ್ಚಿಸಲಾಗಿದೆ. ಕೆಳಗಡೆ ಕಪ್ಪು ಬಣ್ಣದಲ್ಲಿ ಕ.ಲ. ಅಕಾಡೆಮಿಯ ಪದನಾಮ ಮತ್ತು ಲಾಂಛನವನ್ನು ಮತ್ತು ಅದರಪಕ್ಕದಲ್ಲಿಯೇ ಇಂಗ್ಲಿಷಿನಲ್ಲಿ 'ಕರ್ನಾಟಕ ಲಲಿತಕಲಾ ಅಕಾಡೆಮಿ' ಎಂದು ಮುದ್ರಿಸಲಾಗಿದೆ).

ಈ ತ್ರಿಭುಜಾಕಾರದ ವಿನ್ಯಾಸದ ಕೆಳಗಡೆ ಈ ಕೃತಿ ಲೇಖಕರ ಹೆಸರನ್ನು ಕನ್ನಡದಲ್ಲಿ ಮುದ್ರಿಸಲಾಗಿದೆ. ಮೇಲ್ತುದಿಯಲ್ಲಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕೃತಿ ಶೀರ್ಷಿಕೆ ಇದೆ. ಈ ಕೃತಿ ಲೇಖಕರ ಹೆಸರನ್ನು ಕನ್ನಡದಲ್ಲಿ ಮುದ್ರಿಸಲಾಗಿದೆ.ಅದರ ಕೆಳಗಡೆ ಕರ್ನಾಟಕ ಲಲಿತಕಲಾ ಅಕಾಡೆಮಿಯ ಪದನಾಮ ಮತ್ತು ಲಾಂಛನ ಹಾಗೂ ಅದರ ಪಕ್ಕದಲ್ಲೇ ಇಂಗ್ಲಿಷನಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ಮುದ್ರಿಸಲಾಗಿದೆ. ಇಲ್ಲಿ ಮುಖಪುಟ ಮತ್ತು ಹಿಂಬದಿಪುಟಗಳಲ್ಲಿ ಮುದ್ರಿತವಾದ ಆರ್.ಎಸ್.ನಾಯ್ಡುರವರಿಂದ ರಚಿತ ಕ್ಯಾರಿಕೇಚರ್‌ಗಳ ವರ್ಣ ಛಾಯಾಚಿತ್ರಗಳು (ಪಾಸ್‌ಪೋರ್ಟ್ ಅಳತೆ)ಆರ್.ಎಸ್. ನಾಯ್ಡುರವರು ವ್ಯಕ್ತಿಗಳ ಮುಖಭಾವ ಗ್ರಹಿಕೆಯಲ್ಲಿ ಹೊಂದಿದ್ದ ತೀಕ್ಷ್ಣ/ಸೂಕ್ಷ್ಮ ಅವಲೋಕನ ಸಾಮರ್ಥ್ಯಕ್ಕೂ ಮತ್ತು ಅದನ್ನು ರೇಖಾ ಕೌಶಲ್ಯದ ಮೂಲಕ ಮಾರ್ಮಿಕವಾಗಿ ಅಭಿವ್ಯಕ್ತಿಸುವ ಅವರ ಅಪ್ರತಿಮ ಹಸ್ತಸಿದ್ಧಿಗೂ ಉತ್ತಮವಾದ ಮಾದರಿಯ ಉದಾಹರಣೆಗಳೆನಿಸುತ್ತವೆ. ಅಲ್ಲದೆ ಇಲ್ಲಿ ವಿನ್ಯಾಸಗೊಳಿಸಿದ ಪ್ರತಿ ಕ್ಯಾರಿಕೇಚರ್‌ನ ವರ್ಣಛಾಯಾಚಿತ್ರದ ಅಂಚಿಗೆ ಬೂದು ಬಣ್ಣದ ನೆರಳನ್ನು ಕಂಪ್ಯೂಟರ್ ತಂತ್ರಜ್ಞಾನದ ಮೂಲಕ

ತೋರಿಸಿರುವುದೂ ಸಹ ಇಲ್ಲಿನ ಸಂಯೋಜನೆಯಲ್ಲಿ ವಿಶಿಷ್ಟವಾದ ಅನುಭವ ನೀಡಲು (ಬರಲು) ಸಹಾಯಕವಾಗಿದೆ. ಅಲ್ಲದೆ, ಇಲ್ಲಿ ತ್ರಿಭುಜಾಕಾರದ ಅಡ್ಡಲಾದ ವಿನ್ಯಾಸ ಕ್ರಮ ಮೇಲ್ಗಡೆ ಮತ್ತು ಕೆಳಗಡೆ ಸಮತೋಲನಯುಕ್ತ ಅವಕಾಶ ವಿಂಗಡಣೆಗೈದಿರುವುದರಿಂದ ಬಿಳಿಯ ಬಣ್ಣದ ಹಿನ್ನೆಲೆಯಲ್ಲಿ ಮತ್ತು ಕ್ಯಾರಿಕೇಚರ್ ಚಿತ್ರಗಳು ಮುನ್ನೆಲೆಯಲ್ಲಿ ಎದ್ದು ಕಾಣುವಂತಾಗಿ ಒಟ್ಟಾರೆ ವಿನ್ಯಾಸಕ್ಕೆ (ಮುಖಪುಟ ಮತ್ತು ಹಿಂಬದಿ ರಕ್ಷಾಪುಟ) ಸೃಜನಶೀಲತೆಯ ಆಯಾಮ ಬಂದಿದೆ ಎಂದು ಅಭಿಪ್ರಾಯಪಡಬಹುದು.

ಒಟ್ಟಾರೆ ೧೯೪೭ ರಿಂದ ೨೦೧೨ ರವರೆಗೆ ಪ್ರಕಟಗೊಂಡ ದೃಶ್ಯಕಲಾ ಗ್ರಂಥಗಳನ್ನು ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಂಡು ಒಂದೇ ಕಡೆ ಸೇರಿಸಿ/ಕ್ರೂಢೀಕರಿಸಿ ವಿವೇಚಿಸಿದಾಗ ಕಂಡುಕೊಂಡ ಅಂಶಗಳೆಂದರೆ;

**ಚಿತ್ರಕಲಾ ಪ್ರಕಾರಗಳಾದ:** ನೈಜಕಲೆ, ರೇಖಾಚಿತ್ರಕಲೆ, ಅಮೂರ್ತಕಲೆ, ಆಧುನಿಕಕಲೆ, ನಿಸರ್ಗಕಲೆ, ಭಾವಚಿತ್ರಕಲೆ, ಸ್ಥಿರಚಿತ್ರಣಕಲೆ, ಚಿಕ್ಕಣಿ ಚಿತ್ರಕಲೆ, ಅಕ್ಷರಕಲೆ, ಆಲಂಕಾರಿಕಶೈಲಿ, ಸಂಜ್ಞೆ ಮತ್ತು ಸಂಕೇತಗಳು, ತಂತ್ರಜ್ಞಾನಕಲೆ ಮುಂತಾದ ಕಲೆಯು ಇಲ್ಲಿನ ಗ್ರಂಥಗಳ ರಕ್ಷಾಪುಟಚಿತ್ರಕ್ಕೆ ಬಳಸಿಕೊಂಡಿರುವುದು ಕಂಡುಬಂದಿದೆ.

**ಚಿತ್ರಕಲಾ ಮಾಧ್ಯಮಗಳಾದ:** ಜಲವರ್ಣ, ತೈಲವರ್ಣ, ಲೇಖನಿ ಮತ್ತು ಶಾಯಿ, ಮುದ್ರಣ ಮಾಧ್ಯಮ, ಛಾಯಾಚಿತ್ರ ಮಾಧ್ಯಮ, ಅಕ್ರಾಲಿಕ್ ಮಾಧ್ಯಮ, ತಂತ್ರಜ್ಞಾನ ಮಾಧ್ಯಮ ಮತ್ತು ಮಿಶ್ರಣ ಮಾಧ್ಯಮಗಳನ್ನು ಉಪಯೋಗಿಸಿಕೊಂಡಿರುವುದರ ಜೊತೆಗೆ ಏಕವರ್ಣ, ದ್ವಿವರ್ಣ, ಬಹುವರ್ಣ, ಅರೆಛಾಯೆ, ಚಪ್ಪಟೆ ಲೇಪನ ಮುಂತಾದ ವಿಧಾನಗಳನ್ನು ಇಲ್ಲಿನ ರಕ್ಷಾಪುಟಚಿತ್ರಕ್ಕೆ ತಂತ್ರವಾಗಿ (Technique) ಬಳಸಿಕೊಂಡಿರುವುದು ತಿಳಿದುಬಂದಿದೆ. ತಾತ್ವಿಕ ಮತ್ತು ತಾಂತ್ರಿಕ ಕೌಶಲ್ಯತೆಯ ಸ್ಪರ್ಶದೊಂದಿಗೆ ಈ ರಕ್ಷಾಪುಟಚಿತ್ರಗಳು ನಿರ್ಮಾಣವಾಗಿರುವುದು ಕಾಣುತ್ತಿವೆ.

❑❑❑

## ಸ್ವಾತಂತ್ರ್ಯೋತ್ತರ ಕನ್ನಡ ಚಿತ್ರಕಲಾ ಗ್ರಂಥಗಳ ರಕ್ಷಾಪುಟಗಳು




೧೯೪೭




೧೯೫೦

## ಎಪ್ಪತ್ತರ ದಶಕದಲ್ಲಿನ ಕನ್ನಡ ದೃಶ್ಯಕಲಾ ಗ್ರಂಥಗಳ ರಕ್ಷಾಪುಟಗಳು




೧೯೭೧

ಎಂಬತ್ತರ ದಶಕದಲ್ಲಿನ ಕನ್ನಡ ದೃಶ್ಯಕಲಾ ಗ್ರಂಥಗಳ ರಕ್ಷಾಪುಟಗಳು



೧೯೭೫




೧೯೮೩




೧೯೮೭




೧೯೮೯

# ತೊಂಬತ್ತರ ದಶಕದಲ್ಲಿನ ಕನ್ನಡ ದೃಶ್ಯಕಲಾ ಗ್ರಂಥಗಳ ರಕ್ಷಾಪುಟಗಳು



ಹಿಂಬದಿ ಪುಟ




೧೯೯೦




೧೯೯೨




೧೯೯೨

ಎಸ್. ನಂಜುಂಡಸ್ವಾಮಿ
S.NANJUNDASWAMY



ಕರ್ನಾಟಕ ಲಲಿತಕಲಾ ಅಕಾಡೆಮಿ
KARNATAKA LALITHAKALA ACADEMY

೧೯೯೪

ಪಿ. ಸುಬ್ಬರಾವ್
P. SUBBARAO

P.



ಕರ್ನಾಟಕ ಲಲಿತಕಲಾ ಅಕಾಡೆಮಿ KARNATAKA LALITHKALA ACADEMY

೧೯೯೪

ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ



ಕರ್ನಾಟಕ ಲಲಿತ ಕಲಾ ಅಕಾಡೆಮಿ
KARNATAKA LALITHAKALA ACADEMY

೧೯೯೪

ಡಾ. ಸ್ವೆಟೋಸ್ಲಾವ್ ರೋರಿಕ್
DR. SVETOSLAV ROERICH



೧೯೯೪

ಸರಣಿಮಾಲಿಕೆಯ ಕನ್ನಡ ದೃಶ್ಯಕಲಾ ಗ್ರಂಥಗಳ ರಕ್ಷಾಪುಟಗಳು




೧೯೯೫




೧೯೯೫




೧೯೯೫




೧೯೯೫




೧೯೯೫




೧೯೯೫




೧೯೯೫




೧೯೯೫



೧೯೯೫



೧೯೯೫



೧೯೯೫



೧೯೯೫




೧೯೯೫




೧೯೯೫




೧೯೯೫




೧೯೯೫




೧೯೯೫




೧೯೯೫




೧೯೯೭




೧೯೯೭

ಕಲಾವಿದರ ವಿಳಾಸ ಕೈಪಿಡಿ
(Artists Mailing List)





ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

೧೯೯೭

ಮಧುಗಿರಿ ರಾಮು
Madhugiri Ramu



೧೯೯೭

ಎಫ್. ಎಂ. ಸೂಫಿ
F.M. Soophie



ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು - 560 001
Karnataka Lalithakala Academy
Nrupathunga Road, Bangalore - 560 001

೧೯೯೮




ಹಿಂಬದಿ ಪುಟ




೧೯೯೮



ಹಿಂಬದಿ ಪುಟ




೧೯೯೮



೨೦೦೦




೨೦೦೦




೨೦೦೦



ಹಿಂಬದಿ ಪುಟ




೨೦೦೦




೨೦೦೦

ಇಪ್ಪತ್ತೊಂದನೆಯ ಶತಮಾದ ಮೊದಲ ದಶಕದ ದೃಶ್ಯಕಲಾ ಗ್ರಂಥಗಳ ರಕ್ಷಾಪುಟಗಳು



ಹಿಂಬದಿ ಪುಟ




೨೦೦೧

ಸರಣಿ ರಕ್ಷಾಪುಟಗಳು



ಹಿಂಬದಿ ಪುಟ



೨೦೦೪



ಹಿಂಬದಿ ಪುಟ




೨೦೦೪




೨೦೦೪




ಹಿಂಬದಿ ಪುಟ




೨೦೦೪




ಹಿಂಬದಿ ಪುಟ




೨೦೦೪

ಅಧ್ಯಾಯ : ನಾಲ್ಕು

# ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

- ಸ್ವಾತಂತ್ರ್ಯೋತ್ತರ ಕನ್ನಡ ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ
- ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಅಧ್ಯಾಯ : ನಾಲ್ಕು

## ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಖಾಸಗಿ ಅಥವಾ ಸರ್ಕಾರಿ ಸ್ವಾಮ್ಯದ ಸಂಘ ಸಂಸ್ಥೆಗಳು ಹುಟ್ಟಿ, ಅವುಗಳ ಮುಖಾಂತರ ಶಿಲ್ಪಕಲಾ ಸಾಹಿತ್ಯ ಗ್ರಂಥ ಸಂಪಾದನೆ, ಪ್ರಕಟಣೆಗಳಂತಹ ಗುರುತರ ಕಾರ್ಯಕ್ರಮಗಳು ಆಯೋಜನೆಗೊಳ್ಳ-ತೊಡಗಿದ್ದಿದ್ದು ಸ್ವಾತಂತ್ರ್ಯಾನಂತರವೇ. ಅಂದರೆ ಸರಿ ಸುಮಾರು ೧೯೫೦/೬೦ರ ದಶಕದಿಂದ ಇದರ ಹೆಜ್ಜೆ ಗುರುತುಗಳು ಮೂಡಲಾರಂಭಿಸಿದವಾದರೂ ಹೇಳಿಕೊಳ್ಳುವಂತಹ ರೀತಿಯಲ್ಲಿ ಇಂತಹ ಕಾರ್ಯಗಳು ನಡೆಯ ತೊಡಗಿದ್ದುದು ೧೯೬೦-೭೦ರ ದಶಕದಿಂದ ಎಂದು ಊಹಿಸಬಹುದಷ್ಟೆ ಈ ಪ್ರಬಂಧ ಕ್ಷೇತ್ರಕಾರ್ಯ ಅಧ್ಯಯನ ಸಮಯದಲ್ಲಿ ಲಭ್ಯವಾದ ಶಿಲ್ಪಕಲಾ ಸಾಹಿತ್ಯಗಳನ್ನು ಮತ್ತು ಶಿಲ್ಪಕಲಾ ಅಕಾಡೆಮಿ ಪ್ರಾರಂಭವಾಗುವಕ್ಕಿಂತ ಮುಂಚೆ ಲಲಿತಕಲಾ ಅಕಾಡೆಮಿ ಶಿಲ್ಪಕಲೆ ಕುರಿತು ಅನೇಕ ಗ್ರಂಥಗಳು ಪ್ರಕಟಿಸಿದೆ ಅವುಗಳನ್ನು ಸಹ ಇದೆ ಅಧ್ಯಾಯದಲ್ಲಿ ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಇಲ್ಲಿ ಚರ್ಚಿಸಿಲಾಗಿದೆ.

**ಸ್ವಾತಂತ್ರ್ಯೋತ್ತರ ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ:**

**೪.೧. ಭಾರತೀಯ ಶಿಲ್ಪ (೧೯೭೫)**

ಡಾ. ಶಿವರಾಮ ಕಾರಂತರಿಂದ ರಚಿತವಾದ 'ಭಾರತೀಯ ಶಿಲ್ಪ' ಕೃತಿಯನ್ನು ೧೯೭೫ರಲ್ಲಿ ಪ್ರಥಮಬಾರಿಗೆ ಅಚ್ಚಿಸಿರುವರು ಮಣಿಪಾಲ ಪವರ್‌ಪ್ರೆಸ್‌ನವರು. ಹಸಿರು, ಕೆಂಪು (ವರ್ಮೀಲಿಯನ್ ರೆಡ್) ಹಸಿರು ಯುಕ್ತ ಬಣ್ಣಗಳನ್ನು ಮುಖಪುಟ ಹೊಂದಿದ್ದು, ಕೇಸರಿಬಣ್ಣದ ಆವರಣದಲ್ಲಿ 'ಚೋಳರಕಾಲದ ನರ್ತನ ನಟರಾಜ'[೧] ಲೋಹಶಿಲ್ಪದ ಕಪ್ಪು ಬಿಳುಪು ಛಾಯಾಚಿತ್ರ (ಅರ್ಧವುಳ್ಳದ್ದು ಪೂರ್ತಿಯಾಗಿರುವುದಿಲ್ಲ)

೦೧. ಡಾ. ಜಿ.ಜ್ಞಾನಾನಂದ: ಶಿಲ್ಪಾದರ್ಶನ, ಪು-೧೮೬-೧೯೫

ಅಚ್ಚಾಗಿರುತ್ತದೆ. (ನಟರಾಜ ಶಿಲ್ಪದ ಹಿನ್ನೆಲೆಯಲ್ಲಿ ಆ ಶಿಲ್ಪದ ಛಾಯೆ/ನೆರಳು ಬಿದ್ದಿರುವುದೂ ಸಹ ಛಾಯಾಗ್ರಹಣಗೊಂಡಿರುವುದು ಗಮನಾರ್ಹ) ಅದರ ಕೆಳಗಡೆಯ ಆವರಣ ಹಸಿರು ಬಣ್ಣದಲ್ಲಿದ್ದು ಅಲ್ಲಿಯೇ ಬಿಳಿಯ ಬಣ್ಣದಲ್ಲಿ ಸುಸ್ಪಷ್ಟವಾಗಿ ಕನ್ನಡ ಭಾಷೆಯಲ್ಲಿ ಕೃತಿಯ ಶೀರ್ಷಿಕೆ ಮತ್ತು ಲೇಖಕರು ಹೆಸರು ನಮೂದಾಗಿದೆ. ೧೯೭೫ರ ಕಾಲಘಟ್ಟಕ್ಕೆ ಹೋಲಿಸಿದರೆ ಈ ಮುಖಪುಟವಿನ್ಯಾಸ ತುಂಬ ಸೃಜನಾತ್ಮಕವಾದುದೇ ಆಗಿದೆ ಎನ್ನಬಹುದು. ಏಕೆಂದರೆ ಕರ್ನಾಟಕಕ್ಕೆ ಆಗಿನ್ನು ಸುಧಾರಿತ ಮುದ್ರಣ ತಂತ್ರಜ್ಞಾನವಾಗಲಿ, ಮುಖಪುಟವಿನ್ಯಾಸ ಪದ್ಧತಿಯಾಗಲಿ ಜನಪ್ರಿಯವಾಗಿರಲಿಲ್ಲ ಅಂತಹ ಸಂದರ್ಭದಲ್ಲಿ ಈ ಕೃತಿ ಪ್ರಕಟವಾಗಿದೆ.

**೪.೨. ಮೂರ್ತಿಶಿಲ್ಪ ನೆಲೆ ಹಿನ್ನೆಲೆ (೧೯೭೫)**

'ಮೂರ್ತಿ ಶಿಲ್ಪ ನೆಲೆ ಹಿನ್ನೆಲೆ' ಎಂಬ ಕೃತಿ ಬೆಂಗಳೂರು ವಿ.ವಿ.ಯ ಪ್ರಕಟಣೆ. ೧೯೭೫ರಲ್ಲಿ ಇದು ಮೊದಲ ಮುದ್ರಣವಾದದ್ದು. ಇದರ ಮುಖಪುಟವಿನ್ಯಾಸ ಮಾಡಿದವರು ಎಂ.ಎಸ್.ಚಿಂತಾಮಣಿ ಎನ್ನುವವರು. ಕಂದು ಬಣ್ಣದ ಮುಖಪುಟ ಹಾಳೆಯ ಮೇಲೆ ಹಿಂದೂ ಪುರುಷ ದೇವ ಮೂರ್ತಿಯ ಶಿಲ್ಪದ ಕಪ್ಪು ಬಿಳಿ ಛಾಯಾಚಿತ್ರವನ್ನು ಮುದ್ರಿಸಿ. ವಿನ್ಯಾಸಗೊಳಿಸಲಾಗಿದೆ. ಆಭರಣ, ಅಲಂಕರಣ, ಮುಖದಲ್ಲಿ ಮಂದಸ್ಮಿತತೆ, ಹಸ್ತ ಮತ್ತು ಪಾದ ಚಲನೆ ಇವೆಲ್ಲ ತುಂಬ ಕೌಶಲ್ಯಪೂರ್ಣವಾಗಿ ಶಿಲ್ಪಿಯಿಂದ ಆಯೋಜನೆಗೊಂಡಿದ್ದು ಮನೋಹರವಾದ ಈ ಶಿಲ್ಪದ ಕಪ್ಪು ಬಿಳಿ ಛಾಯಾಚಿತ್ರವೇ ಇಲ್ಲಿ ಆಕರ್ಷಣೆ ಒದಗಿಸುತ್ತಿದೆ. ಮುಖಪುಟದಲ್ಲಿ ಪಟ್ಟಿಕೆಗಳ ಮೂಲಕ ಮೂರು ಭಾಗ ಮಾಡಿಕೊಂಡಿದ್ದು ಮೊದಲ ಭಾಗದಲ್ಲಿ ಪುಟ್ಟದಾದ ಕನ್ನಡ ಅಕ್ಷರಗಳಲ್ಲಿ ಕೃತಿಯ ಲೇಖಕರ ಹೆಸರು ಮುದ್ರಣವಾಗಿದೆ. ನಂತರದ ಭಾಗದಲ್ಲಿ ದೊಡ್ಡದಾಗಿ, ಕನ್ನಡ ಅಕ್ಷರಗಳಲ್ಲಿ ಕೃತಿಯ ಹೆಸರು ಅಚ್ಚಬಿಳಿಬಣ್ಣದಲ್ಲಿ ನಮೂದಿಸಲ್ಪಟ್ಟಿದೆ. ಕೆಳಗಿನ ಭಾಗದಲ್ಲಿ ಬೆಂಗಳೂರು ವಿವಿಯ ಲಾಂಛನ ಮತ್ತು ಪದನಾಮ ಮುದ್ರಿತವಾಗಿದೆ. (೧೯೭೫ರ ಕಾಲಘಟ್ಟದಲ್ಲಿ ಕರ್ನಾಟಕದಲ್ಲಿ ಮುದ್ರಣತಂತ್ರಜ್ಞಾನ, ಮುಖಪುಟವಿನ್ಯಾಸ ಪರಿಕಲ್ಪನೆ ಇನ್ನೂ ಶೈಶವಾಸ್ಥೆಯಲ್ಲಿ ಇತ್ತು ಎಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬೇಕು) ಒಟ್ಟಿನಲ್ಲಿ ೧೯೭೫ರ ಸಂದರ್ಭದಲ್ಲಿ ಇದು ತುಂಬ 'ಹೊಸತನ'ದಿಂದ ಕೂಡಿದ್ದೇ ಆದ ಮುಖಪುಟ ಮಾದರಿಯೆನಿಸಿತ್ತು ಎಂದು ನಾವು ನಿರ್ಣಯಿಸುವುದಾದರೆ ಇಲ್ಲಿನ ಮುಖಪುಟ ವಿನ್ಯಾಸ ಮಹತ್ವಪೂರ್ಣವಾದುದೆನಿಸುತ್ತದೆ.

**೪.೩. ಚಿತ್ರ ಶಿಲ್ಪ ವಾಸ್ತು ಕಲೆಗಳು (೧೯೭೫)**

೧೯೭೫ರಲ್ಲಿ ಕರ್ನಾಟಕ ವಿ.ವಿ. ಧಾರವಾಡ ಇದು ತನ್ನ ರಜತಮಹೋತ್ಸವ ಪ್ರಕಟಣೆಯ ಭಾಗವಾಗಿ ಕನ್ನಡ ಅಧ್ಯಯನ ಪೀಠದ ಮೂಲಕ ವಿಶೇಷೋಪನ್ಯಾಸ ಮಾಲೆ ಏರ್ಪಡಿಸಿತು. ಅದರ ಮೂರನೆಯ ವಿಶೇಷೋಪನ್ಯಾಸವೆ ಡಾ. ಶಿವರಾಮ ಕಾರಂತರದಾಗಿದ್ದು ಅದನ್ನು ಚಿತ್ರ ಶಿಲ್ಪ ವಾಸ್ತು ಕಲೆಗಳು ಹೆಸರಿನ ಪುಸ್ತಕವಾಗಿ ಪ್ರಕಟಿಸಿತು. ಕಂದು ಹಳದಿ ಪ್ರಧಾನವಾದ ಮುಖಪುಟ ಹಾಳೆಯಲ್ಲಿ ಮೇಲ್ಭಾಗದಲ್ಲಿ (ಮುಖಪುಟ ಮೇಲ್ತುದಿ ಭಾಗ) ಒಂದೆಡೆ ತುಸು ದಪ್ಪವಾಗಿ, ಮಗದೊಂದೆಡೆ ತುಸು

ಕಿರಿದಾಗಿ ಕೊಂಚ ಬಾಗಿಕೊಂಡು ಸಾಗಿದ ಬಿಳಿಯ ಪಟ್ಟಿಯಿಂದ ಅದರ ಕೆಳಗಡೆಯ ಕಂದು ಹಳದಿ ಆವರಣ ತುಸು ದೊಡ್ಡದಾಗಿದ್ದು ಅಲ್ಲಿ ಸಾಕಷ್ಟು ದೊಡ್ಡದಾ ಕನ್ನಡ ಅಕ್ಷರಗಳಲ್ಲಿ ಮೂರು ರೀತಿಯ ವಿನ್ಯಾಸದ ಮೂಲಕ ಕೃತಿಯ ಶೀರ್ಷಿಕೆ ಮುದ್ರಿಸಲಾಗಿದೆ.

ಅದರ ಕೆಳಗಡೆ ಬಾಗಿಕೊಂಡು ಸಾಗಿದ (ಡೊಂಕಾಗಿ ಸಾಗಿದ) ಪಟ್ಟಿಕೆಯ ರೀತಿಯಲ್ಲಿ (ತುಸು ದಪ್ಪದಾದ ಪಟ್ಟಿಕೆಯಿದು) ತಿಳಿನೀಲಿ ಬಣ್ಣ ಆಕಾಶ ನೀಲಿ ಬಣ್ಣದ ಆವರಣವಿದ್ದು, ಆ ಆವರಣ ಎರಡೂ ಬದಿಗಳಲ್ಲಿ ಮೇಲಿನ ಡೊಂಕಾದ ಬಿಳಿಯ ಪಟ್ಟಿಯ ಮಾದರಿಯಲ್ಲೆ ಇರುವ ಬಿಳಿಯ ಅಂಚು ರೇಖಾ ಪಟ್ಟಿಹೊಂದಿ ಸಾಗಿದೆ. ಅದರ ಕೆಳಗಡೆಯಲ್ಲಿನ ಪುಟ್ಟದಾದ ಕಂದು ಹಳದಿ ಬಣ್ಣದ ಅವಕಾಶದಲ್ಲಿ ಕ.ವಿ.ವಿ. ಲಾಂಛನ ಮತ್ತು ಪದನಾಮ ಹಾಗೂ ಪ್ರಕಟಣೆಗೊಂಡ ವರ್ಷ ಉಲ್ಲೇಖಿಸಲ್ಪಟ್ಟಿದೆ. 'ಇವತ್ತಿನ ಸಂದರ್ಭದಲ್ಲಿ ಅದು ಅನಾಕರ್ಷಕ ತೀರ ಹಳೆಯ ಮಾದರಿಯ ವಿನ್ಯಾಸವೆಂದು ನಮಗೆ ಅನಿಸಿದರೂ, ೧೯೭೫ರ ಕಾಲಘಟ್ಟದಲ್ಲಿ ಅದು ಬಹುಶಃ ತುಂಬ ಸೃಜನಶೀಲವಾದ ಮುಖಪುಟ'[೨] ವಿನ್ಯಾಸಗಾರಿಕೆಯೆನಿಸಿತ್ತು ಎಂಬುದಾಗಿ ಊಹಿಸಬಹುದಷ್ಟೆ.

**೪.೪. ಶಿಲ್ಪದಲ್ಲಿ ಸ್ತ್ರೀ (೧೯೭೬)**

'ಶಿಲ್ಪದಲ್ಲಿ ಸ್ತ್ರೀ' ಎಂಬ ಪುಸ್ತಕ ಲೋಟಸ್ ಪ್ರಿಂಟರ್ಸ್‌ರವರಿಂದ ೧೯೭೬ರಲ್ಲಿ ಮುದ್ರಣ-ಗೊಂಡಿದುದಾಗಿದ್ದು, ಇದರ ಲೇಖಕರು ಎಸ್.ಕೆ.ಕಿಟ್ಟಮ್ಮ. ಬಿಳಿಯ ಮುಖಪುಟ ಹಾಳೆಯ ಮೇಲೆ 'ಖಜುರಾಹೊ ಶಿಲ್ಪ ಮಾದರಿಯ'[೩] ಸ್ತ್ರೀ ವಿಗ್ರಹದ ಅರ್ಧ ಭಾಗವನ್ನು ತೋರಿಸುತ್ತಿರುವ (Half photography) ಕಪ್ಪು ಬಿಳಿ ಛಾಯಾಚಿತ್ರವನ್ನೇ ಮುಖಪುಟದುದ್ದಕ್ಕೂ ವಿಸ್ತರಿಸಿ (Enlarge ಮಾಡಿ) ಮುದ್ರಿಸಲಾಗಿದೆ. ದಟ್ಟವರ್ಣದ ಹಿನ್ನೆಲೆಯಿರುವುದರಿಂದ ಮತ್ತು ಮುಖ್ಯವಾಗಿ ಮಾನವ ಶರೀರ ಶಾಸ್ತ್ರದ ಅಂಗಾಂಗ ವಿನ್ಯಾಸ, ಭಂಗಿ (position / posture) ಗಳನ್ನು ಉಲ್ಲಂಘಿಸಿಯೂ (ಸರಿಯಾಗಿ ಪಾಲನೆ ಮಾಡದೆಯೂ) ಈ ಶಿಲ್ಪಮುಖಭಾವ ಮತ್ತು ತೋರ್ಪಡಿಸಿರುವ ವೈಯ್ಯಾರ, ಬಾಗು, ಬಳುಕು ಯುವತಿಯ ಪಾಟಿಯನ್ನೂ, ಬರೆಯಲು ಅನುಕೂಲಕರವಾದ ಚಪ್ಪಟೆಯಾದ ಸಮತಲವೊಂದನ್ನು ಎಡಗೈಯಲ್ಲಿರಿಸಿಕೊಂಡು, ಬಲಗೈಯಿಂದ ಲೆಕ್ಕಣಿಕೆ ಹಿಡಿದು ಬರೆಯತ್ತಿರುವ ಭಂಗಿ ಅತಿಯೆನಿಸಿದರೂ ಆಕರ್ಷಣೆಯಾಗದೆ ಕೇಶಾಲಂಕಾರ, ಕುತ್ತಿಗೆ, ಕೈಗಳು, ಭಾಗಗಳಲ್ಲಿ ಹಿತಮಿತವಾದ ಆಭರಣ ಕೆತ್ತನೆ ಇವೆಲ್ಲ ಮನೋಹರವಾಗಿವೆ. ಹಾಗಾಗಿ ರಸಿಕರಿಗೆ ಚಿತ್ರವನ್ನು ಛಾಯಾಚಿತ್ರ ಸಹಜವಾಗಿ ಸೆಳೆಯಬಲ್ಲದು. ಇಲ್ಲಿನ ಛಾಯಾಚಿತ್ರದ ಎಡಬಲ ಮಗ್ಗಲುಗಳಲ್ಲಿ ತೀರ ಸರಳವಾದ ಕುಸುರಿನಕ್ಷೆ ಬಿಡಿಸಲಾಗಿದೆ (ಏಕವರ್ಣದಲ್ಲಿ) ಮುಖಪುಟ ಹಾಳೆಯ ಮೇಲ್ಗಡೆ ತುಂಬ ದೊಡ್ಡದಾಗಿ ಕನ್ನಡದಲ್ಲಿ ಕೃತಿಯ ಶೀರ್ಷಿಕೆ ಮುದ್ರಿತವಾಗಿದೆ. ೧೯೭೬ರ ಸಂದರ್ಭದಲ್ಲಿ ಇದು ತುಂಬ ಆಕರ್ಷಕವೆನಿಸಿದ್ದ ಮುಖಪುಟವೆನಿಸಿತ್ತು ಎಂದು ಭಾವಿಸಬಹುದು.

---

೦೨. ಸಂದರ್ಶನ : ಎಸ್.ಆರ್. ಬಡಿಗೇರ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೫

೦೩. ಡಾ. ಅಂಬಳಿಕೆ ಹಿರಿಯಣ್ಣ: ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಪು- ೨೯೮-೨೯೯

**೪.೫. ಪಟ್ಟದಕಲ್ಲಿನ ಶಿಲ್ಪ ವೈಭವ (೧೯೮೨)**

ಎ.ಎಂ.ಅಣ್ಣಿಗೇರಿಯವರಿಂದ ರಚಿತವಾದ 'ಪಟ್ಟದಕಲ್ಲಿನ ಶಿಲ್ಪ ವೈಭವ' ಎಂಬ ಪುಸ್ತಕವೂ ಸಹ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಕಟಣೆಯೇ ಆಗಿದೆ. ಇದನ್ನು ಮೊದಲಬಾರಿಗೆ ಮುದ್ರಿಸಿದವರು (೧೯೮೨ ರಲ್ಲಿ) ಎ.ಜಿ.ಬಂತಲಿ ಎನ್ನುವವರು. ಏಕವರ್ಣದಲ್ಲಿ (ಹಳದಿ ಬಣ್ಣ) ಮುದ್ರಿತವಾದ ಪಟ್ಟದಕಲ್ಲಿನ ದೇವಾಲಯವೊಂದರ ಛಾಯಾಚಿತ್ರವನ್ನು ಈ ಪುಸ್ತಕದ ಮುಖಪುಟ ಹೊಂದಿದೆ. ೧೯೭೦ರ ದಶಕದಲ್ಲಿನ ಗ್ರಾಫಿಕ್ ಮಾಧ್ಯಮದ ಕಲಾಕೃತಿಯನ್ನು ಈ ಛಾಯಾಚಿತ್ರ ಜ್ಞಾಪಿಸುತ್ತದೆ. (ಮುದ್ರಣಗೊಂಡ ಛಾಯಾಚಿತ್ರವೂ ಸರಿಯಾಗಿ, ಸ್ಪಷ್ಟವಾಗಿ ಮೂಡಿಬಂದಿಲ್ಲ, ಮುಸುಕು ಮುಸುಕಾಗಿದೆ) ಮುಖಪುಟದ ಮೇಲ್ಭಾಗದಲ್ಲಿ ದಪ್ಪನಾದ ನೀಲಿಬಣ್ಣದ ಪಟ್ಟ ಭಾಗದಲ್ಲಿ/ಸ್ಥಳಾವಕಾಶದಲ್ಲಿ ಕೃತಿಯ ತಲೆಬರಹ ಮುದ್ರಿತವಾಗಿದೆ. ಮುಖಪುಟದ ಕೆಳಗಡೆಯಲ್ಲಿ ಕಪ್ಪು ಬಣ್ಣದ ಪುಟ್ಟ ಪಟ್ಟಿಯಾವರಣದಲ್ಲಿ ಲೇಖಕರ ಹೆಸರು ಕನ್ನಡ ಅಕ್ಷರಗಳಲ್ಲಿ ಮುದ್ರಣಗೊಂಡಿದೆ. ಈ ಪುಸ್ತಕದ ಮುಖಪುಟದ ಒಟ್ಟಾರೆ ರೂಪುರೇಷೆ ತುಂಬ ಹಳೆಯ ಮಾದರಿಯದು. ಇಲ್ಲಿ ಸುಧಾರಿತ-ಸೃಜನಶೀಲ ವಿನ್ಯಾಸಕ್ರಮವಾಗಲಿ (ಮುಖಪುಟದ ಅಂಚುಗಳಲ್ಲಿ) ಸುಸಂಬದ್ಧವಾದ ಅವಕಾಶ ವಿಂಗಡಣೆಯಾಗಲಿ, ಕಂಡು ಬರುವುದಿಲ್ಲ.

**೪.೬. ಶಿಲ್ಪಿ ಸಿಂಗಣ್ಣಾಚಾರ್ಯ (೧೯೯೪)**

ಸ್ವರ್ಣಕಲೆಯಲ್ಲಿ ನಿಪುಣರಾಗಿದ್ದ ಶಿಲ್ಪಿ ಸಿಂಗಣ್ಣಾಚಾರ್ಯ ಎನ್ನುವವರ ಜೀವನ ಮತ್ತು ಕಲಾಸಾಧನೆಯನ್ನು ಕುರಿತಂತೆ ಜಿ.ವಿ. ಗಣೇಶಯ್ಯ ಎನ್ನುವವರು ಬರೆದ 'ಶಿಲ್ಪಿ ಸಿಂಗಣ್ಣಾಚಾರ್ಯ' ಎಂಬ ಕಿರುಪುಸ್ತಕವನ್ನು ಬರೆದಿದ್ದು. ಅದು ಕರ್ನಾಟಕ ಲಲಿತಕಲಾ ಅಕಾಡೆಮಿಯ ಕರ್ನಾಟಕ ಕಲಾವಿದರು ಮಾಲಿಕೆಯಡಿಯಲ್ಲಿ ೨೬ನೆಯ ಪ್ರಕಟಣೆಯಾಗಿದೆ. ಇದು ಮೊದಲ ಮುದ್ರಣ ಕಂಡಿದ್ದು ೧೯೯೪ರಲ್ಲಿ ಪ್ರಗತಿ ಪ್ರಿಂಟರ್ಸ್ ಇವರಿಂದ. ಶಿಲ್ಪಿ ಸಿಂಗಣ್ಣಾಚಾರ್ಯರಿಂದ ರಚಿತವಾದ ದೇವಿ ಚಾಮುಂಡಿಯ ಸ್ವರ್ಣಖಚಿತ ಮಂಟಪದಲ್ಲಿ ಚಾಮುಂಡೇಶ್ವರಿ ದೇವಿ ವಿಗ್ರಹವನ್ನು ಕುಳ್ಳಿರಿಸಿ, ಜಂಬೂ ಸವಾರಿ ಹೊರಟ ದೃಶ್ಯದ ಛಾಯಾಚಿತ್ರವನ್ನು ಈ ಪುಸ್ತಕದ ಮುಖಪುಟದಲ್ಲಿ ಅಚ್ಚಿಸಿ, ವಿನ್ಯಾಸಗೊಳಿಸಲಾಗಿದೆ.

ಕಡುನೀಲಿ ಬಣ್ಣದ ಮುಖಪುಟ ಹಾಳೆಯ ಮೇಲೆ ಈ ಛಾಯಾಚಿತ್ರ ವಿನ್ಯಾಸಗೊಳಿಸಿದ್ದು, ಅಂಚುಗಳಿಗೆ ಅಚ್ಚಬಿಳಿ ಬಣ್ಣದ ಅಂಚುರೇಖೆ ಎಳೆಯಲಾಗಿದೆ. ಈ ಛಾಯಾಚಿತ್ರದ ಮೇಲ್ಗಡೆ ಹಳದಿ ಬಣ್ಣದಲ್ಲಿ ಪುಸ್ತಕದ ಅಳತೆಗೆ ಅನುಸಾರವಾಗಿ ಸಾಕಷ್ಟು ದೊಡ್ಡದಾಗಿಯೇ ಕೃತಿ ಶೀರ್ಷಿಕೆಯನ್ನು ಕನ್ನಡ ಹಾಗೂ ಇಂಗ್ಲಿಷ್ ಅಕ್ಷರಗಳಲ್ಲಿ ಅಚ್ಚ ಹಳದಿ ಬಣ್ಣದಲ್ಲಿ ಬರೆಯಲಾಗಿದ್ದು (ಆ ಅಕ್ಷರಗಳ ಅಳತೆ/ಗಾತ್ರ ೩೦ Font size) ಅವುಗಳ ಅಂದರೆ ಕನ್ನಡ ಅಕ್ಷರಗಳು ಮತ್ತು ಇಂಗ್ಲಿಷ್ ಅಕ್ಷರಗಳು ರೋಮನ್ ಶೈಲಿಯಲ್ಲಿವೆ. ಚಿತ್ರದ ಕೆಳಗಡೆ ಮುಖಪುಟದ ತಳಭಾಗದಲ್ಲಿ ಪುಟ್ಟದಾದ ಕನ್ನಡ ಮತ್ತು ಇಂಗ್ಲಿಷ್ ಅಕ್ಷರಗಳಲ್ಲಿ (ಆ ಅಕ್ಷರಗಳ ಅಳತೆ ೧೬ Font size ಅಚ್ಚ ಹಳದಿ ಬಣ್ಣದಲ್ಲಿಯೇ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂದು ನಮೂದಿಸಲಾಗಿದ್ದು, ಕರ್ನಾಟಕ ಲಲಿತಕಲಾ ಅಕಾಡೆಮಿಯ ಚಿನ್ಹೆಯನ್ನು ಮುಖಪುಟದಲ್ಲಿ ನಮೂದಿಸಿಲ್ಲ, ಮುಖಪುಟದ ಒಟ್ಟಾರೆ ವಿನ್ಯಾಸ ಅಚ್ಚುಕಟ್ಟಾಗಿಯು, ಆಕರ್ಷಕವಾಗಿಯೂ ಮೂಡಿಬಂದಿದೆ.

### ೪.೭. ಹೆಚ್. ವೆಂಕಪ್ಪ (೧೯೯೪)

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ – ಕರ್ನಾಟಕ ಕಲಾವಿದರು ಮಾಲಿಕೆಯ ೨೫ನೆಯ ಪ್ರಕಟಣೆಯಾಗಿ ಹೊರಹೊಮ್ಮಿದುದು ಕರ್ನಾಟಕದ ಖ್ಯಾತ ದಂತ ಗಂಧ ಕೆತ್ತನೆ ಕಲಾವಿದ 'ಹೆಚ್.ವೆಂಕಪ್ಪ' ಎನ್ನುವವರ ಜೀವನ ಮತ್ತು ಕಲಾಸಾಧನೆಯನ್ನು ಪರಿಚಯಿಸುವ ಪುಸ್ತಕ ಹೆಚ್.ವೆಂಕಪ್ಪ ಎಂಬುದು. ಹೆಚ್.ಎಸ್.ಪಾಟಕ್ ಎನ್ನುವವರಿಂದ ರಚಿತವಾದ ಈ ಪುಸ್ತಕವನ್ನು ೧೯೯೪ ರಲ್ಲಿ ಪ್ರಥಮವಾಗಿ ಮುದ್ರಣ ಮಾಡಿದ್ದು ಬೆಂಗಳೂರಿನ ಲಾವಣ್ಯ ಮುದ್ರಣಲಯ. ಈ ಕೃತಿಯ ಮುಖಪುಟ ವಿನ್ಯಾಸಗೊಳಿಸಿರುವವರು ಎನ್.ಮರಿಶಾಮಾಚಾರ್. ಈ ಕಿರು ಪುಸ್ತಕದ ಮುಖಪುಟಕ್ಕೆ ಹೆಚ್. ವೆಂಕಪ್ಪರವರಿಂದಲೇ ಹಸ್ತದಂತದಲ್ಲಿ ರಚನೆಯಾದ ರಾಧಾಕೃಷ್ಣ ಕೃತಿಯ ಛಾಯಾಚಿತ್ರವನ್ನೇ ಮುದ್ರಿಸಿ ಮುಖಪುಟ ರೂಪಿಸಲಾಗಿದೆ.

ಮುಖಪುಟ ಹಾಳೆ ದಟ್ಟ ನೀಲಿಬಣ್ಣದ್ದಿದ್ದು ಅದರಲ್ಲಿ ವಿನ್ಯಾಸಗೊಂಡ ಹಸ್ತ ದಂತ ಕೃತಿಯ ಛಾಯಾಚಿತ್ರವೂ ದಟ್ಟ ಹಿನ್ನೆಲೆಯಲ್ಲಿರುವುದರಿಂದ ಅಲ್ಲಿ ನೆರಳು ಬೆಳಕಿನ ಚಮತ್ಕಾರ ವೇರ್ಪಟ್ಟು ಸೊಬಗೆನಿಸಿದೆ ಮುರಳೀಧಾರಿ (ಕೊಳವೆ ಹಿಡಿದಿರುವ) ಕೃಷ್ಣ ನಡುಬಾಗಿ ರಾಧೆಯನ್ನು ಬೆನ್ನಲ್ಲಿ ಬಾಚಿದ್ದಾನೆ. 'ಕೃಷ್ಣನ ಸುಮನೋಹರ ಸಾನ್ನಿಧ್ಯಕ್ಕೆ ಮನಸೋತಿರುವ ರಾಧೆ ತನ್ನಂತರಂಗವನ್ನೇ ಅವನಿಗೆ ಅರ್ಪಿಸಿರುವೆನೆಂಬ ಭಾವದಿಂದ ನಿರಾಯಾಸವಾಗಿ ತನ್ನೆರಡೂ ಭುಜಗಳನ್ನು ಕೃಷ್ಣನೆಡೆಗೆ ಚಾಚಿದ್ದಾಳೆ. ಕೃಷ್ಣನ ಹೃದಯದರಸಿ ರಾಧೆ ಕೊಡದೊಡನೆ ಯಮುನಾ ನದಿಯಿಂದ ಹಿಂದಿರುಗುತ್ತಿರುವುದೊ ಅಥವಾ ಯಮುನೆಯ ಕಡೆಗೆ ಸಾಗುತ್ತಿರುವಳೊ ಎಂಬಂತಹ ಸನ್ನಿವೇಶವಿದು.'[೪] ಕೃಷ್ಣ ಸುಂದರಿ ಹೂ ಗೊಂಚಲುಗಳ ಗಿಡಗಳ ಹಿಂದಿರುವ ಬಂಡೆಯೊಂದರಲ್ಲಿ ನಿಂತಿದ್ದಾಳೆ.

ಒಟ್ಟಾರೆ ಈ ಕೃತಿಯಲ್ಲಿ ವ್ಯಕ್ತಗೊಂಡ ಹಾವ – ಭಾವ, ಶರೀರದ ನಿಲುವು – ಒಲವುಗಳು ಇವೆಲ್ಲ ಭಾವದುಂಬಿ (ಭಾವಪೂರ್ಣವಾಗಿ) ಕೊರೆಯಲ್ಪಟ್ಟಿವೆ. ಕೇವಲ ಕಾಮ ಪಿಪಾಸೆಯ ಶೃಂಗಾರಭಾವವಾಗಿರದೆ ದಿವ್ಯ ಸುಮನೋಹರ ಮಧುರಭಾವ ಈ ಕೃತಿಯಲ್ಲಿ ಹರಳುಗಟ್ಟಿದೆ. ಮುಗ್ಧ ಪ್ರೇಮಭಾವ ದಿಂದೊಡಗೂಡಿರುವ ಈ ಕೃತಿ ನೈಜಶೈಲಿಯಲ್ಲಿ ರಚಿತವಾದುದು. ದಟ್ಟ ವರ್ಣಗಳ ಹಿನ್ನೆಲೆಯಲ್ಲಿ ಮುಖಪುಟದಲ್ಲಿ ವಿನ್ಯಾಸಗೊಂಡಿರುವುದರಿಂದ ಪುಟ್ಟ ಆಕೃತಿಗಳಾದರೂ ಚೇತೋಹಾರಿ ಅನುಭವವನ್ನು ನೋಡುಗರಿಗೆ ನೀಡುತ್ತಿವೆ. ಮುಖಪುಟದಲ್ಲಿ ಛಾಯಾಚಿತ್ರದ ಎಡಬಲ – ಮೇಲೆ ಕೆಳಗೆ ಏರ್ಪಡಿಸಿರುವ ಅಂತರ (ಅವಕಾಶ) ಸಮಪ್ರಮಾಣದಲ್ಲಿ ಇಲ್ಲದಿರುವುದು ಇಲ್ಲಿನ ಒಂದು ಸಣ್ಣ ನ್ಯೂನ್ಯತೆಯಾಗಿ ಕಂಡು ಬರುತ್ತದೆ. ಉಳಿದಂತೆ ಛಾಯಾಚಿತ್ರದ ಅಂಚುಗಳಿಗೆ ರೂಪಿಸಿದ ಅಚ್ಚ ಬಿಳಿಬಣ್ಣದ ಅಂಚುರೇಖೆಗಳು ಕೃತಿ ಶೀರ್ಷಿಕೆ ಮತ್ತು ಕರ್ನಾಟಕ ಲಲಿತಕಲಾ ಅಕಾಡೆಮಿಯ ಹೆಸರಿನ ಮುದ್ರಣಾಕ್ಷರಗಳ ಬಣ್ಣಗಳು ಈ ಎಲ್ಲ ಅಂಶಗಳು ಇಲ್ಲಿ ಸಮತೋಲನ ಯುಕ್ತವಾಗಿ ಆಯೋಜನೆಗೊಂಡಿವೆ. ಈ ಕೃತಿಯ ಮುಖಪುಟದ ಮೇಲೆ ಮುದ್ರಿಸಿದ ಕೃತಿ ಶೀರ್ಷಿಕೆಯ ಕನ್ನಡ ಅಕ್ಷರಗಳು ಅಚ್ಚಬಿಳಿ ಬಣ್ಣದಲ್ಲಿದ್ದು ಅವುಗಳ ಗಾತ್ರ/ಅಳತೆ ೨೪

---

೦೪. ಸಂದರ್ಶನ : ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ, ದಿ:೨೦೧೫

(Font size) ಮತ್ತು ರೋಮನ್ ಶೈಲಿ ಹಾಗೂ ಇದರ ಆಂಗ್ಲ ಅಕ್ಷರಗಳ ಗಾತ್ರ ೨೬ (Font size) ಮತ್ತು ಅವುಗಳ ಶೈಲಿ ಗೋಥಿಕ್ ಛಾಯಾಚಿತ್ರದ ಕೆಳಗಡೆ ಶುದ್ಧ ಬಿಳಿಬಣ್ಣದಲ್ಲಿ ಮುದ್ರಿಸಿದ ಕರ್ನಾಟಕ ಲಲಿತಕಲಾ ಅಕಾಡೆಮಿ ಎಂಬ ಪದಗಳ ಕನ್ನಡ ಅಕ್ಷರಗಳ ಗಾತ್ರ ೨೦ (Font size) ಮತ್ತು ಅವುಗಳ ಶೈಲಿ ರೋಮನ್ ಅವೆ ಪದಗಳ ಆಂಗ್ಲ ಅಕ್ಷರಗಳ ಗಾತ್ರ ೧೮ (Font size) ಮತ್ತು ಅವುಗಳ ಶೈಲಿ ಗೋಥಿಕ್ ಮಾದರಿಯಲ್ಲಿದೆ.

**೪.೮. ಕಲಾರಾಧನೆ (೧೯೯೬)**

'ಕಲಾರಾಧನೆ' ಹೆಸರಿನ ಪುಸ್ತಕ ಮೂಲತಃ ಡಾ॥ ಕೊಂಡೂರು ವೀರ ರಾಘವಾಚಾರ್ಯರು ತೆಲುಗಿನಲ್ಲಿ ಬರೆದಿದ್ದು, ಕನ್ನಡದಲ್ಲಿ ಸರಿತಾ ಜ್ಞಾನಾನಂದ ಎನ್ನುವವರಿಂದ ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಅನುವಾದಗೊಂಡಿದುದ್ದಾಗಿದೆ. ೧೯೯೬ರಲ್ಲಿ ಬೆಂಗಳೂರಿನ ಲಕ್ಷ್ಮೀ ಮುದ್ರಣಾಲಯದಿಂದ ಪ್ರಥಮ ಮುದ್ರಣಕಂಡ ಕೃತಿಯಿದು. ಮುಖಪುಟದ ತುಂಬೆಲ್ಲ 'ಹೊಯ್ಸಳ ಮಾದರಿ'[೫]ಯಲ್ಲಿ ಅಷ್ಟ ಭುಜಸಂಪನ್ನೆಯಾದ ಭಗವತಿಯ ನಾಟ್ಯ ಭಂಗಿಯ ಕಲಾಶಿಲ್ಪದ ಛಾಯಾಚಿತ್ರದ್ದು, ಮೇಲ್ತುದಿಯಲ್ಲಿ ಮೂಲ ಲೇಖಕರ ಹೆಸರನ್ನು ಹಳದಿ ಬಣ್ಣದಲ್ಲಿ ಕನ್ನಡದಲ್ಲಿ ಮುದ್ರಿಸಲಾಗಿದೆ. ಅದರ ಕೆಳಗಡೆಯೂ ತಿಳಿನೀಲಿ ಬಣ್ಣದ ತೆಳುವಾದ ಸರಳ ರೇಖೆ ಹಾಯ್ದು ಹಾಳೆಯ ಬಲ ಮತ್ತು ಎಡ ತುದಿಗಳನ್ನು ಸಂಧಿಸಿದ್ದು, ಆ ರೇಖೆಯ ಕೆಳಗಡೆ ಅದೇ ತಿಳಿನೀಲಿ ಬಣ್ಣದಲ್ಲಿಯೇ ಕೃತಿಯ ತಲೆಬರಹ/ ಶೀರ್ಷಿಕೆ/ ಹೆಸರು ಬರೆಯಲ್ಪಟ್ಟಿದೆ. ಅಲ್ಲದೆ ಆ ಶೀರ್ಷಿಕಾ ಅಕ್ಷರಗಳ ಕೆಳಗೆ ಕೆಂಪು ಬಣ್ಣದಲ್ಲಿ ಪುಟ್ಟದಾಗಿ / ಚಿಕ್ಕದಾಗಿ ಅನುವಾದಕರ ಹೆಸರನ್ನು ಉಲ್ಲೇಖಿಸಲಾಗಿದೆ. ತಳಭಾಗದಲ್ಲಿ ಅಚ್ಚಹಳದಿ ಬಣ್ಣದಲ್ಲಿ ಕನ್ನಡದಲ್ಲಿ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಎಂದು ನಮೂದಿಸಲಾಗಿದೆ. ಮುಖಪುಟದುದ್ದಕ್ಕೂ ಹರಡಿಕೊಂಡಿರುವ ಶಿಲ್ಪ ಕೆತ್ತನೆಯ ಛಾಯಾಚಿತ್ರದ ಸೊಬಗೇ ಈ ಮುಖಪುಟದ ಆಕರ್ಷಣೀಯ ಅಂಶ. ಯಥೋಚಿತವಾದ ಛಾಯಾಕರಣ, ಸ್ಪಷ್ಟವಾದ ಗ್ರಹಣ, ಆಕರ್ಷಣೀಯ ಕೋನಗಳಿಂದ ಈ ಛಾಯಾಚಿತ್ರ ಮೂಡಿಬಂದಿರುವುದು ಮತ್ತು ಅದನ್ನು ಮುಖಪುಟದಲ್ಲಿ ಸಮುಚಿತ್ತವಾಗಿ/ಸೂಕ್ತವಾಗಿ ಅಳವಡಿಸಿರುವುದು ಈ ಪುಸ್ತಕದ ಮುಖಪುಟಕ್ಕೆ ಸುಂದರತೆ ಪ್ರಾಪ್ತವಾಗಲು ಪ್ರಮುಖಕಾರಣವಾಗಿದೆ.

ಬಿಳಿಯ ಬಣ್ಣದ ಹಿಂಬದಿ ರಕ್ಷಾಪುಟದ ಮೇಲೆ ಅನುವಾದಕರ ಕಪ್ಪು, ಬಿಳಿ ಬಣ್ಣದ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಮುದ್ರಿಸಲಾಗಿದ್ದು, ನೀಲಿಬಣ್ಣದ ಕನ್ನಡ ಅಕ್ಷರಗಳಲ್ಲಿ ಪುಸ್ತಕದ ಶೀರ್ಷಿಕೆ, ಮೂಲ ಲೇಖಕರ ಹೆಸರು, ಅನುವಾದಕ/ಅನುವಾದಕಿಯ ಹೆಸರನ್ನು ಬರೆದಿರುವುದಲ್ಲದೆ. ಅದರ ಕೆಳಗಡೆ ಪುಸ್ತಕದ ಸಂಪಾದಕರ ಬರಹವನ್ನು ಮುದ್ರಿಸಲಾಗಿದೆ. ಇವೆಲ್ಲವೂ ಆ ಪುಟದ ಅವಕಾಶದಲ್ಲಿ ಅಚ್ಚುಕಟ್ಟಾಗಿ, ಸೂಕ್ತ ಅಂಚು ಅವಕಾಶ ಪಡೆದು/ಹೊಂದಿ ಮುದ್ರಿತಗೊಂಡಿರುವುದು ಗಮನಿಸತಕ್ಕ ಅಂಶವಾಗಿದೆ. ಒಟ್ಟಾರೆಯಾಗಿ ಓದುಗರ ಮನಗೆಲ್ಲ ಬಲ್ಲಂತಹ ಮುಖಪುಟ ಮತ್ತು ಹಿಂಬದಿ ರಕ್ಷಾ ಪುಟ ವಿನ್ಯಾಸವು ಇದು ಎಂದು ಅಭಿಪ್ರಾಯಪಡೆಯಬಹುದು.

---

೦೫. ಎನ್. ಮರಿಶಾಮಚಾರ್: ಭಾರತೀಯ ಶಿಲ್ಪಕಲೆ, ಪು ೭೫–೭೮

೪.೯. ಜಕಣಾಚಾರ್ಯ (೧೯೯೬)

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಕಟಣೆಯಾದ 'ಜಕಣಾಚಾರ್ಯ' ಎಂಬ ತಲೆಬರಹದ ಪುಸ್ತಕದ ಮುಖಪುಟ ಬಹುಪಾಲು ಹಳದಿ ಬಣ್ಣದಲ್ಲಿದ್ದು, ಮುಖಪುಟದಲ್ಲಿ ಅಚ್ಚಿಸಲ್ಪಟ್ಟ ನರ್ತಕಿ/ನಾಟ್ಯರಾಣಿಯ ಶಿಲ್ಪದ ಛಾಯಾಚಿತ್ರದ ಒಂದು ಪಾರ್ಶ್ವದಲ್ಲಿ ಒಂದಿಷ್ಟು ಜಾಗದಲ್ಲಿ ಬೂದು ಬಣ್ಣ ಮತ್ತು ಅದರ ಕೆಳಗಡೆ ಅಂದರೆ ತಳಭಾಗದಲ್ಲಿ ಪುಟ್ಟ ಅವಕಾಶದಲ್ಲಿ ಕೆಂಪುಬಣ್ಣ ಹೊಂದಿದೆ. ಮುಖಪುಟದ ಮೇಲೆ ಕೆಳಗೆ ಎಡ–ಬಲ ಪಾರ್ಶ್ವಗಳಲ್ಲಿ ಶಿಸ್ತು ಬದ್ಧವಾದ ಅಂತರಬಿಟ್ಟು, ಶಿಲ್ಪದ ಛಾಯಾಚಿತ್ರ ಮುನ್ನೆಲೆಯಲ್ಲಿ ವೀಕ್ಷಕರ ಕಣ್ಣಿಗೆ ಗೋಚರವಾಗುವಂತೆ ಛಾಯಾಚಿತ್ರದ ನಾಲ್ಕು ಅಂಚುಗಳಿಗೆ ದಪ್ಪನೆಯ ಕರಿಬಣ್ಣದ ಅಂಚುರೇಖೆಯನ್ನು ರೂಪಿಸಿ, ನರ್ತಕಿ/ನಾಟ್ಯರಾಣಿಯ ಶಿಲ್ಪದ ಛಾಯಾಚಿತ್ರವನ್ನು ಇಡಿಯ ಮುಖಪುಟದ ಅವಕಾಶ ಪೂರ್ತಿ ವ್ಯಾಪಿಸುವಂತೆ ಅಳವಡಿಸಿರುವುದರಿಂದ ಸಹೃದಯ ರಸಿಕ ಓದುಗರ ಕಣ್‌ಮನ ತುಂಬ ಸ್ವಾಭಾವಿಕವಾಗಿ ಈ ಮುಖಪುಟದತ್ತ ವಾಲಲು ಅವಕಾಶವಿದೆ.

ಈ ಛಾಯಾಚಿತ್ರದಲ್ಲಿನ ಶಿಲ್ಪ 'ಹೊಯ್ಸಳ ಶೈಲಿ'[೬] ಯಲ್ಲಿರುವಂತಹುದು. ನಾಟ್ಯಾಂಗನೆ ಇಲ್ಲಿ ಪ್ರಧಾನವಾಗಿದ್ದು (ಆಕೆಯ ಶಿಲ್ಪವನ್ನು ಇಲ್ಲಿ ದೊಡ್ಡದಾಗಿ ಕಂಡರಿಸಿರುವುದೇ ಆಕೆಗೆ ನೀಡಿರುವ ಪ್ರಾಧಾನ್ಯತೆಗೆ ಸಾಕ್ಷಿ) ಆಕೆಯ ಅಕ್ಕಪಕ್ಕಗಳಲ್ಲಿ ಮೃದಂಗ ವಾದಕರಿದ್ದಾರೆ. (ಅವರುಗಳನ್ನು ಚಿಕ್ಕ ಆಕಾರದಲ್ಲಿ ತೋರಿಸಲಾಗಿದೆ) ನರ್ತಕಿಯ ತಲೆಯ ಹಿಂದುಗಡೆ ವೃತ್ತಾಕಾರದ ಪ್ರಭಾವಳಿಯಿದ್ದು, ದೇಹಪೂರ್ತಿ ದಿವ್ಯಾಭರಣ ಸಂಪನ್ನೆಯಾಗಿದ್ದು ಆಕೆ ಸಾಮಾನ್ಯ ನರ್ತಕಿಯಲ್ಲಿ ದಿವ್ಯಾಂಗನೆಯವಳು ಎಂಬ ಸಂದೇಶ ಅದರಿಂದ ತೋರ್ಪಡಿಕೆ (ಅಭಿವ್ಯಕ್ತಿ) ಯಾಗಿದೆ. ನಾಟ್ಯ ಭಂಗಿಯಲ್ಲಿರುವ ಆಕೆಯ ದೇಹಭಾಷೆ ಅತ್ಯಂತ ಸಂತುಲನಯುಕ್ತವಾಗಿದ್ದು, ಎಡಕ್ಕೆ ಹಸ್ತ ಮೇಲಕ್ಕೆ ತಿರುಗಿದೆ (ಅಸಹಜವಾಗಿ) ಬಲಗೈ ಹಸ್ತ ಎದೆಯ ಮಟ್ಟದಲ್ಲಿದೆ. ಎರಡೂ ಹಸ್ತ ಬೆರಳುಗಳೂ ಪ್ರಾಯ ಪ್ರಬುದ್ಧ ಸ್ತ್ರೀಯ ಸುಂದರ ಹಸ್ತ ಲಾಲಿತ್ಯವನ್ನು ಹೊಂದಿರುವವಲ್ಲದೆ, ಪಾದಗಳೂ ಸಹ ಸುಕೋಮಲ ಪೂರ್ಣವಾಗಿದ್ದು, ಮೃದಂಗವಾದನಕ್ಕೆ ತಕ್ಕನಾಗಿ ಕುಣಿತದ ಭಂಗಿಯಲ್ಲೇ ಇರುವಂತೆ ಕಂಡರಿಸಲ್ಪಟ್ಟಿವೆ.ಹಸ್ತಗಳು ಮತ್ತು ಪಾದಗಳ ಭಂಗಿಗಳಲ್ಲಿ ಅಡಕಗೊಳಿಸಿರುವ ಚಲನಶೀಲತ್ವ ಮತ್ತು ನಟನಾಬದ್ಧಲಯ ತುಂಬ ಅಮೋಘವಾದುದು ಇಕ್ಕೆಲಗಳಲ್ಲಿ ಕೆತ್ತಲಾಗಿರುವ ಮೃದಂಗವಾದ ಕಿರುಗಳಲ್ಲಿ ಒಬ್ಬ ಮೃದಂಗವಾದಕನು ತನ್ನ ಮುಖವನ್ನು ನರ್ತಕಿಯತ್ತ ತಿರುಗಿಸಿ. ಅವಳ ಭಾವ ಭಂಗಿಯನ್ನೇ ದಿಟ್ಟಿಸುತ್ತಿದ್ದಾನೆ. ಮಗದೊಬ್ಬನ ನೋಟ ಎದುರು ಇದ್ದು ಇಲ್ಲಿ ಸಹ ಶಿಲ್ಪಿ ಆಸಕ್ತಿ ಪೂರ್ಣ ವೀಕ್ಷಣೆಗೆ ಎಡೆಮಾಡಿಕೊಟ್ಟಿದ್ದಾನೆ ಎನ್ನಬಹುದು. ಛಾಯಾಚಿತ್ರದ ಅಂಚುಗಳಿಗೆ ದಪ್ಪನೆಯ ಕಪ್ಪುಬಣ್ಣದ ಅಂಚುರೇಖೆಗಳು ನಿರೂಪಿಸಲ್ಪಟ್ಟಿರುವುದರಿಂದ ಛಾಯಾಚಿತ್ರಕ್ಕೊಂದು ಶಿಸ್ತು ಮತ್ತು ಮೆರುಗು ಪ್ರಾಪ್ತವಾಗಿದೆ. ಮುಖಪುಟದ ಅಗ್ರಭಾಗದಲ್ಲಿ ಬೂದು ಬಣ್ಣದಲ್ಲಿ ಪುಸ್ತಕದ ತಲೆಬರಹ ಬರೆಯಲಾಗಿದೆ. ಛಾಯಾಚಿತ್ರದ ಕೆಳಗಡೆ ಮೂಲ ಲೇಖಕರ ಹೆಸರು, ಸಂಗ್ರಹಕಾರರ ಹೆಸರುಗಳು ಕಪ್ಪುಬಣ್ಣದಲ್ಲಿದ್ದು, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಹೆಸರು ಬಿಳಿಯ ಬಣ್ಣದಲ್ಲಿದೆ. ಏಕವರ್ಣದಲ್ಲಿರುವ ಮತ್ತು ಇಡಿಯ

೧೬. ಎಸ್. ಮರಿಶಾಮಚಾರ್: ಭಾರತೀಯ ಶಿಲ್ಪಕಲೆ, ಪು ೭೫–೭೮

ಮುಖಪುಟವನ್ನು ವ್ಯಾಪಿಸಿರುವ ಈ ಛಾಯಾಚಿತ್ರದಲ್ಲಿರುವ ಶಿಲ್ಪಾಕೃತಿಗಳಲ್ಲಿ ಸಹ ಅಲಂಕರಣಯುಕ್ತವಾಗಿ ಸುಮನೋಹರವಾಗಿರುವುದರಿಂದ ಓದುಗರ ಗಮನವನ್ನು ಸೆಳೆಯಬಲ್ಲುದಾಗಿದೆ.

ಹಿಂಬದಿ ರಕ್ಷಾಪುಟ ಬಿಳಿಯ ಬಣ್ಣದ್ದಾಗಿದ್ದು, ಅದರ ಮೇಲ್ಗಡೆಯ ಪಾರ್ಶ್ವದಲ್ಲಿ ಈ ಕೃತಿಯ ಮೂಲ ಲೇಖಕರ ಕಪ್ಪು ಬಿಳುಪಿನ ಛಾಯಾಚಿತ್ರವಿದ್ದು, ಅದರ ಕೆಳಗಡೆ ನೀಲಿಬಣ್ಣದ ಅಕ್ಷರಗಳಲ್ಲಿ ಸಂಪಾದಕರ ನುಡಿ ಮುದ್ರಣಗೊಂಡಿದೆ. ಈ ಪುಸ್ತಕದ ಮೂಲ ಲೇಖಕರು ಸಿ.ಕೆ.ನಾಗರಾಜರಾವ್ ಇದನ್ನು ಸಂಗ್ರಹ ಮಾಡಿದವರು ಸಂತಜ್ಞಾನಾನಂದ, ೧೯೯೬ರಲ್ಲಿ ಲಕ್ಷ್ಮಿ ಮುದ್ರಣಾಲಯದಿಂದ ಮೊದಲ ಬಾರಿಗೆ ಪ್ರಕಟವಾಗಿರುವ ಕೃತಿಯಿದು.

### ೪.೧೦. ಹೊಯ್ಸಳ ಶಿಲ್ಪಕಲೆ (ಶಿಲ್ಪ ಸಂಪುಟ--೧) (೧೯೯೭)

ಹೊಯ್ಸಳ ಶಿಲ್ಪಕಲೆ ಶಿಲ್ಪಕಲಾ ಸಂಪುಟ–೧ ಇದು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ೧೯೯೭ರಲ್ಲಿ ಲಕ್ಷ್ಮೀ ಮುದ್ರಣಾಲಯದ ಮುಖಾಂತರ ಪ್ರಕಟಗೊಂಡ ಕೃತಿ. ಇದನ್ನು ರಚಿಸಿರುವವರು ಎಸ್.ಮರಿಶಾಮಾಚಾರ್‌ರವರು. ಹೊಯ್ಸಳಶೈಲಿಯ ದೇವಾಲಯವೊಂದರ ಹೊರಮೈ ಗೋಡೆಯ ಪಾರ್ಶ್ವವೊಂದರ ಛಾಯಾಚಿತ್ರ (ಕಪ್ಪು–ಬಿಳಿ ಛಾಯಾಚಿತ್ರ)ವನ್ನು ಅಚ್ಚಿಸಲಾಗಿದೆ ತುಂಬ ಸರಳವಾದ ವಿನ್ಯಾಸ ಇಲ್ಲಿಯ ಮುಖಪುಟದ್ದಾಗಿದೆ ಮೇಲ್ಗಡೆ ಶಿಸ್ತಾಗಿ ಕತ್ತರಿಸಿ ಅಂಟಿಸಿದ ಆಯತಾಕಾರದ ಕಾಗದ ತುಂಡಿನಲ್ಲಿ ಪುಸ್ತಕ ಶೀರ್ಷಿಕೆ ಬರೆಯಲ್ಪಟ್ಟಿದೆ. (ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ) ಕೆಳಗಡೆಯೂ ಸಹ ಅದೇ ರೀತಿಯಲ್ಲಿ ಅಂಟಿಸಿದ ಪುಟ್ಟ ಕಾಗದದ ತುಣುಕೊಂದರಲ್ಲಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಎಂದು ಬರೆದು ಮುದ್ರಿಸಿ ಅಂಟಿಸಲಾಗಿದೆ. ಒಟ್ಟಿನಲ್ಲಿ ಈ ಕೃತಿಯ ಮುಖಪುಟದಲ್ಲಿ ಹೇಳಿಕೊಳ್ಳುವ ಯಾವ ಕಲಾತ್ಮಕ ಅಂಶವೂ ಕಂಡು ಬರುವದಿಲ್ಲ.

### ೪.೧೧. ಶಿಲ್ಪಬ್ರಹ್ಮ ಸಿ. ಪರಮೇಶ್ವರಾಚಾರ್ಯ (೧೯೯೮)

'ಶಿಲ್ಪಬ್ರಹ್ಮ ಪಿ. ಪರಮೇಶ್ವರಾಚಾರ್ಯ' ಎಂಬ ಪುಸ್ತಕ ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಡಾ.ಅ.ಲ. ನರಸಿಂಹನ್ ಅವರಿಂದ ಬರಹಗೊಂಡಿದುದು. ಇದನ್ನು ೧೯೯೮ರಲ್ಲಿ ಮೊದಲ ಬಾರಿಗೆ ಮುದ್ರಿಸಿದವರು ಬೆಂಗಳೂರಿನ ಲಕ್ಷ್ಮಿ ಮುದ್ರಣಾಲಯದವರು. ಈ ಪುಸ್ತಕದ ಮುಖಪುಟಚಿತ್ರವಿನ್ಯಾಸ ಕೆ.ಕೆ.ಮಕಾಳಿಯವರಿಂದ ಆಗಿದೆ. ನೀಲಿಬಣ್ಣದ ಮುಖಪುಟದ ಮಧ್ಯದಲ್ಲಿ ಶಿಲ್ಪಿ ಸಿ. ಪರಮೇಶ್ವರ ಆಚಾರ್ಯರವರಿಂದಲೇ ರಚಿತವಾದ (ಕಾಷ್ಠ ಮಾಧ್ಯಮದಲ್ಲಿ) ಧನ್ವಂತರಿ ಶಿಲ್ಪದ ವರ್ಣಛಾಯಾಚಿತ್ರವನ್ನು ಅಚ್ಚಿಸುವುದರ ಮೂಲಕ ಮುಖಪುಟ ವಿನ್ಯಾಸ ಮಾಡಲಾಗಿದೆ.

ದೇವವೈದ್ಯ ಧನ್ವಂತರಿ ಕಮಲಪುಷ್ಪದ ಮೇಲೆ ಪದ್ಮಾಸನ ಹಾಕಿ ಕುಳಿತಿರುವ ನಾರಾಯಣನ ಕೈಯಲ್ಲಿ ತನ್ನ ಎರಡೂ ಕೈಜೋಡಿಸಿ ನಾರಾಯಣ ನಾಭಿಯ ಬಳಿ ಪದ್ಮಾಸನ ಹಾಕಿಯೇ ಕುಳಿತಿದ್ದಾನೆ. ಬೃಹದಾಕಾರದ ನಾರಾಯಣನ ಕೈಗಳಲ್ಲಿ ಚಿಕ್ಕದಾದ ಮತ್ತು ಮುದ್ದಾದ ಧನ್ವಂತರಿಯ ಶಿಲ್ಪ ರೂಪಿಸಲಾಗಿದೆ.

ಇಲ್ಲಿನ ಧನ್ವಂತರಿಯ ಶಿಲ್ಪ ಊರ್ಧ್ವಮುಖ ತ್ರಿಕೋನಾಕೃತಿಯಲ್ಲಿ ಇದೆ. ನಾರಾಯಣನ ವಿಗ್ರಹದ ಮಡಿಚಿದ ಬಲಮಂಡಿ ಮತ್ತು ಎಡಮಂಡಿಗಳ ಹೊರಭಾಗ ಹಾಗೂ ಕಿರೀಟದ ತುದಿ ಈ ಮೂರು ಸ್ಥಳಗಳಲ್ಲಿ ಮೂರು ಬಿಂಧುಗಳನ್ನು ಇರಿಸಿ, ಅವುಗಳನ್ನು ಪರಸ್ಪರ ಗೆರೆ ಎಳೆದು ಜೋಡಿಸಿದರೆ ಮೇಲ್ಮುಖ ತ್ರಿಕೋನಾಕಾರ ರೂಪಿತವಾಗುವುದು ಇಲ್ಲಿನ ಈ ಶಿಲ್ಪದ ವಿಶೇಷತೆಯಾಗಿದೆ.

ಇಲ್ಲಿ ಅಧೋಮುಖ (ಕೆಳಮುಖ) ತ್ರಿಕೋನವನ್ನು ಗುರ್ತಿಸಬಹುದಾಗಿದೆ. ಹೇಗೆಂದರೆ ನಾರಾಯಣನ ಎತ್ತಿದ ಕೈಗಳಲ್ಲಿರುವ ಶಂಖ ಚಕ್ರಗಳನ್ನು ಬಿಂಧುಗಳಾಗಿಸಿ, ಕೆಳಗೆ ಕಮಲಪುಷ್ಪದ ಮಧ್ಯದಲ್ಲಿರುವ ವಸ್ತ್ರದ ನೆರಿಗೆಯನ್ನು ಮೂರನೆಯ ಬಿಂಧುವಾಗಿಸಿ ಅವುಗಳನ್ನು ಪರಸ್ಪರ ಜೋಡಿಸಿದರೆ ಅದರಿಂದ ಕೆಳಮುಖವಾದ ತ್ರಿಕೋನ ರಚಿತವಾಗುತ್ತದೆ. ಈ ರೀತಿಯಾಗಿ ಒಂದೇ ಶಿಲ್ಪದ ಸಂಯೋಜನೆಯಲ್ಲಿ ಮೇಲೆ ಮತ್ತು ಕೆಳಮುಖ ತ್ರಿಭುಜಾಕೃತಿ ಆಯೋಜನೆಗೊಂಡಿರುವುದೂ ಸಹ ಶಿಲ್ಪಿಯ ನೈಪುಣ್ಯ ವಿಶೇಷಕ್ಕೆ ಸಾಕ್ಷಿ ನಾರಾಯಣನ ಮುಖದಲ್ಲಿ ಕಂಡರಿಸಿದ ಪ್ರಸನ್ನತೆ, ಧ್ಯಾನೋನ್ಮೀಲಿತ ನೇತ್ರಗಳು ವಿವರಪೂರ್ಣ ಕೆತ್ತನೆಯಲ್ಲಿ ಸಾಧಿಸಿದ ಅಂಗಾಂಗಗಳ ಸಮ್ಯಕ್ ಪ್ರಮಾಣ 'ಭಾರತೀಯ ಶಿಲ್ಪಶಾಸ್ತ್ರ ತಾಳಮಾನ'[೭] ರೀತ್ಯಾ ಮತ್ತು ಸಮತೋಲನ, ಅತಿಯೆನಿಸದ, ಆದರೆ ಅಗತ್ಯತೆಗೆ ಕೊರತೆ ಎನಿಸದ ಆಭರಣ ತೋರ್ಪಡಿಕೆ, ಕಿರೀಟ ವಿನ್ಯಾಸ ಇವೆಲ್ಲ ಅಂಶಗಳಿಂದ ಈ ಶಿಲ್ಪ ಬಹುತೇಕ ಬಾದಾಮಿ ಚಾಲುಕ್ಯ ಶೈಲಿಗೆ ತೀರ ಹತ್ತಿರವಾದಂತೆನಿಸುತ್ತದೆ. ತಿಳಿ ನೀಲಿಬಣ್ಣದ ಮುಖಪುಟ ಹಾಳೆಯ ಮೇಲೆ ಮೇಲ್ತುದಿಯಲ್ಲಿ ಬಿಳಿ ಹಳದಿಬಣ್ಣದಲ್ಲಿ ಪುಸ್ತಕದ ತಲೆಬರಹ ಮುದ್ರಿತವಾಗಿದ್ದರೆ, ಅದರ ಕೆಳಗಡೆ ಕಪ್ಪು ಬಣ್ಣದ ತೆಳುವಾದ ಸರಳರೇಖೆ ಎಳೆಯಲ್ಪಟ್ಟಿದೆ ತಳಭಾಗದಲ್ಲಿ ತಿಳಿಗುಲಾಬಿ ಬಣ್ಣದ ವೃತ್ತದ ಆವರಣದಲ್ಲಿ ನೀಲಿ ಬಣ್ಣದಲ್ಲಿ ಮತ್ತು ಕಪ್ಪು ರೇಖಾಕೃತಿಯಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ಮುದ್ರಿತವಾಗಿದ್ದು, ಅಲ್ಲೇ ಕೆಳಗಡೆ ತುಂಬ ಚಿಕ್ಕದಾಗಿ ಬಿಳಿಬಣ್ಣದಲ್ಲಿ ಶಿಲ್ಪಕಲಾ ಅಕಾಡೆಮಿಯ ಪದನಾಮವೂ ಮುದ್ರಿತವಾಗಿದೆ. ಅದರ ಎರಡೂ ಬದಿಗಳಲ್ಲಿ ಮೇಲೆ ತಲೆಬರಹದ ಅಡಿಯಲ್ಲಿ ಹಾಯ್ದು ಹೋದಂತಹ ಪ್ರಮಾಣದ ಕಪ್ಪು ಬಣ್ಣದ ಸರಳರೇಖೆ ಎಳೆಯಲ್ಪಟ್ಟಿದೆ.

ಈ ಮೇಲೆ ವಿವರಿಸಿದ ಶಿಲ್ಪದ ಛಾಯಾಚಿತ್ರ ಮುಖಪುಟ ಹಾಳೆಯ ಇಕ್ಕೆಲಗಳಲ್ಲಿ ಸಮಾನ ಅಂತರ ಬಿಟ್ಟು ಮತ್ತು ಹಾಳೆಯ ಕೇಂದ್ರಭಾಗದಲ್ಲಿ ಒಪ್ಪವಾಗಿ ಕಾಣುವಂತೆ ಮುದ್ರಿಸಲಾಗಿದ್ದು, ಅದರ ಸುತ್ತ ನಿರ್ದಿಷ್ಟ ಅಂತರದಲ್ಲಿ ತೆಳುವಾಗಿ ನೇರವಾಗಿ ಎಳೆದ ಬಿಳಿ ಬಣ್ಣದ ಅಂಚುರೇಖೆಗಳು ಛಾಯಾಚಿತ್ರಕ್ಕೆ ವಿಶೇಷ ಮೆರುಗು ತಂದಿವೆ ಎನ್ನಬಹುದು. ಹಿಂಬದಿ ರಕ್ಷಾಪುಟ ಅಚ್ಚ ಬಿಳಿಯ ಬಣ್ಣದ ಖಾಲಿ ಹಾಳೆಯಾಗಿದ್ದು, ವೀಕ್ಷಕರ ಕಣ್ಣುಗಳಿಗೆ ಶುಭ್ರವೆನಿಸುವ ಭಾವವನ್ನು ನೀಡುತ್ತಿರುವುದೂ ಸಹ ಈ ಪುಸ್ತಕದ ವಿನ್ಯಾಸಗಾರಿಕೆಯ ವಿಶಿಷ್ಟತೆ ಎನ್ನಬಹುದು.

**೪.೧೨. ಉತ್ತುಂಗ ಕುಶಲಶಿಲ್ಪಿ ದೇವಲಕುಂದ ವಾದಿರಾಜ್ (೧೯೯೮)**

೧೯೯೮ರಲ್ಲಿ ಕನಕಾಮೂರ್ತಿಯವರಿಂದ ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ರಚಿತವಾದ

೦೭. ಡಾ.ಅಂಬಳಿಕೆ ಹಿರಿಯಣ್ಣ: ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಪು-೮೦೧-೮೦೯

ಕೃತಿ 'ಉತ್ತುಂಗ ಕುಶಲಶಿಲ್ಪಿ ದೇವಲಕುಂದ ವಾದಿರಾಜ್' ಎಂಬುದು ಈ ಕೃತಿಯ ಮುಖಪುಟ ವಿನ್ಯಾಸಗೊಳಿಸಿದವರು ಎಂ. ಶ್ರೀಧರ ಮೂರ್ತಿಯವರು. ದೇವಲಕುಂದ ವಾದಿರಾಜರಿಂದ ನಿರ್ಮಿತವಾದ ಟೆರ್ರಾಕೋಟಾ ಮಾಧ್ಯಮದ ಸ್ತ್ರೀಯೊರ್ವಳ ತುಸು ಓರೆಯಾಗಿ ತುಸು ಅಧೋಮುಖ (ಕೆಳಮುಖ) ವಾಗಿರುವ ಭಾವಶಿಲ್ಪ/ ಮುಖಶಿಲ್ಪದ ಛಾಯಾಚಿತ್ರವನ್ನೇ ಬಿಳಿಯ ಅಂಚುರೇಖೆಯೊಂದಿಗೆ ವಿನ್ಯಾಸಗೊಳಿಸಲಾಗಿದೆ.

ತಲೆಯ ಮೇಲೊಂದಿಷ್ಟು ಕೊರಳಲ್ಲೊಂದಿಷ್ಟು ಸರಳ ಅಲಂಕರಣೆಯ ಮಾದರಿ ಬಿಟ್ಟರೆ, ಇದು ನಿರಾಭರಣ ಸುಂದರಿಯ ಮುಖ ಭಾವವೇ ಸರಿ ದಪ್ಪತುಟಿಯಂಚಿನಲ್ಲಿ ಹೊಮ್ಮಿಸಿದ ಮುಗುಳ್ನಗೆ, ಧ್ಯಾನಮಗ್ನಕಣ್ಣುಗಳು ನೇರನಾಸಿಕ, ದುಂಡುಮುಖ ಒಪ್ಪವಾಗಿ ತೀಡಿದ ಹುಬ್ಬುಗಳು ಇವೆಲ್ಲವೂ ಶಿಲ್ಪಿಯ ಕಲಾನೈಪುಣ್ಯಕ್ಕೆ ಉತ್ತಮ ಸಾಕ್ಷೀಭೂತ ಅಂಶಗಳು ತಿಳಿನೀಲಿ ಬಣ್ಣದ ಹಿನ್ನೆಲೆಯಲ್ಲಿನ ಮುಖಪುಟದಲ್ಲಿ ಎದ್ದು ಕಾಣುವ ಈ ಛಾಯಾಚಿತ್ರ ಅದರ ಮುಖಭಾವ ಮತ್ತು ಭಾವ-ಭಂಗಿಗಳ ಮೂರ್ತಿ ಎಲ್ಲರನ್ನು ಅಲ್ಲದಿದ್ದರೂ ಪ್ರಜ್ಞಾವಂತ ರಸಿಕ ಹೃದಯಗಳ ಮನವನ್ನು ತಟ್ಟುವುದಂತೂ ಸ್ಪಷ್ಟ ಎನ್ನಬಹುದು. ಉಳಿದಂತೆ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಕಟಿಸಿದ ಈ ಮಾದರಿಯ ಉಳಿದ ಪುಸ್ತಕಗಳಂತೆ ಈ ಮುಖಪುಟದಲ್ಲಿಯೂ ಸಹ ಕೃತಿ ಶೀರ್ಷಿಕೆ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಲಾಂಛನ ಮತ್ತು ಪದನಾಮಗಳನ್ನು ಮುದ್ರಿಸಲಾಗಿದೆ ಅಕಾಡೆಮಿ ರೂಪಿಸಿಕೊಂಡ ಸಿದ್ಧಮಾದರಿಯ ಮುಖಪುಟ ವಿನ್ಯಾಸವೇ ಇಲ್ಲೂ ಸಹ ಕಂಡು ಬರುತ್ತಿದೆ ಎನ್ನಬಹುದು.

**೪.೧೩. ಸಾಥ್ವಿಕ ಶಿಲ್ಪಿ ನಾಗೇಂದ್ರ ಸ್ಥಪತಿ (೧೯೯೯)**

ಶಿಲ್ಪ ಕಲಾವಿದರ ಮಾಲೆ-೩ ಅಡಿಯಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಯಿಂದ ಹೊರ ತರಲಾಗಿರುವ 'ಸಾಥ್ವಿಕ ಶಿಲ್ಪಿ ನಾಗೇಂದ್ರ ಸ್ಥಪತಿ' ಎಂಬ ಕಿರುಪುಸ್ತಕದ ಲೇಖಕರು ಎಲ್.ಶಿವಲಿಂಗಪ್ಪನವರು. ಇದು ೧೯೯೯ರಲ್ಲಿ ಪ್ರಗತಿ ಪ್ರಿಂಟ್ ಕಮ್ಯೂನಿಕೇಷನ್ಸ್ ಇವರಿಂದ ಪ್ರಥಮ ಮುದ್ರಣಗೊಂಡಿದುದಾಗಿದೆ. ಮುಖಪುಟದ ಸುತ್ತಲ್ಲ ಸೂಕ್ತ ಅಳತೆಯ ಅಂತರ ಬಿಟ್ಟು ಮಧ್ಯದಲ್ಲಿ ಬಿಳಿ ಮತ್ತು ಕಪ್ಪು ಅಂಚು ರೇಖಾ ವಿನ್ಯಾಸದೊಂದಿಗೆ ಶಿಲ್ಪಿ ನಾಗೇಂದ್ರ ಸ್ಥಪತಿಗಳಿಂದ ರಚಿತವಾದ ದೇವಿಯ ಶಿಲಾಶಿಲ್ಪವೊಂದರ ಛಾಯಾಚಿತ್ರವನ್ನು ಮುದ್ರಿಸಿ, ಈ ಪುಸ್ತಕದ ಮುಖಪುಟ ವಿನ್ಯಾಸಗೊಳಿಸಲಾಗಿದೆ.

ಇಲ್ಲಿ ಅಚ್ಚಿಸಿರುವ ಛಾಯಾಚಿತ್ರದಲ್ಲಿರುವ ದೇವಿ ಎತ್ತರವಾದ ಪೀಠದ ಮೇಲೆ ಎಡಗಾಲನ್ನು ಪೀಠದ ಮೇಲೆ ಇರಿಸಿಕೊಂಡು, ಬಲಗಾಲನ್ನು ಇಳಿಬಿಟ್ಟಿದ್ದಾಳೆ. ಎಡಗೈ ವರದ ಮುದ್ರೆಯಲ್ಲಿದ್ದು. ಬಲಗೈಯಲ್ಲಿ ಕಮಲದ ಮೊಗ್ಗು ಹಿಡಿದಿರುತ್ತಾಳೆ. ಈಕೆ ದ್ವಿಭುಜೆಯಾಗಿದ್ದು ಸರ್ವಾಭರಣ ಭೂಷಿತೆಯಾಗಿದ್ದಾಳೆ. ಮೂರ್ತಿಯ ಹಿಂದುಗಡೆಯ ಸಿಂಹತೋರಣ ಕೆತ್ತನೆ ನವಿರಾಗಿ ಅಲಂಕರಣಭರಿತವಾಗಿ ಅಭಿವ್ಯಕ್ತಗೊಂಡಿದ್ದು, 'ಹೊಯ್ಸಳ ಶೈಲಿ'[೧೮]ಯನ್ನು ಜ್ಞಾಪಿಸುತ್ತದೆ/ಹೋಲುತ್ತದೆ. ಮಂದವರ್ಣದ ಮುಖಪುಟ ಹಾಳೆಯ ಮೇಲೆ ಈ ಛಾಯಾಚಿತ್ರ

೧೮. ಎಸ್. ಮರಿಶಾಮಚಾರ್: ಭಾರತೀಯ ಶಿಲ್ಪಕಲೆ, ಪು ೭೫-೭೮

ಅಚ್ಚಾಗಿದ್ದು ಅದಕ್ಕೆ ಕಪ್ಪು ಅಂಚು ರೇಖೆ ನೀಡಿರುವದು ಆ ಚಿತ್ರವನ್ನು ಮುನ್ನೆಲೆಗೆ ತಂದಿದ್ದು ಮುಖಪುಟ ಮತ್ತು ಹಿಂಬದಿಪುಟ ತಿಳಿಗುಲಾಬಿ/ಶೇಡಿಮಣ್ಣಿನ ಬಣ್ಣದಲ್ಲಿದ್ದು, ಮುಖಪುಟ ಮೇಲ್ತುದಿಯಲ್ಲಿ ಕೆಂಪು ಬಣ್ಣದಲ್ಲಿ ಕನ್ನಡದಲ್ಲಿ ಪುಸ್ತಕದ ತಲೆಬರಹ/ಶೀರ್ಷಿಕೆ ಹೆಸರು ಮುದ್ರಣವಾಗಿದೆ. ಅದರ ಕೆಳಗಡೆಯೇ ಕನ್ನಡ ಅಕ್ಷರಗಳಲ್ಲಿಯೇ ಈ ಪುಸ್ತಕದ ಲೇಖಕರ ಹೆಸರನ್ನು ಮುದ್ರಿಸಲಾಗಿದೆ. ಛಾಯಾಚಿತ್ರದ ಅದರ ಪಕ್ಕದಲ್ಲೇ ಕಪ್ಪು ಬಣ್ಣದ ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪದನಾಮ ಮುದ್ರಿತವಾಗಿದೆ ಹಿಂಬದಿಪುಟ ಅವಕಾಶ ಖಾಲಿ ಇದೆ. ತಲೆಬರಹ/ಶೀರ್ಷಿಕೆ ಅಕ್ಷರಗಳು ಕ್ಯಾಲಿಗ್ರಾಫಿ ಶೈಲಿಯದಾಗಿವೆ. ಒಟ್ಟಿನಲ್ಲಿ ಇದೊಂದು ಶಿಸ್ತಾದ ವಿನ್ಯಾಸದೊಂದಿಗೆ ರೂಪುಗೊಂಡಿರುವ ಮುಖಪುಟ ಎನ್ನಬಹುದು.

**೪.೧೪. ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ದಲಿಂಗ ಸ್ವಾಮಿಗಳು (೧೯೯೯)**

ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಎನ್. ಮರಿಶಾಮಾಚಾರ್‌ರವರಿಂದ ಸಂಪಾದಿತವಾದ ಕೃತಿ 'ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು' ಎಂಬುದು. ಇದು ಬೆಂಗಳೂರಿನ ಲಕ್ಷ್ಮೀ ಮುದ್ರಣಾಲಯದಿಂದ ೧೯೯೯ರಲ್ಲಿ ಮೊದಲ ಮುದ್ರಣ ಕಂಡಿದೆ. ಅಲೆ ಅಲೆಗಳೋಪಾದಿಯಲ್ಲೂ ಕಂದು ಬಣ್ಣದ ಏರಳಿತ ಹೊಂದಿದ ಮೈವಳಿಕೆ ಇಂಪ್ರೆಷನ್ (ಪರಿಣಾಮ) ಹೊಂದಿದ ಮುಖಪುಟ ಹಾಳೆಯ ಮೇಲೆ ಅದರ ಮೇಲ್ಭಾಗ-ಕೆಳಭಾಗ ಎಡ-ಬಲ ಪಾರ್ಶ್ವಗಳಲ್ಲಿ ಸಮನಾದ ಅಂತರ ಬಿಟ್ಟು ಮಧ್ಯದಲ್ಲಿ ಎದ್ದು ಕಾಣುವಂತೆ ಶಿಲ್ಪಿ ಶ್ರೀ ಸಿದ್ಧಲಿಂಗ ಸ್ವಾಮಿಗಳಿಂದ ನಿರ್ಮಿತವಾದ ದೇವರ ಶಿಲ್ಪವೊಂದರ ಛಾಯಾಚಿತ್ರವನ್ನು ಅದರ ಸುತ್ತೆಲ್ಲ ಅಂಚುಗಳಲ್ಲಿ ಮತ್ತು ಛಾಯಾಚಿತ್ರದ ಹಿನ್ನೆಲೆಯಲ್ಲಿ ಕಲ್ಲಿನ ಮೈವಳಿಕೆಯ ಪರಿಣಾಮ ನೀಡಿ ಮುದ್ರಿಸಲಾಗಿದೆ. ಕಂಪ್ಯೂಟರ್ ನೆರವು ಪಡೆದು ರೂಪಿಸಿದ ಮುಖಪುಟವಿನ್ಯಾಸ ಇದು ಎಂದು ಇಲ್ಲಿ ತೋರ್ಪಡಿಸಿರುವ ಮೈವಳಿಕೆ ವಿನ್ಯಾಸಗಳು, ವರ್ಣ ಮಾದರಿಗಳೇ ನಿರೂಪಿಸುತ್ತವೆ.

ಉತ್ತಮವಾಗಿ ತೆಗೆಯಲಾದ ಛಾಯಾಚಿತ್ರ ಪ್ರತಿಯನ್ನೆ ಇಲ್ಲಿ ಒಂದಿಷ್ಟು ಮೆರುಗು ನೀಡಿ ಬಳಸಿಕೊಳ್ಳಲಾಗಿದೆ. ಮುಖಪುಟದ ಹಾಳೆಯ ಮೇಲೆ ಕಂಪ್ಯೂಟರ್ ತಂತ್ರಜ್ಞಾನ ಬಳಸಿಕೊಂಡು ಸೃಷ್ಟಿಸಿರುವ ಕಂದುಬಣ್ಣದ ಮೈವಳಿಕೆಗಳೇ ಈ ಮುಖಪುಟದ ಆಕರ್ಷಣೆಗೆ ಕಾರಣವಾದ ಪ್ರಧಾನ ಅಂಶ ಎನ್ನಬಹುದು. ಅಚ್ಚಹಳದಿಬಣ್ಣದ ಹಿನ್ನೆಲೆಯಲ್ಲಿ ಕಡು ಕಂದುಬಣ್ಣದಲ್ಲಿ ಮುಖಪುಟದ ಮೇಲ್ತುದಿಯಲ್ಲಿ ಕನ್ನಡದಲ್ಲಿ ಬರೆದ ತಲೆಬರಹ ಮತ್ತು ಅದರ ಕೆಳಗಡೆ ನೀಲಿಬಣ್ಣದ ಹಿನ್ನೆಲೆಯಲ್ಲಿ ಅಚ್ಚಬಿಳಿಬಣ್ಣದಲ್ಲಿ ಕನ್ನಡದಲ್ಲಿ ನಮೂದಿಸಿದ ಕೃತಿಯ ಲೇಖಕರ ಹೆಸರೂ (ಇವೂ ಸಹ ಕಂಪ್ಯೂಟರ್ ತಂತ್ರ ಜ್ಞಾನತೆಯ ಬಳಕೆಯಿಂದಲೇ ರೂಪಿಸಿದವುಗಳು) ಸಹ ಕಣ್ಣಿಗೆ ತತ್‌ಕ್ಷಣ ಕಾಣುವಂತಿವೆ. ಅವುಗಳೂ ಸಹ ಇಲ್ಲಿ ಆಕರ್ಷಕ ಮಾದರಿಗಳೇ ಆಗಿವೆ ಎನ್ನಬಹುದು ಛಾಯಾಚಿತ್ರದ ಕೆಳಗೆ ತಿಳಿಗಂದು ಬಣ್ಣದ ಅಂಚು ರೇಖೆಹೊಂದಿದ ಕಂದು ಹಳದಿ ಬಣ್ಣದ ಪುಟ್ಟದಾದ ಆವರಣದಲ್ಲಿ ನೀಲಿಬಣ್ಣದಲ್ಲಿ ಅಚ್ಚಹಳದಿ ಬಣ್ಣದ ಚಿಕ್ಕ ಚಚ್ಚೌಕ ಆವರಣದಲ್ಲಿ ನೀಲಿ ಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ಮುದ್ರಿಸಿದ್ದು ಅದರ ಪಕ್ಕದಲ್ಲೇ ಅದೇ ನೀಲಿ ಬಣ್ಣದಲ್ಲಿಯೇ ದೊಡ್ಡದಾಗಿ (ಆ ಆವರಣದ ಅವಕಾಶದಲ್ಲೆಲ್ಲ ಭರ್ತಿಯಾಗುವಂತೆ) 'ಕರ್ನಾಟಕ ಶಿಲ್ಪಕಲಾ

ಅಕಾಡೆಮಿ' ಎಂದು ನಮೂದಿಸಲಾಗಿದೆ. ಹಿಂಬದಿಯ ರಕ್ಷಾಪುಟದ ಅಂಚುಗಳೂ ಸಹ ಕಂಪ್ಯೂಟರ್ ನೆರವಿನಿಂದ ರೂಪಿಸಲ್ಪಟ್ಟ ಕಂದುಬಣ್ಣದ ಏರಿಳಿತವುಳ್ಳ ಅಲೆಗಳ ಮಾದರಿಯ ಮೈವಳಿಕೆ ಪರಿಣಾಮ ಹೊಂದಿದ್ದು, ಮಧ್ಯದ ಅವಕಾಶದಲ್ಲಿ ಈ ಕೃತಿಗೆ ಲೇಖನ ಒದಗಿಸಿದ ಲೇಖಕರುಗಳ ಪಾಸ್‌ಪೋರ್ಟ್ ಅಳತೆಯ ವರ್ಣಭಾವಚಿತ್ರಗಳನ್ನು ಮತ್ತು ಅವರುಗಳ ಕಿರು ಪರಿಚಯಾವಳಿಯನ್ನು ನೀಡಲಾಗಿದೆ. ಒಟ್ಟಾರೆಯಾಗಿ ಗಮನಸೆಳೆಯಬಲ್ಲ ಮುಖಪುಟವಿದು.

**೪.೧೫. ಶಿಲ್ಪಕಲಾ ಆರಾಧಕರು (೨೦೦೦)**

ಎನ್. ಮರಿಶಾಮಾಚಾರ್ ಅವರ ಸಂಪಾದಕತ್ವದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಸಿದ್ಧಗೊಂಡಿರುವ ಪುಸ್ತಕ 'ಶಿಲ್ಪಕಲಾ ಆರಾಧಕರು' ಎಂಬುದು. ತಿಳಿನೀಲಿ ಮತ್ತು ದಟ್ಟನೀಲಿ ವರ್ಣಯುಕ್ತ ಮುಖಪುಟ ಹಾಳೆಯ ಮೇಲೆ ಬೇರೆ ಬೇರೆ ಶಿಲ್ಪಿಗಳಿಂದ ರಚಿತವಾದ (ಈ ಪುಸ್ತಕದಲ್ಲಿ ಪರಿಚಯಗೊಂಡ ಶಿಲ್ಪಿಗಳ) ಒಂದೊಂದು ಶಿಲ್ಪಗಳ ಕಿರು ಛಾಯಾಚಿತ್ರಗಳನ್ನು ಮುಖಪುಟ ಹಾಳೆಯ ಸ್ಥಳಾವಕಾಶಕ್ಕನುಗುಣವಾಗಿ ಸಂಯೋಜಿಸಿ, ವಿನ್ಯಾಸಗೊಳಿಸಲಾದ ಮುಖಪುಟ ಈ ಪುಸ್ತಕದ್ದು. ಈ ಎಲ್ಲ ಛಾಯಾಚಿತ್ರಗಳ ಹಿನ್ನೆಲೆ ಅವಕಾಶ ಶ್ಯಾಮ ಬಣ್ಣದಲ್ಲಿರುವುದರಿಂದ ಮುಖಪುಟದಲ್ಲಿ ಎದ್ದು ಕಾಣುತ್ತವೆ. ಅಲ್ಲದೆ ಇವುಗಳ ಸಂಯೋಜನೆಯಲ್ಲೂ ಸಹ ಒಂದು ವ್ಯವಸ್ಥಿತ ವಿನ್ಯಾಸಕ್ರಮ ಅನುಸರಿಸಿರುವುದರಿಂದ ಪರಸ್ಪರ ಛಾಯಾಚಿತ್ರಗಳ ನಡುವೆ ಮತ್ತು ಬದಿಯಲ್ಲಿ ಸಮಾನ 'ಅಂತರ ಕ್ರಮ' ಅಳವಡಿಸಿಕೊಂಡಿರುವುದರಿಂದ ಇಲ್ಲಿನ ಮುಖಪುಟ ನೋಡುಗರ ಗಮನವನ್ನು ಬಹಳ ಸುಲಭವಾಗಿ ಸೆಳೆಯುತ್ತದೆ.

ಮೇಲ್ತುದಿಯಲ್ಲಿ ಕೆಂಪುಬಣ್ಣ ಒಳ ಆವರಣದೊಂದಿಗೆ ಬಿಳಿಯ ಹೊರಮೈ ರೇಖೆಗಳನ್ನು ಹೊಂದಿರುವ ಕನ್ನಡ ಅಕ್ಷರಗಳಲ್ಲಿ ಪುಸ್ತಕದ ತಲೆಬರಹ ಬರೆಯಲಾಗಿದೆ ಅದರ ಕೆಳಗಡೆ ಬಿಳಿಯ ಬಣ್ಣದಲ್ಲಿ ಸಂಪಾದಕರ ಹೆಸರು ಕನ್ನಡ ಅಕ್ಷರಗಳಲ್ಲಿದೆ. ಕೃತಿಯ ತಲೆಬರಹ ಮತ್ತು ಸಂಪಾದಕರ ಹೆಸರಿನ ನಡುವೆ ಕಂದು ಹಳದಿ ಬಣ್ಣದಲ್ಲಿ ತೆಳುವಾದ ಸರಳರೇಖೆ ಎಳೆಯಲ್ಪಟ್ಟಿದೆ. ಮುಖಪುಟದ ತಳಭಾಗದಲ್ಲಿ (ಛಾಯಾಚಿತ್ರಗಳ ಕೆಳಗೆ) ತಿಳಿನೀಲಿ ಬಣ್ಣದ ಪುಟ್ಟದಾದ ವೃತ್ತಾವರಣದಲ್ಲಿ ಶಿಲ್ಪಕಲಾ ಅಕಾಡೆಮಿ ಲಾಂಛನವಿದ್ದು ಅದರ ಪಕ್ಕದಲ್ಲೇ ಶೇಡಿ ಬಣ್ಣದಲ್ಲಿ ತಿಳಿಗುಲಾಬಿ ಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಎಂದು ನಮೂದಿಸಲಾಗಿದೆ. ಹಿಂಬದಿ ರಕ್ಷಾಪುಟದ ನೀಲಿ ಮತ್ತು ದಟ್ಟನೀಲಿ ಬಣ್ಣದ ಅವಕಾಶದ ಮಧ್ಯದಲ್ಲಿ ಕಂಪ್ಯೂಟರ್ ತಂತ್ರಜ್ಞಾನ ಬಳಸಿಕೊಂಡು ಕಂದು, ನೀಲಿ, ತಿಳಿನೀಲಿ ಬಣ್ಣಗಳಿಂದ ಕೂಡಿದ ಪೀಠಾಸೀನನಾದ ಅಭಯಕರ, ಮೋದಕ ಕರ, ಆಯುಧಕರ, ಮುಕ್ತನಾದ ಗಣೇಶನ ಛಾಯಾಚಿತ್ರವನ್ನು ಮಂದವಾಗಿ ಕಾಣುವಂತೆ ಸಮೀಕರಿಸಲಾಗಿದೆ/ ಅಂತರ್ಗತಗೊಳಿಸಲಾಗಿದೆ. ಹಾಗಾಗಿ ಗಣೇಶನ ಛಾಯಾಚಿತ್ರ ಮಸುಕು ಮಸುಕಾಗಿ ಕಾಣಿಸುತ್ತದೆ. ವಿಗ್ರಹದ ಸೂಕ್ಷ್ಮ ವಿವರಗಳು ಕಾಣಿಸುವುದಿಲ್ಲ. ಈ ಪುಟದ ತೀರ ತಳಭಾಗದಲ್ಲಿಯೂ ಸಹ ತಿಳಿನೀಲಿ ಬಣ್ಣದ ವೃತ್ತಾವರಣದಲ್ಲಿ ಪುಟ್ಟದಾಗಿ ಶಿಲ್ಪಕಲಾ ಅಕಾಡೆಮಿ ಲಾಂಛನವಿದ್ದು ಅದರ ಪಕ್ಕದಲ್ಲೆ ಮುಖಪುಟದಲ್ಲಿದ್ದಂತೆ ಶೇಡಿ ಬಣ್ಣ, ತಿಳಿಗುಲಾಬಿ ಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಎಂದು ಮುದ್ರಿಸಲಾಗಿದೆ.

ಒಟ್ಟಾರೆಯಾಗಿ ಓದುಗರ / ನೋಟಕರ ಕುತೂಹಲವನ್ನು ಹೆಚ್ಚಿಸ ಬಲ್ಲ ಮುಖಪುಟವಿದು, ಈ ಪುಸ್ತಕವು ಮೊದಲ ಬಾರಿಗೆ ಮುದ್ರಣಗೊಂಡುದು ೨೦೦೦ನೆಯ ಇಸ್ವಿಯಲ್ಲಿ. ಮುದ್ರಿಸಿದವರು ಬೆಂಗಳೂರಿನ ಲಕ್ಷ್ಮೀ ಮುದ್ರಣಾಲಯದವರು.

**ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

**೪.೧೬. ಭಾರತೀಯ ಶಿಲ್ಪಕಲೆ (೨೦೦೦)**

'ಭಾರತೀಯ ಶಿಲ್ಪಕಲೆ' ಎಂಬುದು ಎನ್.ಮರಿಶಾಮಾಚಾರ್ ಅವರಿಂದ ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಬರೆಯಲ್ಪಟ್ಟ ಪುಸ್ತಕ. ತಿಳಿಹಸಿರು ಮಿಶ್ರಿತ ಹಳದಿ ಮುಖಪುಟ ಹಾಳೆಯ ಸರಿಸುಮಾರು ಶೇ.೭೫ ರಷ್ಟು ಭಾಗವನ್ನು ಆವರಿಸಿದ್ದೆ. ತುಸು ಹಸಿರು ಮಿಶ್ರಿತ ಕಂದು ಬಣ್ಣ ಸರಿಸುಮಾರು ಶೇ.೨೫ ರಷ್ಟು ಭಾಗ ಆವರಿಸಿದೆ. ಈ ಎರಡೂ ಬಗೆಯ ಬಣ್ಣದ ಆವರಣಗಳು ಅವುಗಳ ನಡುವೆ ಹಾಯ್ದುಹೋದ (ಮೇಲಿಂದ ಕೆಳಗೆ) ದಟ್ಟ ಬೂದು ಬಣ್ಣದ ನೇರ ರೇಖೆಯ ಮೂಲಕ ವಿಭಾಗಿಸಲ್ಪಟ್ಟಿದ್ದು ಆ ಬೂದು ಬಣ್ಣದ ರೇಖೆಯ ತಿಳಿಹಸಿರು ಮಿಶ್ರಿತ ಹಳದಿ ಬಣ್ಣದ ಪಾರ್ಶ್ವದುದ್ದಕ್ಕೂ ಕಂಪ್ಯೂಟರ್ ನೆರವಿನಿಂದ ಮಂದ ಕಪ್ಪು ಛಾಯೆ ಮೂಡಿದೆ. ಇಡಿಯ ಮುಖಪುಟವೇ ಕಂಪ್ಯೂಟರ್ ತಂತ್ರಜ್ಞಾನದ ಮೂಲಕ ನಿರೂಪಿತವಾದುದು ಎಂಬುದು ಮುಖಪುಟ ಅವಕಾಶದಲ್ಲಿನ ವರ್ಣವೈಖರಿಯೇ ಸ್ಪಷ್ಟೀಕರಿಸುತ್ತದೆ. ತಿಳಿಹಸಿರು ಮಿಶ್ರಿತ ಹಳದಿ ಬಣ್ಣದ ಆವರಣದಲ್ಲಿ ಕೆಲವು ಸಾಂಪ್ರದಾಯಕ ಮತ್ತು ನವ್ಯ ಶೈಲಿಯ ಶಿಲ್ಪಗಳ ಛಾಯಾಚಿತ್ರಗಳನ್ನು ಕಿರು ಅಳತೆಯಲ್ಲಿ ಮುದ್ರಿಸಲಾಗಿದೆ.

ಮುಖಪುಟದ ಮೇಲ್ತುದಿಯ ಪಾರ್ಶ್ವದಲ್ಲಿ ಶಿಲ್ಪಕಲಾ ಅಕಾಡೆಮಿಯ ಲಾಂಛನವನ್ನು ಕಂದು ಬಣ್ಣದಲ್ಲಿ ಪುಟ್ಟದಾಗಿ ನಮೂದಿಸಲಾಗಿದ್ದು, ಅದರ ಕೆಳಗಡೆ ತಿಳಿನೀಲಿ ಬಣ್ಣದ ಅಕ್ಷರಗಳಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಎಂದು ಕನ್ನಡದಲ್ಲಿ ನಮೂದಿಸಿದೆ. ಅದರ ವಿರುದ್ಧ ದಿಕ್ಕಿನ ತಳಭಾಗದಲ್ಲಿ ಪಿಂಕ್ ಬಣ್ಣದ ಒಳಾವರಣದಿಂದ ಕೂಡಿರುವ ಮತ್ತು ಬಿಳಿ ಮತ್ತು ಹಳದಿ ಬಣ್ಣದ ಅಂಚುರೇಖೆ ಹೊಂದಿರುವ ಕನ್ನಡ ಅಕ್ಷರಗಳ ಮೂಲಕ ಕೃತಿಯ ಶೀರ್ಷಿಕೆ ಮುದ್ರಿತವಾಗಿದ್ದು ಅದರ ಕೆಳಗಡೆ ತಿಳಿಹಸಿರು, ತಿಳಿಗುಲಾಬಿ (ಪಿಂಕ್) ಮತ್ತು ಕೆಂಪುಬಣ್ಣದಿಂದ ಕೂಡಿದ ದಟ್ಟಕಪ್ಪು ಬಣ್ಣದ ಛಾಯೆ ಹೊಂದಿದ ತೆಳುವಾದ ಸರಳರೇಖೆ ಹಾದು ಹೋಗಿದ್ದು, ಅದರ ಕೆಳಭಾಗದಲ್ಲಿ ಅಚ್ಚ ಹಳದಿ ಬಣ್ಣದಲ್ಲಿ ಈ ಕೃತಿಯ ಲೇಖಕರ ಹೆಸರನ್ನು ಸಹ ನಮೂದಿಸಲಾಗಿದೆ. ಹಿಂಬದಿ ರಕ್ಷಾಪುಟವು ತಿಳಿಹಸಿರು ಮಿಶ್ರಿತ ಹಳದಿ ಬಣ್ಣದಲ್ಲಿದ್ದು, ಅದರ ತುದಿಯ ಪಾರ್ಶ್ವದಲ್ಲಿ ಈ ಕೃತಿಯ ಲೇಖಕರ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಮುದ್ರಿಸಿದ್ದು, ಆ ಪುಟದ ಉಳಿದೆಲ್ಲ ಅವಕಾಶದಲ್ಲಿ ಒಪ್ಪವಾದ (ವ್ಯವಸ್ಥಿತವಾದ/ಶಿಸ್ತು ಬದ್ಧವಾದ) ಅವಕಾಶವನ್ನು ಮೇಲೆ ಕೆಳಗೆ ಅಕ್ಕಪಕ್ಕಗಳಲ್ಲಿ ಬಿಟ್ಟು ಆಯತಾಕಾರದ ಆವರಣ ಚೌಕಟ್ಟಿನಲ್ಲಿರುವ ಎಚ್.ಎ. ಅನಿಲ್ ಕುಮಾರ್ ಅವರ ಬೆನ್ನುಡಿ ದಾಖಲಿಸಲಾಗಿದೆ. ಬೆನ್ನುಡಿಯು (ಬ್ಲರ್ಬ್) ಕಪ್ಪು ಅಕ್ಷರಗಳಲ್ಲಿ ಕಂದು ಬಣ್ಣದ ಹಿನ್ನೆಲೆಯ ಅವಕಾಶದಲ್ಲಿ ಮುದ್ರಿತವಾಗಿದ್ದು ಅದರ ಕೆಳಗಡೆ ತಿಳಿನೀಲಿ ಬಣ್ಣದಲ್ಲಿ ಬೆನ್ನುಡಿ ಬರಹಗಾರರನ್ನು ನಮೂದಿಸಿದ್ದು

ಅವರ ವಿಶೇಷಣವನ್ನು ಕಪ್ಪುಬಣ್ಣದ ಅಕ್ಷರಗಳಲ್ಲಿ ನಮೂದಿಸಲಾಗಿದೆ. ಬೆನ್ನುಡಿಯು ಬರಹಕ್ಕೆ ಬಿಳಿಯ ಬಣ್ಣದ ಅಂಚು ಒದಗಿಸುವುದರ ಮೂಲಕ ಅಲ್ಲಿನ ಬರಹಗಳು ವಿಶೇಷವಾಗಿ ಎದ್ದು ಕಾಣುವಂತೆ ಮಾಡಲಾಗಿದೆ. ಈ ಪುಟದ ಸಿದ್ಧತೆಯಲ್ಲೂ ಕಂಪ್ಯೂಟರ್ ತಂತ್ರಜ್ಞಾನ ಬಳಕೆಯಾಗಿರುವುದು ಇಲ್ಲಿನ ಪುಟದ ಬಣ್ಣಗಾರಿಕೆ, ಬೆನ್ನುಡಿ ಆವರಣದ ಒಪ್ಪ ಓರಣಗಳಿಂದಲೆ ವೇದ್ಯವಾಗುತ್ತದೆ. ಈ ಪುಸ್ತಕವನ್ನು ೨೦೦೦ನೆಯ ಇಸ್ವಿಯಲ್ಲಿ ಮೊದಲ ಬಾರಿಗೆ ಮುದ್ರಿಸಿದವರು ಬೆಂಗಳೂರಿನ ಲಕ್ಷ್ಮೀ ಮುದ್ರಣಾಲಯದವರು.

**೪.೧೭. ವರಶಿಲ್ಪಿ ಗುಂಡಪ್ಪ ಮಾಯಾಚಾರ್ಯ (೨೦೦೦)**

'ವರಶಿಲ್ಪಿ ಗುಂಡಪ್ಪ ಮಾಯಾಚಾರ್ಯ' ಎಂಬುದು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಪ್ರಕಟಗೊಂಡ ಶಿಲ್ಪ ಕಲಾವಿದರ ಮಾಲೆಯ ಪ್ರಕಟಣೆಗಳಲ್ಲಿ ಇದು ನಾಲ್ಕನೆಯದು. ಇದರ ಲೇಖಕರು ವಿರೂಪಾಕ್ಷ ಬಡಿಗೇರ. ೨೦೦೦ನೆಯ ಇಸ್ವಿಯಲ್ಲಿ ಇದನ್ನು ಪ್ರಥಮವಾಗಿ ಮುದ್ರಿಸಿದವರು ಬೆಂಗಳೂರಿನ ಸ್ಕ್ಯಾನ್‌ಡಾಟ್ ಎಂಬ ಹೆಸರಿನ ಮುದ್ರಕರು. ಗುಂಡಪ್ಪ ಮಾಯಾಚಾರ್ಯರು ರಚಿಸಿದ ಕನ್ಯೆಯ ಶಿಲ್ಪದ (ಪುಸ್ತಕದಲ್ಲಿ ಮಾಧ್ಯಮದ ಉಲ್ಲೇಖವಾಗಲಿ, ಕೃತಿ ಶೀರ್ಷಿಕೆಯಾಗಲಿ ಇಲ್ಲ) ಛಾಯಾಚಿತ್ರವನ್ನೆ ಮುದ್ರಿಸಿ ಮುಖಪುಟ ವಿನ್ಯಾಸಗೊಳಿಸಲಾಗಿದೆ.

ಆಧಾರಭಿತ್ತಿಗೆ ತಾಗಿಕೊಂಡಿರುವ ಕನ್ಯೆಯ ಎಡಗಾಲನ್ನು ತುಸುಮಡಚಿ ಅದರ ಪಾದವನ್ನು (ಎಡಗಾಲಿನ) ಆಧಾರಭಿತ್ತಿಗೆ ತಾಗಿಸಿ, ಬಲಗಾಲಿನ ಪಾದ ಬೆರಳುಗಳನ್ನು ಮಾತ್ರ ತಳಪಾತಳಿಯ ಮೇಲೆ ಊರಿ ಮುಗುಳ್ನಗೆಯಿಂದ ಕೂಡಿದ ತನ್ನ ಮುಖವನ್ನು ಬಲಪಾರ್ಶ್ವಕ್ಕೆ ತಿರುಗಿಸಿ ಬಲಗೈನ್ನು ಕೆಳಕ್ಕೆ ಇಳಿಬಿಟ್ಟು ಎಡಗೈಯನ್ನು ತನ್ನ ಭುಜ ಮಟ್ಟದವರೆಗೆ ಮೇಲೆತ್ತಿ ನಿಂತಿದ್ದಾಳೆ. ಆಕೆಯ ತಲೆಗೂದಲು ಎಡಭಾಗದಲ್ಲಿ ಅಲೆ ಅಲೆಯಾಗಿ ಹಾರಾಡುತ್ತಿದ್ದು, ಎಡಹಸ್ತ ಮತ್ತು ಬಲಹಸ್ತಗಳಲ್ಲಿ ಹಿಡಿದುಕೊಂಡಿರುವ ಆಕೆಯ ವಸ್ತ್ರ ಹಿಂಗಡೆ (ಹಿಂದುಗಡೆ) ಹಾರಾಡುತ್ತಿದೆ. ಆಕೆಯ ದೇಹದ ತೆಳು ವಸ್ತ್ರ ಗಾಳಿಯಲ್ಲಿ ತೇಲುತ್ತಿದ್ದು ಆಕೆಯ ಸುಂದರ ಅಂಗಾಂಗಗಳ ಮಾದಕ ನೋಟ ನೀಡುತ್ತಿವೆ. (ನೀರಿನಲ್ಲಿ ತೊಯ್ದಂತಹ) ಕನ್ಯೆಯ ಆಕೃತಿಯ ಹಿಂಗಡೆಯ ಅವಕಾಶ ಭಿತ್ತಿಯಲ್ಲಿ ಮೋಡಗಳ ಅಲೆ ಅಲೆಗಳ ಮಾದರಿ ರೂಪಿಸಿದ್ದು ಅವೂ ಸಹ ಗಾಳಿಯ ರಭಸಕ್ಕೆ ಮೇಲೆದ್ದಿರುವಂತೆ ಭಾಸವಾಗುತ್ತಿದೆ.

ಒಟ್ಟಿನಲ್ಲಿ ಈ ಶಿಲ್ಪದಲ್ಲಿ ಸ್ತ್ರೀಯ ಮುಖದಲ್ಲಿ ಒಂದು ಬಗೆಯ ಹರ್ಷ, ನಾಚಿಕೆಯಂತಹ ಭಾವನೆಗಳು ಸಮ್ಮಿಳನಗೊಂಡಿದ್ದು, ಮಳೆ–ಗಾಳಿಗೆ ಸಿಕ್ಕ ಹೆಣ್ಣಿನ ವಸ್ತ್ರಾಭರಣಗಳಲ್ಲಾಗುವ ಸ್ಥಿತ್ಯಂತರ ಮಳೆಗೆ ನೆನೆದ ಬಟ್ಟೆ ದೇಹಕ್ಕೆ ಅಂಟಿಕೊಂಡು ರೂಪಿಸುವ 'ನೋಟ ಮಾದಕತೆ' ಗಾಳಿ ಮಳೆಗೆ ಸಿಕ್ಕಾಗ ಸಹಜವಾಗಿಯೇ ಯುವತಿಯರು ತಮ್ಮ ದುಪ್ಪಟವನ್ನು ತಲೆಗೇರಿಸಿಕೊಳ್ಳಲು (ಮಳೆ ಹನಿ ತಲೆಗೆ ತಾಕದಂತೆ) ಪ್ರಯತ್ನಿಸುವುದು ಆಗ ಗಾಳಿಯಲ್ಲಿ ಆ ವಸ್ತ್ರ ಹಾರಿ ನೆರಿಗೆ ನೆರಿಗೆಗಳಾಗುವುದು. ದಟ್ಟೈಸಿರುವಂತಹ ಮೋಡದ ವಾತಾವರಣ ಹೀಗೆ ಪ್ರಾಯ ಪ್ರಬುದ್ಧ ಹದಿಹರೆಯದ ಹೆಣ್ಣು ಮಳೆ–ಗಾಳಿಗೆ ಸಿಲುಕಿದಾಗ ಆಕೆಯಲ್ಲಾಗುವ ಭಾವ ಸಂದೇಹಗಳನ್ನು ಮತ್ತು ದೈಹಿಕ ನೋಟವನ್ನು ಇಲ್ಲಿ ಶಿಲ್ಪಿ ತುಂಬ ಹೃದಯಂಗಮವಾಗಿ

ಸಹಜ ಸೊಬಗಾಂತ) ದೃಶ್ಯೀಕರಿಸಿದ್ದಾರೆ. ಮುಖಪುಟ ಹಾಳೆ ಕಂದು ಬಣ್ಣ ಮತ್ತು ಹಳದಿ (yellow orcher) (ಕಂದು ಹಳದಿ) ಬಣ್ಣಗಳಲ್ಲಿದ್ದು ಕಂಪ್ಯೂಟರ್ ತಂತ್ರಜ್ಞಾನದ ನೆರವಿನಿಂದ ಕಂದುಬಣ್ಣದ ಬೀಸುಗಳನ್ನು ಗಾಢ–ಮಧ್ಯಮ ಮಂದ ವರ್ಣಗತಿಯುಕ್ತವಾಗಿ ಕೆಳಗಿನಿಂದ ಮೇಲಕ್ಕೆ ಸುಳಿ–ಸುಳಿಯಾಗಿ ಹಾಯ್ದಂತೆ ರೂಪಿಸಲಾಗಿದ್ದು ಆ ಅವಕಾಶದಲ್ಲೆ ಅದೇ ಹದಯುಕ್ತ ಕಂದು ಬಣ್ಣದಲ್ಲಿಯೇ ಶಿಲ್ಪದ ಛಾಯಾಚಿತ್ರವೂ ಇದೆ. ಮತ್ತು ಈ ಛಾಯಾಚಿತ್ರದ ಅಂಚಿಗೆ ಕಂಪ್ಯೂಟರ್ ತಂತ್ರಜ್ಞಾನದ ಬಳಕೆ ಮಾಡಿಕೊಂಡು ಪ್ರಕಾಶ ಮಾಡಿದಂತೆ ರೂಪಿಸಲಾಗಿದೆ ಎಂಬುದು ಈ ಮುಖಪುಟದ ವಿಶೇಷತೆ. ಮುಖಪುಟದ ಮೇಲ್ತುದಿಯಲ್ಲಿ ಅಚ್ಚಕೆಂಪು ಬಣ್ಣದಲ್ಲಿ ಪ್ರಕಾಶಮಾನ ಅಂಚುರೇಖೆಯುಕ್ತವಾಗಿ ಪುಸ್ತಕದ ತಲೆಬರಹ ರೂಪಿಸಲಾಗಿದ್ದು ಅದರ ಕೆಳಗೆ ಕೆಂಪು, ಹಳದಿ, ತಿಳಿಹಸಿರು, ದಟ್ಟಹಸಿರು ಬಣ್ಣಗಳಿಂದ ಕೂಡಿದ ಪುಟ್ಟ ತೆಳುವಾದ ಸರಳ ರೇಖೆ ಹಾಯ್ದಿದ್ದು ಅದರ ಕೆಳಗಡೆ ಕೃತಿಯ ಲೇಖಕರ ಹೆಸರನ್ನು ಸಹ ಮುದ್ರಿಸಿರುವುದು ಈ ಪುಸ್ತಕದ ಮುಖಪುಟದಲ್ಲಿ ಎದ್ದು ಕಾಣುವ ಅಂಶವೇ ಆಗಿದೆ. ಮುಖಪುಟದ ತಳಭಾಗದಲ್ಲಿ ಕಪ್ಪು ವೃತ್ತದೊಳಗೆ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಲಾಂಛನ ಮತ್ತು ಪದನಾಮ ಚಿಕ್ಕದಾಗಿ ಮುದ್ರಣಗೊಂಡಿದ್ದು ಪಕ್ಕದಲ್ಲೇ ಕಪ್ಪು ಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಎಂದು ಮತ್ತೆ ಸ್ಪಷ್ಟವಾಗಿ ಕಾಣುವಂತೆ ಮುದ್ರಿಸಲಾಗಿದೆ. ಹಿಂಬದಿ ರಕ್ಷಾಪುಟ ಯಾವುದೇ ಬರಹ/ ಚಿತ್ತಾರವಿಲ್ಲದ ತಿಳಿಕಂದು ಹಳದಿಬಣ್ಣದ ಖಾಲಿ ಹಾಳೆಯಾಗಿದೆ– ಅಲ್ಲಿ ಮುದ್ರಿತಗೊಂಡ ಆಕರ್ಷಕ ಶಿಲ್ಪ ಮತ್ತು ವಿನ್ಯಾಸ ತಾಂತ್ರಿಕ ನೈಪುಣ್ಯತೆಯಿಂದಾಗಿ ಆ ಸಂದರ್ಭದ ಮಟ್ಟಿಗೆ ಸೃಜನಶೀಲವಾದುದೆನಿಸಿಕೊಳ್ಳಲು ಸೂಕ್ತವಾದುದೆನಿಸುತ್ತದೆ.

### ೪.೧೮. ಕೆ. ಶ್ಯಾಮರಾಯಾಚಾರ್ಯ (೨೦೦೦)

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಪ್ರಕಟವಾದ ಶಿಲ್ಪಕಲಾವಿದರ ಮಾಲೆಯಲ್ಲಿನ ೫ನೆಯ ಪ್ರಕಟಣೆಯೇ 'ಕೆ. ಶ್ಯಾಮರಾಯಾಚಾರ್ಯ' ಎಂಬುದು. ಇದನ್ನು ಬರೆದವರು ಕಾ.ವಾ. ಆಚಾರ್ಯ ಶಿರ್ವ ಎನ್ನುವವರು. ೨೦೦೦ನೆಯ ಇಸ್ವಿಯಲ್ಲಿ ಬೆಂಗಳೂರಿನ ರಶ್ಮಿ ಟೈಪೋಸೆಟ್ ಇವರಿಂದ ಮೊದಲ ಮುದ್ರಣ ಕಂಡುದಾಗಿದೆ. ಕೆ.ಶಾಮರಾಯಾಚಾರ್ಯರಿಂದ ಶಿಲೆಯಲ್ಲಿ ನಿರ್ಮಿತವಾದ ನವದುರ್ಗೆಯ ಛಾಯಾಚಿತ್ರವನ್ನೆ ಮುಖಪುಟ ಹಾಳೆಯಲ್ಲಿ ಮುದ್ರಿಸಿ, ಮುಖಪುಟ ವಿನ್ಯಾಸ ಮಾಡಲಾಗಿದೆ. ಮುಂದಿನ ಬಲಗೈಯನ್ನು ಅಭಯ ಮುದ್ರೆಯಲ್ಲಿ ಮತ್ತು ಮುಂದಿನ ಎಡಗೈಯನ್ನು ವರದ ಮುದ್ರೆಯಲ್ಲಿ ಹಿಡಿದು ನಿಂತಿರುವ ದುರ್ಗೆಯ ಹಿಂದಿನ ಆರು ಕೈಗಳಲ್ಲಿ (ಎಡಗಡೆಯ ಮೂರು ಮತ್ತು ಬಲಗಡೆಯ ಮೂರು ಕೈಗಳು) ಒಂದೊಂದರಲ್ಲಿ ಒಂದೊಂದು ಆಯುಧವಿದೆ. ಸಮಭಂಗಿಯಲ್ಲಿ ನಿಂತಿರುವ ದೇವಿಯ ಪಾದಗಳ ಕೆಳಗಿನ ಪಟ್ಟಿಕೆಯಲ್ಲಿ ಆಕೆಯ ವಾಹನ ಸಿಂಹವನ್ನು ಸಹ ಕೆತ್ತಲಾಗಿದೆ. ದೇವಿಯ ವಿಗ್ರಹದ ಅಲಂಕರಣಯುಕ್ತ ನೀಳವಾದ ಕಿರೀಟ, ಕಟಿಭಾಗದಲ್ಲಿ ಕಂಕರಿಸಿದ ಆಭರಣ ವಿನ್ಯಾಸಗಳು ವಿಗ್ರಹದ ಹಿಂಗಡೆಯಲ್ಲಿ ರಚಿಸಿದ ಕಮಾನು ಅಲಂಕರಣದಲ್ಲಿ ಕೆತ್ತಿದ ಕುಸುರಿ ವಿನ್ಯಾಸಗಳು ಇವೆಲ್ಲ 'ಹೊಯ್ಸಳ ಶೈಲಿ'[೧೯]ಯನ್ನು ಜ್ಞಾಪಿಸುತ್ತವೆ.

೧೯. ಎನ್. ಮರಿಶಾಮಚಾರ್: ದೃಶ್ಯಕಲಾ ಪ್ರಪಂಚ, ಪು–೮೮

ಅತ್ಯಂತ ಸಂಪ್ರದಾಯಬದ್ಧ ಶಿಲ್ಪವಿದು ಶೇಡಿಬಣ್ಣದ ಮುಖಪುಟ ಹಾಳೆಯ ಮೇಲೆ ಎಡ-ಬಲ ಪಾರ್ಶ್ವಗಳಲ್ಲಿ ಸಮಾನ ಅಂತರ ಬಿಡುವುದರ ಜೊತೆಗೆ ಮೇಲ್ತುದಿಯಲ್ಲಿ ತುಸು ಹೆಚ್ಚು ಅವಕಾಶ ಕಾಯ್ದುಕೊಂಡು ತಳಭಾಗದಲ್ಲಿ ಹೆಚ್ಚು ಕಡಿಮೆ ಎಡ-ಬಲ ಪಕ್ಕಗಳಲ್ಲಿ ಕಾಯ್ದುಕೊಂಡ ಅಂತರವನ್ನೇ ಬಿಟ್ಟು ಆ ಸ್ಥಳಾವಕಾಶದಲ್ಲಿ ಶಿಲ್ಪಕಲಾ ಅಕಾಡೆಮಿ ಲಾಂಛನ ಮತ್ತು ಪದನಾಮ ಹಾಗೂ ವಿಳಾಸ ನಮೂದಿಸಲಾಗಿದೆ.

ಮೇಲ್ತುದಿಯಲ್ಲಿನ ಕೃತಿಯ ತಲೆಬರಹ ಮತ್ತು ಶಿಲ್ಪಕಲಾ ಅಕಾಡೆಮಿಯ ಪದನಾಮ ಹಾಗೂ ಲಾಂಛನ ಮತ್ತು ವಿಳಾಸವನ್ನು ಕಪ್ಪುಬಣ್ಣದ ಅಕ್ಷರಗಳಲ್ಲಿ ನಮೂದಿಸಲಾಗಿದೆ. ಮುಖಪುಟದಲ್ಲಿ ಅಚ್ಚಿಸಿದ ಶಿಲ್ಪದ ಛಾಯಾಚಿತ್ರಕ್ಕೆ ದಪ್ಪನಾದ ಅಂಚುರೇಖೆಗಳಿಂದ (ಬಿಳಿಯ ಬಣ್ಣದ) ಶಿಸ್ತಾಗಿ ವಿನ್ಯಾಸಗೊಳಿಸಿರುವುದು ಈ ಪುಸ್ತಕದ ಮುಖಪುಟದ ಧನಾತ್ಮಕ ಅಂಶವಾಗಿ ಬಂದಿದೆ. ಹಿಂಬದಿಯ ರಕ್ಷಾಪುಟವೂ ಸಹ ಮುಖಪುಟದ ಬಣ್ಣದಲ್ಲಿಯೇ ಇದ್ದು ಅದರಲ್ಲಿ ಯಾವ ಬರಹ/ಚಿತ್ರವಾಗಲಿ ಇಲ್ಲ.

**೪.೧೯. ಎಸ್. ಜಿ. ನೀಲಕಂಠಾಚಾರ್ (೨೦೦೧)**

೨೦೦೧ರಲ್ಲಿ ಫ್ರೆಂಡ್ಸ್ ಕಾಮತೆಕ್ ಇವರಿಂದ ಪ್ರಥಮ ಮುದ್ರಣ ಕಂಡಂತಹ ಎಸ್. ಮರಿಶಾಮಾಚಾರ್ ಅವರಿಂದ ಬರೆಯಲ್ಪಟ್ಟಂತಹ ಎಸ್.ಜಿ.ನೀಲಕಂಠಾಚಾರ್ ಎಂಬ ಕೃತಿಯು ಸಹ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಕಟಣೆಯೇ ಆಗಿದೆ. ಈ ಕೃತಿಯ ಮುಖಪುಟದಲ್ಲಿ ಎರಡು ಕಾಲಂಗಳಿದ್ದು (೨ ಭಾಗಗಳಿದ್ದು) ಕಂದು ಬಣ್ಣದ ಹಿನ್ನೆಲೆಯಿರುವ ಭಾಗದಲ್ಲಿ ನೀಲಕಂಠಾಚಾರ್ ಅವರು ರಚಿಸಿರುವ ಲೋಹಶಿಲ್ಪವೊಂದು ಛಾಯಾಚಿತ್ರ ಮುದ್ರಿಸಿದ್ದು, ಬೂದು ಬಣ್ಣದಲ್ಲಿರುವ ಮತ್ತೊಂದು ಆವರಣದಲ್ಲಿ (ಭಾಗದಲ್ಲಿ) ಅದೇ ಪ್ರತಿಮೆಯ ಅಸ್ಪಷ್ಟ ರೇಖಾಚಿತ್ರವಿದೆ (ಇದು ಉಬ್ಬು ಶಿಲ್ಪದ ಇಂಪ್ರೆಶನ್/ಪರಿಣಾಮ ಸೃಷ್ಟಿಸಿದೆ).ಕಂದು ಬಣ್ಣದ ಆವರಣದಲ್ಲಿರುವ ಲೋಹ ಪ್ರತಿಮೆ ಹೊಂಬಣ್ಣದ ಬೆಳಕಿನಿಂದ ಪ್ರಕಾಶಿಸುತ್ತಿದ್ದು ತನ್ಮೂಲಕ ಅದು ಆಕರ್ಷಕವಾಗಿ ಕಾಣುವಂತೆ ಪ್ರತಿಬಿಂಬಿಸಿದ್ದು ಇಲ್ಲಿನ ಛಾಯಾಗ್ರಹಣ ಕೌಶಲ್ಯದ ವಿಶೇಷತೆ ಪ್ರಮಾಣಬದ್ಧ ಆಕಾರ, ಅಂಗಾಂಗಗಳಲ್ಲಿ ತೋರ್ಪಡಿಕೆಯಾಗಿರುವ ಲಾವಣ್ಯ ಬಾಗು-ಬಳುಕು, ಎತ್ತರದ ಮುಕುಟ ಆಭರಣ ಅಲಂಕಾರ ಮುಖ್ಯವಾಗಿ ಆಭರಣಗಳು ಮತ್ತು ವಿಗ್ರಹದ ಉಡುಗೆ-ತೊಡುಗೆ ದೇಹಕ್ಕೆ ಅಂಟಿಕೊಂಡಿರುವಿಕೆ ಇವೆಲ್ಲವೂ ಇಲ್ಲಿನ ಪ್ರತಿಮೆಯಲ್ಲಿ ಸಂಲಗ್ನಗೊಂಡಿರುವ 'ಚೋಳಶಿಲ್ಪ ಶೈಲಿಯ'[೧೦] ಲಕ್ಷಣಗಳಾಗಿವೆ. ಮುಖಪುಟದ ಮೇಲ್ತುದಿಯಲ್ಲಿ ಬಿಳಿಯ ಬಣ್ಣದ ಹಿನ್ನೆಲೆಯಲ್ಲಿ ಕೆಂಬಣ್ಣದಲ್ಲಿ ಕನ್ನಡ ಅಕ್ಷರಗಳಲ್ಲಿ ಕೃತಿಯ ಶೀರ್ಷಿಕೆಯಿದ್ದು, ಅದೇ ಪುಟದ ತಳಭಾಗದಲ್ಲಿ ಹಳದಿ ವೃತ್ತಾವರಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಲಾಂಛನ ಮತ್ತು ನೀಲಿಬಣ್ಣದಲ್ಲಿ ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪದನಾಮ ಮುದ್ರಣಗೊಂಡಿರುತ್ತದೆ. ಪುಸ್ತಕ ಪ್ರಿಯ ಓದುಗರ ಪಾಲಿಗೆ ಹಿತಕರ ಅನುಭವ ಕೊಡಬಲ್ಲ, ಅವರ ಮನಕ್ಕೆ ಮುದ ನೀಡಬಲ್ಲ ಮುಖಪುಟಗಳ ಸಾಲಿಗೆ ಇದನ್ನು ಸೇರಿಸಬಹುದೆಂಬುದಾಗಿ ಅಭಿಪ್ರಾಯ ಪಡಬಹುದಷ್ಟೆ.

---

೧೦. Edith Tomory: A History of fine arts in India & the west page-207-208

### ೪.೨೦. ಶ್ರೀ ತಿಪ್ಪಾಜಿ ಚಿತ್ರಗಾರ್ ರೇಖಾಚಿತ್ರಗಳು (೨೦೦೩)

'ಶ್ರೀ ತಿಪ್ಪಾಜಿ ಚಿತ್ರಗಾರ್ ರೇಖಾಚಿತ್ರಗಳು' ಎಂಬ ಪುಸ್ತಕ ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಡಾ.ಅ.ಲ.ನರಸಿಂಹನ್ ಅವರು ಬರೆದಿದ್ದು, ಇದರ ಮುದ್ರಣ ಮೊದಲಬಾರಿಗೆ ಆದದ್ದು ೨೦೦೩ನೆಯ ಇಸ್ವಿಯಲ್ಲಿ (ಪ್ರಕಾಶಕರು ಯಾರು ಎಂಬ ವಿಳಾಸವಿಲ್ಲ) ಈ ಪುಸ್ತಕಕ್ಕೆ ಮುಖಪುಟ ವಿನ್ಯಾಸ ಮಾಡಿದವರು ಎಸ್.ಶಶಿಧರಯ್ಯ ಎನ್ನುವವರು. ಕಡು ಕಂದು ಬಣ್ಣದ ಮುಖಪುಟ ಹಾಳೆಯ ಮೇಲೆ ತಿಪ್ಪಾಜಿ ಚಿತ್ರಗಾರರು ರಚಿಸಿದ ಮೈಸೂರು ಸಾಂಪ್ರದಾಯಕ ಶೈಲಿಯ 'ವಿಶ್ವರೂಪದರ್ಶನ' ಚಿತ್ರಕಲಾಕೃತಿಯ ವರ್ಣ ಛಾಯಾಚಿತ್ರವನ್ನೆ ಒಪ್ಪಾದ ಪ್ರೇಮಿನಲ್ಲಿ ಹಾಕಿರಿಸಿದಂತೆ (ಕಂಪ್ಯೂಟರ್ ತಂತ್ರಜ್ಞಾನವನ್ನು ಬಳಸಿಕೊಂಡು ಮಾಡಿದ ಕೌಶಲ್ಯಾಭಿವ್ಯಕ್ತಿಯಿದು) ರೂಪಿಸಿ, ಮುಖಪುಟದ ಹಾಳೆಯ ಮಧ್ಯದಲ್ಲಿ ಸಂಯೋಜಿಸಲಾಗಿದೆ.

ನಾಲ್ಕೂ ಕಡೆಗಳಲ್ಲಿನ ಪ್ರೇಮಿನ ಮೇಲೆ ಬೆಳಕು ಬಿದ್ದಿರುವುದರ ಪರಿಣಾಮ ಬಹಳ ಸೊಗಸಾಗಿ ಮೂಡಿಬಂದಿರುವುದರ ಜೊತೆಗೆ ತಿಪ್ಪಾಜಿ ಚಿತ್ರಗಾರರಿಂದ ನಿರ್ಮಿತವಾದ 'ಮೈಸೂರು ಸಾಂಪ್ರದಾಯಿಕ ಶೈಲಿಯ'[೧೧] ಚಿತ್ರವೂ ಸಹ ಬಂಗಾರ ಬಣ್ಣ ಸಂಯುಕ್ತವಾಗಿ ವರ್ಣರಂಚಿತವಾಗಿ ದೈವೀ ಭಾವೋದ್ದೀಪನ ಸದೃಶವಾಗಿರುವುದರಿಂದ ಸಾಂಪ್ರದಾಯಿಕ ಶೈಲಿಯಲ್ಲಿ ಆಸಕ್ತವಾದ ಬಲವುಳ್ಳ ಕಲಾಸಕ್ತರಿಗೆ ಕಲಾವಿದರಿಗೆ ಕಲಾವಿದ್ಯಾರ್ಥಿಗಳಿಗೆ ಸಹಜವಾಗಿಯೇ ಸಂತೋಷ ನೀಡಬಲ್ಲ ಮುಖಪುಟ ಚಿತ್ರವಿದು ಎನ್ನಬಹುದು. ಅಲ್ಲದೆ ಮುಖಪುಟದ ಅವಕಾಶದಲ್ಲಿನ ಕೇಂದ್ರಭಾಗದಲ್ಲಿ ಈ ಛಾಯಾಚಿತ್ರವನ್ನು ಅಳವಡಿಸಿರುವುದಲ್ಲದೆ, ಉಳಿದೆಲ್ಲ ಅವಕಾಶವನ್ನು ಒಂದೇ ಬಣ್ಣದಲ್ಲಿ (ಕಡುಕಂದು ಬಣ್ಣದಲ್ಲಿ) ವರ್ಣಗಳ ಏರಿಳಿತವಿಲ್ಲದೆ ಒಂದೇ ಲಯದಲ್ಲಿ ಸಪಾಟಾಗಿ ವಾಷ್ ತಂತ್ರದಂತೆ ಶಿಸ್ತಾಗಿ ನಿರ್ವಹಿಸಿರುವುದೂ ಸಹ ಈ ಮುಖಪುಟ ಸೊಗಸುಗೊಳ್ಳಲು ಕಾರಣವಾಗಿರುವ ಅಂಶ ಎನ್ನಬಹುದು. ಮುಖಪುಟ ಹಾಳೆಯ ಮೇಲ್ತುದಿಯಲ್ಲಿ ಹಳದಿಬಣ್ಣದಲ್ಲಿ ಕನ್ನಡದಲ್ಲಿ ಶ್ರೀ ತಿಪ್ಪಾಜಿ ಚಿತ್ರಗಾರ್ ಎಂದು ಬರೆದಿದ್ದಾರೆ. ಅದರ ಕೆಳಗಡೆ ಬಿಳಿಯ ಬಣ್ಣದಲ್ಲಿ ಕನ್ನಡದಲ್ಲಿಯೇ ರೇಖಾಚಿತ್ರಗಳು ಎಂದು ಮುದ್ರಿಸಲಾಗಿದೆ. ಛಾಯಾಚಿತ್ರದ ಕೆಳಗಡೆ ನೀಲಿ, ಬಿಳಿ ಹಸಿರುವರ್ಣ ಸಂಯುಕ್ತದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ವಿನ್ಯಾಸಗೊಂಡಿದ್ದು ಅದರ ಮೇಲೆ ಲಾಂಛನ ವೃತ್ತದ ಅಂಚಿಗೆ ತಿಳಿ ಬಿಳಿಬಣ್ಣದಲ್ಲಿ ದ್ವಿಶತಮಾನೋತ್ಸವ ಎಂಬುದಾಗಿ ಕನ್ನಡದಲ್ಲಿ ಮುದ್ರಿಸಲಾಗಿದೆ ಅದರ ಕೆಳಗಡೆ ಕನ್ನಡ ಭಾಷೆಯಲ್ಲಿ ನೇರವಾಗಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪದನಾಮವನ್ನು ಬಿಳಿಯ ಬಣ್ಣದಲ್ಲಿ ನಮೂದಿಸಲಾಗಿದೆ. ಒಟ್ಟಿನಲ್ಲಿ ಕಲಾಸಕ್ತರ ಗಮನ ಸೆಳೆಯಬಲ್ಲ ಮುಖಪುಟವಿದಾಗಿದೆ ಎಂದು ಅಭಿಪ್ರಾಯಪಡಬಹುದು.

### ೪.೨೧. ಕರ್ನಾಟಕದ ಸಮಕಾಲೀನ ಶಿಲ್ಪ ಸಂಪುಟ (೨೦೦೩)

೨೦೦೩ರಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಪ್ರಕಟವಾದ 'ಕರ್ನಾಟಕದ ಸಮಕಾಲೀನ ಶಿಲ್ಪಕಲೆ' ಶಿಲ್ಪ ಸಂಪುಟ ಇದು ಸಮಕಾಲೀನ ಶಿಲ್ಪಗಳ ಕಪ್ಪು ಬಿಳಿ ಛಾಯಾಚಿತ್ರಗಳನ್ನು ಹೊಂದಿದ

೧೧. ಡಾ. ಅಂಬಳಿಕೆ ಹಿರಿಯಣ್ಣ: ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಪು-೭೧೧-೭೧೨

ಮುಖಪುಟ ಇಲ್ಲಿ ಹತ್ತು ಬೇರೆ ಬೇರೆ ನವ್ಯ ಶಿಲ್ಪಗಳ ಕಪ್ಪು-ಬಿಳಿ ಛಾಯಾಚಿತ್ರಗಳನ್ನು ಸಾಲಾಗಿ ಪ್ರತ್ಯೇಕ ಬ್ಲಾಕ್‌ಗಳಲ್ಲಿ (ಚೌಕಟ್ಟುಗಳಲ್ಲಿ) ಮುದ್ರಿಸಲಾಗಿದೆ. ಮುಖಪುಟದ ತಳಭಾಗದ ಮೂಲೆಯಲ್ಲಿನ ಕಿರು ಅವಕಾಶದಲ್ಲಿ ಬಿಳಿಯ ಬಣ್ಣದ ಕನ್ನಡ ಅಕ್ಷರಗಳಲ್ಲಿ ಪುಸ್ತಕದ ಶೀರ್ಷಿಕೆ ಬರೆಯಲ್ಪಟ್ಟಿದೆ. ಅದರ ಕೆಳಗಡೆಯೇ ಬಿಳಿಯ ವೃತ್ತಾವರಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ಮತ್ತು ಕನ್ನಡದಲ್ಲಿ ಬಿಳಿಯ ಬಣ್ಣದ ಅಕ್ಷರಗಳಲ್ಲಿ ಅದರ ಪದನಾಮ ನಮೂದಿಸಲ್ಪಟ್ಟಿದೆ. ಇದರ ಮುದ್ರಕರು/ಪ್ರಕಾಶಕರು/ವಿನ್ಯಾಸಗಾರರ ಹೆಸರು ನಮೂದಾಗಿಲ್ಲ. ಒಟ್ಟಿನಲ್ಲಿ ಇದೊಂದು ತೀರಾ ಸರಳವಾದ ಹಳೆಯ ಮಾದರಿಯಲ್ಲಿ ವಿನ್ಯಾಸಗೊಂಡಮುಖಪುಟ. ಮುಖಪುಟದಲ್ಲಿ ವಿನ್ಯಾಸಗೊಳಿಸಿದ ಛಾಯಾಚಿತ್ರಗಳು ಸ್ಪಷ್ಟವಾಗಿ ಕ್ಯಾಮರಾಗೆ ಸೆರೆ ಸಿಕ್ಕಿದವುಗಳಾಗಿವೆ ಎಂಬ ಅಂಶವೊಂದನ್ನು ಧನಾತ್ಮಕವಾಗಿ ಇಲ್ಲಿ ಪರಿಗಣಿಸಬಹುದಷ್ಟೆ ಉಳಿದಂತೆ ಇಲ್ಲ ಯಾವ ಆಕರ್ಷಕ ಅಂಶಗಳೂ ಕಾಣಿಸುವುದಿಲ್ಲ.

**೪.೨೨. ಲೋಹಶಿಲ್ಪಿ ಎನ್. ಪಿ. ಶ್ರೀನಿವಾಸಾಚಾರ್ಯ (೨೦೦೩)**

ಕರ್ನಾಟಕ ಶಿಲ್ಪಕಲಾ ಅಕಾಡೆಮಿ ವತಿಯಿಂದ ಪ್ರಕಟವಾಗಿರುವ 'ಲೋಹಶಿಲ್ಪ ಎನ್.ಪಿ. ಶ್ರೀನಿವಾಸಚಾರ್ಯ' ಎಂಬ ಪುಸ್ತಕದ ಲೇಖಕರುಗಳು ಬಿ.ವಿ.ಕೆ ಶಾಸ್ತ್ರೀ ಮತ್ತು ಮುಳಹಳ್ಳಿ ಸೂರಿ, ಬೆಂಗಳೂರಿನ ಫ್ರೆಂಡ್ಸ್ ಕಾಮ್-ಟೆಕ್ ಇವರಿಂದ ೨೦೦೩ರಲ್ಲಿ ಪ್ರಥಮ ಮುದ್ರಣ ಕಂಡಿದುದಾಗಿದೆ. ಈ ಪುಸ್ತಕದ ಮುಖಪುಟದಲ್ಲಿ ಎನ್.ಪಿ.ಶ್ರೀನಿವಾಸಚಾರ್ಯರಿಂದಲೇ ರಚನೆಯಾದ ಒಂದು ಲೋಹಶಿಲ್ಪದ ವರ್ಣಛಾಯಾಚಿತ್ರವನ್ನು ಮತ್ತು ಹಿಂಬದಿ ರಕ್ಷಾಪುಟದಲ್ಲೂ ಅವರಿಂದಲೇ ರಚನೆಗೊಂಡ ಎರಡು ಲೋಹ ಶಿಲ್ಪಗಳ ವರ್ಣಛಾಯಾ ಚಿತ್ರಗಳನ್ನು ಮುದ್ರಿಸಿ ಮುಖಪುಟ ಮತ್ತು ಹಿಂಬದಿ ರಕ್ಷಾಪುಟಗಳನ್ನು ವಿನ್ಯಾಸಗೊಳಿಸಲಾಗಿದೆ. ಇಲ್ಲಿ ವಿನ್ಯಾಸಗೊಂಡ ಮುಖಪುಟ ಮತ್ತು ಹಿಂಬದಿ ರಕ್ಷಾಪುಟಗಳಲ್ಲಿ ವರ್ಣಛಾಯಾಚಿತ್ರಗೊಂಡ ಲೋಹಶಿಲ್ಪಗಳು 'ಶೈಲಿಯಲ್ಲಿ ಹೊಯ್ಸಳ'[೧೨] ಸಂಪ್ರದಾಯವನ್ನು ಅನುಸರಿಸಲ್ಪಟ್ಟಿವೆ. ಕಡುಕಂದು ಮತ್ತು ಕೆಮ್ಮಣ್ಣು ಮತ್ತು ಕೆಮ್ಮಣ್ಣಿನ ಬಣ್ಣದಲ್ಲೊಂದಿಷ್ಟು ದಟ್ಟ ಕೆಮ್ಮಣ್ಣು ಬಣ್ಣದ ತೇಪೆ ಇಂತಹ ಬಣ್ಣಗಳಿಂದಾವೃತವಾದ, ಗೋಡೆಗೂ ನೆಲಕ್ಕೂ ಇವತ್ತಿನ ದಿನಗಳಲ್ಲಿ ಹಾಸುವ ಟೈಲ್ಸ್‌ಗಳಂತಹ ಮೈವಳಿಕೆ ಪಡೆದುಕೊಂಡಿರುವ ಇಲ್ಲಿನ ಮುಖಪುಟ ಮತ್ತು ಹಿಂಬದಿ ರಕ್ಷಾಪುಟ ಕಂಪ್ಯೂಟರ್ ನೆರವಿನಿಂದ ರೂಪಿತವಾಗಿರುವುದೆಂಬುದು ಸುಸ್ಪಷ್ಟ. ರಕ್ಷಾಪುಟ ವಿನ್ಯಾಸಗಾರರ ಹೆಸರು ಎಲ್ಲಿಯೂ ಉಲ್ಲೇಖವಾಗಿಲ್ಲ.

**೪.೨೩. ಶಿಲ್ಪಿ ಸಿದ್ಧಲಿಂಗಸ್ವಾಮಿಗಳು ರಚಿಸಿದ ಮಾನಸಾರ ಶಿಲ್ಪ ಪುಸ್ತಕದ ಚಿತ್ರಗಳು (೨೦೦೪)**

'ಶಿಲ್ಪಿ ಸಿದ್ಧಲಿಂಗಸ್ವಾಮಿಗಳು ರಚಿಸಿದ ಮಾನಸಾರ ಶಿಲ್ಪ ಪುಸ್ತಕದ ಚಿತ್ರಗಳು' ಎಂಬ ಪುಸ್ತಕ ೨೦೦೪ರಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪ್ರಕಟಿಸಿದುದು. ಇದನ್ನು ರಚಿಸಿದವರು (ಬರೆದವರು) ಎನ್.ಮರಿಶಾಮಾಚಾರ್‌ರವರು ಮೊದಲ ಬಾರಿಗೆ ಇದನ್ನು ಮುದ್ರಣಗೊಳಿಸಿದ್ದು ವಿನಯಾ ಪ್ರಿಂಟ್ಸ್, ಮಧ್ಯದ ಅವಕಾಶದಲ್ಲಿ ಶಿಲ್ಪಿ ಸಿದ್ಧಲಿಂಗ ಸ್ವಾಮಿಗಳು ರಚಿಸಿದ ದೇವಿಯ ವರ್ಣಚಿತ್ರದ ಛಾಯಾಚಿತ್ರ

---

೧೨. ಎನ್. ಮರಿಶಾಮಚಾರ್: ದೃಶ್ಯಕಲಾ ಪ್ರಪಂಚ, ಪು-೮೫-೮೬

ಮುದ್ರಣಗೊಂಡಿದ್ದು, ಅದರ ಮೇಲ್ಭಾಗ ಮತ್ತು ಕೆಳಭಾಗದ (ಮುಖಪುಟದ ತಳಭಾಗದಲ್ಲಿ) ಕಪ್ಪು ಬಣ್ಣದ ಆವರಣಗಳಲ್ಲಿ (ದಪ್ಪಪಟಿಕೆಗಳಲ್ಲಿ) ಕ್ರಮವಾಗಿ ಪುಸ್ತಕದ ತಲೆಬರಹ ಮತ್ತು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ಮತ್ತು ಪದನಾಮ ಹಾಗೂ ವಿಳಾಸಗಳು ಮುದ್ರಿತವಾಗಿವೆ. ಕಮಲದಳಗಳ ಮೇಲೆ ಪದ್ಮಾಸನಸ್ಥಳಾಗಿ ಬಲಗೈಯನ್ನು ಅಭಯ ಮುದ್ರೆಯಲ್ಲಿಯೂ, ಉಳಿದ ಮೂರು ಕೈಗಳಲ್ಲಿ ತಾವರೆ ಮೊಗ್ಗನ್ನು ಹಿಡಿದಿರುವ ಈಕೆ ಹೊಂಬಣ್ಣದಲ್ಲಿ ಪ್ರಕಾಶಮಾನಳಾಗಿ ಕಂಗೊಳಿಸುತ್ತಿದ್ದಾಳೆ. ವರ್ಣಚಿತ್ರವಿರುವ ಆವರಣ ಚಿತ್ರದ ಸುತ್ತ ಕಂಪ್ಯೂಟರ್ ತಂತ್ರಜ್ಞಾನದೊಯೊಂದಿಗೆ ಸೃಷ್ಟಿಸಿದ ನೇರಳೆ ಬಣ್ಣದ ಅಲೆಗಳು ತನ್ಮೂಲಕ ರೂಪುಗೊಂಡ ಬಣ್ಣದ ಏರಿಳಿತ ಚಿತ್ರದ ಒಂದು ಪಾರ್ಶ್ವದಲ್ಲಿ ದಟ್ಟೈಸಿದ ಕಡು ನೇರಳೆ ಬಣ್ಣ ಇವೆಲ್ಲ ರೀತಿಯ ವರ್ಣವೈಖರಿ ಇಲ್ಲಿ ಮೇಳೈಸಿದ್ದು, ಪುಸ್ತಕದೆಡೆಗೆ ದೃಷ್ಟಿಹಾಯಿಸಿದವರ ಮನಸೂರೆಗೊಳ್ಳುವಂತಹ ಲಕ್ಷಣಯುಕ್ತವಾದುದು.

ಮೇಲ್ತುದಿಯ ಪಾರ್ಶ್ವದಲ್ಲಿ ಕಂದು ಬಣ್ಣದ ಚಿಕ್ಕ ಆವರಣದಲ್ಲಿ ಹಳದಿಬಣ್ಣದಲ್ಲಿ ಕನ್ನಡದಲ್ಲಿ ಶಿಲ್ಪಿ ಸಿದ್ಧಲಿಂಗಸ್ವಾಮಿಗಳು ರಚಿಸಿದ ಎಂಬ ಪದಗಳಿದ್ದು (ತಳಭಾಗದಲ್ಲಿಯಾ ಮೇಲ್ತುದಿಯ ಕಂದು ಆವರಣಕ್ಕೆ ಸಮಾನಾಂತರವಾಗಿ ಪುಟ್ಟ ಅಳತೆಯ ಕಂದು ಬಣ್ಣದ ಆವರಣ ರೂಪಿಸಲಾಗಿದೆ. ಬಹುಶಃ ವರ್ಣ ಸಾಮರಸ್ಯದ (colour balance) ದೃಷ್ಟಿಯಿಂದ ಆರೀತಿ ಮಾಡಿರಬಹುದೆಂದು ಅಂದಾಜಿಸಬಹುದಷ್ಟೆ.

ಮುಖಪುಟದ ಮೇಲ್ಭಾಗದ ಕಪ್ಪು ಆವರಣದೊಳಗಿನ ಪುಸ್ತಕ ಶೀರ್ಷಿಕೆ ಹಳದಿ ಬಣ್ಣದ ಕನ್ನಡ ಅಕ್ಷರಗಳಲ್ಲಿ ದೊಡ್ಡ ಗಾತ್ರದಲ್ಲಿ ಬರೆಯಲ್ಪಟ್ಟಿದ್ದು, 'ಶಿಲ್ಪ ಪುಸ್ತಕದ ಚಿತ್ರಗಳು' ಎಂಬ ಪದಗಳು ಬಿಳಿಯ ಬಣ್ಣದಲ್ಲಿವೆ. ಒಟ್ಟಿನಲ್ಲಿ ಈ ಪುಸ್ತಕದ ಶೀರ್ಷಿಕೆಯೇ ವಾಸ್ತವಿಕವಾಗಿ ಒಂದು ವಾಕ್ಯದಷ್ಟು ದೊಡ್ಡಗಿದೆ ಮತ್ತು ತಿಳಿಹಳದಿ ಕಡು ಹಳದಿ ಮತ್ತು ಬಿಳಿಯ ಬಣ್ಣ ಹೀಗೆ ಮೂರು ರೀತಿಯ ಬಣ್ಣಗಳ ಸಂಗಮವಾಗಿರುವುದೂ ಗಮನಿಸತಕ್ಕ ಅಂಶ. ತಳಭಾಗದ ಕಪ್ಪು ಆವರಣ ಪಟ್ಟಿಕೆಯಲ್ಲಿ ತಿಳಿಹಳದಿ ಬಣ್ಣದ ವೃತ್ತದಲ್ಲಿ ಕರ್ನಾಟಕ ಶಿಲ್ಪ ಅಕಾಡೆಮಿಯ ಲಾಂಛನ ಕಪ್ಪುಬಣ್ಣದಲ್ಲಿ ಮುದ್ರಿತವಾಗಿದ್ದರೆ, ಪಕ್ಕದಲ್ಲೇ ಪದನಾಮ ಕನ್ನಡದಲ್ಲಿ ಹಳದಿಬಣ್ಣದಲ್ಲಿ ನಮೂದಾಗಿದೆ. ಅದರ ವಿಳಾಸದ ಅಕ್ಷರಗಳು ಕನ್ನಡದಲ್ಲಿದ್ದು, ಬಿಳಿಯ ಬಣ್ಣದಲ್ಲಿ ಕೂಡಿವೆ. ಇಲ್ಲೂ ಸಹ ಮುಖಪುಟ ಮೇಲ್ಭಾಗಕ್ಕೆ ಸಮತೂಗಿಸುವ ದೃಷ್ಟಿಕೋನ ಈ ಮುಖಪುಟ ವಿನ್ಯಾಸಗಾರರಿಗೆ ಇದ್ದಿರಬಹುದೆಂದು ಅಂದಾಜಿಸಬಹುದು/ ಊಹಿಸಬಹುದಾಗಿದೆ. ಒಟ್ಟಾರೆಯಾಗಿ, ಓದುಗರಲ್ಲಿ ಕುತೂಹಲ ಕೆರಳಿಸುವ/ಸೃಷ್ಟಿಸುವ ಮುಖಪುಟ ಮಾದರಿ ಇದು ಎನ್ನಬಹುದು.

**೪.೨೪. ಸಿ.ಪಿ. ರಾಜಾರಾಂ (೨೦೦೪)**

ಕೆ.ವಿ. ಸುಬ್ರಹ್ಮಣ್ಯಂ ಅವರು ಶಿಲ್ಪಕಲಾ ಅಕಾಡೆಮಿಗಾಗಿ ಬರೆದ 'ಸಿ.ಪಿ. ರಾಜಾರಾಂ' ಎಂಬ ಪುಸ್ತಕ (ಶಿಲ್ಪ ಕಲಾವಿದರ ಮಾಲೆ ೮) ೨೦೦೪ರಲ್ಲಿ ಬೆಂಗಳೂರಿನ ಫ್ರೆಂಡ್ಸ್ ಕಾಮ್-ಟೆಕ್ ಬೆಂಗಳೂರು ಇವರಿಂದ ಪ್ರಥಮ ಮುದ್ರಣ ಕಂಡಿದ್ದು. ಈ ಪುಸ್ತಕದ ಮುಖಪುಟಕ್ಕೆ ಸಿ.ಪಿ. ರಾಜಾರಾಂರವರಿಂದ ಕಾಷ್ಠ ಮಾಧ್ಯಮದಲ್ಲಿ ರಚಿಸಲ್ಪಟ್ಟ ನವ್ಯಶೈಲಿಯ 'ಮುಖವಾಡ' ಎಂಬ ಶಿಲ್ಪಕೃತಿಯ ವರ್ಣಛಾಯಾಚಿತ್ರವನ್ನೇ ಅಚ್ಚಿಸಿ, ಮುಖಪುಟ ವಿನ್ಯಾಸಗೊಳಿಸಲಾಗಿರುವುದು ವಿಶೇಷ. ಮೂಲತಃ 'ಹೆನ್ರಿಮೂರ್' ನಂತಹ ಪಾಶ್ಚಾತ್ಯ

ಶಿಲ್ಪಿಯ ಶಿಲ್ಪ[೧೩] ಕೃತಿಗಳಿಂದ ಪ್ರಭಾವಿತವಾದ ಇವರು (ಸಿ.ಪಿ. ರಾಜಾರಾಂ) ಈ ಶಿಲ್ಪದಲ್ಲಿ ಆ ಸಂದರ್ಭದಲ್ಲೇ ಆಧುನಿಕ ಪ್ರಜ್ಞೆ ಮೂಡಿಸಿಕೊಂಡಿರುವುದು ಗಮನೀಯ ಅಂಶವಾಗುತ್ತದೆ. ಮರದ ತುಂಡನ್ನು ನಯಗೊಳಿಸಿ, ಹೊಳಪು ನೀಡಿ ಆದಿಮಸತ್ವವನ್ನು ಈ ಶಿಲ್ಪದಲ್ಲಿ ಮೇಳೈಸಲಾಗಿದೆ. ಮುಖಪುಟದ ಮಧ್ಯದಲ್ಲಿ ದಟ್ಟಕಂದು ಬಣ್ಣದ ಮೈವಳಿಕೆಯುಕ್ತ ಹಿನ್ನೆಲೆಯಲ್ಲಿ ಆಕರ್ಷಕ ನೆರಳು ಬೆಳಕಿನ ವಿನ್ಯಾಸ ಪೂರ್ಣವಾಗಿ ಶಿಲ್ಪಾಕೃತಿ ಸಂಯೋಜನೆಯಾಗಿದ್ದು ಮೇಲ್ಭಾಗದ ತುದಿಯಲ್ಲಿ ಕಪ್ಪು ಬಣ್ಣದ ಚಿಕ್ಕ ಆವರಣದಲ್ಲಿ ಕೃತಿ ಶೀರ್ಷಿಕೆ ಮತ್ತು ಅದೇ ಕಪ್ಪು ಬಣ್ಣದ ಚಿಕ್ಕ ಅಳತೆಯ ಅಗಲದ ಪಟ್ಟಿಕೆಗಳು ಮುಖಪುಟ ಹಾಳೆಯ ಮೇಲೆ ಸಂಲಗ್ನಗೊಂಡ ಶಿಲ್ಪದ ವರ್ಣಛಾಯಾಚಿತ್ರದ ಅಕ್ಕ ಪಕ್ಕಗಳಲ್ಲಿ ರೂಪಿಸಲ್ಪಟ್ಟಿರುವುದರಿಂದ ದಟ್ಟವರ್ಣ ಮೇಳದಲ್ಲಿಯೇ ವರ್ಣ ಸಮತೋಲನ ಏರ್ಪಟ್ಟಂತಾಗಿ; ಇಲ್ಲಿನ ಮುಖಪುಟ ಕಲಾಪ್ರಜ್ಞೆಹೊಂದಿದ ಆಸಕ್ತ ಮನಸ್ಸುಗಳನ್ನು ಆಕರ್ಷಿಸುವಲ್ಲಿ ಸಫಲವಾಗಿದೆ. ಮೇಲ್ತುದಿಯಲ್ಲಿ ಹಳದಿ ಬಣ್ಣದಲ್ಲಿ ಕೃತಿ ಶೀರ್ಷಿಕೆ ಬರೆಯಲ್ಪಟ್ಟಿದೆ, ತಳಭಾಗದಲ್ಲಿ ಹಳದಿ ಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಹೆಸರು ಮತ್ತು ಬಿಳಿಯ ಬಣ್ಣದಲ್ಲಿ ಅದರ ವಿಳಾಸ ನಮೂದಾಗಿದ್ದು ಪಕ್ಕದಲ್ಲಿಯೇ ಶಿಲ್ಪಕಲಾ ಅಕಾಡೆಮಿಯ ಲಾಂಛನ (ಚಿನ್ಹೆ) ಮುದ್ರಿತವಾಗಿದೆ.

**೪.೨೫. ಧನಂಜಯ ಶಿಲ್ಪಿ (೨೦೦೪)**

'ಧನಂಜಯ ಶಿಲ್ಪಿ' ಎಂಬ ಪುಸ್ತಕ ಶಿಲ್ಪಕಲಾವಿದರ ಮಾಲೆ–೯ನೆಯದಾಗಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವತಿಯಿಂದ ಪ್ರಕಟವಾದುದ್ದು. ಇದರ ಲೇಖಕರು ಡಾ.ವೀರೇಶ್ ಎಸ್. ಬಡಿಗೇರ್ ಎನ್ನುವರು. ೨೦೦೪ ರಲ್ಲಿ ಈ ಪುಸ್ತಕವನ್ನು ಮೊದಲಬಾರಿಗೆ ಮುದ್ರಿಸಿದವರು ಬೆಂಗಳೂರಿನ ಫ್ರೆಂಡ್ಸ್ ಕಾಮ್–ಟೆಕ್ ಇವರು. ಅಮೃತ ಶಿಲಾ ಮಾಧ್ಯಮದಲ್ಲಿ ಧನಂಜಯ ಶಿಲ್ಪಿ ಯವರು ರಚಿಸಿದ ಯುವತಿಯೋರ್ವಳ ಭಾವಶಿಲ್ಪದ ಛಾಯಾಚಿತ್ರವನ್ನೆ ಮುಖಪುಟಕ್ಕೆ ಅಚ್ಚಿಸಿ, ಈ ಪುಸ್ತಕದ ಮುಖಪುಟವಿನ್ಯಾಸ ಮಾಡಲಾಗಿದೆ.

ಇಲ್ಲಿನ ಭಾವಶಿಲ್ಪ ನೈಜ ಶೈಲಿಯದು. ತಲೆ ಕೂದಲಿನ ಸ್ಪಷ್ಟ ವಿವರಪೂರ್ಣ ನಿರೂಪಣೆ ತಾರುಣ್ಯ ತುಂಬಿದ ಯುವತಿಯ ಮುಖದಲ್ಲಿ ಹುದುಗಿರುವ ಸಂಕೋಚ ಭಾವ, ಮುಗ್ಧ, ಕುತೂಹಲಭರಿತ ಬಟ್ಟಲು ಕಂಗಳ ನೋಟ, ತುಟಿಗಳ ಸುಂದರ ನಿರೂಪಣೆಯಲ್ಲಿ ಅಂತರ್ಗತವಾದ ಸ್ನಿಗ್ಧ ಮುಗುಳ್ನಗು, ಯುವತಿಯ ಮುಖಚರ್ಯೆದಲ್ಲಿನ ಸುಕೋಮಲತ್ವ, ಸುಂದರವಾದ ಮೂಗು ಮತ್ತು ಶಿಲ್ಪಿಸಬೇಕಾದರೆ ಆಯ್ದುಕೊಂಡ ಮುಖಭಂಗಿ ಈ ಎಲ್ಲ ಲಕ್ಷಣಗಳೂ ಈ  ಶಿಲ್ಪದಲ್ಲಿ ಪ್ರಬುದ್ಧ ಮಟ್ಟದಲ್ಲಿ ತೋರ್ಪಡಿಕೆಯಾಗಿವೆ. ಗಣಕಯಂತ್ರದ ಸಹಾಯದಿಂದ ಹಿನ್ನೆಲೆಯಲ್ಲಿ ದಟ್ಟ ಮಧ್ಯಮ ಇತ್ಯಾದಿ ನೆಲೆಗಳಲ್ಲಿ ಶಿಲ್ಪದ ಹಿನ್ನೆಲೆಯಲ್ಲಿ ಮತ್ತು ಮುಖಪುಟ ಹಾಳೆಯ ತುಂಬೆಲ್ಲ ಓರೆಯಾಗಿ ರಭಸವಾಗಿ ಮೇಲಿಂದ ಕೆಳಕ್ಕೆ ಸಾಗಿರುವ ಹಸಿರುಬಣ್ಣದ ಬೀಸುಗಳಲ್ಲಿ ಭಾವಶಿಲ್ಪದ ಛಾಯಾಚಿತ್ರ ಅಂಚುರೇಖೆಗಳು ಇಲ್ಲದೆ ಚೌಕಟ್ಟು ರೇಖೆಗಳು ಇಲ್ಲದೆ ಆ ಹಸಿರು ಬಣ್ಣದ ಬೀಸುಗಳ ಮಧ್ಯದಿಂದಲೇ ಉದಯಿಸಿದ ಭ್ರಮೆ ಉಂಟುಮಾಡುವ ತರದಲ್ಲಿ ಸಮೀಕರಣಗೊಂಡಿರುವುದು

೧೩. Edith Tomory: A History of fine arts in India & the west page-486-487

ಈ ಮುಖಪುಟ ವಿಶೇಷ ಲಕ್ಷಣ ಮತ್ತು ಆಕರ್ಷಣೀಯ ಅಂಶವೂ ಹೌದು. ಈ ಮುಖಪುಟದ ಮೇಲ್ಭಾಗದ ಚಿಕ್ಕ ಅಳತೆಯ ಅಗಲದ ಪಟ್ಟಿಕೆಯ ಆವರಣದಲ್ಲಿ ಬಿಳಿಯ ಬಣ್ಣದಲ್ಲಿ ಪುಸ್ತಕದ ಹೆಸರು ಮುದ್ರಣಗೊಂಡಿದೆ. ತಳಭಾಗದಲ್ಲಿನ ಹಸಿರು ಪಟ್ಟಿಕೆಯಲ್ಲಿ ಅಚ್ಚಹಳದಿ ಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಬಿಳಿಯಬಣ್ಣದ ಅಕ್ಷರಗಳಲ್ಲಿ ಅದರ ವಿಳಾಸವನ್ನು ಬರೆಯಲಾಗಿದ್ದು, ಅದರ ಪಕ್ಕದಲ್ಲೆ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ಮುದ್ರಿತವಾಗಿದೆ. ಹಿಂಬದಿ ರಕ್ಷಾಪುಟದಲ್ಲಿ ಗಣಕಯಂತ್ರ ಸಹಾಯದಿಂದ ಪುಟದ ತುಂಬೆಲ್ಲ ಹಸಿರು ಬಣ್ಣ ನೀಡಲಾಗಿದ್ದು; ಅದರ ಮೇಲೆ ಮೇಲಿಂದ ಕೆಳಗೆ ಓರೆಯಾಗಿ ದಟ್ಟ, ಮಧ್ಯಮ, ತಿಳಿ(ಮಂದ) ಹೀಗೆ ಬೇರೆ ಬೇರೆ ರೀತಿಯ ಹಸಿರು ಬಣ್ಣದ ಬೀಸುಗಳು ಒಂದೆ ಲಯಗತಿಯಲ್ಲಿ ಸಾಗಿದಂತೆ ರೂಪಿತವಾಗಿವೆ. ಮೇಲ್ತುದಿ ಮತ್ತು ಕೆಳಗಡೆ (ಕೆಳತುದಿ) ಸಣ್ಣ ಗಾತ್ರದ ಹಸಿರುಪಟ್ಟಿಕೆ / ಆವರಣ (ಮೇಲ್ತುದಿ ದಟ್ಟಹಸಿರು, ಕೆಳತುದಿ ದಟ್ಟ ಮತ್ತು ಮಂದ ಹಸಿರು ಬಣ್ಣಗಳಿಂದ ಕೂಡಿದೆ) ನಿರ್ಮಿಸಲ್ಪಟ್ಟಿದ್ದು, ಕೆಳತುದಿಯ ಹಸಿರು ಪಟ್ಟಿಕೆಯ ಆವರಣದ ಮಧ್ಯ ಹಸಿರು ಬಣ್ಣದಲ್ಲಿ ಶಿಲ್ಪಕಲಾ ಅಕಾಡೆಮಿಯ ಲಾಂಛನವನ್ನು ಮುದ್ರಿಸಲಾಗಿದೆ. ಈ ಪುಸ್ತಕದ ಮುಖಪುಟವೂ ಸಹ ಒಟ್ಟಾರೆ ನೋಟದಲ್ಲಿ ಸುಂದರವಾದುದಾಗಿಯೇ ಕಾಣಿಸುತ್ತದೆ.

**೪.೨೬. ಎಂ. ಪರಮೇಶ್ವರಾಚಾರ್ಯ (೨೦೦೪)**

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಶಿಲ್ಪ ಕಲಾವಿದರ ಮಾಲೆ ೧೦ರ ರೂಪದಲ್ಲಿ ಹೊರಬಂದಂತಹ ಪುಸ್ತಕ 'ಎಂ.ಪರಮೇಶ್ವರಾಚಾರ್ಯ' ಎಂಬುದು. ಇದರ ಲೇಖಕರು ಡಾ.ಎಂ. ಪೂರ್ವಾಚಾರ್. ೨೦೦೪ರಲ್ಲಿ ಬೆಂಗಳೂರಿನ ಫ್ರೇಂಡ್ಸ್ ಕಾಮ್‌ಟೆಕ್ ಇವರಿಂದ ಮೊದಲ ಮುದ್ರಣ ಕಂಡ ಈ ಕೃತಿಯ ಮುಖಪುಟ ಶಿಲ್ಪಿ ಎಂ. ಪರಮೇಶ್ವರಾಚಾರ್ಯರಿಂದ ರಚಿತವಾದ ದೇವತೆಯೋರ್ವಳ ಸಮಭಂಗಿಯಲ್ಲಿ ಶಿಲಾಮೂರ್ತಿಯ ಛಾಯಾಚಿತ್ರವನ್ನು ಅಚ್ಚಿಸಿ, ಮುಖಪುಟ ವಿನ್ಯಾಸಗೊಳಿಸಲಾಗಿದೆ. ಅಚ್ಚಿಸಲ್ಪಟ್ಟಿರುವ ಈ ಶಿಲ್ಪಕೃತಿ 'ಹೊಯ್ಸಳ ಶೈಲಿಗೆ'[೧೪] ಅನುಗುಣವಾಗಿದ್ದು (ದೇವಿಯ ದೇಹದ ಮೇಲಿನ ಆಭರಣಗಳಲ್ಲಿ ಕಿರೀಟ ವಿನ್ಯಾಸ, ದೇವಿಯ ಹಿಂಗಡೆಯಲ್ಲಿರುವ ಪ್ರಭಾವಳಿಯ ಅಲಂಕಾರ ವಿನ್ಯಾಸ ಇವೆಲ್ಲ ಹೊಯ್ಸಳಶೈಲಿಗೆ ಬದ್ಧವಾದವುಗಳು), ಮುಂಗಡೆಯ ಬಲಗೈ ಅಭಯ ಹಸ್ತದಲ್ಲಿದ್ದು, ಮುಂಗಡೆಯ ಎಡಗೈ ವರದ ಹಸ್ತದಲ್ಲಿದೆ.

ಹಿಂಭಾಗದ ಎರಡೂ ಕೈಗಳಲ್ಲಿ ಕಮಲದ ಹೂ ಇದೆ. ದೇವಿಯ ಮುಖದಲ್ಲಿ ಕಾರುಣ್ಯಪೂರಿತ ಭಾವ ವ್ಯಕ್ತಗೊಂಡಿದ್ದು ಶಿಲ್ಪಿ ನಾಜೂಕಾದ ಕೆತ್ತನೆಯ ಜೊತೆಗೆ ಅಂಗಾಂಗ ಸಮತೋಲನ ಮತ್ತು ಸಂಪ್ರದಾಯ ಬದ್ಧತೆಯನ್ನು ಸಮರ್ಥವಾಗಿ ಕಾಯ್ದುಕೊಂಡಿದ್ದಾರೆ. ದೇವಿಯ ವಿಗ್ರಹದ ಅಡಿಯ ಶಿಲಾಮಯ ಪಾಣಿಪೀಠ ಮೂರು ಹಂತಗಳಲ್ಲಿ ಅಷ್ಟಕೋನ ನಕ್ಷತ್ರಾಕಾರದಲ್ಲಿ ರಚನೆಗೊಂಡಿದ್ದು (ಇದೂ ಸಹ ಹೊಯ್ಸಳಶೈಲಿ ಲಕ್ಷಣ) ಮಧ್ಯದಲ್ಲಿ ಹೂವಿನ ಆಕೃತಿ ಅಲಂಕಾರ ಪೂರ್ಣವಾಗಿ ಶಿಲ್ಪಿತವಾಗಿದೆ. ಈ ಶಿಲ್ಪದ ಛಾಯಾಚಿತ್ರದ

---

೧೪. ಎಸ್. ಮರಿಶಾಮಚಾರ್: ಭಾರತೀಯ ಶಿಲ್ಪಕಲೆ.ಪು ೭೫-೭೮

ಹಿಂದುಗಡೆ ತಿಳಿ ಆಕಾಶ ನೀಲಿಬಣ್ಣವಿರುವುದರಿಂದ ಈ ಶಿಲ್ಪ ಎದ್ದು ಕಾಣುತ್ತದೆ. ದಟ್ಟ ನೀಲಿಬಣ್ಣದ ಹಾಳೆಯ ಮೇಲೆ ಮೇಲೆ ಕೆಳಗೆ ಎಡ-ಬಲ ಪಾರ್ಶ್ವಗಳಲ್ಲಿ ಲೆಕ್ಕಚಾರಯುಕ್ತವಾಗಿ ಅಂತರ ಬಿಟ್ಟು ಛಾಯಾಚಿತ್ರದ ಅಂಚಿಗೆ ನಿಖರವಾದ ಬಿಳಿಯ ಬಣ್ಣದ ಅಂಚುರೇಖೆ ಎಳೆಯಲ್ಪಟ್ಟಿರುವುದು ಈ ಪುಸ್ತಕದ ಮುಖಪುಟದ ಆಕರ್ಷಕ ಅಂಶಗಳಲ್ಲಿ ಒಂದಾಗಿದೆ. ಮೇಲ್ಗಡೆ ಮಧ್ಯದಲ್ಲಿ ಅಚ್ಚಬಿಳಿಯ ಬಣ್ಣದಲ್ಲಿ ಕೃತಿ ಶೀರ್ಷಿಕೆ ಬರೆಯಲಾಗಿದ್ದು, ಛಾಯಾಚಿತ್ರದ ಕೆಳಗಡೆ ಮಧ್ಯದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಲಾಂಛನ ಮತ್ತು ಪದನಾಮ ಮತ್ತು ವಿಳಾಸ ಮುದ್ರಿಸಲಾಗಿದೆ. ಪದನಾಮ ಮತ್ತು ವಿಳಾಸದ ಅಕ್ಷರಗಳು ಅಚ್ಚ ಹಳದಿ ಬಣ್ಣದಲ್ಲಿವೆ ಒಟ್ಟಾರೆಯಾಗಿ ತುಂಬ ಅಚ್ಚುಕಟ್ಟಾಗಿ ರೂಪಿತವಾದ ಮುಖಪುಟವಿದು ಎನ್ನಬಹುದು.

**೪.೨೭ ಲೋಹಫಲಕ ಮಾಂತ್ರಿಕ ಎಲ್.ಪಿ. ಅಂಚನ್ (೨೦೦೬)**

ಚಿ.ಸು.ಕೃಷ್ಣಸೆಟ್ಟಿಯವರು ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಬರೆದುದು 'ಲೋಹಫಲಕ ಮಾಂತ್ರಿಕ ಎಲ್.ಪಿ.ಅಂಚನ್' ಎಂಬ ಪುಸ್ತಕ. ಇದನ್ನು ೨೦೦೬ ರಲ್ಲಿ ಮೊದಲು ಮುದ್ರಿಸಿದವರು ಎಂ.ಎಸ್.ಗ್ರಾಫಿಕ್ಸ್. ಕಂದು ಬಣ್ಣದ ಮುಖಪುಟದ ಹಾಳೆಯ ಮೇಲೆ ಎಲ್.ಪಿ.ಅಂಚನ್‌ರವರು ಲೋಹದ ತಗಡಿನ ಮೇಲೆ ರಚಿಸಿದ ಸ್ತ್ರೀಯೋರ್ವಳ ಶಿಲ್ಪದ ಛಾಯಾಚಿತ್ರವನ್ನು ಮುದ್ರಿಸಲಾಗಿದೆ. ಶಿಲ್ಪದ ಛಾಯಾಚಿತ್ರದ ಸ್ತ್ರೀಯೋರ್ವಳ ಶಿಲ್ಪದ ಛಾಯಾಚಿತ್ರವನ್ನು ಮುದ್ರಿಸಲಾಗಿದೆ. ಶಿಲ್ಪದ ಛಾಯಾಚಿತ್ರದ ಹಿಂದುಗಡೆ ಕಂದು ಬಣ್ಣದ ಏರಿಳಿತ ತೋರಿಸುವುದರ ಮೂಲಕ ಶಿಲ್ಪದ ಛಾಯಾಚಿತ್ರಕ್ಕೆ ಒಂದಿಷ್ಟು ಫೋಕಸ್ ನೀಡುವ ಪ್ರಯತ್ನ ನಡೆದಿದೆ. ಅಲ್ಲದೆ ಮುಖಪುಟದ ತಳಭಾಗದಲ್ಲಿ ಕಪ್ಪು ಮಿಶ್ರಿತ ಕಂದು ಬಣ್ಣ ನೀಡಲಾಗಿದ್ದು; ಮೇಲ್ಗಡೆಗೆ ಹೋದಂತೆ ಕಂದು ಬಣ್ಣದ ಜೊತೆ ಅದು ಸಮರಸವಾಗಿದೆ.

ಇಲ್ಲೆಲ್ಲ ಗಣಕಯಂತ್ರ ತಂತ್ರಜ್ಞಾನದ ನೆರವು ವ್ಯಾಪಕವಾಗಿ ಪಡೆದುಕೊಂಡಿರುವುದು ಸುಸ್ಪಷ್ಟ. ಮುಖಪುಟ ಹಾಳೆಯ ಮೇಲೆ ಲೋಹ ತಗಡಿನ ಶಿಲ್ಪದ ಛಾಯಾಚಿತ್ರ ಸಂಯೋಜನೆ ಕಲಾವಿದ್ಯಾರ್ಥಿಗಳು ಕಲಾಕೃತಿಯನ್ನು ಮೌಂಟ್‌ಬೋರ್ಡಿಗೆ ಲಗತ್ತಿಸುವಾಗ ತೋರುವ/ ಆಯೋಜಿಸುವ ಸ್ಥಳಾವಕಾಶದ ಕಲ್ಪನೆಯನ್ನೇ ಜ್ಞಾಪಿಸುವಂತಿದೆ. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ಶುದ್ಧ ಅಕಾಡೆಮಿಕ್ ಶಿಸ್ತಿನಿಂದ ಲೋಹ ತಗಡು ಶಿಲ್ಪದ ಛಾಯಾಚಿತ್ರ ಸಂಯೋಜಿಸಲ್ಪಟ್ಟಿದೆ. ಮುಖಪುಟದ ಮೇಲ್ಭಾಗದಲ್ಲಿ ಕೇಸರಿ ಮತ್ತು ಹಳದಿಬಣ್ಣಗಳಿಂದ ಕೂಡಿದ ಕನ್ನಡ ಅಕ್ಷರಗಳಲ್ಲಿ ಕೃತಿಯ ತಲೆಬರಹ/ ಶೀರ್ಷಿಕೆ ರೂಪಿಸಲ್ಪಟ್ಟಿದ್ದು, ಅಕ್ಷರಗಳಿಗೆ ಕಂಪ್ಯೂಟರ್ ತಂತ್ರನೈಪುಣ್ಯದ ಮೂಲಕ ಅಲ್ಲಲ್ಲಿ ಹಳದಿ ಬಣ್ಣದ ಹೈಲೈಟ್ ತೋರಿಸಲಾಗಿದೆ. ಅಲ್ಲಿಯೇ ಕೆಳಗೆ ಬಿಳಿಬಣ್ಣದಲ್ಲಿ ಕನ್ನಡದಲ್ಲಿ ಚಿಕ್ಕದಾಗಿ ಲೇಖಕರ ಹೆಸರೂ ಮುದ್ರಿತವಾಗಿದೆ. ಶಿಲ್ಪದ ಛಾಯಾಚಿತ್ರದ ತಳಭಾಗದಲ್ಲಿ ಪಾರ್ಶ್ವದಲ್ಲಿ ಕೆಂಪು ವೃತ್ತಾವರಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಲಾಂಛನವಿದೆ. ಅಲ್ಲೇ ತಿಳಿಗಂದು ಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪದನಾಮ ಕನ್ನಡದಲ್ಲಿ ನಮೂದಿಸಲ್ಪಟ್ಟಿದೆ ಒಟ್ಟಾರೆಯಾಗಿ ಇಲ್ಲಿನ ವಿನ್ಯಾಸ ಕ್ರಮವನ್ನು ಗಮನಿಸಿದರೆ ಇದೊಂದು ಉತ್ತಮ ಮತ್ತು ಆಕರ್ಷಕ ಮುಖಪುಟ ವಿನ್ಯಾಸ ಎಂದು ಅಭಿಪ್ರಾಯ ಪಡಬಹುದು.

೪.೨೮ ಶಿಲ್ಪಿ ವೆಂಕಟಾಚಾರ್ (೨೦೦೬)

'ಶಿಲ್ಪಿ ವೆಂಕಟಾಚಾರ್' ಎಲ್.ಶಿವಲಿಂಗಪ್ಪರವರಿಂದ ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಬರೆಯಲ್ಪಟ್ಟ ಪುಸ್ತಕ. ೨೦೦೬ರಲ್ಲಿ ಎಂ. ಎಸ್. ಗ್ರಾಫಿಕ್ಸ್ ಇದನ್ನು ಮೊದಲು ಮುದ್ರಣಗೊಳಿಸಿತು. ತಳಭಾಗದಲ್ಲಿ ಶಿಲ್ಪಿ ವೆಂಕಟಾಚಾರ್‌ರವರು ನಿರ್ಮಿಸಿದ ದಂತ/ಲೋಹ/ ಕಾಷ್ಠ ಶಿಲ್ಪವೊಂದರ ಛಾಯಾಚಿತ್ರವನ್ನು, ಮೇಲ್ಭಾಗದಲ್ಲಿ ಶಿಲ್ಪಿ ವೆಂಕಟಾಚಾರ್‌ರವರ ಭಾವಚಿತ್ರವನ್ನು ಹೊಂದಿದ್ದು ತಳಪಾರ್ಶ್ವದಲ್ಲಿನ ಕಿರಿಜಾಗದಲ್ಲಿ ಬೂದುಬಣ್ಣ ಅದರೊಟ್ಟಿಗೆ ಕಂದು ಹಸಿರು ಬಣ್ಣದ ಬಾಗಿ ಸಾಗಿದ ದೊಡ್ಡ ಪಟ್ಟಿ, ಅದರೊಟ್ಟಿಗೆ ಕಂದು ಬಣ್ಣದೊಂದಿಗೆ ಬೆರೆತು ಮೊದಲಿನ ಪಟ್ಟಿಯಂತೆಯೇ ಸಾಗಿದ ತಿಳಿಗೆಂಪು ಬಣ್ಣದ ಮಗದೊಂದು ಕಿರಿದಾದ ಪಟ್ಟಿ, ಮೇಲ್ಭಾಗದಲ್ಲಿ ಒಂದಿಷ್ಟು ಜಾಗದಲ್ಲಿ ರೂಪಿಸಿದ ತಿಳಿಗಂದು ಬಣ್ಣ. ಅದರ ಕೆಳಗಡೆಯೇ ಉಳಿದ ಪಟ್ಟಿಗಳ ವಿರುದ್ಧವಾಗಿ ಸಾಗಿಹೋದ ದಟ್ಟ ಕಪ್ಪು ಬಣ್ಣದ ಪಟ್ಟಿ. ಎಲ್ಲಾ ಪಟ್ಟಿಗಳೂ ಬಾಗುತ್ತ ಬಾಗಿಕೊಂಡು ಮೇಲಕ್ಕೆ ಸಾಗುವಾಗ ತಳಭಾಗದಲ್ಲಿ ಕಪ್ಪುವರ್ಣೀಯ ದಟ್ಟತೆಯನ್ನೇ ಒಡಲೊಳಗಿರಿಸಿಕೊಂಡು ಮೇಲಕ್ಕೆ ಮೇಲಕ್ಕೆ ಸಾಗಿದಂತೆ ತಿಳಿಯಾದ ಬಣ್ಣ ಪಡೆಯುತ್ತ ಕೊನೆಯಲ್ಲಿ (ಮೇಲ್ಭಾಗದಲ್ಲಿ) ತಮ್ಮದೇ ಅದೊಂದು ವಿಶಿಷ್ಟ ಬಣ್ಣ ತಳೆದಂತಹವುಗಳು. ಕಂದು ಹಸಿರಿನ ಪಟ್ಟಿಯಲ್ಲಿನ ಕಲಾಕೃತಿಯ ಬೃಹತ್ ಛಾಯೆಯೂ ಸಹ ಇಲ್ಲಿ ಕೇವಲ ಛಾಯೆಯಾಗಿ ಮಾತ್ರ ರೂಪುಗೊಂಡಿದೆ, ಮುಖಪುಟದಲ್ಲೊಂದಿಷ್ಟು ದಟ್ಟವರ್ಣ ನಿರ್ಮಿಸಿದ ಆಕೃತಿ ವಿಶಿಷ್ಟವಾಗಿಯೂ ಮೂಡಿಬಂದಿದೆ.

'ಎಲ್ಲ ನಿರ್ವಹಣೆಯು ಕಂಪ್ಯೂಟರ್ ತಂತ್ರಜ್ಞಾನಾಧಾರಿತವಾಗಿರುವುದಲ್ಲದೆ ಅದನ್ನು ಸಮರ್ಥವಾಗಿ ದುಡಿಸಿಕೊಂಡು ವರ್ಣಗಳ ಏರಿಳಿತ, ಪೂರಕವರ್ಣಗಳ ದಟ್ಟಛಾಯಾಂಕನ ತೋರ್ಪಡಿಕೆ, ಮಾನವ ಹಸ್ತ ಕೌಶಲ್ಯದಲ್ಲಿ ಕಂಡುಕೊಳ್ಳಲು ಸಾಧ್ಯವಾಗದ ವರ್ಣಸಮ್ಮಿಳನವೇರ್ಪಡಿಸಿ ಕುತೂಹಲಕ್ಕೆಡೆ ಮಾಡಿದ ಪರಿ ಇವೆಲ್ಲವೂ ಇಲ್ಲಿನ ವಿನ್ಯಾಸಗಾರಿಕೆಯ ಪ್ರೌಢತ್ವಕ್ಕೆ ನಿದರ್ಶನಗಳಾಗುತ್ತವೆ. ತನ್ಮೂಲಕ ಸಹೃದಯ ಓದುಗರನ್ನು ಸೆಳೆಯುತ್ತದೆ. ಬಹಳ ಹೊಸತನದ ಪರಿಕಲ್ಪನೆಯ ಮುಖಪುಟವೆಂಬ ಭಾವನೆಯನ್ನು ನೋಡುಗರಲ್ಲಿ ಮೂಡಿಸಬಲ್ಲ ಮುಖಪುಟ ವಿನ್ಯಾಸವಿದೆಂದು ಅಭಿಪ್ರಾಯಪಡಬಹುದು.'[೧೫]

ಶಿಲ್ಪಿ ವೆಂಕಟಾಚಾರ್‌ರವರ ಭಾವಚಿತ್ರದ ಕೆಳಗಡೆ ಕೇಸರಿ ಹಳದಿ ಬಣ್ಣಗಳಲ್ಲಿ 'ಶಿಲ್ಪಿ' ಎಂದು; ಬಿಳಿ ಮತ್ತು ಬೂದು ಬಣ್ಣದಲ್ಲಿ ವೆಂಕಟಾಚಾರ್ ಎಂದೂ ಕನ್ನಡದಲ್ಲಿ ಅತ್ಯಂತ ಸುಲಲಿತವಾಗಿ ಓದುಗರ ನೋಟಕ್ಕೆ ಸಿಗುವಂತೆ ತುಸುದೊಡ್ಡದಾಗಿಯೇ ಬರೆದಿದ್ದು, ಅದರ ಕೆಳಗಡೆ ಪುಟ್ಟ ಕನ್ನಡ ಅಕ್ಷರಗಳಲ್ಲಿ ಕೃತಿ ಲೇಖಕರ ಹೆಸರು ನಮೂದಾಗಿದೆ.

ಭಾವಚಿತ್ರಕ್ಕೆ ಸಮಾಂತರವಾಗಿ ಮುಖಪುಟ ತಳಭಾಗದಲ್ಲಿ ಕಂದು ಹಸಿರಿನ ವೃತ್ತಾವರಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನವನ್ನು ಅದರ ಕೆಳಗಡೆ ಅದೇ ಕಂದು ಹಸಿರು ಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪದನಾಮವನ್ನು ಕನ್ನಡದಲ್ಲಿ ಬರೆಯಲಾಗಿದೆ.

೧೫. ಸಂದರ್ಶನ : ಎಸ್.ಆರ್. ಬಡಿಗೇರ (ಮುಖಪುಟ ಕಲಾವಿದರು), ಬೆಂಗಳೂರು ದಿ: ೨೦೧೫

### ೪.೨೯ ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ (೨೦೦೭)

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸಲುವಾಗಿ ಕೆ.ವಿ.ಸುಬ್ರಮಣ್ಯಂ ಅವರಿಂದ ರಚಿತವಾದ ಪುಸ್ತಕ 'ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ' ಎಂಬುದಾಗಿದ್ದು, ಅದು ಮೊದಲ ಮುದ್ರಣ ಗೊಂಡಿದ್ದು ೨೦೦೭ರಲ್ಲಿ. ಈ ಪುಸ್ತಕ ಮುಖಪುಟ ವಿನ್ಯಾಸಕ್ಕೆ ಪುಷ್ಪಮಾಲಾ ಮತ್ತು ಸುರೇಖಾ ಎಂಬ ಇಬ್ಬರು ಕಲಾವಿದೆಯರ ಕಲಾಕೃತಿ ಬಳಸಿಕೊಳ್ಳಲಾಗಿದೆ. ಅಲ್ಲಲ್ಲಿ ಕಂದು ವರ್ಣ ಏರಿಳಿತ (Tonal Variation) ಹೊಂದಿದ್ದು. ಅದೇ ಕಂದು ಬಣ್ಣದಲ್ಲಿಯೆ ಪೂರ್ತಿ ಅವರಣ ಭರ್ತಿಗೊಂಡಿರುವ ಮುಖಪುಟವದು. ಈ ಮುಖಪುಟದ ತಳಭಾಗದಲ್ಲಿ ಪುಷ್ಪಮಾಲಾರವರಿಂದ ರಚಿತವಾದ ಟೆರ್ರಾಕೋಟಾ ಮಾಧ್ಯಮದ ಹಾದಿಗಳ ಕಲ್ಪನೆಗಳ ಛಾಯಾಚಿತ್ರವಿದೆ, ಮೇಲ್ತುದಿಯಲ್ಲಿ ಸುರೇಖಾರವರ ಕಲಾಕೃತಿಯೊಂದರ ಪುಟ್ಟ ಛಾಯಾಚಿತ್ರ ಅಳವಡಿಕೆಯಾಗಿದೆ.

ಮುಖಪುಟದ ಮೇಲ್ತುದಿಯಲ್ಲಿ ಮುದ್ರಿಸಿರುವ ಪುಟ್ಟ ಭಾವಚಿತ್ರ ತುಂಬಾ ಅಸ್ಪಷ್ಟವಾಗಿ (Blurb) ಮಾಧ್ಯಮ ಮೂಡಿಬಂದಿದೆ. ಕೆಳಗಡೆ ಮುದ್ರಣಗೊಂಡಿರುವ ಹಾದಿಗಳ ಟೆರ್ರಾಕೋಟಾ ಮಾಧ್ಯಮ ಕಲಾಕೃತಿಯ (ನೈಜಶೈಲಿಗೆ ತುಂಬ ಹತ್ತಿರವಾದ ಕಲಾಕೃತಿಯದು) ಛಾಯಾಚಿತ್ರ ಮುಖಪುಟದಲ್ಲಿ ಗಮನಸೆಳೆಯುವಂತಹದು ಮತ್ತು ಕಂದು ಬಣ್ಣದ ಹಾಳೆಯ ಬಣ್ಣದೊಂದಿಗೆ ಸಾಕಷ್ಟು ಬೆಳೆಯುವುದರಿಂದ ಮಂದ ವರ್ಣದ ಸಾಮರಸ್ಯ ಉಂಟುಮಾಡಿರುವಂತಹದು. ಈ ಮುಖಪುಟದಲ್ಲಿ ಇದರ ವಿನ್ಯಾಸಕಾರರು ಸಾಮಾನ್ಯ ಓದುಗ/ನೋಡುಗನ ಚಿತ್ತಾಕರ್ಷಕ ಮತ್ತು ನೋಟಕರ್ಷಣದತ್ತ ಲಕ್ಷ್ಯ ಕೊಡದೆ ಶಾಸ್ತ್ರೀಯ ಕಲಾಭ್ಯಾಸಿಗಳು ನಿರ್ವಹಿಸುವ ವರ್ಣ ಸಾಂಗತ್ಯತೆಯಂತಹ ಗುಣಭ್ರಮದತ್ತ ಹೆಚ್ಚಿನ ಲಕ್ಷ್ಯ ವಹಿಸಿದಂತಿದೆ. ಮೇಲ್ಗಡೆಯ ಪಾರ್ಶ್ವದಲ್ಲಿ ಮೇಲಕ್ಕೆ ಸಣ್ಣ ಪಟ್ಟಿಯಂತೆ ಕಂದು ಮಿಶ್ರಿತ ಕೆಂಪು ಲೇಪಿಸಲ್ಪಟ್ಟಿದೆ ಬಹುಷಃ ಅದು ಹಾದಿಗಳ ಆಕೃತಿಗಳ ಸಮತಲದಲ್ಲಿ ನಿರ್ಮಾಣಗೊಂಡಿರುವ/ಸೃಷ್ಟಿಸಿರುವ ಬಣ್ಣಕ್ಕೊಂದಿಷ್ಟು ಸಮತೋಲನ ನೀಡುವ ಉದ್ದೇಶವಾಗಿರಬಹುದೆಂದು ಊಹಿಸಬಹುದು. ಅಚ್ಚಹಳದಿ ಬಣ್ಣದಲ್ಲಿ ಮುಖಪುಟದ ಮೇಲ್ತುದಿಯಲ್ಲಿ ಕನ್ನಡಾಕ್ಷರಗಳಲ್ಲಿ ಈ ಕೃತಿ ಲೇಖಕರ ಹೆಸರಿದೆ. ತಳಭಾಗದಲ್ಲಿ ಚಿಕ್ಕದಾಗಿ ಕರ್ನಾಟಕ ಶಿಲ್ಪಕಾಲ ಅಕಾಡೆಮಿಯ ಲಾಂಛನ ಅಚ್ಚಹಳದಿ ವೃತ್ತಾವರಣದಲ್ಲಿದೆ ಮತ್ತು ಪಕ್ಕದಲ್ಲಿ ಅಚ್ಚ ಬಿಳಿಬಣ್ಣದ ಕನ್ನಡ ಅಕ್ಷರಗಳಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪದನಾಮವಿದೆ. ಸಮಕಾಲೀನ ಸತ್ವದಿಂದ ಕೂಡಿದ ಮುಖಪುಟವಿದು ಎಂದು ಅಭಿಪ್ರಾಯಪಡಬಹುದು.

### ೪.೩೦. ಆರ್.ಎಸ್. ನಾಯ್ಡು ವ್ಯಕ್ತಿ ಮತ್ತು ಕಲೆ (೨೦೦೮)

ಎಂ.ಹೆಚ್.ಕೃಷ್ಣಯ್ಯನವರಿಂದ ಸಂಪಾದನೆಗೊಂಡ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವತಿಯಿಂದ ಲಕ್ಷ್ಮೀ ಮುದ್ರಣಾಲಯದವರಿಂದ ೨೦೦೮ರಲ್ಲಿ ಮೊದಲ ಮುದ್ರಣಕಂಡ ಪುಸ್ತಕ 'ಆರ್.ಎಸ್. ನಾಯ್ಡು ವ್ಯಕ್ತಿ ಮತ್ತು ಕಲೆ' ಎಂಬುದು. ಈ ಮುಖಪುಟ ಕೇಂದ್ರಭಾಗದಲ್ಲಿ ಆರ್.ಎಸ್.ನಾಯ್ಡು ವಿರಚಿತ ದ.ರಾ.ಬೇಂದ್ರೆಯವರ ಪ್ಲಾಸ್ಟರ್ ಆಫ್ ಪ್ಯಾರಿಸ್ ಮಾಧ್ಯಮದ ಭಾವಶಿಲ್ಪದ ಛಾಯಾಚಿತ್ರವನ್ನು ಕೊಲ್ಯಾಜ್

ಮಾದರಿಯಲ್ಲಿ ಮುದ್ರಣಗೊಳಿಸಲಾಗಿದೆ. ಸುತ್ತೆಲ್ಲಾ ಸಪಾಟಾದ (Flat) ಕಂದು ಬಣ್ಣವಿದೆ. ಮುಖಪುಟದ ಹಾಳೆಯಲ್ಲಿ ಎಲ್ಲಿಯೂ ಯಾವುದೇ ರೀತಿಯ ಮೈವಳಿಕಾ ತಂತ್ರಗಾರಿಕೆಯಾಗಲಿ, ಬಣ್ಣಗಳ ಏರಿಳಿತ ಚಮತ್ಕಾರವಾಗಲಿ ಇರದೆ, ತುಂಬ ಸರಳ ಮಾದರಿಯಲ್ಲಿ ಚಪ್ಪಟೆಯಾದ ಗಾಢ ಕಂದು ಬಣ್ಣವಿದೆ. ಹಾಗಾಗಿ ಬಿಳಿಯ ಬಣ್ಣದಲ್ಲಿರುವ ಕಲಾಕೃತಿಯ ಛಾಯಾಚಿತ್ರದಲ್ಲಿ ಏರ್ಪಟ್ಟಿರುವ 'ಶೇಡ್' (ಛಾಯಾಕರಣ) (Shade) ಒಂದು ಮಗ್ಗುಲಿನಿಂದ ಮಾತ್ರ ಏರ್ಪಟ್ಟು ಅದ್ಭುತವಾದ ನೆರಳು ಬೆಳಕಿನ ಪರಿಣಾಮವನ್ನು ಉಂಟುಮಾಡಿರುವುದರಿಂದ ಕವಿವರ್ಯರ ಭಾವಶಿಲ್ಪಕ್ಕೆ ಅಕ್ಷರಶಃ ಭಾವಪೂರ್ಣತೆ ತಂದಿದೆ. ಮುಖಪುಟದ ಮೇಲ್ತುದಿಯ ಪಾರ್ಶ್ವದಲ್ಲಿ ಅಚ್ಚಹಳದಿ ಬಣ್ಣದಿಂದ ಕನ್ನಡದಲ್ಲಿ ಕೃತಿಯ ಶೀರ್ಷಿಕಾ ಅಕ್ಷರಗಳಲ್ಲಿ ಮುದ್ರಣಗೊಂಡಿವೆ. ಅದರ ಕೆಳಗಡೆಯೂ ತುಂಬ ಚಿಕ್ಕದಾಗಿ ಬಿಳಿಬಣ್ಣದ ಕನ್ನಡ ಅಕ್ಷರಗಳಲ್ಲಿ ಸಂಪಾದಕರ ಹೆಸರು ಮುದ್ರಿತವಾಗಿದೆ. ಭಾವಶಿಲ್ಪ ಛಾಯಾಚಿತ್ರದ ತಳಭಾಗದಲ್ಲಿ ಮುಖಪುಟದ ತಳ ಪಾರ್ಶ್ವದಲ್ಲಿ ಚಿಕ್ಕದಾದ ಹಳದಿ ಬಣ್ಣದ ವೃತ್ತಾವರಣದಲ್ಲೂ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಲಾಂಛನವಿದ್ದು, ಪಕ್ಕದಲ್ಲೆ ಪದನಾಮ ಅಚ್ಚ ಬಿಳಿಬಣ್ಣದ ಕನ್ನಡ ಅಕ್ಷರಗಳಲ್ಲಿ ನಮೂದಿಸಲ್ಪಟ್ಟಿದೆ. ಒಟ್ಟಿನಲ್ಲಿ ಇಲ್ಲಿನ ಮುಖಪುಟ ವಿನ್ಯಾಸ ಮುಖಭಾವ ಇಲ್ಲಿ ಮುದ್ರಿಸಿದ ಕವಿಗಳ ಹಿರಿಮೆಯ ಗುಣದಿಂದ ಮತ್ತು ಅವರ ಶಿಲ್ಪದಲ್ಲಿ ಸಾದೃಶೀಕರಣಗೊಂಡಿದ್ದು ಆ ಭಾವಶಿಲ್ಪದ ಛಾಯಾಚಿತ್ರವನ್ನು ಅತ್ಯಂತ ಸರಳವಾದ ಹಿನ್ನೆಲೆಯಲ್ಲಿ – ಬಹಳ ಪರಿಣಾಮಕಾರಿಯಾಗಿ ಅಳವಡಿಸಿಕೊಂಡಿರುವುದರ ಮೂಲಕ ಒಂದು ಆಕರ್ಷಕ ನೋಟವನ್ನು ಸಹೃದಯ ಕಲಾಸಕ್ತ ಓದುಗರಿಗೆ ಕೊಡಬಲ್ಲುದು ಎಂದು ಅಭಿಪ್ರಾಯಪಡಬಹುದು.

### ೪.೩೧. ನಮ್ಮ ದನಿ (೨೦೦೮)

೨೦೦೮ ರಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಲಕ್ಷ್ಮೀ ಮುದ್ರಣಾಲಯ ಇವರಿಂದ ಮುದ್ರಣಗೊಂಡ ಕೃತಿ 'ನಮ್ಮ ದನಿ'. (ಸಂಪ್ರದಾಯ ಶಿಲ್ಪಿಗಳ ಯಶೋಗಾಥೆ) ಇದರ ಲೇಖಕರು ಕನಕಾಮೂರ್ತಿ. ಈ ಪುಸ್ತಕದ ಮುಖಪುಟದಲ್ಲಿ ಕನಕಾಮೂರ್ತಿಯವರಿಂದ ಕಲ್ಲಿನಲ್ಲಿ ನಿರ್ಮಾಣವಾದ ಋಷಿಯೋರ್ವನ ಶಿಲ್ಪದ ಛಾಯಾಚಿತ್ರ ಮುಖಪುಟದ ಕೇಂದ್ರ ಭಾಗದಲ್ಲಿ ಸಂಯೋಜಿಸಲ್ಪಿಟ್ಟದೆ. ಉಳಿದೆಲ್ಲ ಅವಕಾಶದಲ್ಲಿ ಸಪಾಟಾಗಿ ನೀಲಿಬಣ್ಣ ಹರಡಿಕೊಂಡಿದೆ/ ತೋರಿಸಲ್ಪಿಟ್ಟಿದೆ. ಸಾಂಪ್ರದಾಯಿಕ ಶೈಲಿಯಲ್ಲಿ ನವೀನ ಶಿಲ್ಪದಲ್ಲಿ ಪೀಠದ ಮೇಲೆ ಕುಳಿತ ಋಷಿಯ ಮುಖಭಾವ ಲವಲವಿಕೆಯಿಂದಿರಿಸಿದ್ದು, ಬಲಗೈಯಲ್ಲಿ ಒಂದು ಶಿಲಾಫಲಕವನ್ನು ಬಲ ತೊಡೆಯ ಮೇಲಿರಿಸಿಕೊಂಡು ಎಲ್ಲರಿಗೂ ತೋರಿಸುತ್ತಿರುವ (ಲೋಕದರ್ಶನಗೊಳಿಸುತ್ತಿರುವನೋ ಎಂಬ ಭಂಗಿ) ಎಂಬ ಭಾವ ಮುಖದಲ್ಲಿ ವ್ಯಕ್ತಗೊಳ್ಳುತ್ತಿದ್ದು. ಎಡಗೈಯನ್ನು ತುಸು ಮೇಲಕ್ಕೆದ್ದಿರುವ ಎಡಗಾಲ ಮಂಡಿಯ ಮೇಲಿರಿಸಿಕೊಂಡು, ಎಡಹಸ್ತದಲ್ಲಿ ಉಳಿಯಂತಹ ಉಪಕರಣ ಸಾಮಗ್ರಿ ಹಿಡಿದಿದ್ದಾನೆ.

ಎಡಭುಜದ ಮೇಲೆ ಆತನ ಜಡೆ ಸುರುಳಿಯಾಕಾರದಲ್ಲಿ ಇಳಿದಿದೆ. ಕಣ್ಣುಗಳು ಅಗಲವಾಗಿದ್ದು, ಕಾತರದ/ಕುತೂಹಲದ ನೋಟ ಬೀರುತ್ತಿವೆ. ನಿರಾಭರಣ ಶಿಲ್ಪವಾದರೂ ಭಾವಪೂರ್ಣವಾಗಿ ಕಂಡರಿಸಲ್ಪಟ್ಟಿದೆ.

ಹೀಗಿರುವ ಶಿಲ್ಪವನ್ನು ಸೌಮ್ಯಬಣ್ಣವಾದ ನೀಲಿ ಹಿನ್ನೆಲೆಯಲ್ಲಿ ಮತ್ಯಾವ ಅಲಂಕಾರವನ್ನು ಸೇರಿಸದೆ, ವಿನ್ಯಾಸಗೊಂಡಿರುವುದರಿಂದ ವಿಶಿಷ್ಟವಾದೊಂದು ಸರಳ ಸೊಬಗಂತು ನೋಡಿ ಸಂವೇದನಾಶೀಲ ಓದುಗರಿಗೆ/ ನೋಡುಗರಿಗೆ ಲಭಿಸಿ, ಆಪ್ಯಾಯಮಾನ ಎಂದೆನಿಸಿಕೊಳ್ಳಬಲ್ಲ/ ಚೇತೋಹಾರಿ ಅನುಭವ ನೀಡಬಲ್ಲ ಮುಖಪುಟ ಎಂದೆನಿಸಿಕೊಳ್ಳತಕ್ಕಂತಹ ಮಾದರಿ ಈ ಮುಖಪುಟದ್ದು ಎನ್ನಬಹುದು. ಇಲ್ಲಿನ ಮುಖಪುಟದ ಮೇಲ್ತುದಿಯಲ್ಲೂ ಕನ್ನಡದಲ್ಲಿ ಕಂದು ಹಳದಿ ಬಣ್ಣದಲ್ಲಿ ಪುಸ್ತಕ ಶೀರ್ಷಿಕೆ ಮುದ್ರಿತವಾಗಿದ್ದು, ಅದೇ ಬಣ್ಣದಲ್ಲಿಯೇ ಕನ್ನಡದಲ್ಲೇ ಚಿಕ್ಕದಾಗಿ ಈ ಕೃತಿಯ ಲೇಖಕರ ಹೆಸರೂ ಸಹ ಶೀರ್ಷಿಕೆಯ ಕೆಳಗಡೆಯೇ ಮುದ್ರಣಗೊಂಡಿದೆ. ತಳಭಾಗದಲ್ಲಿ ತುಂಬ ಪುಟ್ಟದಾದ ಬಿಳಿಯ ಬಣ್ಣದ ವೃತ್ತಾವರಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ನಮೂದಿಸಲ್ಪಟ್ಟಿದೆ. ಅದರ ಕೆಳಗಡೆಯಲ್ಲಿ ಕನ್ನಡದಲ್ಲಿ ಕಂದು ಹಳದಿ ಬಣ್ಣದಲ್ಲಿಯೇ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪದನಾಮ ಮುದ್ರಣಗೊಂಡಿದ್ದು, ಬೆಂಗಳೂರು ಎಂಬ ಪದಮಾತ್ರ ಬಿಳಿಯ ಬಣ್ಣದಲ್ಲಿ (ಕನ್ನಡ ಅಕ್ಷರಗಳಲ್ಲಿ) ನಮೂದಾಗಿದೆ.

**೪.೩೨. ಪಾಶ್ಚಾತ್ಯ ದೃಶ್ಯಕಲಾ ಮೀಮಾಂಸೆ (೨೦೧೧)**

೨೦೧೧ರಲ್ಲಿ ವಿಶ್ವಾಸ್ ಪ್ರಿಂಟರ್ಸ್ ಇವರಿಂದಲೇ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಕಟಣೆಗಾಗಿ ಮುದ್ರಿತಗೊಂಡಿರುವ ಕೃತಿ 'ಪಾಶ್ಚಾತ್ಯ ದೃಶ್ಯಕಲಾ ಮೀಮಾಂಸೆ' ಎಂಬುದು. ಇದರ ಲೇಖಕರು ಡಾ.ಡಿ.ಎ.ಉಪಾಧ್ಯ ಮುಖಪುಟ ಹಾಳೆಯ ಅವಕಾಶದಲ್ಲಿ ಬಹುಪಾಲು ಆಕ್ರಮಿಸಿಕೊಂಡಿರುವ ³/₄ (Three-Forth) ಕೋನದಲ್ಲಿರುವ ವ್ಯಕ್ತಿಯ ಕ್ರೊಮೆಟಿಕ್ (ಏಕವರ್ಣದ) ಮಾಧ್ಯಮದಲ್ಲಿ ಕಂಪ್ಯೂಟರ್ ಗ್ರಾಫಿಕ್ಸ್ ಮೂಲಕ ಮುಖದ ಅಂಗಗಳ ಏರಿಳಿತ, ಛಾಯಾಕರಣ, ತತ್ವಜ್ಞಾನಿಯ ಮುಖದಲ್ಲಿ ಮಡುಗಟ್ಟಿರುವ ಚಿಂತೆ ಪರವಶತೆ ಈ ಎಲ್ಲ ವಿವರಗಳನ್ನು / ಅಂಶಗಳನ್ನು ಇಲ್ಲಿ ಮುಖಪುಟ ವಿನ್ಯಾಸಕಾರರು ನಿರೂಪಿಸಿದ್ದಾರೆ. 'ಕೊಲ್ಯಾಜ್ ಮಾದರಿಯಲ್ಲಿ'[೧೬] ಇಲ್ಲಿ ಈ ಭಾವಚಿತ್ರ ಅಳವಡಿಕೆಯಾಗಿದ್ದು, ಹಿನ್ನೆಲೆ ದಟ್ಟಕಪ್ಪು ಬಣ್ಣದಿಂದ ಕೂಡಿದೆ. ಮುಖಪುಟದ ಮೇಲ್ಭಾಗದ ಅಂಚಿನಲ್ಲಿ ಹಳದಿ ಬಣ್ಣದಲ್ಲಿ ತಲೆಬರಹದ ಅಕ್ಷರಗಳು ಮೂಡಿವೆ. ಮುಖಪುಟದ ತಳಭಾಗದಲ್ಲಿ ಬಿಳಿ ಬಣ್ಣದಲ್ಲಿ ಲೇಖಕರ ಹೆಸರು ಮುದ್ರಣಗೊಂಡಿದೆ. (ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನವಾಗಲಿ, ಪದನಾಮವಾಗಲಿ ಮುಖಪುಟದಲ್ಲಿ ಮುದ್ರಣಗೊಂಡಿಲ್ಲ). ದೃಶ್ಯಕಲಾ ಮೀಮಾಂಸಕರ ವ್ಯಕ್ತಿತ್ವ ಇಲ್ಲಿ ಮುದ್ರಿತವಾಗಿರುವ ಭಾವಚಿತ್ರದಲ್ಲಿ ಹೃದಯ ಸ್ಪರ್ಶಿಯಾಗಿ ದಾಖಲಾಗಿರುವುದರಿಂದ ಕಲಾಸಕ್ತ ಓದುಗರನ್ನ ಈ ಮುಖಪುಟ ಸೆಳೆಯಬಲ್ಲುದು ಎಂದು ಅಭಿಪ್ರಾಯಪಡಬಹುದು. ಸರಳವಾದ, ಆದರೆ ಪರಿಣಾಮಕಾರಿಯಾದ. ಸಿದ್ಧ ಕ್ರಮಕ್ಕಿಂತ ತುಸು ಭಿನ್ನ ಶೈಲಿಯ ಮುಖಪುಟ ಮಾದರಿಗಳಲ್ಲಿ ಇದನ್ನೂ ಸಹ ಸೇರಿಸಬಹುದು.

**೪.೩೩. ಪಾಶ್ಚಾತ್ಯ ದೃಶ್ಯಕಲೆಗಳು (೨೦೧೧)**

'ಪಾಶ್ಚಾತ್ಯ ದೃಶ್ಯಕಲೆಗಳು' ಎಂಬ ಕೃತಿಯ ಲೇಖಕರ ಡಾ.ಡಿ.ಎ.ಉಪಾಧ್ಯ ೨೦೧೧ರಲ್ಲಿ ವಿ.ರಾಜ್

---

೧೬. ಪಿ. ಆರ್. ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು-೧೦೭-೧೦೮

ವಿಶ್ವಾಸ್ ಪ್ರಿಂಟ್ಸ್ ಇವರಿಂದ ಕರ್ನಾಟಕ ಶಿಲ್ಪಕಲಾ ಅಕಾಡೆಮಿವತಿಯಿಂದ ಮುದ್ರಣಗೊಂಡಿರುವುದು. ಇಲ್ಲಿನ ಮುಖಪುಟ ಕೆಳಗಿನಿಂದ ಮೇಲಕ್ಕೆ ಓರೆಕೋನದಲ್ಲಿ ಒಂದರ ಹಿಂದೆ ಒಂದು ನವ್ಯ ಕಲಾಕೃತಿಗಳ ಛಾಯಾಚಿತ್ರ ಸಾಲು ಕಿರಿದಾಗುತ್ತ ಸಾಗಿದೆ. ಹಸಿರು, ಕಂದು, ಕೆಂಪು ಹೀಗೆ ಬಹುವರ್ಣೀಯ ಹಿನ್ನೆಲೆಯುಳ್ಳ ಮುಖಪುಟ ಹಾಳೆಯ ಮೇಲೆ ವಕ್ರ, ಕಾಡು, ನೀಡು, ರೇಖೆಗಳೂ ಸಹ ಅಡ್ಡಾದಿಡ್ಡಿಯಾಗಿ ಹಾಯ್ದುಹೋಗಿವೆ. ವಂಶವರ್ಣೀಯ ಹಿನ್ನೆಲೆಯಲ್ಲಿ ಓರೆಕೋನದಲ್ಲಿ ಎತ್ತರ ಕಿರಿದಾಗುತ್ತ ಸಾಗಿದ ನವ್ಯಕಲಾಕೃತಿಗಳ ಸಾಲು ಮುನ್ನೆಲೆಗೆ ಬಂದು–ಅದೇ ಕುತೂಹಲಭರಿತ ಮನಃಸ್ಥಿತಿಯ ನೋಡುಗರನ್ನು ಸೆಳೆಯುವಂತಿದೆ. ಇಲ್ಲಿ ಒಟ್ಟಾರೆಯಾಗಿ ಮುಖಪುಟವಿನ್ಯಾಸ 'ಚಲನಾಶೀಲ ಸತ್ವವುಳ್ಳದ್ದೂ, ಸೃಜನಶೀಲತೆಯಿಂದ ಕೂಡಿದುದೂ, ಸಮಕಾಲೀನ ತಂತ್ರಜ್ಞತೆಯೊಂದಿಗೆ ಪರಿಪುಷ್ಟಗೊಂಡಿರುವುದೂ ಆಗಿದ್ದು, ತೀವ್ರ ಆಸಕ್ತ ಓದುಗರನ್ನು ಒಂದೇ ನೋಟಕ್ಕೆ ಅಕರ್ಷಿಸಬಲ್ಲದ್ದಾಗಿದೆ ಎಂದು ಅಭಿಪ್ರಾಯಪಡಬಹುದು.'[೧೭] ಮುಖಪುಟದ ಮೇಲ್ಭಾಗದಲ್ಲಿ ಬಿಳಿ–ಬೂದು ಮಿಶ್ರಿತ ಕನ್ನಡ ಅಕ್ಷರಗಳಲ್ಲಿ ಕೃತಿಯ ತಲೆಬರಹವಿದೆ. ಅದರ ಕೆಳಗಡೆಯೇ ಮಂದ ಹಳದಿ ಬಣ್ಣದ ಕನ್ನಡ ಅಕ್ಷರಗಳಲ್ಲಿ ಕೃತಿಕಾರರ ಹೆಸರು ಮುದ್ರಿತವಾಗಿದೆ. (ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನವಾಗಲಿ, ಪದನಾಮವಾಗಲಿ ಮುದ್ರಣಗೊಂಡಿಲ್ಲ)

**೪.೩೪. ಮಹೇಂದ್ರ ಮೋಕ್ಷ (೨೦೧೨)**

'ಮಹೇಂದ್ರ ಮೋಕ್ಷ' ಎಂಬ ಕೃತಿಯ ಸಹ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ವತಿಯಿಂದ ಮುದ್ರಣಗೊಂಡಿದುದಾಗಿದ್ದು, ೨೦೧೨ರಲ್ಲಿ ಇದನ್ನು ಮೊದಲು ಮುದ್ರಿಸಿದವರು ವಿಶ್ವಾಸ್ ಪ್ರಿಂಟ್ಸ್. ಈ ಕೃತಿಯ ಸಂಪಾದಕರು ಡಾ॥ ಜಿ.ಜ್ಞಾನಾನಂದ ಮುಖಪುಟದ ಮುನ್ನೆಲೆಯಲ್ಲಿ ಕಾರ್ಯನಿರತ ಶಿಲ್ಪಿಗಳ ವರ್ಣರಂಜಿತ ಛಾಯಾಚಿತ್ರವಿದ್ದು, ಅವರುಗಳ ಹಿನ್ನೆಲೆಯಲ್ಲಿ ಮಹೇಂದ್ರ ಮೋಕ್ಷ ಸನ್ನಿವೇಶವೊಂದನ್ನು ಧ್ವನಿಸುವ ಮ್ಯುರಲ್‌ವೊಂದರ ಛಾಯಾಚಿತ್ರವಿದೆ ಆ ಕೃತಿಯ ಹಿನ್ನೆಲೆಯಲ್ಲಿ ದಟ್ಟ ನೇರಳೆ ಬಣ್ಣದ ಅವಕಾಶವಿದ್ದು, ಮೇಲ್ತುದಿಯಲ್ಲಿ ಕೃತಿಯ ತಲೆಬರಹ ಕನ್ನಡದಲ್ಲಿ ತುಸುಬೂದು ಮಿಶ್ರಿತ ಬಿಳಿಬಣ್ಣದಲ್ಲಿದೆ ಅದರ ಕೆಳಗಡೆಯೇ ಪುಟ್ಟದಾಗಿ, ಹಳದಿಬಣ್ಣದ ಕನ್ನಡ ಅಕ್ಷರಗಳಲ್ಲಿ ಐವತ್ತು ಕಥಾ ಚಿತ್ರ ಪಟಗಳು ಮತ್ತು ಆಖ್ಯಾಯಿಕೆ ಎಂದು ನಮೂದಾಗಿದ್ದು, ಅದರ ವಿರುದ್ಧ ಪಾರ್ಶ್ವದಲ್ಲಿ ಸಂಪಾದಕರು ಹೆಸರು ಪುಟ್ಟದಾದ ಹಳದಿಬಣ್ಣದ ಕನ್ನಡ ಅಕ್ಷರಗಳಲ್ಲಿಯೇ ಇದೆ. ಇಲ್ಲಿನ ಮುಖಪುಟದಲ್ಲಿಯೇ ಹಿನ್ನೆಲೆಯ ಮಧ್ಯಾಂತರದಲ್ಲಿ ಒಂದು ಬದಿಯಿಂದ ಮತ್ತೊಂದು ಬದಿಗೆ ಅಗಲ ವಿಸ್ತಾರಗೊಳ್ಳುತ್ತ ಸಾಗಿದ ಗುಲಾಬಿ ಪಟ್ಟಿಕೆಯೊಂದು ತನ್ನ ಅಂಚಿನಲ್ಲಿ ಶೇಡಿ ಬಣ್ಣದ ದಪ್ಪನೆಯ ಅಂಕು ಪಟ್ಟಿಕೆಯೊಡನೆ ಸಾಗಿದೆ. ಅದೇ ಗುಲಾಬಿ ಬಣ್ಣದ ಪಟ್ಟಿಕೆಯ ಒಂದು ಪಾರ್ಶ್ವದಲ್ಲಿಯೇ ಕಂಪ್ಯೂಟರ್ ತಂತ್ರಜ್ಞತೆಯ ಮೂಲಕ ಸಂಯೋಜಿಸಿದ ಲಾಂಛನದ ಕಿರಿದಾದ ಚಿತ್ರವೂ ಉಂಟು. ಇಲ್ಲಿ ಮುಖಪುಟ ತಯಾರಿಕೆಯಲ್ಲಿ ಗಣಕಯಂತ್ರದ ತಾಂತ್ರಿಕತೆಯ ಸಹಾಯ ಪಡೆದುಕೊಂಡಿರುವದು ಢಾಳಾಗಿ ಗೋಚರಿಸುವುದಾದರೂ ಚಿತ್ರಗಳನ್ನು ಪರಿಣಾಮಕಾರಿಯಾಗಿ ಮತ್ತು ಸೃಜನಾತ್ಮಕವಾಗಿ ಸಂಲಗ್ನಗೊಳಿಸುವಲ್ಲಿ ಎಡವಿದಂತೆ ಕಂಡುಬರುತ್ತದೆ. ಹಾಗಾಗಿ ಒಂದು ಸಾಧಾರಣ

೧೭. ಸಂದರ್ಶನ: ಮಲ್ಲಿಕಾರ್ಜುನ ಜಾಧವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ, ದಿ:೨೦೧೫

ಮಟ್ಟದ ಮುಖಪುಟವಾಗಿ ಕಲಾನಿಷ್ಠ ಓದುಗರ ಮನದಲ್ಲಿ ಉಳಿಯಬಲ್ಲಂತಹುದು ಎಂದು ಅಭಿಪ್ರಾಯಪಡಬಹುದು.

**೪.೩೫. ರೇಖಾಚಿತ್ರ ಪ್ರವೀಣ ಸಿ. ಕುಪ್ಪಾಚಾರ್ಯ (೨೦೧೨)**

ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿ ಎಲ್.ಶಿವಲಿಂಗಪ್ಪನವರಿಂದ ಬರೆಯಲ್ಪಟ್ಟ ಪುಸ್ತಕ 'ರೇಖಾಚಿತ್ರ ಪ್ರವೀಣ' ಸಿ.ಕುಪ್ಪಾಚಾರ್ಯ ಎಂಬುದು. ಇದನ್ನು ವಿಶ್ವಾಸ್ ಪ್ರಿಂಟರ್ಸ್ (೨೦೧೨ ರಲ್ಲಿ) ಇಲ್ಲಿ ಮುಖಪುಟದ ಅವಕಾಶ ತುಂಬೆಲ್ಲ ಸಿ.ಕುಪ್ಪಾಚಾರ್ಯರ ವರ್ಣಭಾವಚಿತ್ರ (Colour Photography) ಮುದ್ರಿತವಾಗಿದೆ. ಹಿನ್ನೆಲೆ ಬಿಳಿಬಣ್ಣದ್ದಾಗಿದೆ ಮುಖಪುಟದ ಮೇಲ್ಭಾಗದಲ್ಲಿ ಕೃತಿಯ ತಲೆಬರಹ ಮುದ್ರಿತವಾಗಿದೆ. ಅದರ ಕೆಳಗಡೆಯೂ ಕೃತಿಕಾರರ (ಲೇಖಕರ) ಹೆಸರು ಮುದ್ರಣವಾಗಿದೆ. ಮುಖಪುಟದ ತಳ ಪಾರ್ಶ್ವದಂಚಿನಲ್ಲಿ ಚಿಕ್ಕದಾಗಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ಮತ್ತು ಪದನಾಮ ಮುದ್ರಿತವಾಗಿದೆ. ತುಂಬ ಸರಳವಾದ ಮುಖಪುಟವಿದು. ಕಲಾವಿದರ ಭಾವಚಿತ್ರ ತೀರ ದೊಡ್ಡದಾಯಿತು ಎನಿಸುತ್ತಿದೆ. ಅದೊಂದು ಚಿಕ್ಕ ನ್ಯೂನ್ಯತೆಯಂತೆ ಇಲ್ಲಿ ತೋರಿಬರುತ್ತಿದೆ.

**೪.೩೬. ಮೌಲ್ಡರ್ ರಾಜಣ್ಣ (೨೦೧೨)**

'ಮೌಲ್ಡರ್ ರಾಜಣ್ಣ' ಎಂಬ ಕಿರು ಹೊತ್ತಗೆಯೂ ಸಹ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವತಿಯಿಂದ ಪ್ರಕಟಗೊಂಡುದೇ ಆಗಿದೆ. ಇದೂ ಸಹ ೨೦೧೨ನೇ ಇಸ್ವಿಯಲ್ಲಿ ಪ್ರಥಮವಾಗಿ ಮುದ್ರಣ ಕಂಡಿದ್ದು ವಿಶ್ವಾಸ್ ಪ್ರಿಂಟ್ಸ್ ಇವರಿಂದಲೇ. ಈ ಪುಸ್ತಕದ ಲೇಖಕ ಎಲ್.ಶಿವಲಿಂಗಪ್ಪ ಎನ್ನುವವರು. ಈ ಪುಸ್ತಕದ ಮುಖಪುಟದಲ್ಲಿ ಹೆಚ್ಚು ಕಡಿಮೆ ಪೂರ್ತಿ ಮುಖಪುಟದ ಅವಕಾಶವನ್ನು ವ್ಯಾಪಿಸಿಕೊಂಡಿರುವ ಮೌಲ್ಡರ್ ರಾಜಣ್ಣರವರ ಬದಿಯ ನೋಟದ ವರ್ಣಯುಕ್ತ ಆಕರ್ಷಕ ಭಾವಚಿತ್ರ ಮುದ್ರಿತವಾಗಿದೆ ಹಿನ್ನೆಲೆಯ ಅವಕಾಶ ದಟ್ಟ ನೇರಳೆ ಬಣ್ಣದಿಂದ ಆವೃತವಾಗಿರುವಂತಹುದು.

ಮೇಲ್ತುದಿಯಲ್ಲಿ ತುಸು ಬೂದಿಬಣ್ಣ ಮಿಶ್ರಿತ ಬಿಳಿಯ ಬಣ್ಣದ ಕನ್ನಡ ಅಕ್ಷರಗಳಲ್ಲಿ ಕೃತಿ ತಲೆಬರಹವಿದೆ. ಅದರ ಕೆಳಗಡೆಯ ಪಾರ್ಶ್ವದಲ್ಲಿ ತುಂಬ ಕಿರಿದಾಗಿ ಕನ್ನಡದಲ್ಲಿ ಲೇಖಕರ ಹೆಸರು ಮುದ್ರಿತವಾಗಿದೆ. ತಳಭಾಗದ ಪಾರ್ಶ್ವದಲ್ಲಿ ಹಸಿರು ವೃತ್ತಾವರಣದಲ್ಲಿ ಮತ್ತು ಬಿಳಿಯ ಬಣ್ಣದ ಗೋಪರಾಕೃತಿಯ ಆವರಣದೊಳಗೆ ಹಸಿರು ರೇಖೆಗಳಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಲಾಂಛನ ಪುಟ್ಟದಾಗಿ ಮುದ್ರಿತವಾಗಿದೆ ಮನಮೋಹಕ ಛಾಯಾಕರಣದೊಂದಿಗೆ ಭಾವಪೂರ್ಣವಾದ ಮುಖ ಮುದ್ರೆಯಿಂದ ಕೂಡಿದ ಕಲಾವಿದರ ವರ್ಣ ಛಾಯಾಚಿತ್ರವೇ ಈ ಮುಖಪುಟದ ಜೀವಸತ್ವವಾಗಿದೆ. ಅದನ್ನು ಬಿಟ್ಟರೆ ಈ ಕೃತಿಯ ತಲೆಬರಹ ಮುಖಪುಟದ ಅವಕಾಶದ ವರ್ಣಲೇಪನ ಇವೆಲ್ಲ ಈ ಹಿಂದಿನ (ಈ ಕೃತಿ ಸರಣಿಯ) ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪ್ರಕಟಿತ ಪುಸ್ತಕಗಳ ಮುಖಪುಟ ಮಾದರಿನ್ನೇ ಅನುಸರಿಸಿದೆ ಎನ್ನಬಹುದು. ಬಹಳ ಕೆಟ್ಟದೆನ್ನಿಸಿದ ಬಹಳ ಶ್ರೇಷ್ಠವೂ ಎನ್ನಿಸಿದ ಒಂದು ಮಧ್ಯಮ ಸ್ತರದ ಮುಖಪುಟ ಮಾದರಿ ಇದು ಎಂದು ಅಭಿಪ್ರಾಯಪಡಬಹುದು.

### ೪.೩೭. ಬಾದಾಮಿ-ಚಾಲುಕ್ಯರ ದೇವಾಲಯಗಳ ಅಲಂಕಾರ ಶಿಲ್ಪಗಳು (೨೦೧೩)

ಕರ್ನಾಟಕ ಶಿಲ್ಪಕಲಾ ಅಕಾಡೆಮಿ ವತಿಯಿಂದ 'ಬಾದಾಮಿ ಚಾಲುಕ್ಯರ ದೇವಾಲಯಗಳ ಅಲಂಕಾರ ಶಿಲ್ಪಗಳು' ಎಂಬ ಪುಸ್ತಕ ೨೦೧೩ರಲ್ಲಿ ಸ್ನೇಹ ಪ್ರಿಂಟ್ಸ್ ಇವರಿಂದ ಮೊದಲ ಮುದ್ರಣ ಕಂಡಿದುದಾಗಿದ್ದು, ಇದರ ಲೇಖಕರು ಡಾ. ಶೀಲಾಕಾಂತ ಪತ್ತಾರ ಎನ್ನುವವರು. ಇದರ ಮುಖಪುಟದಲ್ಲಿ ಬಾದಾಮಿ ಚಾಲುಕ್ಯರ ಕಾಲಾವಧಿಯ ದೇವಾಲಯವೊಂದರ ಛಾಯಾಚಿತ್ರವನ್ನು ಮುದ್ರಿಸಲಾಗಿದೆ ಮುದ್ರಿತವಾದ ಛಾಯಾಚಿತ್ರ ಸ್ಪಷ್ಟತೆಯಿಂದ ಕೂಡಿದೆ, ಸುಂದರವಾಗಿದೆ. ಹಿನ್ನೆಲೆಯ ಅವಕಾಶ ತಿಳಿನೀಲಿ, ತಿಳಿಶ್ಯಾಮ ಬಣ್ಣಗಳ ಮಿಶ್ರಣದಲ್ಲದೆ, ಮಂದವಾಗಿದೆ ಹಾಗಾಗಿಯೇ ದೇವಾಲಯದ ಆಕಾರ ಮುನ್ನೆಲೆಗೆ ಬಂದಿದೆ ಮತ್ತು ಎದ್ದು ಕಾಣುತ್ತಿದೆ. ಮುಖಪುಟ ತುದಿಯ ಪಾರ್ಶ್ವಭಾಗದಲ್ಲಿ ಕಪ್ಪು ಮತ್ತು ಕೆಂಪು ಬಣ್ಣಗಳಲ್ಲಿ ಕನ್ನಡ ಅಕ್ಷರಗಳಲ್ಲಿ ಕೃತಿಯ ಶೀರ್ಷಿಕೆ ನಮೂದಿಸಲಾಗಿದೆ, ತುಸು ಅವಕಾಶ ಬಿಟ್ಟು ಅದರ ಕೆಳಗಡೆ ಕಡು ಕಂದು ಬಣ್ಣದ ಕನ್ನಡ ಅಕ್ಷರಗಳಲ್ಲಿ ಲೇಖಕರ ಹೆಸರು ಛಾಪಿಸಲಾಗಿದೆ. ಮುಖಪುಟದ ತಳಭಾಗದ ಪಾರ್ಶ್ವದಲ್ಲಿ (ಕೃತಿ ಶೀರ್ಷಿಕೆ ಬರೆಯಲ್ಪಟ್ಟ ಮೂಲೆಯ ವಿರುದ್ಧ ದಿಕ್ಕಿನ ಮೂಲೆಯಲ್ಲಿ) ಚಿಕ್ಕದಾಗಿ ಬಿಳಿ ಚೌಕಟ್ಟಿನಲ್ಲಿ ಶಿಲ್ಪಕಲಾ ಅಕಾಡೆಮಿಯ ಲಾಂಛನವೂ, ಅದರ ಕೆಳಗಡೆ ಕಂದು ಬಣ್ಣದ ಚಿಕ್ಕ ಅಕ್ಷರಗಳಲ್ಲಿ ಪದನಾಮ, ವಿಳಾಸವೂ ಮುದ್ರಿತವಾಗಿದೆ. ಈ ಮುಖಪುಟ ವಿನ್ಯಾಸದ ಒಟ್ಟಾರೆ ಅಂಶಗಳನ್ನು ಗಮನಿಸಿದ್ದರೆ – ಇದೊಂದು ಸಾಧಾರಣ ಮಟ್ಟದಲ್ಲಿ ನಿಲ್ಲಬಲ್ಲ ಮುಖಪುಟ ಎಂದು ಹೇಳಬಹುದು.

### ೪.೩೮. ಗೀತಗೋವಿಂದ (೨೦೧೩)

ಜಯದೇವ ಮಹಾಕವಿಯ 'ಗೀತಗೋವಿಂದ' ಪುಸ್ತಕ ಜಯದೇವ ಕವಿಯ ಗೀತಗೋವಿಂದ ಕೃತಿಯ ಕುರಿತಾಗಿ ರಚಿತವಾದ ಶಿಲ್ಪಗಳ ಸಂಕಲನವಾಗಿದ್ದು; ಇದನ್ನು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ೨೦೧೩ರಲ್ಲಿ ವಿಶ್ವಾಸ್ ಪ್ರಿಂಟ್ಸ್ ಇವರ ಮೂಲಕ ಮುದ್ರಿಸಿ ಪ್ರಕಟಿಸಿದೆ. (ಈ ಕೃತಿಯ ಮುಖಪುಟದಲ್ಲಿ ಶಿಬಿರದ ಮಾರ್ಗದರ್ಶನ ಬರಹ ಡಾ॥ ಜಿ.ಜ್ಞಾನಾನಂದ ಮತ್ತು ಶಿಲ್ಪ ಶಿಬಿರದ ಗುರುಗಳಾದ ಶಿಲ್ಪಿ ಎಂ.ರಾಮಮೂರ್ತಿಯವರ ಹೆಸರುಗಳನ್ನು ಉಲ್ಲೇಖಿಸಲಾಗಿದೆ) ಪುಸ್ತಕದ ಮುಖಪುಟದಲ್ಲಿ ದಟ್ಟವಾದ ವರ್ಣಗಳಿಂದಾವೃತವಾದ ನಿಸರ್ಗದ ಸನ್ನಿವೇಶದ ಹಿನ್ನೆಲೆಯಲ್ಲಿ ರಾಧಾಕೃಷ್ಣರು ಪರಸ್ಪರ ಸರಸದಲ್ಲಿ / ಮಿಲನೋತ್ಸವದಲ್ಲಿ ಮೈಮರೆತಿದ್ದಾರೆ. ದಟ್ಟಕಾನನದಲ್ಲಿ ಬಗೆಬಗೆಯ ಪುಷ್ಪರಾಶಿಗಳು ಮತ್ತು ಗಿಡ-ಮರಬಳ್ಳಿಗಳು-ಹೀಗೆ ಹಸಿರು ತುಂಬಿರುವ ತಾಣದಲ್ಲಿ ಇವರ ಸಮಾಗಮ ಏರ್ಪಟ್ಟಿದೆ. ನೈಜ ಶೈಲಿಯಲ್ಲೂ ರಮಣೀಯ ಸೆಳಕಿನಲ್ಲಿ ಮೂಡಿಬಂದಿರುವ ಶೃಂಗಾರ ರಸಪೂರ್ಣ ಭಾವಸಮ್ಮಿಳನದಿಂದ ಕೂಡಿರುವ ಈ ಕೃತಿ ಸಹಜವಾಗಿಯೇ ಕೃಷ್ಣ ಭಕ್ತರಿಗೆ – ಶೃಂಗಾರಕಾವ್ಯ / ಕಲಾ ಪ್ರಿಯರಿಗೆ / ಕಲಾಕೌತುಕ ರಸಾಸ್ವಾದನಾಸಕ್ತರಿಗೆ ಇಷ್ಟವಾಗಬಹುದಾದ ಮುಖಪುಟ ಮಾದರಿಯದು.

ಈ ಕೃತಿಯ ಮುಖಪುಟದ ಮೇಲ್ಭಾಗದ ತುದಿಯಲ್ಲಿ ತಲೆಬರಹ ಮುದ್ರಿಸಿದ್ದು 'ಜಯದೇವ ಮಹಾಕವಿಯ' ಎಂಬ ಪದಗಳು ಹಳದಿ ಬಣ್ಣದಲ್ಲಿ 'ಗೀತಗೋವಿಂದ' ಎಂಬ ಪದಗಳು ಬಿಳಿಬಣ್ಣದಲ್ಲೂ

ಇವೆ. ಶಿಬಿರದ ಮಾರ್ಗದರ್ಶಕರ ಮತ್ತು ಶಿಲ್ಪಗುರುಗಳ ಹೆಸರುಗಳು ಕನ್ನಡದಲ್ಲಿ ಹಳದಿ ಬಣ್ಣದಲ್ಲಿಯೇ ನಮೂದಿಸಲ್ಪಟ್ಟಿವೆ. ಮುಖಪುಟದ ತಳಭಾಗದ ಅಂಚಿನಲ್ಲಿ ಕರ್ನಾಟಕ ಶಿಲ್ಪಕಾಲ ಅಕಾಡೆಮಿ ಲಾಂಛನ ಬಿಳಿಬಣ್ಣದ ಚೌಕ ಆವರಣದಲ್ಲಿ ಮುದ್ರಿತವಾಗಿದ್ದು, ಅದರ ಕೆಳಗಡೆಯೇ ಬಿಳಿಬಣ್ಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪದನಾಮ ಮತ್ತು ವಿಳಾಸ ಮುದ್ರಿತವಾಗಿದೆ.

**೪.೩೯. ಶಕಪುರುಷ ಸಿದ್ಧಲಿಂಗ ಸ್ವಾಮಿಗಳು (೨೦೧೩)**

'ಶಕಪುರುಷ ಸಿದ್ಧಲಿಂಗ ಸ್ವಾಮಿಗಳು' ಎಂಬ ಪುಸ್ತಕವೂ ಸಹ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಪ್ರಕಟಣೆಯಾದುದೇ ಆಗಿದ್ದು, ಇದರ ಲೇಖಕರು ಎಲ್.ಶಿವಲಿಂಗಪ್ಪ. ಈ ಪುಸ್ತಕವೂ ಸಹ ವಿಶ್ವಾಸ್ ಪ್ರಿಂಟ್ಸ್ ಇವರಿಂದಲೇ ೨೦೧೩ರಲ್ಲಿ ಮುದ್ರಣಗೊಂಡಿದ್ದು. ಈ ಪುಸ್ತಕದ ಮುಖಪುಟ ಆಕಾರಗಳು ದಟ್ಟಣೆಯಿಂದ ಕೂಡಿದ್ದು, ಇಲ್ಲಿ ಮುಖಪುಟ ವಿನ್ಯಾಸಕಾರರು ವಾಚ್ಯವಾಗಿ ಎಲ್ಲ ಮಹನೀಯರುಗಳನ್ನು, ದೇವಾನುದೇವತೆಗಳನ್ನು ಅವರು ನಡೆಸಿದ ಶಿಲ್ಪ ಕೈಂಕರ್ಯಗಳನ್ನು ಸಂಕೇತಿಸುವ ಸಲುವಾಗಿ ಈ ಎಲ್ಲಾ ಆಕಾರ ವಿಶೇಷತೆಗಳನ್ನು ಶಿಲ್ಪಿ ಸಿದ್ಧಲಿಂಗಸ್ವಾಮಿಗಳು ಸಿಂಹಾಸನದಲ್ಲಿ ಕುಳಿತ ಅವರ ಭಾವಚಿತ್ರದ ಜೊತೆಗೆ ಮುಖಪುಟದ ಅವಕಾಶದಲ್ಲಿ ಅಳವಡಿಸಿರುವುದು ನೋಡುಗರನ್ನು ದಂಗಾಗಿಸುವಂತಿದೆ.

ಈ ಕೃತಿಯ ಮುಖಪುಟ ವಿನ್ಯಾಸಕಾರರು ಈ ಎಲ್ಲಾ ವಿವರಗಳನ್ನು ಆಯೋಜಿಸಲು ಕಂಪ್ಯೂಟರ್ ತಂತ್ರಜ್ಞತೆಯನ್ನು ಬಳಸಿಕೊಂಡಿರುವರಾದರೂ / ಕೌಶಲ್ಯವನ್ನು ಅರಿತವರಾದರೂ ಪರಿಣಾಮಕಾರಿ ಸಂಯೋಜನಾ ದೃಷ್ಟಿಕೋನದತ್ತ ಅಥವಾ ಸರಳವಾಗಿ–ಸೂಚ್ಯವಾಗಿ–ಪರಿಣಾಮಕಾರಿಯಾಗಿ ವಿಷಯ ಸಂಯೋಜನೆಗೊಳಿಸಲು ಲಕ್ಷ್ಯ ಹರಿಸದೇ ಇರುವುದರಿಂದ ತುಂಬ ಗೋಜಲು ಎನಿಸುತ್ತಿದೆ. ಇಲ್ಲಿ ಗಣಕಯಂತ್ರ ನಿರ್ವಹಣಾ ಕೌಶಲ್ಯ ಸಮಕಾಲೀನತೆಯಿಂದ ಕೂಡಿದ್ದರೂ ಅದರ ನೆರವನ್ನು ಪಡೆದುಕೊಂಡು ಕಲಾತ್ಮಕ ಸೃಜನಾತ್ಮಕ ಸ್ಪರ್ಶವನ್ನು ಮುಖಪುಟಕ್ಕೆ ನೀಡುವಲ್ಲಿ ಇಲ್ಲಿನ ಮುಖಪುಟ ವಿನ್ಯಾಸಕಾರರು ವಿಫಲರಾಗಿದ್ದಾರೆ / ಎಡವಿದ್ದಾರೆ ಎಂದು ಅಭಿಪ್ರಾಯ ಪಡಬಹುದು. ಈ ಮುಖಪುಟವೂ ಸಹ ಮೇಲ್ತುದಿಯಲ್ಲಿ (ಕನ್ನಡ ಭಾಷೆಯಲ್ಲಿ) ತಲೆಬರಹ ಹೊಂದಿದ್ದು, ಅದರ ಕೆಳಗಡೆ ಕನ್ನಡದಲ್ಲಿ ಕೃತಿ ಲೇಖಕರ ಹೆಸರು ನಮೂದಾಗಿದೆ. ತಲೆಬರಹದ ಅಕ್ಷರಗಳು ಕೆಂಪುಬಣ್ಣದಲ್ಲಿವೆ. ಲೇಖಕರ ಹೆಸರಿನ ಅಕ್ಷರಗಳು ನೀಲಿ ಬಣ್ಣದಲ್ಲಿವೆ.

**೪.೪೦. ವೆಂಕಟಾಚಲಪತಿ (೨೦೧೪)**

'ವೆಂಕಟಾಚಲಪತಿ' ಕನ್ನಡ ಸಮಕಾಲೀನ ಶಿಲ್ಪ ಕಲೆಯ ಜಕಣಾಚಾರಿ ಎನ್ನುವ ಪುಸ್ತಕ ಕೆ.ವಿ.ಸುಬ್ರಮಣ್ಯಂ ಅವರು ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಾಗಿಯೇ ಬರೆದಿರುವಂತಹುದು. ೨೦೧೪ರಲ್ಲಿ ರಾಜಾ ಪ್ರಿಂಟರ್ಸ್ ಇವರಿಂದ ಮೊದಲ ಮುದ್ರಣಗೊಂಡಿದ್ದಾಗಿದೆ. ಕಂದು ಹಳದಿಬಣ್ಣದ ಮುಖಪುಟ ಹಾಳೆಯ ಮೇಲೆ ಮೊದಲ ನೋಟಕ್ಕೆ ಒದಗುವಂತೆ ಮುನ್ನೆಲೆಯಲ್ಲಿ ವೆಂಕಟಾಚಲಪತಿಯವರಿಂದ ನಿರ್ಮಿತವಾದ ನವ್ಯಶಿಲ್ಪವೊಂದರ ಛಾಯಾಚಿತ್ರವನ್ನು 'ಕೊಲ್ಯಾಜ್ ಮಾದರಿ'[೧೮]ಯಲ್ಲಿ ಮುದ್ರಿಸಲಾಗಿದ್ದು

೧೮. ಟಿ. ಆರ್. ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು-೧೦೭-೧೦೮

ಅದರ ಹಿಂದುಗಡೆ ಗ್ರಾಫಿಕ್ (ಮುದ್ರಣಕಲೆ) ಪರಿಣಾಮ (Impression) ದಂತೆ ಆ ಶಿಲ್ಪಕೃತಿಯ ನೆರಳು ಶೇಡಿ ಬಣ್ಣದಲ್ಲಿ ಸೃಷ್ಟಿಸಲ್ಪಟ್ಟಿದೆ.

ಮುಖಪುಟ ಹಾಳೆಯ ಅವಕಾಶದಾದ್ಯಂತ ವೆಂಕಟಾಚಲಪತಿಯವರು ರಚಿಸಿಕೊಂಡ ಶಿಲ್ಪಗಳ ಕರಡು ರೇಖಾಚಿತ್ರಗಳನ್ನು ಮಂದವಾಗಿ ಕಾಣುವಂತೆ ತೋರಿಸಲಾಗಿದೆ. ಈ ಮುಖಪುಟ ವಿನ್ಯಾಸದಲ್ಲಿ ಕಂಪ್ಯುಟರ್ ಗ್ರಾಫಿಕ್ ನೆರವು ಧಾರಾಳವಾಗಿ ಬಳಕೆಯಾಗಿರುವುದು ಎದ್ದು ಕಾಣುವ ಅಂಶ. ಇಲ್ಲಿ ಮುಖಪುಟದ ಮೇಲ್ತುದಿಯ ಪಾರ್ಶ್ವದಲ್ಲಿ ಕರ್ನಾಟಕ ಸರ್ಕಾರದ ಲಾಂಛನ ಮತ್ತು ಪದನಾಮವೂ ಸಹ ಮುದ್ರಣಗೊಂಡಿರುವದು ಗಮನೀಯ ಅಂಶ. ಅದರ ಕೆಳಗೆ ಕಪ್ಪು ಬಣ್ಣದ ತುಂಬ ದೊಡ್ಡದಾದ ಕನ್ನಡ ಅಕ್ಷರಗಳಲ್ಲಿ ಕೃತಿಯ ಶೀರ್ಷಿಕೆ ನಿರೂಪಿತವಾಗಿದ್ದು, ಅದಕ್ಕೂ ಕೆಳಗೆ ಶಿಲ್ಪದ ಛಾಯಾಚಿತ್ರದ ಪಕ್ಕದಲ್ಲಿ ಈ ಪುಸ್ತಕದ ಲೇಖಕರ ಹೆಸರು ಕನ್ನಡದಲ್ಲಿಯೇ ಕಪ್ಪು ಬಣ್ಣದಲ್ಲಿ ಮುದ್ರಿತವಾಗಿದೆ. ಮುಖಪುಟದ ತಳಭಾಗದಲ್ಲಿ ಕಪ್ಪು ಚೌಕಾವರಣದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ಮುದ್ರಣಗೊಂಡಿದ್ದು ಅದರ ಪಕ್ಕದಲ್ಲೇ ಕಪ್ಪು ಬಣ್ಣದಲ್ಲಿ ಕನ್ನಡದಲ್ಲಿ (ಕರ್ನಾಟಕ ಶಿಲ್ಪಕಲಾ ಅಕಾಡೆಮಿ) ಅದರ ಪದನಾಮ ಮುದ್ರಿತವಾಗಿದೆ. ಕಲಾಸಕ್ತರಿಗೆ ವಿಶೇಷವಾಗಿ ಸಮಕಾಲೀನ ಕಲೆ ಶಿಲ್ಪಕಲೆಗಳಲ್ಲಿ ಆಸಕ್ತ ಹೃದಯರಿಗೆ ಇದು ತುಂಬ ಇಷ್ಟವಾಗಬಲ್ಲ ಮುಖಪುಟ ಮಾದರಿ ಎನ್ನಬಹುದು.

**ಸರಣಿ ಮಾದರಿಯ ರಕ್ಷಾಪುಟ ವಿನ್ಯಾಸ**

೨೦೦೮ನೆಯ ಇಸ್ವಿಯಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸುವರ್ಣ ಕರ್ನಾಟಕ ಶಿಲ್ಪಕಲಾ ಮಾಲೆಯಡಿಯಲ್ಲಿ ೮ ಪುಸ್ತಕಗಳನ್ನು ಪ್ರಕಟಿಸಿತು. ಅವುಗಳೆಂದರೆ ಡಾ.ಆರ್.ಎಚ್.ಕುಲಕರ್ಣಿಯವರು ಬರೆದ 'ಕರ್ನಾಟಕ ಆರಂಭಿಕ ಶಿಲ್ಪಕಲೆ', ಡಾ.ದೇವರ ಕೊಂಡಾರೆಡ್ಡಿಯವರು ಬರೆದ 'ಗಂಗ ಶಿಲ್ಪಕಲೆ', ಡಾ.ಎಚ್.ಎಸ್.ಗೋಪಾಲರಾವ್ ಎನ್ನುವವರು ಬರೆದ 'ರಾಷ್ಟ್ರಕೂಟ ಶಿಲ್ಪಕಲೆ', ಡಾ.ಕರುಣಾ ವಿಜಯೇಂದ್ರ ಅವರಿಂದ ಬರೆಯಲ್ಪಟ್ಟ ಕಲ್ಯಾಣ ಚಾಲುಕ್ಯ ಶಿಲ್ಪಕಲೆ. ಡಾ.ಕೆ ವಸಂತಲಕ್ಷ್ಮೀಯವರಿಂದ ರಚಿತವಾದ ಹೊಯ್ಸಳಶಿಲ್ಪಕಲೆ, ಡಾ.ಅ.ಲ.ನರಸಿಂಹನ್‌ರವರಿಂದ ಬರೆಯಲ್ಪಟ್ಟ ವಿಜಯನಗರ ಶಿಲ್ಪಕಲೆ, ಡಾ.ತಮಿಳುಸೆಲ್ವಿ ಇವರು ಬರೆದ ಪಲ್ಲವ ಚೋಳಶಿಲ್ಪಕಲೆ. ಗಮನಿಸತಕ್ಕ ಅಂಶವೆಂದರೆ ಈ ಮೇಲೆ ಹೆಸರಿಸಿದ ಈ ಎಲ್ಲ ಪ್ರಕಟಣೆಗಳ ಮುಖಪುಟ ವಿನ್ಯಾಸ ಮಾಡಿದವರು ಸುಭಾಷ್‌ಕಮ್ಮಾರ್ ಎನ್ನುವವರು. ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಮುಖಪುಟದಲ್ಲಿ ಅಚ್ಚಿಸಿದ ಶಿಲ್ಪದ ಛಾಯಾಚಿತ್ರ ಬೇರೆ ಬೇರೆಯಾಗಿದೆ ಮತ್ತು ಮುಖಪುಟಕ್ಕೆ ಹಾಕಿದ ಬಣ್ಣ ಬೇರೆ ಬೇರೆಯಾಗಿದೆ ಎಂಬ ಅಂಶವನ್ನು ಬಿಟ್ಟರೆ ಈ ಎಲ್ಲ ಪುಸ್ತಕಗಳ ಒಟ್ಟಾರೆ ಮುಖಪುಟ ವಿನ್ಯಾಸ ಒಂದು ಏಕರೂಪತೆಯಿಂದ ಕೂಡಿದುದ್ದಾಗಿದೆ.

ಈ ಎಲ್ಲ ಪ್ರಕಟಣೆಗಳ ಮುಖಪುಟಗಳಲ್ಲಿ ಎರಡು (ಭಾಗಗಳು) ಆವರಣಗಳು ರೂಪುಗೊಂಡಿದ್ದು ಈ ಎರಡೂ ಆವರಣಗಳನ್ನು ಅವುಗಳ ನಡುವೆ ಇರುವ ಕಾಮನ ಬಿಲ್ಲಿನ ವಿನ್ಯಾಸ ಬೇರ್ಪಡಿಸಿದೆ. ಮೇಲಿನ ಕಿರಿದಾದ ಆವರಣದಲ್ಲಿ ಸುವರ್ಣ ಕರ್ನಾಟಕದ ಲಾಂಛನ ಮತ್ತು ಸುವರ್ಣ ಕರ್ನಾಟಕ

ಶಿಲ್ಪಕಲಾ ಮಾಲೆಯೆಂಬ ಶೀರ್ಷಿಕೆ ಇದೆ. ಕೆಳಗಿನ ಆವರಣ ಅವಕಾಶ ದೊಡ್ಡದಿದ್ದು ಅದರೊಳಗೆ ಸಂಪಾದಕ ಲೇಖಕರ ಹೆಸರುಗಳನ್ನು ಪುಸ್ತಕದ ವಿಷಯಕ್ಕೆ ಸಂಬಂಧಿಸಿದಂತೆ ಸೂಕ್ತವಾದೊಂದು ಶಿಲ್ಪದ ಛಾಯಾಚಿತ್ರ (ಏಕವರ್ಣದ) ಅಡ್ಡಲಾಗಿ ಕನ್ನಡದಲ್ಲಿಯೇ ದೊಡ್ಡ ಅಕ್ಷರಗಳಲ್ಲಿ ತಲೆಬರಹ/ಶೀರ್ಷಿಕಾ ಬರಹ ರಚನೆಯಾಗಿದ್ದು, ತಳಭಾಗದಲ್ಲಿಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಲಾಂಛನ ಮತ್ತು ಪದನಾಮ ಕನ್ನಡದಲ್ಲಿ ಮುದ್ರಣವಾಗಿರುತ್ತದೆ. ಈ ಪುಸ್ತಕಗಳ ಮುಖಪುಟಗಳಲ್ಲಿ ಏಕರೂಪತೆ ಈ ಮಾಲೆಯಡಿಯಲ್ಲಿನ ಪ್ರಕಟಗೊಂಡ ಪ್ರಕಟಣೆಯೆಂಬುದನ್ನು ಧ್ವನಿಸಬೇಕನ್ನುವುದು, ಮುಖಪುಟ ವಿನ್ಯಾಸಕಾರರ ಮತ್ತು ಅಕಾಡೆಮಿಯ ಆಶಯವಾಗಿದ್ದಿರಬಹುದು. ಈ ಎಲ್ಲ ಪುಸ್ತಕಗಳಲ್ಲಿ ವರ್ಣ ಸಾಮರಸ್ಯ ಸ್ಪಷ್ಟವಾಗಿದೆ ಮತ್ತು ಮುಖಪುಟದಲ್ಲಿ ಅಚ್ಚಿಸಿದ ಛಾಯಾಚಿತ್ರದ ಜೊತೆಗೂ ಸಹ ಸೂಕ್ತವಾಗಿ ಹೊಂದಾಣಿಕೆಗೊಂಡಿದೆ. ಅಲ್ಲದೆ ಅಚ್ಚಿಸಿದ ಛಾಯಾಚಿತ್ರದ ಸೊಬಗಿಗೂ ಕೂಡ ಯಾವುದೇ ಭಂಗ ಬಾರದಂತೆ ಮುಖಪುಟ ವರ್ಣಗಳ ಆಯ್ಕೆ ನಡೆದಿರುವುದು ಇಲ್ಲಿನ ವಿನ್ಯಾಸಕಾರರ ಕಾಲಪ್ರಜ್ಞೆಯ ಪ್ರೌಢ ಮಟ್ಟವನ್ನು ಸಂಕೇತಿಸುತ್ತದೆ ಎಂದು ಅಭಿಪ್ರಾಯಪಡಬಹುದು. ಒಟ್ಟಿನಲ್ಲಿ ಓದುಗರ ಕಣ್ ನೋಟಕ್ಕೆ ಬೇಸರಿಕೆಯನ್ನು ಉಂಟುಮಾಡದ ಮತ್ತು ಸಮಕಾಲೀನ ಸತ್ವದಿಂದ ಕೂಡಿದ ಮುಖಪುಟ ಈ ಪ್ರಕಟಣೆಗಳದ್ದಾಗಿದೆ ಎನ್ನಲು ಅಭ್ಯಂತರವಿಲ್ಲ.

ಒಟ್ಟಾರೆ ಈ ಅಧ್ಯಾಯದಲ್ಲಿ ಬಳಸಿಕೊಂಡ ೧೯೭೫ ರಿಂದ ೨೦೧೫ ವರೆಗಿನ ಅವಧಿಯ ಶಿಲ್ಪಕಲಾ ವಿಷಯಕ್ಕೆ ಸಂಬಧಿಸಿದಂತೆ ಪ್ರಕಟಿತ ಪ್ರಾತಿನಿಧಿಕವಾಗಿ ಕೆಲವು ಗ್ರಂಥಗಳನ್ನು ಅವಲೋಕಿಸಿಲಾಗಿದೆ ಅವುಗಳ ರಕ್ಷಾಪುಟ ವಿನ್ಯಾಸಗಳಿಂದ ಕಂಡುಕೊಂಡ ಅಂಶಗಳೆಂದರೆ, ಕಲಾವಿದರಿಂದ ರಚಿತವಾದ ಶಿಲ್ಪಕೃತಿಯ ಛಾಯಾಚಿತ್ರವನ್ನು ಆಯಾ ಗ್ರಂಥಗಳ ಮುಖಪುಟ ವಿನ್ಯಾಸಕ್ಕೆ ಬಳಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ರಚನೆಗೊಂಡ ಕನ್ನಡ ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿನ ವರ್ಣವಿನ್ಯಾಸ, ಸಂಯೋಜನಾದೃಷ್ಟಿ, ಸ್ಥಳಾವಕಾಶ ಇತ್ಯಾದಿ ಅಂಶಗಳನ್ನು ದೃಶ್ಯಾತ್ಮಕ ನೆಲೆಯಲ್ಲಿ ಉತ್ತಮವಾಗಿ ರಚನೆಗೊಂಡಿವೆ. ಉಳಿದಂತೆ ಗ್ರಂಥಗಳ ರಕ್ಷಾಪುಟ ವಿನ್ಯಾಸಗೊಳಿಸಿದ ಅಥವಾ ಮುಖಪುಟವಿನ್ಯಾಸ ಮಾಡಿರುವ ಕಲಾವಿದರ ಹೆಸರು ಮತ್ತು ಅವರ ಕೆಲಸ ಕಾರ್ಯವು ಗ್ರಂಥಗಳ ಪ್ರಕಟಣೆ ಅಥವಾ ಪುಸ್ತಕ ಮುದ್ರಣದಂತಹ ಕೆಲಸಕಾರ್ಯಗಳಲ್ಲಿ ಗಂಭೀರವಾಗಿ ಪರಿಗಣಿಸಲಿಲ್ಲ ಎಂದು ಸ್ಪಷ್ಟವಾಗಿ ತಿಳಿದು ಬರುವ ಸಂಗತಿಯಾಗಿದೆ. ಈ ಮಾತಿಗೆ ಪುಷ್ಟಿ ಎಂದರೆ (ಐದು ಪುಸ್ತಕಗಳನ್ನು ಹೊರತುಪಡಿಸಿ) ಉಳಿದ ಪ್ರಕಟಿತ ಗ್ರಂಥದೊಳಗಡೆ ಎಲ್ಲಿಯೂ ಕಲಾವಿದರ/ ಮುಖಪುಟ ವಿನ್ಯಾಸಗಾರರ ಹೆಸರು ಸೂಚಿಸಿಲ್ಲ.

❑❑❑

ಎಪ್ಪತ್ತರ ದಶಕದ ರಕ್ಷಾಪುಟಗಳು




೧೯೭೫



೧೯೭೫




೧೯೭೫




೧೯೭೬




೧೯೭೯




೧೯೮೨

ತೊಂಬತ್ತರ ದಶಕದ ರಕ್ಷಾಪುಟಗಳು




೧೯೯೪




೧೯೯೪




೧೯೯೯



೨೦೦೦

ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ರಕ್ಷಾಪುಟಗಳು



೨೦೦೦



೨೦೦೦

ಕೆ. ಶಾಮರಾಯಾಚಾರ್ಯ





ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ, ಕನ್ನಡ ಭವನ
ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨

೨೦೦೦

ಎಸ್. ಜಿ. ನೀಲಕಂಠಾಚಾರ್





ಕರ್ನಾಟಕ
ಶಿಲ್ಪಕಲಾ ಅಕಾಡೆಮಿ

೨೦೦೧

ಕಲಾಚರಿತ್ರೆ





೨೦೦೨

ಶ್ರೀ ತಿಪ್ಪಾಜಿ ಚಿತ್ರಗಾರ್
ರೇಖಾ ಚಿತ್ರಗಳು





೨೦೦೩



ಹಿಂಬದಿಪುಟ




೨೦೦೩




೨೦೦೩




೨೦೦೪




೨೦೦೪




೨೦೦೪




೨೦೦೪




೨೦೦೬




೨೦೦೬




೨೦೦೭




೨೦೦೮




೨೦೦೮

## ಸರಣಿ ಮಾದರಿಯ ರಕ್ಷಾಪುಟ ವಿನ್ಯಾಸ




೨೦೦೮




೨೦೦೮




೨೦೦೮




೨೦೦೮




೨೦೧೧




೨೦೧೧

**ಚೌಕಾಕರದ ಮುಖಪುಟ Square Cover page**




೨೦೧೨

ಅಧ್ಯಾಯ : ಐದು

## ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

- ಸ್ವಾತಂತ್ರ್ಯಪೂರ್ವ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ
- ಸ್ವಾತಂತ್ರ್ಯೋತ್ತರ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ
- ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಅಧ್ಯಾಯ : ಐದು

## ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಮುಖಪುಟವನ್ನು ಅಂದಗೊಳಿಸುವ ರೂಢಿ ಅನೇಕ ವರ್ಷಗಳಿಂದ ಸಾಹಿತ್ಯವಲಯದಲ್ಲಿ ಪ್ರಚಲಿತದಲ್ಲಿರುವ ಸಂಗತಿಯೇ ಆಗಿದೆ. ಮಾನವನ ಸೌಂದರ್ಯ ಪ್ರಜ್ಞೆ ವಿಕಸನಗೊಳ್ಳುತ್ತ ಬಂದಂತೆ, ಹತ್ತು – ಹಲವು ಆಯಾಮಗಳಲ್ಲಿ ಅದು ಪ್ರಕಟಣೆಗೊಳ್ಳುತ್ತ ಬಂದಂತೆ – ಆ ಪ್ರಜ್ಞೆಯ ಪರಿಧಿ ಸಾಹಿತ್ಯ ಕ್ಷೇತ್ರಕ್ಕೂ ವ್ಯಾಪಿಸಿತು. ಸಾಹಿತ್ಯಕ್ಕೆ ಪೂರಕವಾದ ಚಿತ್ರಗಳನ್ನು ಕಲಾವಿದರಿಂದ ಬರೆಯಿಸಿ, ಅಚ್ಚಿಸುವ ಪದ್ಧತಿ ಪ್ರಚಲಿತಕ್ಕೆ ಬಂದಂತಿದೆ. ಅಂತೆಯೇ ಸಾಹಿತ್ಯ ಕೃತಿಯ ಸಾಹಿತ್ಯಾಭಿಮಾನಿಗೆ / ಓದುಗನಿಗೆ ಆಪ್ಯಾಯಮಾನವೆನಿಸಲೆಂಬ ಅಪೇಕ್ಷೆಯಿಂದ ಸಾಹಿತ್ಯ ಕೃತಿಯ / ಕೃತಿಗಳ ಮುಖಪುಟವನ್ನು ಚಿತ್ತಾಕರ್ಷಕವಾಗಿ ರೂಢಿಸಬೇಕೆಂಬ ಮನೋಭಾವವೂ ಸಾಹಿತಿಗಳಲ್ಲಿ / ಬರಹಗಾರರಲ್ಲಿ ಮನೆಮಾಡಿತು. ಇದರಿಂದ ಅವರಿಗೆ ಕೃತಿಯ ಮಾರಾಟ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾದುದರಿಂದ ಸುಲಭವಾಗಿ ಮಾರುಕಟ್ಟೆ ಉದ್ದೇಶವೂ ಸಾಫಲ್ಯಗೊಳ್ಳುತ್ತಿರುವುದು ನಿಜ ಸಂಗತಿಯಾಗಿದೆ. ಈ ಪದ್ಧತಿಯೂ ಜಾಗತಿಕ ಮಟ್ಟದಲ್ಲಿ ಬೆಳವಣಿಗೆ ಕಂಡುಕೊಳ್ಳುತ್ತ ಬಂದ ಪ್ರಕ್ರಿಯೆ. ನಮ್ಮ ದೇಶದಲ್ಲೂ ಪ್ರಚಾರಕ್ಕೆ ಬಂತು. ಹಾಗೆಯೇ, ರಾಜ್ಯದ ಕನ್ನಡ ನಾಟಕ ಸಾಹಿತ್ಯ ವಲಯದಲ್ಲೂ ಸಹ ಜನಪ್ರಿಯ ಗಳಿಸಿತು.

ಪ್ರಸ್ತುತ ಪ್ರೌಢಪ್ರಬಂಧದ ಈ ಅಧ್ಯಾಯ ೧೯೦೦ ರಿಂದ ೨೦೧೪-೧೫ ರ ತನಕದ ಕರ್ನಾಟಕದ ಆಯ್ದ ಕೆಲವು ನಾಟಕ ಸಾಹಿತ್ಯ ಕೃತಿಗಳ ರಕ್ಷಾಪುಟಗಳನ್ನು ಮಾತ್ರ ಅನುಲಕ್ಷಿಸಿರುವುದರಿಂದ ಪ್ರಬಂಧದ ನಿಯಮಾನುಸಾರವಾಗಿ ಪರಿಮಿತಿಗೊಳಿಸಿಕೊಂಡ ಅವಧಿಯ ಕುರಿತಾಗಿ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯತ್ತ ಮಾತ್ರ ಹೆಚ್ಚಿನ ಅಧ್ಯಯನ ನಡೆಸಿದೆ. ಹಾಗಾಗಿ ಈ ಮೇಲೆ ಉಲ್ಲೇಖಿಸಿದ ಅವಧಿಯವರೆಗಿನ ಪ್ರಮುಖ ನಾಟಕ ಸಾಹಿತ್ಯಗಳ ಗ್ರಂಥಗಳ ರಕ್ಷಾಪುಟ ಚಿತ್ರಕಲೆಗಳನ್ನು ಅಧ್ಯಯನಕ್ಕೊಳಪಡಿಸಿದೆ.

### ೫.೧. ಸ್ವಾತಂತ್ರ್ಯಪೂರ್ವ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

#### ೫.೧.೧. ಚಂಡಕೌಶಿಕ ನಾಟಕಂ (೧೯೦೯)

೧೯೦೯ರಲ್ಲಿ ಬಸವಪ್ಪ ಶಾಸ್ತ್ರಿಗಳಿಂದ ರಚಿತಗೊಂಡ 'ಚಂಡಕೌಶಿಕ ನಾಟಕಂ' ಎರಡು ರೀತಿಯ ಮುಖಪುಟ ವಿನ್ಯಾಸಗಳನ್ನು ಪಡೆದು ಪ್ರಕಟಣೆಗೊಂಡಿದೆ. ಒಂದು ಆವೃತ್ತಿಯ ಮುಖಪುಟ ತಿಳಿಬೂದು ಬಣ್ಣದ ಹಿನ್ನೆಲೆಯಲ್ಲಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕೃತಿ ಶೀರ್ಷಿಕೆ ಮತ್ತು ಇಂಗ್ಲಿಷಿನಲ್ಲಿ ಕೃತಿಕಾರರ ಹೆಸರು ಮತ್ತು ಅವರು ಈ ಹಿಂದೆ ರಚಿಸಿದ ಕೆಲವು ಕೃತಿಗಳ ಹೆಸರುಗಳನ್ನು ಇಂಗ್ಲಿಷ್ ಭಾಷೆಯಲ್ಲಿ ಪುಟ್ಟ ಅಕ್ಷರಗಳಲ್ಲಿ ಬರೆಯಲಾಗಿದೆ. ಅಲ್ಲದೆ 'ಶ್ರೀಮನ್ಮಹಾರಾಜರ ಆಸ್ಥಾನ ಕವಿಗಳಾಗಿದ್ದ ಬಸವಪ್ಪ ಶಾಸ್ತ್ರಿಗಳಿಂದ ರಚಿಸಲ್ಪಟ್ಟಿತು' ಎಂದು ಬರೆಯಲಾಗಿದ್ದು, 'ಬಸವಪ್ಪ ಶಾಸ್ತ್ರಿಗಳಿಂದ' ಎಂಬ ಪದ ಸ್ವಲ್ಪ ದೊಡ್ಡ ಅಕ್ಷರಗಳಲ್ಲಿ ಬರೆಯಲ್ಪಟ್ಟಿದ್ದು 'ಶ್ರೀ ಮನ್ಮಹಾರಾಜರವರ ಆಸ್ಥಾನಕವಿಗಳಾಗಿದ್ದ, ಮತ್ತು 'ರಚಿಸಲ್ಪಟ್ಟಿತು' ಎಂಬ ಅಕ್ಷರಗಳು ಪದಗಳು ತುಂಬ ಸಣ್ಣ ಅಕ್ಷರದಲ್ಲಿ ಬರೆಯಲ್ಪಟ್ಟಿವೆ ಕೃತಿ ಶೀರ್ಷಿಕೆ (ಕನ್ನಡ ಮತ್ತು ಇಂಗ್ಲಿಷ್ ಭಾಷೆಯ) ಮುಖಪುಟದಲ್ಲಿ ಅಚ್ಚಾದ ಎಲ್ಲ ಪದಗಳಿಗಿಂತಲೂ ದೊಡ್ಡದಾಗಿ ಬರೆಯಲ್ಪಟ್ಟಿದೆ. ಮುಖಪುಟದ ತಳಭಾಗದಲ್ಲಿಯೇ ಇಂಗಿಷಿನಲ್ಲಿ ಕಂಸ ಚಿನ್ಹೆಯ ಆವರಣದಲ್ಲಿ 'All Rights Reserved' ಎಂದು ನಮೂದಿಸಲ್ಪಟ್ಟಿದ್ದಾರೆ. The G.T.A printing works Mysore ಎಂದು ಬರೆದಿದ್ದು ಕೆಳಗಡೆ ಅದು ಪ್ರಕಟಗೊಂಡ ವರ್ಷ (ಇಂಗ್ಲಿಷ್ ಅಂಕಿಯಲ್ಲಿ) ನಮೂದಿಸಲಾಗಿದೆ.

ಇನ್ನೊಂದು ಆವೃತ್ತಿಯ ಮುಖಪುಟ (ಅದೇ ವರ್ಷ ಪ್ರಕಟವಾಗಿದ್ದು) ಈ ಮೇಲೆ ವಿವರಿಸಿದ ಮುಖಪುಟಕ್ಕೆ ಹೋಲಿಸಿದರೆ ಸಾಕಷ್ಟು ಆಕರ್ಷಣೀಯವೇ ಆಗಿದೆ ಎನ್ನಬಹುದು. ದಟ್ಟಹಸಿರು ಅವಕಾಶದಲ್ಲಿ ಕೃತಿ ಶೀರ್ಷಿಕೆ ಮತ್ತು ಕೃತಿಕಾರರ ಹೆಸರನ್ನು ಮೇಲೆ ಕೆಳಗೆ ದಪ್ಪ ಅಂಚಿನಲ್ಲಿ ಕಪ್ಪುಬಣ್ಣದಲ್ಲಿ ಎಲೆಗಳು ಸುಂದರ ಕುಸುರಿ ನಕ್ಷೆಗಳುಳ್ಳ ಚೌಕಟ್ಟಿನೊಳಗಡೆ ಬರೆಯಲಾಗಿದೆ, ಬಲ ಮತ್ತು ಎಡ ಪಾರ್ಶ್ವಗಳಲ್ಲಿ ಅಚ್ಚುಕಟ್ಟಾದ ತೆಳುವಾದ ಸರಳ ರೇಖೆಗಳನ್ನು ವಿನ್ಯಾಸಗೊಳಿಸಲಾಗಿದೆ 'ಕರ್ನಾಟಕ ಚಂಡಕೌಶಿಕ ನಾಟಕಂ' ಎಂಬ ಶೀರ್ಷಿಕೆ ಕಪ್ಪುಬಣ್ಣದಲ್ಲಿ ನಮೂದಿಸಿದ್ದು ಕರ್ನಾಟಕ ಎಂಬ ಶಬ್ದ 'ಚಂಡಕೌಶಿಕ ನಾಟಕಂ' ಎಂಬ ಪದಗಳಿಗಿಂತಲೂ ತುಸು ಚಿಕ್ಕ ಅಕ್ಷರಗಳಲ್ಲಿ ಬರೆಯಲ್ಪಟ್ಟಿದೆ.

ಮುಖಪುಟದಲ್ಲಿ ಎದ್ದು ಕಾಣುವ ಪದಗಳೆಂದರೆ ಚಂಡಕೌಶಿಕ ನಾಟಕಂ ಎಂಬುದು ಲೇಖಕರ ಹೆಸರನ್ನು ತುಂಬು ಚಿಕ್ಕ ಅಕ್ಷರಗಳಲ್ಲಿ ಬರೆಯಲಾಗಿದೆ. ಕೃತಿ ಶೀರ್ಷಿಕೆ ಮತ್ತು ಕೃತಿಕಾರರ ಹೆಸರು ಮತ್ತು 'All Rights Reserved' ಪದಗಳ ನಡುವೆ ಇರುವ ಅವಕಾಶದಲ್ಲಿ ಪುಟ್ಟ ಸರಳಗೈ ನಕ್ಷಾ ವಿನ್ಯಾಸಗಳು ಕಪ್ಪು ಬಣ್ಣದಲ್ಲಿ ರಚಿತವಾಗಿವೆ. ಇದೇ ಕೃತಿಯ ಹಿಂದಿನ ಆವೃತ್ತಿಯ ಮುಖಪುಟದಲ್ಲಿ ಅಚ್ಚಿಸಿದ್ದ ಇಂಗ್ಲಿಷ್ ಅಕ್ಷರಗಳಲ್ಲಿದ್ದ ಶೀರ್ಷಿಕೆಯನ್ನು ಇಂಗ್ಲಿಷ್ ಅಕ್ಷರಗಳಲ್ಲಿದ್ದ ಬಸವಪ್ಪ ಶಾಸ್ತ್ರಿಗಳ ಹೆಸರನ್ನು ಮತ್ತು ಅದೇ ಭಾಷೆಯಲ್ಲಿದ್ದ ಅವರ ಇನ್ನಿತರ ಕೆಲವು ಕೃತಿಗಳ ಹೆಸರುಗಳನ್ನು ಮತ್ತು ಪ್ರಕಾಶಕರ ಹೆಸರನ್ನು ಇಲ್ಲಿ ಕೈ ಬಿಡಲಾಗಿದೆ.

೫.೧.೨. ಜಾನಕೀಪರಿಣಯ ನಾಟಕಂ (೧೯೧೪)

೧೯೧೪ ರಲ್ಲಿ ರಚಿತವಾದ (ಕೃತಿಕಾರರು ಹನೂರ್ಮಾ ವೇಂಕಟರಾಯ ಕವಿಗಳು ಮುದ್ರಕರು ಎಸ್.ಜಿ.ಎನ್ ಪ್ರೆಸ್, ಬೆಂಗಳೂರು) 'ಜಾನಕೀಪರಿಣಯ ನಾಟಕಂ' ಕೃತಿಯು ಸಹ ಪ್ರಕಟವಾದ ಒಂದೇ ವರ್ಷದಲ್ಲಿ ಎರಡು ಬಗೆಯ ಮುಖಪುಟ ವಿನ್ಯಾಸ ಪಡೆದು ಪ್ರಕಾಶನ ಕಂಡಿರುವಂತಹುದು. ಇದರ ಒಂದು ಬಗೆಯ ಮುಖಪುಟ ವಿನ್ಯಾಸವುಳ್ಳ ಪ್ರತಿಗಳು ಎಸ್.ಜಿ.ಎನ್ ಪ್ರೆಸ್ ಬೆಂಗಳೂರು ಇಲ್ಲಿ ಮುದ್ರಣಗೊಂಡರೆ, ಇನ್ನೊಂದು ಬಗೆಯ ಮುಖಪುಟ ವಿನ್ಯಾಸವುಳ್ಳ ಈ ಕೃತಿಯ ಪ್ರತಿಗಳು ಶ್ರೀ ಗೌರೀ ನಿಲಯ ಮುದ್ರಣಾಲಯದಲ್ಲಿ ಮುದ್ರಣಗೊಂಡಿವೆ (ಶ್ರೀಗೌರೀ ನಿಲಯ ಮುದ್ರಣಾಲಯದಲ್ಲಿ ಅಚ್ಚಾಗಿರುವುದೇ ಪ್ರಥಮ ಮುದ್ರಣ ಅದನ್ನು ಆ ಮುಖಪುಟ ವಿನ್ಯಾಸದಲ್ಲಿ ಸ್ಪಷ್ಟವಾಗಿ ನಮೂದಿಸಲಾಗಿದೆ).

ಮೊದಲ ಮುದ್ರಣದ ಮುಖಪುಟ ತಿಳಿಗಂದು ಮತ್ತು ತಿಳಿ ಹಳದಿ ಮಿಶ್ರಿತ ವರ್ಣದ ಕಾಗದ ಹೊಂದಿದ್ದು ಇದರ ಅಂಚುಗಳು ಎಲೆ, ಕಾಯಿ, ಹೂ, ಬಳ್ಳಿಯಿಂದೊಡಗೂಡಿದ ಸರಳ ಕುಸುರಿ ವಿನ್ಯಾಸಗಳನ್ನು ಹೊಂದಿವೆ. ಆ ಕುಸುರಿ ವಿನ್ಯಾಸವುಳ್ಳ ಆವರಣದೊಳಗೆ ಮೇಲ್ತುದಿಯಲ್ಲಿ ಚಿಕ್ಕ ಅಕ್ಷರಗಳಲ್ಲೂ 'ಶ್ರೀ ಶ್ರೀಶಾಯ ನಮಃ' ಎಂದು ಬರೆದಿದ್ದು ಅದರ ಕೆಳಗಡೆ ಕೃತಿಯ ಶೀರ್ಷಿಕೆ 'ಜಾನಕೀಪರಿಣಯ ನಾಟಕಂ' ಅನ್ನು ಎದ್ದು ಕಾಣುವಂತೆ (ಆ ಮುಖ ಪುಟದಲ್ಲಿಯೇ) ಬರೆಯಲಾಗಿದ್ದು ಅದರ ಕೆಳಗಡೆಯ ಅವಕಾಶದಲ್ಲಿ ಪುಟ್ಟ ಸರಳ ರೇಖಾತ್ಮಕ ನಕ್ಷಾ ವಿನ್ಯಾಸವಿದೆ. ಅದರ ಕೆಳಗಡೆಯಲ್ಲಿ 'ಹನೂರ್ಮಾ ವೇಂಕಟರಾಯ ವಿರಚಿತಂ' ಎಂದು ಬರೆಯಲಾಗಿದೆ. ಕವಿಗಳ ಹೆಸರು ಕೃತಿ ಶೀರ್ಷಿಕೆಯ ಅಕ್ಷರದಷ್ಟು ದೊಡ್ಡಗಾತ್ರದಲ್ಲಿ ಇಲ್ಲದಿದ್ದರೂ ನೋಡುಗರ ಗಮನ ಸರಾಗವಾಗಿ ಬರುವಷ್ಟು ದೊಡ್ಡ ಗಾತ್ರದ ಅಕ್ಷರಗಳಲ್ಲಿ ನಮೂದಾಗಿದೆ.

ಅದಕ್ಕೂ ಕೆಳಗಿನ ಸ್ಥಳ ಅವಕಾಶದಲ್ಲಿ ಶ್ರೀ ಶ್ರೀಶಾಯ ನಮಃ ಎಂದು ನಮೂದಾದಷ್ಟೇ ಪ್ರಮಾಣದ ಅಳತೆಯ ಅಕ್ಷರಗಳಲ್ಲಿ ಪ್ರಥಮ ಮುದ್ರಣಂ ಎಂದು ಅಚ್ಚಿಸಲಾಗಿದೆ. ನಂತರದ ಕೆಳಗಿನ ಸ್ಥಳಾವಕಾಶದಲ್ಲಿ ಬೆಂಗಳೂರು ಎಂದು ಬರೆಯಲಾಗಿದ್ದು. ಆ ಕೆಳಗಡೆ ಶ್ರೀಗೌರೀ ನಿಲಯ ಮುದ್ರಣಾಲಯದಲ್ಲಿ ಮುದ್ರಿತಂ ಎಂದು ನಮೂದಿಸಿದ್ದು, ತಳಭಾಗದಲ್ಲಿ ಕಣ್ಣಿಗೆ ಎದ್ದು ಕಾಣುವ ಗಾತ್ರದಲ್ಲಿ ಪ್ರಕಟಗೊಂಡ ವರ್ಷ ನಮೂದಿಸಿದ್ದು (ಇಂಗ್ಲಿಷ್ ಅಂಕಿಯಲ್ಲಿ) ಕೊನೆಯಲ್ಲಿ (ತೀರ ತಳಬಾಗದಲ್ಲಿ) ಅತಿ ಚಿಕ್ಕ ಗಾತ್ರದಲ್ಲಿ ಇಂಗ್ಲಿಷ್ ಅಕ್ಷರಗಳಲ್ಲಿ 'Registered Copy Right' ಎಂದು ನಮೂದಿಸಲಾಗಿದೆ.

ಇದೇ ಕೃತಿಯ ಇನ್ನೊಂದು ಮುದ್ರಣದ ಮುಖಪುಟ ವಿನ್ಯಾಸ ತಿಳಿಕಂದು ಹಳದಿ (Yellow Ochre) ಬಣ್ಣದ ಹಾಳೆಯ ಮೇಲೆ ರೂಪುಗೊಂಡಿದ್ದು ಅದರ ಒಂದು ಬದಿ ಕಮಾನಿನಾಕಾರದಲ್ಲಿ ಬಾಗಿರುವ ಸರಳಗೈ (ಕುಸುರಿ) ರೇಖಾ ವಿನ್ಯಾಸ ಮಾದರಿಯನ್ನು ಹೊಂದಿದೆ. ಮುಖಪುಟದ ಮಧ್ಯಭಾಗದಲ್ಲಿ ಓರೆ (ಕೋರೆ)ಯಾಗಿ ಎರಡು ಪಟ್ಟಿಕೆಗಳ ನಡುವೆ ಕೃತಿಯ ಶೀರ್ಷಿಕೆಯನ್ನು ಈ ಮೇಲೆ ಉಲ್ಲೇಖಿಸಿದ (ಮೊದಲಿನ) ಮುದ್ರಣದ ಮುಖಪುಟದಲ್ಲಿ ಅಚ್ಚಿಸಿದ್ದಷ್ಟೇ ಗಾತ್ರದ ಅಕ್ಷರಗಳ ಮೂಲಕ ಇಲ್ಲಿಯ ಶೀರ್ಷಿಕೆಯನ್ನು ಬರೆಯಲಾಗಿದೆ. ಈ ಹಿಂದಿನ ಮುದ್ರಣದಲ್ಲಿದ್ದಂತೆಯೆ ಇಲ್ಲಿಯೂ ಸಹ ಲೇಖಕರ ಹೆಸರು ನೇರ ರೇಖೆಯಲ್ಲಿ

ಬರೆಯಲ್ಪಟ್ಟಿದ್ದು ವಿರಚಿತಂ ಎಂಬ ಪದ ಬೆಂಗಳೂರು ಎಂಬ ಪದ ಮೊದಲ ಮುದ್ರಣದ ಪ್ರತಿಯಲ್ಲಿ ಅಚ್ಚಾದ ಅಳತೆಯ ಅಕ್ಷರಗಳಲ್ಲಿಯೇ ಅಚ್ಚಾಗಿವೆ. ತೀರ ಪುಟ್ಟ ಅಕ್ಷರಗಳಲ್ಲಿ 'ಎಸ್.ಜಿ.ಎನ್. ಪ್ರೆಸ್' ಎಂಬ ಅಕ್ಷರಗಳು ಮುದ್ರಣಗೊಂಡಿದ್ದು ಅದು ಎಷ್ಟನೆಯ ಮುದ್ರಣ ಎಂಬುದು ಉಲ್ಲೇಖವಾಗಿಲ್ಲ (ಈ ಹಿಂದೆ ಉಲ್ಲೇಖಿಸಿದ ಈ ಕೃತಿಯ ಮುಖಪುಟ ವಿನ್ಯಾಸದಲ್ಲಿ ಪ್ರಥಮ ಮುದ್ರಣ ಎಂದು ಉಲ್ಲೇಖಿಸಿದೆಯಷ್ಟೆ) ತೀರ ತಳಭಾಗದಲ್ಲಿ ಪುಟ್ಟ ಕುಸುರಿ ವಿನ್ಯಾಸ ಚಿತ್ತಾರವಿದೆ. (ಅದು ಬಹುಷಃ ಮುದ್ರಣಾಲಯದ ಲೋಗೋ ಇದ್ದಿರಲೂಬಹುದು) ಇಲ್ಲಿನ ಮುದ್ರಣಗಳ ಅಕ್ಷರ ಶೈಲಿ (ಇಂಗ್ಲಿಷ್‌ನ) ರೋಮನ್ ಮಾದರಿಯ ಲಕ್ಷಣಗಳು ಹೊಂದಿದ್ದು ಕಂಡುಬರುತ್ತವೆ.

ಕರ್ನಾಟಕದಲ್ಲಿ ಸರಿಸುಮಾರು ೧೯೩೦ ರಿಂದ ೧೯೬೦ರ ದಶಕದವರೆಗೆ ಮುಖಪುಟಗಳನ್ನು ಅಂದವಾದ ಚಿತ್ತಾರಗಳಿಂದ / ಅರ್ಥಪೂರ್ಣ ಚಿತ್ರಗಳಿಂದ ಸೊಗಸುಗೊಳಿಸುವ ರೂಢಿ ಇದ್ದಿರಲಿಲ್ಲ ಎಂದೇ ಹೇಳಬಹುದು. ಅಲ್ಲದೆ ಆ ಕಾಲಘಟ್ಟದಲ್ಲಿ ಮುಖಪುಟವನ್ನು ರೂಪಿಸಿದ ಕಲೆಗಾರರನ್ನು ಮುನ್ನುಡಿಯಲ್ಲೊ, ಅರಿಕೆಯಲ್ಲೊ, ಅಥವಾ ಗ್ರಂಥದ ಯಾವುದಾದರೂ ಪುಟದಲ್ಲೂ ಉಲ್ಲೇಖಿಸುವ ಶಿಷ್ಟಾಚಾರವೂ ಪರಿಪಾಲನೆಗೊಳ್ಳುತ್ತಿದ್ದಿಲ್ಲ ಎಂದು ಅಭಿಪ್ರಾಯಪಡಬಹುದು. ಮುಖಪುಟ ರಚಿಸಿದ ಕಲಾವಿದ ಸಂಪೂರ್ಣ ನೇಪತ್ಯದಲ್ಲೇ ಉಳಿದು ಬಿಟ್ಟಿರುತ್ತಿದ್ದ ಎಂಬುವುದು ಸುಸ್ಪಷ್ಟ. ಎಲ್ಲಕ್ಕಿಂತ ಮುಖ್ಯವಾದ ಮುಖಪುಟದ ಸೊಗಸುಗಾರಿಕೆಯ ಮಹತ್ವದ ಕುರಿತಾದ ಅರಿವೇ ಆ ಕಾಲಾವಧಿಯ ಕರ್ನಾಟಕದ ಬರಹಗಾರರ ಸಮೂಹದಲ್ಲಿ ಇದ್ದಿರಲಿಲ್ಲ ಹೆಚ್ಚೆಂದರೆ 'ಏಕವರ್ಣದಲ್ಲಿ / ದ್ವಿವರ್ಣದಲ್ಲಿ ರೂಪಿತವಾದ ಶೀರ್ಷಿಕೆಯ ಮುಖಪುಟದಲ್ಲಿ ಅಚ್ಚಾದ / ಸಾಹಿತ್ಯ ರಚನೆಯ ಶೀರ್ಷಿಕೆಯ ಸುತ್ತ ಅಥವಾ ಮುಖಪುಟದುದ್ದಕ್ಕೂ ಹರಡಿಕೊಂಡಿರುವ ಅಂಚಿನ ಸುತ್ತ ಸರಳವಾದ ವಿನ್ಯಾಸಗಳು (ಹೂ, ಹೂಬಳ್ಳಿ, ಎಲೆಗಳು, ವೃತ್ತ, ತ್ರಿಭುಜ, ಚೌಕ ಇತ್ಯಾದಿ ಜ್ಯಾಮಿತಿ ಆಕಾರಗಳು, ಸಮಾನಾಂತರ ರೇಖೆಗಳು ಇವೇ ಮೊದಲಾದ ವಿನ್ಯಾಸಗಳು) ನಿರ್ಮಿಸಲ್ಪಟ್ಟಿರುತ್ತಿದ್ದವು.'[೧] ಉದಾ: ೧೯೩೪ ರಲ್ಲಿ ಶಿವರಾಮ ಕಾರಂತರಿಂದ ರಚಿತವಾದ 'ಮುಕ್ತದ್ವಾರ' ಎಂಬ ಹೆಸರಿನ ಗೀತ ನಾಟಕ (ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ಇವರಿಂದ ಪ್ರಕಟಿಸಲ್ಪಟ್ಟಿದುದು, ಪ್ರಕಾಶಕರು ಅಕ್ಷರ ಪ್ರಕಾಶನ, ಸಾಗರ), ಮಾ. ನಾ. ಚೌಡಪ್ಪ ಎನ್ನುವವರಿಂದ ೧೯೪೬ ರಲ್ಲಿ ರಚಿತವಾದ ನಾಟಕ 'ಚಂದ್ರಗುಪ್ತ' (ಮುದ್ರಕರು / ಪ್ರಕಾಶಕರು ಈಸ್ಟರ್ನ್ ಪ್ರೆಸ್) ವೈ.ಎಸ್.ಗುಂಡಪ್ಪ ಅವರಿಂದ ಅದೇ ವರ್ಷ ರಚಿಸಲ್ಪಟ್ಟ ಬಾಲಕರ ಸಂಗೀತ ನಾಟಕ 'ಬಾಲಕ ಬೀರ್' ಇವೇ ಮೊದಲಾದ ರಚನೆಗಳು.

**೫.೧.೩. ಗೋಕಾಕರ ನಾಟಕಗಳು (೧೯೪೭)**

೧೯೪೭ನೆಯ ಇಸ್ವಿಯಲ್ಲಿ ಜೆ.ಹೆಚ್. ರಾಮರಾವ್ ಮುದ್ರಣದಿಂದ ಪ್ರಕಾಶಿತವಾದ ವಿನಾಯಕ ಕೃಷ್ಣ ಗೋಕಾಕ್ ಅವರ ನಾಟಕ ಸಂಕಲನ 'ಗೋಕಾಕರ ನಾಟಕಗಳು' ಎಂಬ ಹೆಸರಿನಲ್ಲಿದ್ದು ಅದರ ಮುಖಪುಟ ಚಿತ್ರ ಆ ಸಮಯದಲ್ಲಿ ಮುಖಪುಟ ಚಿತ್ರಗಾರಿಕೆಯಲ್ಲಿ ಸೃಜನಶೀಲತೆಯ ಸ್ಪರ್ಶ ನೀಡಿದುದು

೦೧. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ: ೨೦೧೩-೧೪

ಎನ್ನಬಹುದು. ಮುಖಪುಟ ಶೀರ್ಷಿಕೆಯ ಕೆಳಗಡೆ ಚಿತ್ರಿಸಲ್ಪಟ್ಟಿರುವ ಶಿರರಹಿತ ಎರಡು ಮುಖವಾಡ ರೇಖಾಚಿತ್ರಗಳಲ್ಲಿ ಒಂದು ಮುಖವಾಡ ಹಿತವಾದ ನಗೆ ಸೂಸುತ್ತಿದ್ದರೆ ಅದಕ್ಕೆ ಒತ್ತಾಗಿ ಅಂಟಿಕೊಂಡಿರುವ ಇನ್ನೊಂದು ಮುಖವಾಡ ತುಂಬ ಚಿಂತಾಕುಲವಾಗಿದೆ. ಈ ಎರಡೂ ಮುಖವಾಡಗಳು ಹಸಿರು ಅಂಚುರೇಖೆಗಳಿಂದ ಕೂಡಿದ್ದು ಕಪ್ಪುಬಣ್ಣದ ಶೀರ್ಷಿಕೆ ಅಕ್ಷರಗಳ ಹಿನ್ನೆಲೆಯಲ್ಲಿ ತಿಳಿ ಹಸಿರು ಬಣ್ಣವಿದೆ. ಮುಖವಾಡಗಳು ಬಹಳ ತೆಳುವಾದ ಒತ್ತೊತ್ತಾದ ಸಮಾನಾಂತರ ರೇಖೆಗಳುಳ್ಳ ಸಮಪಾತಳಿಯೊಂದರ ಮೇಲಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ರಕ್ಷಾಪುಟ ಚಿತ್ರ ಕಲಾವಿದ ಒಳಪುಟಗಳಲ್ಲಿನ ನಾಟಕಗಳ ವಸ್ತು, ವಿಷಯ ಏನಿರಬಹುದೆಂದು ಅದರ ಮುಖಪುಟ ಚಿತ್ರವೇ ಸೂಕ್ಷ್ಮವಾಗಿ ಸಾಂಕೇತಿಸುವಂತೆ ರಚಿಸಿದ್ದಾನೆ. ಒಟ್ಟಿನಲ್ಲಿ ಸ್ವಾತಂತ್ರ್ಯೋತ್ತರ ಐವತ್ತರ/ಅರವತ್ತರ ದಶಕದಲ್ಲಿ ನಾಟಕ, (ಜನಪದ, ಯಕ್ಷಗಾನ, ನೃತ್ಯ, ಸಂಗೀತ, ಶಿಲ್ಪಕಲೆ, ಚಿತ್ರಕಲೆ ಇವೇ ಮೊದಲಾದ ಸಾಹಿತ್ಯ ಪ್ರಕಾರಗಳ) ಮುಖಪುಟದಲ್ಲಿ ಅಪರೂಪಕ್ಕೆಂಬಂತೆ ಮುಖಪುಟ ವಿನ್ಯಾಸ ಮಾನವ, ಪಶು–ಪಕ್ಷಿ ಇತ್ಯಾದಿ ಜೈವಿಕ ಆಕಾರಗಳ ಚಿತ್ತಾರಗಳನ್ನು ಒಳಗೊಂಡಿರುತ್ತಿತ್ತು ಎಂದು ಸಾರಾಂಶೀಕರಿಸಬಹುದು.

### ೫.೨. ಸ್ವಾತಂತ್ರ್ಯೋತ್ತರ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

೧೯೬೦ರ ದಶಕದಲ್ಲಿ ಬಹಳಷ್ಟು ನಾಟಕ ಸಾಹಿತ್ಯ ಪ್ರಕಟಣೆಗಳ ಮುಖಪುಟ ರೇಖಾಚಿತ್ರಗಳಿಂದ ಕೂಡಿರುತ್ತಿದ್ದವು. ಇದಕ್ಕೆ ಉದಾಹರಣೆಗಳೆಂದರೆ – ೧೯೬೦ರಲ್ಲಿ ಉಷಾ ಸಾಹಿತ್ಯ ಮಾಲೆ ಮೈಸೂರು ಇವರಿಂದ ಪ್ರಕಟವಾದ, ಎಂ.ರಾಮರಾವ್ ಎನ್ನುವರಿಂದ ಅನುವಾದಿಸಲ್ಪಟ್ಟ ಕೃತಿ 'ನಾಲ್ಕು ಏಕಾಂಕ ನಾಟಕಗಳು'. ೧೯೬೨ರಲ್ಲಿ ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ ಹೊರತಂದಿರುವ ಹೆಚ್.ಬಿ. ಜ್ವಾಲನಯ್ಯ ಎನ್ನುವರಿಂದ ವಿರಚಿತವಾದ ನಾಟಕ ಕೃತಿ 'ರಾಣ ರತ್ನಾಜಿ'. ೧೯೬೩ರಲ್ಲಿ ಹೆಚ್.ಬಿ. ಜ್ವಾಲನಯ್ಯಅವರಿಂದ ವಿರಚಿತವಾಗಿ ಕರ್ನಾಟಕ ಪ್ರಾಂತೀಯ ಹಿಂದಿ ಪ್ರಚಾರ ಸಭಾ ಧಾರವಾಡ ಇವರಿಂದ ಪ್ರಕಾಶಿಸಲ್ಪಟ್ಟ ನಾಟಕ 'ಮಹಾಶಿಲ್ಪಿ'. ೧೯೬೫ರಲ್ಲಿ ಬಿ.ಗುಣಸಿದ್ಧಪ್ಪರವರಿಂದ ರಚಿಸಲ್ಪಟ್ಟ ಗೀತಾ ಪ್ರಿಂಟಿಂಗ್ ಪ್ರೆಸ್ ಮೈಸೂರು ಇವರಿಂದ ಪ್ರಕಟಿಸಲ್ಪಟ್ಟ 'ಗ್ರಾಮ ಸುಧಾರಣೆ' ಕೃತಿ, ೧೯೬೬ ರಲ್ಲಿ ಅನ್ನದಾಸೀರ ಎಸ್.ವೈ ಎನ್ನುವವರಿಂದ ರಚಿತವಾದ ಕವಿಕಿರಣ ಅನ್ನದಾನೇಶ ಇವರಿಂದ ಪ್ರಕಾಶಿತವಾದ ಹಾಗೂ ಧಾರವಾಡದ ಜಿ.ಕೆ. ಮೂರ್ತಿ ಎನ್ನುವವರಿಂದ ವಿನ್ಯಾಸಗೊಳಿಸಲ್ಪಟ್ಟ ಸಾಮಾಜಿಕ ನಾಟಕ 'ಸಾಕುಮಗ' ಎಂಬ ಕೃತಿ, ಅದೇ ವರ್ಷ ಮಯೂರ ಮುದ್ರಣ ಇವರಿಂದ ಪ್ರಕಟಿತವಾದ ಸಿ.ಎನ್. ಜಯಲಕ್ಷ್ಮೀದೇವಿ ಎಂಬುವರಿಂದ ಬರೆಯಲ್ಪಟ್ಟ 'ಮಕ್ಕಳ ಮೂರು ನಾಟಕಗಳು' ಕೃತಿ, ೧೯೬೯ರಲ್ಲಿ ಶಾಮ ಕೃಷ್ಣರಾಯರಿಂದ ರಚಿಸಲ್ಪಟ್ಟು ಗೋವಾ ಕನ್ನಡ ಸಂಘದಿಂದ ಮುದ್ರಿಸಲ್ಪಟ್ಟ ನಾಟಕ ಕೃತಿ 'ಮುತ್ತಾಳರು'. ಇದರ ಮುಖಪುಟ ಉಲ್ಲೇಖನೀಯ. ಬಹುಶಃ ಈ ಕಾಲಕ್ಕೆ ಮುಖಪುಟದ ಕಲ್ಪನೆಯನ್ನು ಹೊಸತಾಗಿ ಕಟ್ಟಿಕೊಡುವ ಪ್ರಯತ್ನ ಅದರಲ್ಲಿದೆ ಎನ್ನಬಹುದು.

ಕೃತಿಯ ಶೀರ್ಷಿಕೆಯನ್ನು ಅಳವಡಿಸಿದ ಪರಿ, ಮುಖಪುಟ ಚಿತ್ತಾರದಲ್ಲಿನ ಭಾವಪೂರ್ಣತೆ, ದ್ವಿವರ್ಣಗಳಲ್ಲೇ ಚಪ್ಪಟೆ ಲೇಪನ ಕ್ರಮ ಅನುಸರಿಸಿದ್ದರೂ ಆಕೃತಿಗಳ ರೇಖಾಲಾಲಿತ್ಯ ಪ್ರಕಟಣೆಗೆ ಧಕ್ಕೆ

ಬರದ ರೀತಿಯಲ್ಲಿ ವರ್ಣ ನಿರ್ವಹಣೆ ಈ ಎಲ್ಲಾ ಅಂಶಗಳ ದೃಷ್ಟಿಯಿಂದ ಈ ಮುಖಪುಟ ಚಿತ್ರಣ ಅತ್ಯಂತ ವೈಶಿಷ್ಟ್ಯವಾಗಿ ತೋರಿಬರುತ್ತದೆ. ಒಪ್ಪವಾಗಿ ತುರುಬು ಹಾಕಿಕೊಂಡಿರುವ ಸುಂದರ ಸ್ತ್ರೀಯೊರ್ವಳು ಹಿಂದಿರುಗಿ ನೋಡುತ್ತಾ ಹುಸಿನಗು ಬೀರುತ್ತಿರುವ ದೃಶ್ಯ ಪುರುಷರು ಸ್ತ್ರೀಯರ ಕುಡಿನೋಟದ ಮಾಟಕ್ಕೆ ಸುಲಭವಾಗಿ ವಶವಾಗುತ್ತಾರೆಂಬುದನ್ನು ಕಲಾವಿದ ಮನೋಜ್ಞವಾಗಿ ಬಿಂಬಿಸಿದ್ದಾರೆ.

**೫.೨.೧. ರಾಣಿ ರತ್ನಾಜಿ (೧೯೬೨)**

'ರಾಣಿರತ್ನಾಜಿ' ನಾಟಕದ ರಕ್ಷಾಪುಟ ಚಿತ್ರಕಲೆಯೂ (ಲೇ.ಹೆಚ್.ಬಿ. ಜ್ವಾಲನಯ್ಯ) ಏಕವರ್ಣದಿಂದ ರಚಿತವಾದ ಮುಖಪುಟವಿದು. ಮಂತ್ರಿಯೊಡಗೂಡಿ ಅರಮನೆಯ ಆವರಣದಲ್ಲಿ ನಿಂತಿರುವ ರಾಣಿ ರತ್ನಾಜಿಗೆ ಆಕೆಯ ನಿಷ್ಠಾವಂತ ಮಗ / ಸೈನಿಕ / ದಂಡನಾಯಕನೋರ್ವ ಭಕ್ತಿಭಾವದಿಂದ ಆಕೆಯೆದುರಿಗೆ ಮಂಡಿಯೂರಿ ಕೈ ಮುಗಿಯುತ್ತಿದ್ದಾನೆ. ಹಿಂಬದಿಯಲ್ಲಿ ಕೆಲವು ರಾಜಭಟರುಗಳು ನಿಂತಿದ್ದಾರೆ. ಇಡೀ ಸಂಯೋಜನೆ ರೇಖಾಚಿತ್ರಗಳಿಂದ ಕೂಡಿದೆ. ರೇಖಿಸಲ್ಪಟ್ಟ ವ್ಯಕ್ತಿಗಳ ದೇಹ ಭಾವ, ಮುಖ ಭಾವ ಒಟ್ಟಾರೆ ಅಂಗಭಂಗಿಗಳು ನೈಜವಾಗಿ ಮೂಡಿ ಬಂದಿವೆ, ಆಕೃತಿಗಳ ರೇಖಾಲಾಲಿತ್ಯ ಸಹಜ ಸೊಬಗಿನಿಂದ ಕೂಡಿದೆ. ಈ ಮುಖಪುಟದ ಕೆಳಭಾಗದಲ್ಲಿ ಎಡಬಲ ಪಕ್ಕಗಳಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯೋದ್ದೇಶ ಸೂಚಿ ಪುಟ್ಟ ಚಿತ್ರಗಳಿದ್ದು ಅವುಗಳ ಮಧ್ಯದಲ್ಲಿ ಕೆಂಪು ವರ್ಣಗಳ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ ಎಂಬ ಬರಹವಿದ್ದು ಅದರ ಮೇಲ್ಗಡೆಯ ಅಂಚಿನಲ್ಲಿ ಐದು ಸಮಾನಾಂತರ ರೇಖೆಗಳು ಎಳೆಯಲ್ಪಟ್ಟಿವೆ. ಈ ರೀತಿಯ ವಿನ್ಯಾಸದಿಂದಾಗಿ ಈ ಸಾಹಿತ್ಯವನ್ನು ಪ್ರಕಟಿಸಿದ ಪ್ರಕಾಶಕರ ಹೆಸರು ಮುನ್ನೆಲೆಯಲ್ಲಿ ಗುರ್ತಿಸಿಕೊಂಡಿದ್ದು, ಕೃತಿಯ ಪ್ರಭಾವ ವಿಷಯ ಸಂಕೇತಿಸುವ ಸನ್ನಿವೇಶ ಮಂದವರ್ಣೀಯ ಹಿನ್ನೆಲೆಯಲ್ಲಿ ರೇಖಾತ್ಮಕವಾಗಿ, ನೋಟಕ್ಕೆ ಹಿತಕರವೆನಿಸುವಂತಹ ರೀತಿಯಲ್ಲಿ ರೂಪಿಸಲ್ಪಟ್ಟಿದೆ.

**೫.೨.೨. ಮಹಾಶಿಲ್ಪಿ (೧೯೬೩)**

'ಮಹಾಶಿಲ್ಪಿ' ನಾಟಕದ ರಕ್ಷಾಪುಟ ಚಿತ್ರಕಲೆ ಹಿಂದಿ ಪ್ರಚಾರ ಪ್ರೆಸ್, ಧಾರವಾಡ ಇವರಿಂದ ಮುದ್ರಿಸಲ್ಪಟ್ಟಿದೆ. ದ್ವಿವರ್ಣದಲ್ಲಿ ರೂಪಿತವಾಗಿರುವ ಮುಖಪುಟವಿದು, ಗೊಮ್ಮಟೇಶ್ವರನ ಬೃಹತ್ ಆಕೃತಿಯೆದುರಿಗೆ ಶಿಲ್ಪಿಯೊಬ್ಬ ಭಯ–ಭಕ್ತಿಗಳಿಂದ ಕೈಮುಗಿದು ಮಂಡಿಯೂರಿ ಕುಳಿತಿದ್ದಾನೆ. ಎದುರಿಗೆ ಆತನ ಶಿಲ್ಪಾಯುಧಗಳಿವೆ ಗೊಮ್ಮಟೇಶ್ವರ ಮೂರ್ತಿಯ ಆಕೃತಿ ಚುಕ್ಕೆ ಚಿತ್ತಾರವಾಗಿದ್ದರೆ, ಎದುರಿನ ಶರಣಾಗತಿಭಾವದಲ್ಲಿರುವ ಶಿಲ್ಪಿಯ ಆಕೃತಿ ರೇಖಾತ್ಮಕವಾಗಿದೆ. ಗೊಮ್ಮಟೇಶ್ವರ ಮತ್ತು ಶಿಲ್ಪಿಯ ಸುತ್ತ ವ್ಯಾಪಿಸಿರುವ ಅವಕಾಶ ನಿರ್ವರ್ಣಯುಕ್ತವಾದದ್ದು. ಹಿಂಗಡೆ ಮೇಲ್ಭಾಗದಲ್ಲಿ ವಿನ್ಯಾಸಗೊಳಿಸಿರುವ ಶೀರ್ಷಿಕೆ ಮತ್ತು ಅದರ ಕೆಳಭಾಗದಲ್ಲಿ ರಚಿಸಲ್ಪಟ್ಟಿರುವ ಸಮಾನಾಂತರ ರೇಖೆಗಳತ್ತ ಸುಸಂಬದ್ಧ ಚಲನಶೀಲತೆಯನ್ನು, ಮುಖಪುಟಕ್ಕೊಂದು ತೇಜಸ್ಸನ್ನು ನೀಡಿವೆ. ಚಿತ್ರದ ಕೆಳಭಾಗದಲ್ಲಿ ಸರಳ ನಕ್ಷಾ ವಿನ್ಯಾಸಗಳತ್ತ ಬಿಡಿಸಲ್ಪಟ್ಟಿದ್ದು, ಒಟ್ಟಾರೆ ಚಿತ್ರಣ ವಿಧಾನ ತೀರಾಸಾಮಾನ್ಯನಿಗೂ ಕೃತಿಯ ಸಾರವನ್ನು ಬಿಂಬಿಸುತ್ತದೆ.

### ೫.೨.೩. ಮಕ್ಕಳ ಮೂರು ನಾಟಕಗಳು (೧೯೬೬)

೧೯೬೬ ರಲ್ಲಿ ರಚಿಸಲ್ಪಟ್ಟ 'ಮಕ್ಕಳ ಮೂರು ನಾಟಕಗಳು' ಕೃತಿಯ ಮುಖಪುಟ – ಏಕವರ್ಣದಿಂದ ರೂಪಿಸಲ್ಪಟ್ಟಿದೆ. ಮಕ್ಕಳ ನಾಟಕಗಳಲ್ಲಿ ಮಿಳಿತಗೊಂಡಿರುವ ಹಾಸ್ಯ, ತುಂಟತನ ಮೊದಲಾದ ಚಿತ್ತಾಕರ್ಷಕ ಸನ್ನವೇಶಗಳನ್ನು ಸಂಕೇತಿಸುವಂತಹ ಹಾವಭಾವಯುಕ್ತ ಮಕ್ಕಳ ಚಿತ್ರಗಳು ರಚಿತವಾಗಿವೆ. ಇವು ರೇಖಾಚಿತ್ರಗಳು ಮಕ್ಕಳ ಮುಗ್ಧತನ, ವಿನೋದ ಪ್ರವೃತ್ತಿ, ಬಾಲ್ಯ ಸಹಜ ಚೇಷ್ಟೆಗಳು ತುಂಬ ಸಹಜವಾಗಿ ರೂಪಿತವಾಗಿವೆ. ಚಿತ್ರಶಾಲೆಗಳಲ್ಲಿ ಕಲಿಸುವ ಚಿತ್ರಣವನ್ನು ಥಟ್ಟನೆ ಜ್ಞಾಪಿಸುವ ಚಿತ್ರಗಳಿವು.

### ೫.೨.೪. ಸಾಕು ಮಗ (೧೯೬೬)

'ಸಾಕುಮಗ' ೧೯೬೬ ನಾಟಕ ಕೃತಿಯ ಮುಖಪುಟದಲ್ಲಿ ಚಿತ್ರ ಅಕ್ಷರ ಇವೆರಡಕ್ಕೂ ಸಮಾನ ಪ್ರಾತಿನಿಧ್ಯ ನೀಡಲ್ಪಟ್ಟಿದೆ. ಹಾಗಾಗಿ ಮುಖಪುಟದ ರೇಖಾಚಿತ್ತಾರ ನೋಡುಗರನ್ನು ಥಟ್ಟನೆ ಸೆಳೆಯುವುದಿಲ್ಲ. ಬಾಗಿಲಿನಲ್ಲಿ ಕಾತರದಿಂದ ಮಗನನ್ನು ನಿರೀಕ್ಷಿಸುತ್ತಿರುವ ಗೃಹಿಣಿಯ ರೇಖಾಚಿತ್ರ ಮಾನವ ಶರೀರಶಾಸ್ತ್ರದ ಅಂಗ ಪ್ರಮಾಣ, ಮಗನ ತಾಯಿಯ ಕಾತುರಪೂರ್ಣ ನೋಟ ವೈಖರಿ ಮತ್ತು ಮನದಲ್ಲಿ ಬರುವಿಗಾಗಿ ಕಾದಿರುವ ಮಡುಗಟ್ಟಿರುವ ದುಗುಡ ಈ ಎಲ್ಲ ಸಂದರ್ಭೋಚಿತ ಭಾವಗಳೆಲ್ಲವೂ ರೇಖಿಸಲ್ಪಟ್ಟ ಸ್ತ್ರೀಯ ನಿಲುಮೆಯ ಭಂಗಿಯಲ್ಲಿ ಹರಳುಗಟ್ಟಿವೆ. ಅಂತೆಯ ಮುಖಪುಟದ ತಳಭಾಗದಲ್ಲಿ (ಕೆಳಭಾಗದಲ್ಲಿ) ಹಠಹಿಡಿದು ನಿಂತಿರುವ/ ಕೋಪ ಭಾವದಲ್ಲಿ ವಿಶ್ರಮ ಭಂಗಿಯಲ್ಲಿ ಶಾಲಾ ಸಮವಸ್ತ್ರಧಾರಿಯಾಗಿರುವ ಬಾಲಕನ ರೇಖಾಚಿತ್ರವೂ ಧ್ವನಿಪೂರ್ಣವಾಗಿ ರೇಖಿಸಲ್ಪಟ್ಟಿದೆ. ಏಕವರ್ಣದಲ್ಲಿ ರಚಿತವಾದ ಮುಖಪುಟದ ಅಂಚುರೇಖೆಗಳು ಒಟ್ಟಾರೆಯಾಗಿ ಮುಖಪುಟಕ್ಕೆ ಒಂದು ಶಿಸ್ತನ್ನು/ಚೌಕಟ್ಟನ್ನು ಒದಗಿಸಿವೆ.

### ೫.೨.೫. ಭೂತ (೧೯೬೯)

೧೯೬೯ರಲ್ಲಿ 'ಭೂತ' ನಾಟಕ ಕೃತಿ, ಸಾಹಿತಿ ನಾ.ಡಿಸೋಜಾರವರಿಂದ ರಚಿಸಲ್ಪಟ್ಟಿದ್ದು ಸಾಗರ ಮುದ್ರಣ ಇವರಿಂದ ಪ್ರಕಾಶಿಸಲ್ಪಟ್ಟಿದೆ. ಇದರ ಮುಖಪುಟ ಚಿತ್ರಗಳು ಜಾನಪದ ಶೈಲಿಯಲ್ಲಿವೆ. ಮುಖಪುಟದ ಎಡಭಾಗದ ತುದಿಯಲ್ಲಿ ಕುದುರೆಯ ಗೊಂಬೆ ಕೇಸರಿಯುಕ್ತ ವರ್ಣದ ಆಕೃತಿಯಿದ್ದು, ಕೃತಿ ಶೀರ್ಷಿಕೆಯ ಕೆಳಗೆ ದೊಡ್ಡದಾಗಿ ಎಡಗೈ ಇಳಿಬಿಟ್ಟು ನಿಂತಿರುವ ಸ್ತ್ರೀ ಗೊಂಬೆ ಕಮಾನಿನಾಕಾರದ ಬಾಗಿಲನ್ನು ಹೋಲುವ ಕೇಸರಿ ಬಣ್ಣದ ಆವರಣದ ಕೇಂದ್ರ ಭಾಗದಲ್ಲಿ ಚಿತ್ರಿತವಾಗಿದೆ. ಅಲ್ಲೇ ಕೆಳಭಾಗದ ಎಡಪಾರ್ಶ್ವದಲ್ಲಿ ದಂಪತಿಯನ್ನು ಹೋಲುವ ಸ್ತ್ರೀ ಪುರುಷ ಆಕೃತಿಗಳು ಪುರುಷ ತಲೆಯಲ್ಲಿ ರಾಜಸ್ತಾನ ಭಾಗದ ಶೀರೋ ವಸ್ತ್ರ ಸುತ್ತಿಕೊಂಡು ನಿಂತಿದ್ದು ಆತನ ಬಲಭಾಗದಲ್ಲಿ ಮಹಿಳೆ ನಿಂತಿದ್ದಾಳೆ. (ಪತ್ನಿಯ ಭಾವ ಸೂತಕದಲ್ಲಿ) ಇವೆಲ್ಲ ಆಕೃತಿಗಳಲ್ಲಿ ಆದಿಮಸತ್ವವಿದೆ. ಜೊತೆಗೆ ಒಂದು ಪ್ರಾದೇಶಿಕ ಜಾನಪದೀಯ ಸೊಗಡನ್ನು ಬಿಂಬಿಸುವ ಪ್ರಯತ್ನವಿದೆ. ಕಮಾನಿನಾಕರದ ಬಾಗಿಲಿನ ಆವರಣದಲ್ಲಿ ನಿಂತಿರುವ ಸ್ತ್ರೀ ಚಿತ್ರ, ತಲೆಯ ಹಿಂಬದಿಯಗುಂಟ ಹೊದ್ದಿರುವ ನೀಲಿ ಬಣ್ಣದ ಸೆರಗು ತುಸು ತೆರೆದ ಸ್ತನಗಳು, ಹೊಕ್ಕುಳಿನಿಂದ ಕೆಳಗೆ ಧರಿಸಿರುವ ಲಂಗದಂತಹ

ವಸ್ತ್ರ, ಅದಕ್ಕೆ ರೂಪಿಸಿರುವ ನೀಲಿ ಕೇಸರಿ ಬಣ್ಣದ ದಪ್ಪ ಪಟ್ಟಿಕೆಗಳಂತ ವಿಶಾಲವಾದ ಕಣ್ಣುಗಳತ್ತ ಈ ಎಲ್ಲಾ ಲಕ್ಷಣಗಳೂ ರಾಜಸ್ತಾನಭಾಗದ ಮಾರ್ವಾಡಿ ಸ್ತ್ರೀಯ ಒನಪು – ಒಯ್ಯಾರ, ದೇಹ ಭಂಗಿಗಳನ್ನು ಧ್ವನಿಸುತ್ತವೆ ಅಂತೆಯೇ ಇಲ್ಲಿ ಚಿತ್ರಿಸಲ್ಪಟ್ಟಿರುವ ಉಳಿದ ಆಕಾರಗಳಾದ ಅದೇ ಪ್ರಾದೇಶಿಕ ವೈಶಿಷ್ಟ್ಯವನ್ನೇ ಸಂಕೇತಿಸುತ್ತವೆ, ಒಟ್ಟಾರೆಯಾಗಿ ಇಲ್ಲಿ ಮುಖಪುಟದ ರಚನೆಯಲ್ಲಿ ತ್ರಿವರ್ಣಗಳ ಬಳಕೆಯಾಗಿವೆ.

### ೫.೨.೬. ಹಸ್ತಾಂತರ (೧೯೬೯)

೧೯೬೯ ರಲ್ಲಿ ಬೇರೂನ್ ಕೆಲ್ಲೆ, ರಾಯಚೂರು ಇವರಿಂದ ರಚಿತವಾದ 'ಹಸ್ತಾಂತರ' ಕೃತಿಯ ಮುಖಪುಟ ಈ ಪ್ರಬಂಧಕಾರನ ಅಭಿಪ್ರಾಯದ ಪ್ರಕಾರ ಆ ಕಾಲಾವಧಿಯಲ್ಲೆ ಅತ್ಯಂತ ವಿಭಿನ್ನವಾದದ್ದು ಅಷ್ಟೇ ಅಲ್ಲ, ಆ ಕಾಲಘಟ್ಟದಲ್ಲಿ ಪ್ರಚಲಿತದಲ್ಲಿದ್ದ ಮುಖಪುಟ ಚಿತ್ರದ ಪರಿಕಲ್ಪನೆಯನ್ನೇ ತಿರುಗು ಮುರುಗಿಸಿದ ಮುಖಪುಟ ಚಿತ್ರ ಎನ್ನಬಹುದು. ಈ ಕೃತಿಯ ಮುಖಪುಟ ಕಲಾವಿದ–ಚಂದ್ರಕಾಂತ್ ಕುಸನೂರ, 'ಘನಾಕೃತಿಪಂಥ (ಕ್ಯೂಬಿಸಂ)ದ ಮತ್ತು ಸರ‍್ರಿಯಲಿಸಂ'[೨] ಪಂಥದ ಲಕ್ಷಣ ವಿಶೇಷಗಳನ್ನು ಅಳವಡಿಸಿ–ಕೊಳ್ಳಲಾಗಿದೆ. ಚಿಕ್ಕ ಚಿಕ್ಕ ಚಚ್ಚೌಕಾಕಾರಗಳ ಮೈವಳಿಕೆ ಹೊಂದಿರುವ ಇನ್ನು ಕೆಲವೆಡೆ ಚುಕ್ಕಿಗಳಿಂದಾವೃತ, ಮೈವಳಿಕೆಯಿಂದ ಕೂಡಿರುವ, ಮತ್ತೆ ಕೆಲವೆಡೆ ಸಮಾನಾಂತರ ರೇಖೆಗಳನ್ನು ಹೊಂದಿರುವ ಅರ್ಧಸುಳಿ, ಬಾಗು ಬಳಕುವಿಕೆ ರೇಖೆಗಳ ಹಲವು ಅಂಕುಡೊಂಕುಗಳ ವಿಚಿತ್ರವಾದ ಆವರಣವೊಂದರಲ್ಲಿ, ಸ್ಪಷ್ಟವಾದ ಮುಖ–ಬಾಲ, ಕಾಲುಗಳನ್ನು ಹೊಂದಿರದ, ಆದರೆ ಜೀವಿಯ ಕಲ್ಪನೆ ಮೂಡಿಸುವ ಅವಾಸ್ತವಿಕ/ಭ್ರಾಮಕ ಆಕೃತಿಯೊಂದರ ಆಚೀಚೆ ಕಡೆಗಳಲ್ಲಿ ಗಂಡು–ಹೆಣ್ಣು ಮುಖ, ಆ ಮುಖಗಳ ಸುತ್ತಲೂ ಅರ್ಧವೃತ್ತ, ವಕ್ರರೇಖೆಗಳು, ಸರಳ ರೇಖಾಕಾರ ಊರ ಗೀರುಗಳ ತ್ರಿಭುಜವೇ ಮೊದಲಾದ ಜ್ಯಾಮಿತಿಕ ಕೋನಬಂಧ ಏರ್ಪಟ್ಟಿದೆ. ಚಿತ್ರಗಾರಿಕೆಯಲ್ಲಿ ಜ್ಯಾಮಿತಿಯ ಲಕ್ಷಣಗಳದ್ದೇ ಪ್ರಾಬಲ್ಯವಿದೆ. ಕಲಾವಿದ ದ್ವಿವರ್ಣದಿಂದ ಮುಖಪುಟ ವಿನ್ಯಾಸಗೊಳಿಸಿರುತ್ತಾರೆ. ದ್ವೇಷ/ಕೋಪ ಭಾವದಲ್ಲಿ ಅಹಮಿಕೆಯ ಮಿತಿಮೀರಿದ ಹಂತದಲ್ಲಿ ಗಂಡು–ಹೆಣ್ಣಿನ ಬಾಂಧವ್ಯ ನೂರೆಂಟು ಸುಕ್ಕುಗಳು ಅಥವಾ ಗೋಜಲುಗಳ ನಡುವೆ ಸಿಕ್ಕಿಹಾಕಿಕೊಳ್ಳುವಿಕೆಯ ಕುರಿತು ತುಂಬ ಮಾರ್ಮಿಕವಾಗಿ ಅಭಿವ್ಯಕ್ತಿಸಲಾಗಿದೆ.

### ೫.೩. ಎಪ್ಪತ್ತರ ದಶಕದ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

೧೯೭೦ ರ ದಶಕದಲ್ಲಿ ಮುಖಪುಟ ಚಿತ್ರಗಾರಿಕೆಯಲ್ಲಿ ಮತ್ತು ವಿನ್ಯಾಸದಲ್ಲಿ ಸಾಕಷ್ಟು ಬದಲಾವಣೆ ಕಂಡುಬರುತ್ತದೆ. ಮುಖಪುಟದಲ್ಲಿನ ತಲೆಬರಹದಲ್ಲಿ, ಸಂಯೋಜನಾ ವೈಖರಿಯಲ್ಲಿ ಆಕಾರಗಳ ಮಾದರಿ ಮತ್ತು ಸಂಯೋಜನೆಯಲ್ಲಿ ಬದಲಾವಣೆಗಳನ್ನು ನಾವು ಗುರ್ತಿಸಬಹುದು. ಅಲ್ಲದೆ ಮುಖಪುಟ ರೂಪಿಸಿದ ಕಲಾವಿದ/ಕಲಾವಿದೆಯ ಹೆಸರನ್ನು ಕೂಡ ಸಾಹಿತ್ಯ ಕೃತಿಯಲ್ಲಿ ಮುದ್ರಿಸುವ ಪ್ರಜ್ಞೆಯೂ ಅಷ್ಟಿಷ್ಟು ಜಾಗ್ರತೆಗೊಂಡಿದ್ದು ಸ್ಪಷ್ಟ ಅಕಾಡೆಮಿಕ್/ಶಾಸ್ತ್ರಿಯ ಶೈಲಿ ಮತ್ತು ಸಮಕಾಲೀನ ಕಲಾರಂಗದ ಬದಲಾವಣೆಗಳನ್ನು ಸ್ವೀಕರಿಸುವ ಮನೋಭಾವ ಹೊಂದಿದ್ದಲ್ಲಿ, ನುರಿತ ಕಲಾವಿದರುಗಳು ಈ ಕಾರ್ಯದಲ್ಲಿ ಹೆಚ್ಚು ಹೆಚ್ಚು

೦೨. ಎನ್. ಮರಿಶಾಮಚಾರ್: ಸರ‍್ರಿಯಲಿಸಂ.ಪು–೫

ತೊಡಗಿಸಿಕೊಳ್ಳಲು ತೊಡಗಿದ್ದು ಈ ರೀತಿಯ ಗಮನಾರ್ಹ ಪರಿವರ್ತನೆಗಳು ಸಂಭವಿಸಲು ಕಾರಣವಾಗಿದ್ದಿರಬಹುದು ಅಥವಾ ಅಂತಹ ಕಲಾವಿದರುಗಳ ಚಿತ್ರಗಳನ್ನು ಸಮಯೋಚಿತವಾಗಿ ಬಳಸಿಕೊಳ್ಳುತ್ತಿದ್ದಿರಲೂಬಹುದು. ಇಲ್ಲಿ '೧೯೭೦ರ ದಶಕದಲ್ಲಿ ಹಿರಿಯ ಕಲಾವಿದರು ಯಾವುದಕ್ಕೊ ಬರೆದ ಚಿತ್ರವನ್ನು ತಮ್ಮ ಪುಸ್ತಕಕ್ಕೆ ಹೊಂದಿಕೊಳ್ಳುತ್ತವೆ ಎಂದು ಅದನ್ನೇ ಟೈಟಲ್‌ನೊಂದಿಗೆ ಬಳಸಿಕೊಳ್ಳುವುದು ವಾಡಿಕೆಯಾಗಿತ್ತು. ಯಾವುದಾದರೂ ಛಾಯಾಚಿತ್ರ, ಕಲಾಕೃತಿ ಬಳಸುವರು ಇಂದಿಗೂ ವಾಡಿಕೆಯಲ್ಲಿದೆ'[೩] ಎಂಬ ಅಂಶ ಗಮನಾರ್ಹವಾದುದು.

**೫.೩.೧. ಅಧಿಕಾರಿಗಳ ಅವಾಂತ್ರ (೧೯೭೦)**

'ಅಧಿಕಾರಿಗಳ ಅವಾಂತ್ರ' ಎಂಬ ನಾಟಕ ಕೃತಿ ನಿರುಪಮಾ ಎನ್ನುವವರಿಂದ ರಚಿತವಾಗಿದ್ದು, ೧೯೭೦ರಲ್ಲಿ ಪ್ರಧಾನ ಪ್ರಿಂಟರ್ಸ್ ಇವರಿಂದ ಮುದ್ರಿತವಾಗಿದೆ. ಈ ಸಾಹಿತ್ಯ ಕೃತಿಯ ಮುಖಪುಟ ವಿನ್ಯಾಸ ಮಾಡಿದ ಕಲಾವಿದೆಯ ಹೆಸರು ಉಲ್ಲೇಖವಾಗಿಲ್ಲ. ದ್ವಿವರ್ಣದಲ್ಲಿ ರಚಿತವಾದ ಮುಖಪುಟ ವಿನ್ಯಾಸವಿದು, '೧೯೭೦ರ ದಶಕದ ಸಿನಿಮಾ ಪೋಸ್ಟರ್‌ಗಳನ್ನು ಇದು ನೆನಪಿಸುತ್ತದ'[೪]. ಕುರ್ಚಿಯ ಮೇಲೆ ಆಸೀನವಾದ ವಯೋವೃದ್ಧ ಕೋಪಾವೇಶಯುಕ್ತನಾಗಿ ತನ್ನ ಊರುಗೋಲನ್ನು ಎರಡೂ ಕೈ ಎತ್ತಿಹಿಡಿದು ದಿಗಂತದತ್ತ ನೆಟ್ಟಿರುವ ಕಣ್ಣುಗಳಲ್ಲಿ ಸಿಟ್ಟಿನಿಂದ ಬೆಂಕಿಯುಗುಳುತ್ತಿದ್ದಾನೆ. ಆತನ ಹಿಂದುಗಡೆ ನಿಂತಿರುವ ಗೃಹಿಣಿಯೂ ಸಹ ಅವಾಕ್ಕಾಗಿ ಮೇಲಕ್ಕೆ ದಿಟ್ಟಿಸುತ್ತಿದ್ದಾಳೆ. ಅನಿರೀಕ್ಷಿತ ಆಘಾತ ಸಂಭವಿಸಿರುವುದನ್ನು ಈ ಚಿತ್ರ ದಾಖಲಿಸಿದ್ದು ಆಘಾತಕಾರಿ ಸನ್ನಿವೇಶದ ಹಿಂದಿನ ವ್ಯಕ್ತಿ ಒಬ್ಬ ಬ್ರಿಟಿಷ್/ ವಿದೇಶೀ ಅಧಿಕಾರಿ ವರ್ಗದವನು ಎಂಬುದನ್ನು ಸೂಚ್ಯವಾಗಿ ತಿಳಿಸುವ ದ್ಯೋತಕವಾಗಿ ವೃದ್ಧ ಮತ್ತು ಗೃಹಿಣಿಯ ಮೇಲ್ಭಾಗದ ಅವಕಾಶದಲ್ಲೂ ಆ ವ್ಯಕ್ತಿಯನ್ನು ಸಂಚುಕೋರತನದ ಭಾವದಲ್ಲಿದ್ದಂತೆ ಚಿತ್ರಿಸಲಾಗಿದೆ. ರೇಖಾಚಿತ್ರಗಳಿವು ಒಟ್ಟಾರೆಯಾಗಿ ಈ ಮುಖಪುಟದ ಚಿತ್ರಣದಲ್ಲಿ ಅಧಿಕಾರಿತನದ ಅವಿವೇಕತನ ಭ್ರಷ್ಟಮನಃಸ್ಥಿತಿ ಸಾಮಾನ್ಯ ಜನವರ್ಗದ ಮೇಲೆ ಎಂತಹ ಗಂಭೀರ ಪರಿಣಾಮ ಬೀರುತ್ತದೆ ಎನ್ನುವುದನ್ನು ಬಹಳ ಮಾರ್ಮಿಕವಾಗಿ ಸತ್ವಪೂರ್ಣವಾಗಿ ದಾಖಲಿಸಲಾಗಿದೆ. ಚಿತ್ರಶೈಲಿ ನೈಜತೆಯಿಂದ ಕೂಡಿದೆ.

**೫.೩.೨. ಮುಡಿಪು (೧೯೭೦)**

೧೯೭೦ರಲ್ಲಿ ನಾ.ಮ.ಗಂ. ಎನ್ನುವ ಕಾವ್ಯನಾಮ ಹೊಂದಿದ ಸಾಹಿತಿಯೊಬ್ಬರಿಂದ ರಚಿಸಲ್ಪಟ್ಟ ನಾಟಕ 'ಮುಡಿಪು'. ಇದಕ್ಕೆ ಮುಖಪುಟ ವಿನ್ಯಾಸಗೊಳಿಸಿದವರು ಜಿ.ಕೆ.ಸತ್ಯ. ದೇವಿಯ ಸನ್ನಿಧಿಯಲ್ಲಿ ಇಬ್ಬರು ಯೋಧರು ಪರಸ್ಪರರ ಮೇಲೆ ಖಡ್ಗ ಎತ್ತಿದ್ದಾರೆ. ಹೋರಾಡುತ್ತಿರುವ ಯೋಧರು ಮುನ್ನೆಲೆಯಲ್ಲಿ ಚಿತ್ರಿಸಲ್ಪಟ್ಟಿದ್ದು ಪ್ರಧಾನ ಲಕ್ಷ್ಯ ಅವರೆಡೆಗೆ ಕೇಂದ್ರಿತವಾಗುವಂತೆ, ಅವರುಗಳ ಹೋರಾಟದ ಸನ್ನಿವೇಶ ಚಿತ್ರಿಸಲ್ಪಿಟ್ಟಿದೆ. ಉಳಿದಂತೆ ಹಿನ್ನೆಲೆಯ ವಿವರಣೆ ಯಥಾದರ್ಶನ ನಿಯಮಾನುಸಾರ ರೂಪಿಸಲ್ಪಟ್ಟಿದೆ.

---

೦೩. ಡಾ. ಎಸ್. ಸಿ. ಪಾಟೀಲ, ಸತ್ಯಾನಂದ ಪಾತ್ರೋಟ (ಸಂ.) : ನಿಜದನೆಲೆ, ಪುಟ-೧೦೪೪

೦೪. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩-೧೪

ಕಪ್ಪು ಬಿಳುಪು ವರ್ಣದಿಂದ ಕೂಡಿರುವ ಇದೇ ಚಿತ್ರಣ ರೇಖಾಯುಕ್ತವಾದುದು. ಸೆಣಸುತ್ತಿರುವ ಯೋಧರು ತಮ್ಮ ಜೀವದ ಹಂಗುತೊರೆದು ಕಾದಾಟಕ್ಕಿಳಿದಿರುವ ಪರಿ ಮನೋಜ್ಞವಾಗಿಯೂ ವೀರಭಾವಯುಕ್ತವಾಗಿಯೂ ಅಭಿವ್ಯಕ್ತಿಸಲ್ಪಟ್ಟಿದೆ. 'ಮುಖಪುಟ ರೂಪಿಸಿದ ಕಲಾವಿದರ ಶಾಸ್ತ್ರೀಯ ಕಲಾ ಕಲಿಕೆಯ ಮಾನವ ದೇಹ ಅಂಗೋಪಾಂಗಗಳ ನಿರೂಪಣೆಯಲ್ಲಿ ಸಾಧಿಸಿದ್ದ ಪ್ರಗತಿಯನ್ನು ಪ್ರಾವೀಣ್ಯತೆಯನ್ನು ಈ ರಕ್ಷಾಪುಟಚಿತ್ರಕಲೆ ವಿನ್ಯಾಸದಲ್ಲಿನ ಸನ್ನಿವೇಶ ಸಾಕ್ಷೀಕರಿಸುತ್ತದೆ.'[೫] ಸನ್ನಿವೇಶ ಚಿತ್ರಣದಲ್ಲಿ ಕಲಾವಿದ ಪಾಲಿಸಬೇಕಾದ ಮುನ್ನೆಲೆ–ಹಿನ್ನೆಲೆ ಚಿತ್ರಣದ ಔಚಿತ್ಯ ಅನೌಚಿತ್ಯ ಹಿನ್ನೆಲೆಯಿಂದ ದೂರದಲ್ಲಿರುವ ವಸ್ತು ವಿಷಯಗಳು/ಸನ್ನಿವೇಶ ಕಿರಿದಾಗಿ – ಅಸ್ಪಷ್ಟವಾಗಿ ಕಾಣುವಿಕೆ ಅಂತಿಮಗಳ ಚಿತ್ರ ಯಥಾದರ್ಶನ ತಂತ್ರಗಾರಿಕೆ ಅನುಸರಣೆ ಇವೇ ಮೊದಲಾದ ಕಲಾವ್ಯಾಕರಣ ನಿಯಮಗಳನ್ನು ಯುಕ್ತ ರೀತಿಯಲ್ಲಿ ಅಳವಡಿಸಿಕೊಂಡು ಶುದ್ಧ ಶಾಸ್ತ್ರೀಯ ಎನ್ನುವ ರೀತಿಯಲ್ಲಿ ಅಭಿವ್ಯಕ್ತಿಸಲ್ಪಟ್ಟದ್ದುದಾಗಿದೆ.

**೫.೩.೩. ಕ್ಷ–ಕಿರಣ (೧೯೭೨)**

ಅಂಶುಮಾಲಿ ಎಂಬ ಬರಹಗಾರರಿಂದ ೧೯೭೨ ರಲ್ಲಿ ಭಾರದ್ವಾಜ ಪ್ರಕಾಶನ, ಕದಿರೆ ಮಂಗಳೂರು ಇವರಿಂದ ಮುದ್ರಣ ಕಂಡಿದುದು 'ಕ್ಷ–ಕಿರಣ' ಎಂಬ ನಾಟಕ ಕೃತಿ. ಅರ್ಧಕಪ್ಪು ಅರ್ಧ ಬಿಳುಪಿನ ಹಿನ್ನೆಲೆಯಲ್ಲಿ ರೇಖಾಕೃತಿಗಳ ಸಮೂಹ ಸಂಯೋಜನೆ ಇಲ್ಲಿ ಏರ್ಪಟ್ಟ ಮುಖಪುಟ ವಿನ್ಯಾಸಗಾರಿಕೆಯಾಗಿದೆ. ೧೯೬೦–೭೦ ರ ದಶಕದಲ್ಲೆಲ್ಲಾ ಕಲಾಶಾಲೆಗಳ ಪಠ್ಯದಲ್ಲಿ ಕಡ್ಡಾಯವೆನಿಸಿದ್ದ ಸ್ಮರಣ ಚಿತ್ರಣ ವೈಖರಿಯಲ್ಲಿ ಇಲ್ಲಿನ ಎಲ್ಲಾ ರೇಖಾ ಚಿತ್ರಗಳೂ ಇವೆ. ಮೂರು ಮಾನವಾಕೃತಿಗಳು ಬಿಳಿ ಹಿನ್ನೆಲೆಯಲ್ಲಿ ರೇಖಿಸಪ್ಪಟ್ಟಿದ್ದಾರೆ. ಅವುಗಳ ಕೆಳಭಾಗದಲ್ಲಿ ಕಪ್ಪುವರ್ಣದ ಹಿನ್ನೆಲೆಯಲ್ಲಿ ೩–೪ ಮಾನವಾಕೃತಿಗಳು ರೇಖಿಸಲ್ಪಟ್ಟಿವೆ. ಕೃತಿಯ ಶೀರ್ಷಿಕೆಯೂ ಕಪ್ಪು–ಬಿಳುಪಿನಿಂದ ಕೂಡಿದೆ. ಇಲ್ಲಿ ಒಟ್ಟಾರೆ ರಚನೆ ತುಂಬ ಸರಳ–ಸಾಧಾರಣ ನೆಲೆಗಟ್ಟಿನದು. ಆದರೆ ರೇಖಾಚಿತ್ರ ನಿರೂಪಣೆಯಲ್ಲಿ ಕಲಾವಿದರು ತುಂಬ ಕುಶಲರು (ಜಾಣರು) ಎನ್ನುವುದು ಅವುಗಳನ್ನು (ಅಲ್ಲಿನ ಆಕೃತಿಗಳನ್ನು) ಕಲಾಕೌತುಕದಿಂದ ಅವಲೋಕಿಸಿದರೆ ಮನದಟ್ಟುಗೊಳ್ಳುವ ಅಂಶ.

**೫.೩.೪. ಸಮಾಧಿ (೧೯೭೨)**

ರಂಗದಾಸ ಎನ್ನುವ ಲೇಖಕರು ಬರೆದ 'ಸಮಾಧಿ' ನಾಟಕ ಕೃತಿ ಶ್ರೀ ರಂಗಕಲಾ ಮಂದಿರದಲ್ಲಿ ಮುದ್ರಿತವಾಗಿದ್ದು, ಆ ಕೃತಿಯ ಮುಖಪುಟ ರಚನೆ ಈ ರೀತಿ ಇದೆ – ಮುಖಪುಟದ ಮಧ್ಯಭಾಗದಲ್ಲಿ 'ಸಮಾಧಿ' ಈ ಶಬ್ದದ ಅಕ್ಷರಗಳು ಕೆಂಪುವರ್ಣದಲ್ಲಿ ಮೇಲಿಂದ ಕೆಳಗೆ ಬರೆಯಲ್ಪಟ್ಟಿದ್ದು, ಅಕ್ಕ ಪಕ್ಕಗಳಲ್ಲಿ ರೇಖಿಸಲ್ಪಟ್ಟ ಸರಳ ರೇಖೆ, ೯೦° ಕೋನರೇಖೆಗಳು ಸಹ ಕೆಂಪುವರ್ಣದಲ್ಲೇ ಇವೆ. ಮುಖಪುಟದ ಮಧ್ಯದ ಸರಿಸುಮಾರು ೮೦% ರಷ್ಟು ಭಾಗ ತಿಳಿಬೂದು ಬಣ್ಣದಿಂದ ಕೂಡಿದ್ದು ಅದರ ಸುತ್ತ ಮುತ್ತಲಿನ ಆವರಣ ತಿಳಿಹಸಿರು ಬಣ್ಣದ ಮೈವಳಿಕೆಯಿಂದ ಕೂಡಿದೆ. ಶೀರ್ಷಿಕೆಯ ಅಕ್ಷರಗಳಲ್ಲಿ ಸುತ್ತ ಮುತ್ತಲೂ ರೂಪಿಸಿದ ಸರಳ ರೇಖೆ, ಕೋನರೇಖೆಗಳು ಇವೆಲ್ಲವೂ ಶುದ್ಧ ಜ್ಯಾಮಿತಿಯ ನೆಲೆಗಟ್ಟಿನಲ್ಲಿ ಕೂಡಿವೆ.

೦೫. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩–೧೪

ಎಂಬ ಅಕ್ಷರಗಳಿಗಿಂತ ತುಂಬ ಚಿಕ್ಕದಾಗಿದೆ. ಈ ಎರಡು ಅಕ್ಷರ ಸಾಲುಗಳ ನಡುವೆ ತುಂಬಾ ಕಿರಿದಾಗಿ 'ಅವರ' ಎಂಬ ಶಬ್ಧ ಕೆಂಪುಬಣ್ಣದಲ್ಲಿಯೇ ಬರೆಯಲ್ಪಟ್ಟಿದೆ. ವಿಶಾಲವಾದ ಭವ್ಯವಾದ, ಗಾಳಿ ಬೆಳಕುಗಳಿಂದ ಕೂಡಿರುವ ಸುಂದರ ದ್ವಾರ ಬಾಗಿಲಿನಿಂದ ಕೂಡಿರುವ ಹಾಲ್‌ವೊಂದರಲ್ಲಿ ಶ್ರೀಮಂತ ವೃದ್ಧನೊಬ್ಬ ಪಲ್ಲಂಗದ ಮೇಲೆ ತನ್ನ ತಲೆಯನ್ನು ತಲೆದಿಂಬಿಗೆ ಆನಿಸಿಕೊಂಡು ಮಲಗಿದ್ದು ಆತನ ಸುತ್ತಲೂ ನಾಲ್ಕು ಜನ ಆತನ ಆಪ್ತೇಷ್ಟರು (ಅವರುಗಳಲ್ಲಿ ಒಬ್ಬ ವ್ಯಕ್ತಿ ಬ್ರಾಹ್ಮಣ ಸಂಪ್ರದಾಯವನ್ನು ಪ್ರತಿನಿಧಿಸುತ್ತಿದ್ದಾನೆ, ಇನ್ನೊಬ್ಬ ವಣಿಕ ಸಮುದಾಯದವನು, ಮತ್ತೊಬ್ಬ ಸಿಖ್ ಧರ್ಮದವ, ಮಗದೊಬ್ಬ ಮುಸಲ್ಮಾನ) ಅವನ ಹಾಸಿಗೆಯ ಅಕ್ಕಪಕ್ಕಗಳಲ್ಲಿ ಕುಳಿತು ಆತನ ಯೋಗಕ್ಷೇಮ ಕೇಳುತ್ತಿರುವಂತಿದೆ. ಮಲಗಿದ ವೃದ್ಧನ ತಲೆಯ ಕೆಳಗಡೆ ಆತನ ಸೇವಕನು ಕುಳಿತಿದ್ದಾನೆ. ಆತನು ಮಲಗಿದ ವಿಶಾಲ ಕೋಣೆಯ ದ್ವಾರಬಾಗಿಲು ಸುಂದರವಾದ, ದಪ್ಪನಾದ ದ್ವಾರ ಕಂಬಗಳನ್ನು ಹೊಂದಿದ್ದು, ಅದರ ಮೇಲ್ಗಡೆ ಶಿಸ್ತಾಗಿ ಪರದೆಯು ಮಡಚಿದೆ. ದ್ವಾರಬಾಗಿಲಿನ ಮೇಲ್ಗಡೆ ಇರುವ ಕೃತಿ ಶೀರ್ಷಿಕೆಯ ಬೋರ್ಡ್‌ನ್ನು (ಹಲಗೆ) ಅದರ ಆಚೆ–ಈಚೆ ಒಬ್ಬೊಬ್ಬ ಪುಟ್ಟ ಮಗು ಹಿಡಿದಿದೆ. ಹೀಗಿರುವ ಶೀರ್ಷಿಕೆಯ ಮೇಲ್ಗಡೆ ಇರುವ ಲೇಖಕರ ಹೆಸರಿಗಿಂತಲೂ ಮೇಲೆ ಪುಟ್ಟ ಆವರಣವೊಂದರಲ್ಲಿ ಗಣೇಶನ ಪುಟ್ಟ ರೇಖಾಚಿತ್ರ ಬಿಡಿಸಲಾಗಿದೆ. ದ್ವಾರಬಾಗಿಲಿನ ಮೇಲ್ಗಡೆಯಲ್ಲಿ ಅನೇಕ ಸ್ತರಗಳಲ್ಲಿ ಅಚ್ಚುಕಟ್ಟಾಗಿ ಪರದೆಗಳು ಮಡಚಲ್ಪಟ್ಟಿವೆ. 'ಸಂಯೋಜನಾ ದೃಷ್ಟಿಯಿಂದ ಇದನ್ನು (ಈ ಮುಖಪುಟ ವಿನ್ಯಾಸವನ್ನು) ಗಮನಿಸಿದಾಗ ಮರಾಠಿ/ಪಾರ್ಸಿ ರಂಗಭೂಮಿ ನಾಟಕಗಳು ಈ ಮುಖಪುಟ ವಿನ್ಯಾಸಗೊಳಿಸಿದ ಕಲಾವಿದರ ಮೇಲೆ ಗಾಢ ಪ್ರಭಾವ ಬೀರಿವೆಯೆಂದು ಊಹಿಸಬಹುದು. ದ್ವಾರ ಕಂಬಗಳ ಅಲಂಕರಣ, ಅವುಗಳ ಮೇಲ್ಗಡೆಯಲ್ಲಿ ಕ್ರಮಬದ್ಧವಾಗಿ, ಅಷ್ಟೇ ಒಪ್ಪೋರಣವಾಗಿ ಮಡಚಿಕೊಂಡಿರುವ ಪರದೆಗಳು ೧೯೧೦–೨೦ರ ದಶಕದಲ್ಲಿ ಮರಾಠಿ ರಂಗಭೂಮಿ ಅಥವಾ ಅವುಗಳಿಂದ ಪ್ರಭಾವಿತಗೊಂಡ ರಾಜ್ಯದ ನಾಟಕ ಕಂಪನಿಗಳ ಸರ್ವೇ ಸಾಮಾನ್ಯ ಲಕ್ಷಣಗಳಾಗಿದ್ದವು.'[೭] ರೇಖಾಚಿತ್ರಯುಕ್ತ ಮಾನವ ಆಕಾರಗಳು, ಪರಿಕರಗಳು ಇವೆಲ್ಲ ಸಹಜವಾಗಿ ನೈಜವಾಗಿ ಮೂಡಿಬಂದಿವೆ. ಅಲ್ಲದೆ, ಪ್ರಧಾನ ಸಂಗತಿಗೆ ಪೂರಕವಾಗಿ ಸಂಯೋಜಿಸಿದ ಹಿನ್ನೆಲೆ ಮುನ್ನೆಲೆಯ ಚಿತ್ರಣವೂ ಒಟ್ಟಾರೆ ಸನ್ನಿವೇಶದ ಸ್ಪಷ್ಟ ಅರ್ಥವನ್ನು ಕಟ್ಟಿಕೊಡುವ ನಿಟ್ಟಿನಲ್ಲಿ ಔಚಿತ್ಯ ಪೂರ್ಣವಾಗಿ ಚಿತ್ರಿತಗೊಂಡಿವೆ. ಒಟ್ಟಾರೆಯಾಗಿ ಇಲ್ಲಿನ ಮುಖಪುಟ ವಿನ್ಯಾಸಚಿತ್ರ ಜನಸಾಮಾನ್ಯರಿಗೂ ಅರ್ಥವಾಗುವಂತಹುದು. ಈ ಮುಖಪುಟ ವಿನ್ಯಾಸಗೊಳಿಸಿದ ಕಲಾವಿದರ ಹೆಸರನ್ನು ನಮೂದಿಸಿಲ್ಲ.

### ೫.೩.೭. ಬೆಳ್ಳಿ ಭರಣಿ (೧೯೭೩)

'ಬೆಳ್ಳಿ ಭರಣಿ' ಎಂಬ ನಾಟಕ ಎಪ್ಪತರ ದಶಕದಲ್ಲಿ ರಚಿತವಾದದ್ದು, ಇದರ ಕರ್ತೃ ಹೆಚ್.ಎ. ರಾಮಕೃಷ್ಣ. ಈ ಕೃತಿಗೆ ಮುಖಪುಟ ಚಿತ್ತಾರ ಬರೆದವರು ಚಂದ್ರನಾಥ ಆಚಾರ್ಯರು. ಹೆಸರಾಂತ ಕಲಾವಿದರು ಮತ್ತು ಮುಖಪುಟ ವಿನ್ಯಾಸಗಾರರು. 'ವುಡ್/ಲಿನೋ ಮುದ್ರಣ ತಂತ್ರಗಾರಿಕೆಯಲ್ಲಿ'[೮] ರೂಪಿತವಾದ ಮುಖಪುಟ ವಿನ್ಯಾಸವಿದು. ಪ್ರಖರ ಕೆಂಪು ವರ್ಣಾವಕಾಶದ ನಡುವೆ ಕೃತಿ ಶೀರ್ಷಿಕೆ,

---

೦೭. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

೦೮. ರವಿಕುಮಾರ್ ಕಾಶಿ: ಗ್ರಾಫಿಕ್ ಕಲೆ,ಮ–೯–೧೦

ಭರಣಿ ಅದರ (ಭರಣಿಯ) ಹಿಂದುಗಡೆ ಸಂಕೋಲೆಗೊಳಗಾದ ವ್ಯಕ್ತಿಯೋರ್ವನ ಪಾರ್ಶ್ವ ನೋಟದ ಭಾವಚಿತ್ರ ನಿರೂಪಿಸಲ್ಪಟ್ಟಿವೆ. ಬಿಳಿ ಮತ್ತು ತೀಳಿಬೂದು ಬಣ್ಣಯುಕ್ತಭರಣಿ, ಅದರ ಹಿಂದುಗಡೆ ಬಂಧಿಯಾದ ತುಸು ದಟ್ಟ ಬೂದುಬಣ್ಣ ಮತ್ತು ಕಪ್ಪು ವರ್ಣಯುಕ್ತ ವ್ಯಕ್ತಿಯೋರ್ವನ ಮುಖ ಕೈಗಳು ಈ ಎರಡೂ ಆಕೃತಿಗಳ ಕೆಳಗೆ ಮೈವಳಿಕೆಯುಕ್ತ ಅಕ್ಷರಗಳನ್ನು ಹೊಂದಿದ ಶೀರ್ಷಿಕೆ ಇವೆಲ್ಲಾ ಓರೆಯಾಗಿ ಸಂಯೋಜಿಸಲ್ಪಟ್ಟಿದ್ದು ಗಮನಿಸತಕ್ಕ ಅಂಶ ತಿಳಿನೀಲಿ ಬಣ್ಣದ ಅವಕಾಶದಲ್ಲಿ ಆಕೃತಿಗಳ ಹಿಂದುಗಡೆ ಮತ್ತು ಅಕ್ಕ ಪಕ್ಕಗಳಲ್ಲಿ ದಟ್ಟ ಕಪ್ಪುವರ್ಣದ ಮತ್ತು ಅದರ ಸುತ್ತ ಅಲೆಗಳಂತೆಯೇ ಹರಿದಾಡಿರುವ ಪ್ರಖರ ಕೆಂಪು ವರ್ಣ ಇವಿಷ್ಟೇ ಒಟ್ಟಾರೆ ಮುಖಪುಟದಲ್ಲಿ ವೀಕ್ಷಕರನ್ನು ಪ್ರಧಾನವಾಗಿ ಪ್ರಭಾವಿಸುತ್ತಿವೆ. ವ್ಯಕ್ತಿಯ ಭಾವಚಿತ್ರದಲ್ಲಿ ಒರಟುತನ, ನಿರಾಸೆ ಹತಾಶೆಯ ಭಾವಗಳು ಸಮ್ಮಿಲನಗೊಂಡಿವೆ. ನೈಜ ಶೈಲಿಯಲ್ಲಿ ವ್ಯಕ್ತಿ ವಸ್ತುಗಳ ನಿರ್ವಹಣೆಯಿದೆ (ಅಭಿವ್ಯಕ್ತಿಯಿದೆ).

**೫.೩.೮. ನಾಲ್ಕೇ ನಾಲ್ಕು (೧೯೭೩)**

೧೯೭೩ರಲ್ಲಿ ಪುಷ್ಪಾ ರಘುರಾಂ ಅವರಿಂದ ರಚಿತವಾಗಿ ಶ್ರೀನಿವಾಸ ಮಧ್ಯಸ್ಥ ಎನ್ನುವವರಿಂದ ಮುಖಪುಟ ವಿನ್ಯಾಸ ಗೊಳಿಸಲ್ಪಟ್ಟ 'ನಾಲ್ಕೆ –ನಾಲ್ಕು' ಎಂಬ ಕೃತಿ (ನಾಲ್ಕು ನಾಟಕಗಳು ಸಂಕಲ್ಪಿಸಲ್ಪಟ್ಟ ಕೃತಿ ಇಲ್ಲಿ ಸಂಕಲನಗೊಂಡ 'ವರದಕ್ಷಿಣೆ', 'ದಂತವೇದಾಂತ', 'ಫ್ರೆಂಡ್ಸ್ ಪರಿಣಯ', 'ಬದಲಿ ಹೃದಯ') ನಾಟಕಗಳ ಮುಖಪುಟಗಳನ್ನು ಮೇಲಕ್ಕೆ ಓರೆ ನೋಟಗಳಲ್ಲಿ ಕೆಳಗಡೆ ಸಂಕಲನ ಮುಖಪುಟದಲ್ಲಿ ಎರಡು ನಾಟಕ ಮುಖಪುಟಗಳನ್ನು ಓರೆಯಾಗಿ ಸಂಯೋಜನೆಗೊಳಿಸಲಾಗಿದೆ. ಇವುಗಳ ಮಧ್ಯದಲ್ಲಿ (ನಾಲ್ಕೆನಾಲ್ಕು ಕೃತಿ ಮುಖಪುಟ ಮಧ್ಯದಲ್ಲಿ) ನಾಲ್ಕೇ ನಾಲ್ಕು ಶೀರ್ಷಿಕೆ ಬರೆಯಲ್ಪಟ್ಟಿದೆ. ಕಾಗದ ಸುರಳಿಯ ಮೇಲೆ ಬರೆಯಲ್ಪಟ್ಟಂತೆ ಈ ಶೀರ್ಷಿಕೆಯ ಸಮತಲ ವಿನ್ಯಾಸ ರೂಪಿಸಲ್ಪಟ್ಟಿದೆ. ಉಳಿದಂತೆ ಇಲ್ಲಿ ಮೇಲಕ್ಕೆ ಮತ್ತು ಕೆಳಕ್ಕೆ ಓರೆಯಾಗಿ ಸಂಕಲ್ಪಿಸಲ್ಪಟ್ಟ ಮುಖಪುಟ ಚಿತ್ರಗಳು ಕಪ್ಪು ಬಿಳುಪು ರೇಖಾಚಿತ್ರಗಳಿಂದ ಕೂಡಿದ್ದು, ಸಾಮಾನ್ಯ ರೀತಿಯ ಸ್ಮರಣ ಚಿತ್ರಗಳ ಸಾಲಿಗೆ ಸೇರುವಂತಹವುಗಳು. ಶೀರ್ಷಿಕೆ ಅಕ್ಷರ ವಿನ್ಯಾಸ ಸಹ ದಟ್ಟಕಪ್ಪು ಬಣ್ಣದಿಂದ ಬರೆಯಲ್ಪಟ್ಟಿದ್ದು 'ಕಲಾ ಶಾಸ್ತ್ರೀಯ ಭಾಷೆಯಲ್ಲಿ ಗೋಥಿಕ್ ಶೈಲಿ ಎಂಬ ಸಂಬೋಧನೆಗೆ ಒಳಪಡುವಂತಹುದು ಮತ್ತು ಸಾಮಾನ್ಯ ಭಾಷೆಯಲ್ಲಿ ಇದರ ಶೈಲಿಯಲ್ಲಿ ಸರಳಗೈ ಬರಹ(Free hand writing)ಕ್ಕೆ ಸೇರ್ಪಡೆ–ಗೊಳಿಸಬಹುದು.'[೯] ಇಲ್ಲಿನ ಶೀರ್ಷಿಕೆ ಅಕ್ಷರಗಳು ಸಮಕಾಲೀನ ಗಣಕಯಂತ್ರದ ಅಕ್ಷರ ವಿನ್ಯಾಸಗಳಿಗೆ ಒಳಪಡುವುದಿಲ್ಲ ಎನ್ನುವುದು ಗಮನಿಸತಕ್ಕ ಅಂಶ.

**೫.೩.೯. ಅಕ್ಕ ಮಹಾದೇವಿ (೧೯೭೩)**

ಬಿ. ಪುಟ್ಟಸ್ವಾಮಯ್ಯ ಎನ್ನುವ ಲೇಖಕರು ಬರೆದ 'ಅಕ್ಕಮಹಾದೇವಿ' ಎಂಬ ನಾಟಕ ಕೃತಿ ಸುಲ ನಾರಾಯಣ ಎನ್ನುವವರಿಂದ ಮುಖಪುಟ ವಿನ್ಯಾಸಗೊಳಿಸಲ್ಪಟ್ಟಿದ್ದು, ಆ ಸಂದರ್ಭದ ಮಟ್ಟಿಗೆ ಸೃಜನಶೀಲ ಜಾಡನ್ನು ಹಿಡಿದ ಮುಖಪುಟ ವಿನ್ಯಾಸಗಾರಿಕೆ ಎಂದು ಪರಿಗಣಿಸಲ್ಪಡುವಂತಹುದು. ಬಿಳಿಯ

೯. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩–೧೪

ಹೂಗಳಿಂದಾವೃತವಾದ ಕಪ್ಪು ಬಿಳುಪಿನ ಎಲೆಗಳನ್ನು ಹೊಂದಿರುವ ಬಳ್ಳಿ ತೋರಣದ ಆವರಣದಲ್ಲಿ ಕೇಸರಿ ಬಣ್ಣದ ಹಿನ್ನೆಲೆಯಲ್ಲಿ ಶ್ವೇತವರ್ಣದ ಶಿವಲಿಂಗದಲ್ಲಿ ಸ್ತ್ರೀಯೋರ್ವಳ ಎರಡು ವಿಭಿನ್ನ ಮುಖಭಾವಗಳು ರೇಖಾಚಿತ್ರದಲ್ಲಿ ಅಭಿವ್ಯಕ್ತಿಗೊಂಡಿವೆ. ಆ ಸ್ತ್ರೀಯ ಅರ್ಧೋನ್ಮೀಲಿತ ಧ್ಯಾನಾಸಕ್ತ ನೇತ್ರಗಳು, ಮುಖದಲ್ಲಿನ ಶಾಂತಭಾವ ಹಣೆಯ ಮೇಲಿನ ತ್ರಿಪುಂಡ್ರ (ವಿಭೂತಿ ಪಟ್ಟೆ) ಕುತ್ತಿಗೆಯ ಮೇಲೆ ಇಳಿಬಿದ್ದಿರುವ ಕೂದಲು ತಲೆಯಲ್ಲಿ ಹಣೆ ಮೇಲ್ಗಡೆ ಧರಿಸಿರುವ ಪುಷ್ಪ ಇವೆಲ್ಲ ಸಾಂಪ್ರದಾಯಸ್ಥ, ಸುಶೀಲ ಹೆಣ್ಣುಮಗಳ ಲಕ್ಷಣಗಳನ್ನು ಸಂಕೇತಿಸುತ್ತಿದ್ದು ಶೀರ್ಷಿಕೆಗನುಸಾರವಾಗಿಯೇ ಅಕ್ಕಮಹಾದೇವಿಯ ಭಾವಚಿತ್ರವೇ ಇದೆ ಎಂಬುದನ್ನು ನೋಡುಗನಿಗೆ ಕಟ್ಟಿಕೊಡುತ್ತದೆ.

ಶಿವಲಿಂಗದ ಅಗ್ರಭಾಗದಲ್ಲಿ ತೋರ್ಪಡಿಸಿರುವ ಆಕೆಯ (ಅಕ್ಕಮಹಾದೇವಿಯ) ರೇಖಾತ್ಮಕ ಭಾವಚಿತ್ರದಲ್ಲಿ ಆಕೆಯ ಕಣ್ಣು ಸಂಸಾರದ ಬಗೆಗೆ ನಿರ್ಲಿಪ್ತತೆಯನ್ನು ಸೂಚಿಸುತ್ತಲೇ, ಅಂತರ್ಮುಖೀ ಪ್ರಜ್ಞೆಯಿಂದ ಕೂಡಿದ್ದು. ಹಿಂದುಗಡೆಗೆ ಓರೆನೋಟ ಬೀರುತ್ತಿವೆ. ಈ ಮುಖದಲ್ಲಿ ಶಾಂತಭಾವವಿದೆ, ಧ್ಯಾನಾಸಕ್ತಿಯಿಂದ, ಜೊತೆಗೆ ತನ್ನ ಹಿಂದಿನ ಬದುಕಿನ ಅವಲೋಕನಗೈಯುತ್ತಾ, ಜಿಗುಪ್ಸಾಭಾವದ ಅಭಿವ್ಯಕ್ತಿಯು ದಟ್ಟೈಸಿರುವಂತೆ ಭಾವ ನಿರೂಪಣೆಯಿದೆ. ಶಿವಲಿಂಗದ ಕೆಳಗಡೆ ಭಾಗದ ಭಾವಚಿತ್ರದಲ್ಲಿ ಆಕೆಯ ಕಣ್ಣಿನ ಧ್ಯಾನಲೀನವೂ ಗಂಭೀರ ಮೌನಯುಕ್ತವೂ ಆದುದ್ದಾಗಿದೆ ಹೀಗೆ ಇಲ್ಲಿ ವಿನ್ಯಾಸಗಾರರೂ ಅಕ್ಕಮಹಾದೇವಿಯ ಆಧ್ಯಾತ್ಮಿಕ ತೇಜಸ್ಸನ್ನು ರೇಖೆಗಳಲ್ಲಿ ಅಭಿವ್ಯಕ್ತಿಸಲು ಔಚಿತ್ಯ ಪೂರ್ಣವಾದ ಪ್ರಯತ್ನ ನಡೆಸಿರುವುದು ಗಮನಕ್ಕೆ ಬರುವಂತಹ ಅಂಶ. ಕಲಾಶೈಲಿಯ ಮಟ್ಟಿಗೆ ಇದು 'ಅಜಂತಾ ಚಿತ್ರಗಳ ಮಾದರಿಯ ಅಲಂಕರಣ ಶೈಲಿ.'[೧೦] ಆ ಅಲಂಕರಣ ಶೈಲೀಕೃತ ಬದ್ಧತೆ ಈ ಮುಖಪುಟದಲ್ಲಿ ನಿರೂಪಿಸಿದ ಪ್ರತಿಯೊಂದು ವಸ್ತುವಿನಲ್ಲೂ ತೋರ್ಪಡಿಕೆಯಾಗಿದೆ. ಸಂಯೋಜಿಸಿದ ಪರಿಯಲ್ಲಿ ವಿಶೇಷವಾಗಿ ಶಿವಲಿಂಗದಲ್ಲಿ ಅಕ್ಕಮಹಾದೇವಿಯ ಮುಖವನ್ನು ರೇಖಿಸಿರುವುದರಲ್ಲಿ ಆ ಕಾಲಾವಧಿಯ ಸಂದರ್ಭದಲ್ಲಿ ಸೃಜನಶೀಲತೆಯನ್ನು/ನವನವೀನ ಸಂಯೋಜನಾ ಮಾದರಿಯನ್ನು ಪ್ರಸ್ತುತ ಪಡಿಸುವ ಹಂಬಲವೂ ಇದನ್ನು ರೂಪಿಸಿದ ಕಲಾವಿದರಿಂದ ನಡೆದಿದೆ ಎನ್ನಬಹುದು. ಇದರ ಶೀರ್ಷಿಕೆ ಮುಖಪುಟದ ಮೇಲ್ಭಾಗದಲ್ಲಿ ಎಲ್ಲ ಅಕ್ಷರಸ್ಥರಿಗೂ ಸುಲಭವಾಗಿ, ಸುಲಲಿತವಾಗಿ ಅರ್ಥವಾಗುವ ರೀತಿಯಲ್ಲಿ ಒಂದೇ ತೆರನಾದ ದಪ್ಪ ಗಾತ್ರಗಳಲ್ಲಿ ಬರೆಯಲ್ಪಟ್ಟಿದೆ. ಕಪ್ಪು, ಬಿಳಿ, ಕೇಸರಿ ಈ ಮೂರು ವರ್ಣಗಳ ಬಳಕೆ ಇಲ್ಲಿ ಆಗಿದೆ.

**೫.೩.೧೦. ಅಮೃತ ವರ್ಷ (೧೯೭೩)**

'ಅಮೃತವರ್ಷ' ಎಂಬ ನಾಟಕ ಮುಖಪುಟ ಮೂರು ಮಾನವ ರೇಖಾಚಿತ್ರಗಳಿಂದ ಕೂಡಿದ್ದು ಹಿನ್ನೆಲೆಯಲ್ಲಿ ಗುಲಾಬಿ ವರ್ಣದ ಲೇಪನವಿದೆ. ಈ ಮೂರು ಮಾನವ ರೇಖಾಚಿತ್ರಗಳ ಹಿನ್ನೆಲೆಯಲ್ಲಿ ಒಂದರ ಹಿಂದೆ ಒಂದರಂತೆ ಎರಡು ಗೋಲಗಳು ಆಲಂಕಾರಿಕ ವಿನ್ಯಾಸ ಯುಕ್ತವಾಗಿ ಬಿಳಿಯ ಬಣ್ಣದಲ್ಲಿ ನಿರೂಪಿಸಲ್ಪಟ್ಟಿವೆ. ಮುಖಪುಟ ಮೇಲ್ಭಾಗದಲ್ಲಿ ಶೀರ್ಷಿಕೆ ಬರೆಯಲ್ಪಟ್ಟಿದ್ದು ಅದರ ಅಕ್ಷರಗಳು ಕೆಲಮಟ್ಟಿಗೆ

---

೧೦. ಎನ್. ಮರಿಶಾಮಚಾರ್: ದೃಶ್ಯಕಲಾ ಪ್ರಪಂಚ, ಪು-೦೭

ರೋಮನ್ ಅಕ್ಷರ ಮಾದರಿಯನ್ನು ಹೋಲುತ್ತಿದ್ದು, ಸರಳಗ್ಯೆ ವಿಧಾನವೇ ಇಲ್ಲಿ ಅನುಸರಿಸಲ್ಪಟ್ಟಿದೆ. ಹಿನ್ನೆಲೆಯ ಗುಲಾಬಿ ವರ್ಣದಲ್ಲೇ ತುಸು ಓರೆಯಾಗಿ ಅಕ್ಷರಗಳಿದ್ದು ಅವುಗಳನ್ನು ಎದ್ದು ಕಾಣಿಸುವ ಸಲುವಾಗಿ ಆ ಅಕ್ಷರಗಳನ್ನು ಕಪ್ಪುಬಣ್ಣದ ಛಾಯಕರಣ(ಸೇಡ್)ದಿಂದ ನಿರ್ಮಿಸಿಲಾಗಿದೆ.

ಇಲ್ಲಿ ನಿರೂಪಿಸಲ್ಪಟ್ಟಿರುವ ರೇಖಾಚಿತ್ರಗಳು ಭಾವಪೂರ್ಣವಾಗಿವೆ. ಶೈಲಿಯಲ್ಲಿ ನೈಜತೆಯ ಜೊತೆಗೆ ತುಸು ಆಲಂಕಾರಿಕತೆಯೂ ಮೇಳೈಸಿದೆ. ಇಲ್ಲಿನ ಮೂರು ಮಾನವಾಕಾರಗಳಲ್ಲಿ ಮೇಲಕ್ಕೆ ನಿರೂಪಿತವಾಗಿರುವ ವೃದ್ಧೆಯೋರ್ವಳ ಭಾವಚಿತ್ರ ಮಾದರಿ ಗುಲಾಬಿ ವರ್ಣದ ಅವಕಾಶದ ಮೇಲೆಯೇ ಕಪ್ಪು ವರ್ಣದಿಂದ ರೇಖಾತ್ಮಕವಾಗಿ ರೂಪಿಸಲ್ಪಟ್ಟಿದೆ. ಆದರೆ ಆ ಭಾವಚಿತ್ರದ ಕೆಳಗಡೆ ರಚಿತವಾಗಿರುವ ಮತ್ತೆರಡು ರೇಖಾಚಿತ್ರಗಳು (ಒಂದು ಪುರುಷಾಕೃತಿ ಇನ್ನೊಂದು ಸ್ತ್ರೀ–ಆಕೃತಿ) ಶುದ್ಧ ಕಪ್ಪು–ಬಿಳುಪಿನಿಂದ ಕೂಡಿದ್ದು ರೇಖಾಚಿತ್ರಗಳು ಹೀಗೇ ಇಲ್ಲೂ ರಚಿಸಲ್ಪಟ್ಟಿರುವ ಏನೋ ಸಂಚುಹೂಡಿರುವ ವೃದ್ಧೆಯೋರ್ವಳ ಭಾವಚಿತ್ರ, ರಾಜ/ಮಂತ್ರಿಯ ಪೋಷಾಕಿನ ಪುರುಷ ರೇಖಾಚಿತ್ರ ಮತ್ತು ತಲೆಯ ಹಿಂಗಡೆ ದೊಡ್ಡ ತುರುಬು ಕಟ್ಟಿಕೊಂಡು ಅದನ್ನು ತೆಳುವಾದ ಸೀರೆ ಸೆರಗಿನಿಂದ ಮುಚ್ಚಿಕೊಂಡು ಅದೇನೋ ದುಗುಡ ಭಾವದಿಂದ ನೋಡುತ್ತಿರುವ ಸಿಂಗಾರಗೊಂಡ ಯುವತಿಯೋರ್ವಳ ರೇಖಾಚಿತ್ರ ಬೇರೆ–ಬೇರೆ ಬಗೆಯ ಭಾವಗಳನ್ನು ಸ್ಪಷ್ಟವಾಗಿ ನೋಡುಗರಿಗೆ ತಲುಪಿಸುತ್ತಿವೆ. ಇಲ್ಲಿನ ಚಿತ್ರ ಶೈಲಿ ಪ್ರಬುದ್ಧ ಕಥನ ನಿರೂಪಣಾ ತಂತ್ರಗಾರಿಕೆಯಲ್ಲಿ ಕೂಡಿದೆ ಎನ್ನಬಹುದು. ಒಟ್ಟಾರೆ ಮುಖಪುಟದ ಅವಕಾಶದಲ್ಲಿ ಸರಿಸುಮಾರು ಶೇ. ೫೫ ಭಾಗ ಚಿತ್ರಕ್ಕೆ ಮತ್ತು ಹೆಚ್ಚುಕಡಿಮೆಯ ಶೇ ೪೫ ಭಾಗ ಹಿನ್ನೆಲೆಯ ಅವಕಾಶ ಮತ್ತು ಶೀರ್ಷಿಕೆಯ ಸಲುವಾಗಿ ಬಳಕೆಯಾಗಿದ್ದು ಮುಖಪುಟ ವಿನ್ಯಾಸಗಾರಿಕೆಯಲ್ಲಿ ಒಂದು ಸಂತುಲನ ಏರ್ಪಟ್ಟಿದೆ ಎನ್ನಬಹುದು. ಓದುಗರ ಗಮನ ಒಮ್ಮೆಲೇ ಶೀರ್ಷಿಕೆ ಹಿನ್ನೆಲೆ ಅವಕಾಶ ಮತ್ತು ಮುನ್ನೆಲೆಯಲ್ಲಿರುವ ಚಿತ್ರಗಳ ಕಡೆ ಹರಿಯುವಂತೆ ಇದರ ಮುಖಪುಟ ವಿನ್ಯಾಸಗೊಳಿಸಲ್ಪಟ್ಟಿದ್ದು ರಚನಾಕಾರರು ಮಾತ್ರ ಅನಾಮಧೇಯರಾಗಿಯೇ ಇದ್ದಾರೆ. ಇಲ್ಲಿ ಗುಲಾಬಿ ಕಪ್ಪು ಮತ್ತು ಬಿಳಿ ಬಣ್ಣ ಬಳಕೆಯಾಗಿವೆ. ಈ ನಾಟಕ ಕೃತಿಯನ್ನು ಡಾ॥ ಎಚ್.ಕೆ. ರಂಗನಾಥ್ ರಚಿಸಿದರೆ, ಪ್ರಕಟಿಸಿರುವವರು ಮೈಸೂರು ಪ್ರಿಂಟರ್ಸ್.

**೫.೩.೧೧. ತಿರುಗು ಮುರುಗು (೧೯೭೫)**

'ತಿರುಗು ಮುರುಗು' ೧೯೭೫ ಎಂಬ ನಾಟಕ ಕೃತಿಯ ಮುಖಮಟ ವಿನ್ಯಾಸ ತುಂಬಾ ಸರಳವಾದುದು, ತಿಳಿ ನೀಲಿಬಣ್ಣ ಹಿನ್ನೆಲೆಯುಳ್ಳ ಸಮತಲದಲ್ಲಿ ಇದರ ವಿನ್ಯಾಸಕಾರರು ದಪ್ಪನೀಲಿ ಅಕ್ಷರಗಳಲ್ಲಿ ತಿರುಗು ಮುರುಗು ಶಬ್ದದ ಅಕ್ಷರಗಳನ್ನೇ ತಿರುಗು ಮುರುಗಾಗಿ ಬರೆದಿದ್ದಾರೆ. ಹೀಗಾಗಿ ಇದರ ಶೀರ್ಷಿಕೆಯೇ ಥಟ್ಟನೆ ಈ ನಾಟಕದ ಭಾವಾರ್ಥವನ್ನು ಸಂಕೇತಿಸುತ್ತಿದೆ. ಬಹುಶಃ ಈ ರೀತಿಯ ಕ್ರಮ ಈ ಹಿಂದೆ ಯಾವ ಮುಖ ಪುಟ ವಿನ್ಯಾಸಕಾರರಿಂದಲೂ ಆಗಿರಲಿಕ್ಕಿಲ್ಲ, ಈ ರೀತಿಯಲ್ಲಿ ಅಕ್ಷರಗಳನ್ನು ಪೂರ್ತಿ ತಿರುಗು ಮುರುಗಾಗಿ ಜೋಡಿಸಿ ಶೀರ್ಷಿಕೆಯ ಮೂಲಕವೇ (ಮತ್ತಿನ್ನಾವ ಚಿತ್ರಗಳೂ ಇಲ್ಲದೆ) ಕೃತಿಯ ಸಂದೇಶವನ್ನು ರೂಪಿಸಿದ್ದು ಬಹುಶಃ ಪ್ರಥಮ ಪ್ರಯತ್ನವಾಗಿದೆಯೇನೊ. ಇಲ್ಲಿ ಅಕ್ಷರಗಳು ಶೈಲಿಯ

ದೃಷ್ಟಿಯಿಂದ ನೇರವಾದ ಎರಡು ಸಾಲುಗಳಲ್ಲಿ ತುಸು ಓರೆಯಾಗಿ, ಕೆಲವೆಡೆ ದಪ್ಪನಾಗಿ, ಮತ್ತೆ ಕೆಲವೆಡೆ ತುಸು ತೆಳುವಾಗಿ ಬರೆಯಲ್ಪಟ್ಟಿವೆ. ಇದರ ವಿನ್ಯಾಸಕಾರ/ಕಲಾವಿದರ ಹೆಸರು ಬರೆಯಲ್ಪಟ್ಟಿಲ್ಲ. ಈ ನಾಟಕ ಆರ್.ನಾಗರಾಜ್ ಎನ್ನುವವರಿಂದ ರಚಿಸಲ್ಪಟ್ಟಿದ್ದು, ಇದನ್ನು ಮುದ್ರಿಸಿದವರು ಶ್ರೀ ಸದ್ಗುಣ ಪ್ರಿಂಟರ್ಸ್ ಅವರು.

### ೫.೩.೧೨. ಸಂಗ್ಯಾಬಾಳಾ ಅನ್ನಬೇಕೂ ನಾಡೋಳಗ: ೧೯೭೫

ಹೆಸರಾಂತ ಜಾನಪದ ತಜ್ಞ ಚಂದ್ರಶೇಖರ್ ಕಂಬಾರ ಅವರ ೧೯೭೫ ರಲ್ಲಿ ರಚಿತವಾದ ನಾಟಕ ಕೃತಿ. ‘ಸಂಗ್ಯಾಬಾಳಾ ಅನ್ನಬೇಕೂ ನಾಡೋಳಗ’ ಎಂಬ ಕೃತಿಗೆ ಮುಖಪುಟ ವಿನ್ಯಾಸಗೊಳಿಸಿದವರು ಜಿ.ಹೆಚ್ ರಾಮರಾವ್ ಎನ್ನುವವರು. ಜಾನಪದೀಯ ಮತ್ತು ‘ಸರ್ರಿಯಲಿಸಂ ಶೈಲಿ’[೧೧]ಯಲ್ಲಿ ಇದರ ಮುಖಪುಟ ಚಿತ್ರ ರೂಪುಗೊಂಡಿದ್ದು, ಇದು ಹೆಣ್ಣು ಮತ್ತು ಪಕ್ಷಿಯ ಕೋಳಿಯ (ಹುಂಜದ) ಆಕಾರದ ಸಂಯುಕ್ತ ರೂಪವಾಗಿದೆ. ಇದರ ಮುಖಪುಟ ಅವಕಾಶ ತಿಳಿ ಹಸಿರು ಬಣ್ಣದಲ್ಲಿದ್ದು, ಇಲ್ಲಿ ಸುಮಾರು ಶೇ.೫೦ ರಷ್ಟು ಭಾಗವನ್ನು ಲೇಖಕರ ಹೆಸರು ಮತ್ತು ಕೃತಿ ಶೀರ್ಷಿಕೆಗಾಗಿ ಉಪಯೋಗಿಸಲಾಗಿದೆ. ಮುಖಪುಟದ ಎಡ ಪಾರ್ಶ್ವದ ಕೆಳಭಾಗದಲ್ಲಿ ಮತ್ತು ಮೇಲೆ ಉಲ್ಲೇಖಿಸಿದ ಚಿತ್ತಾರವಿದೆ. ಕಪ್ಪು, ಕೆಂಪು, ತಿಳಿಗುಲಾಬಿ, ಹಳದಿ ಬಣ್ಣಗಳಿಂದ ತುಂಬಿರುವ ಈ ಆಕೃತಿ ಕೆಂಪು, ಕಪ್ಪು ಮತ್ತು ಬಿಳಿ ಮೈ ಅಡಿಯಲ್ಲಿ ಮಧ್ಯ ತುಸುಭಾಗ ಹಳದಿಬಣ್ಣಗಳಿಂದಲೂ ಕೂಡಿರುವ ಇದು ತನ್ನ ರೆಕ್ಕೆಗಳನ್ನು ಬಿಚ್ಚಿ ಕತ್ತೆತ್ತಿ ಮೇಲಕ್ಕೆ ಮುಖ ಮಾಡಿದೆ. ತಲೆಯ ಮೇಲೆ ದೀರ್ಘ ಪುಚ್ಚ ಹೊಂದಿದ್ದು ಅದು ಹಾರುವ ರಭಸಕ್ಕೆ ಅದು ಹಿಮ್ಮುಖವಾಗಿ ಯಲಿಯತ್ತಿದ್ದರೆ ಕೆಳಭಾಗದಲ್ಲಿರುವ ಪುಚ್ಚವೂ ಆ ಹಾರುವ ರಭಸಕ್ಕೆ ಒಂದಿಷ್ಟು ವಾಲಿದೆ. ಎರಡೂ ರೆಕ್ಕೆಗಳು ಬಿಚ್ಚಿಕೊಂಡು, ಆ ಎರಡೂ ರೆಕ್ಕೆಗಳ ಅಡಿಭಾಗದಲ್ಲಿ ಎರಡು ದೀರ್ಘಗೋಳಗಳು (ಒಂದು ರೆಕ್ಕೆಯ ಅಡಿಯಲ್ಲಿ ಒಂದು, ಮಗದೊಂದು ರೆಕ್ಕೆಯ ಅಡಿಯಲ್ಲಿ ಇನ್ನೊಂದು) (ಬಹುಶಃ ಸ್ತನಗಳು) ತೆರೆದು ನಿಂತಿವೆ. (ಸೆಟೆದು ನಿಮಿರಿದಂತಿವೆ) ಅದರ ಗರಿಗಳು ಅರ್ಧ ಚಂದ್ರಾಕಾರದಲ್ಲಿ ಬಿಚ್ಚಿಕೊಂಡಿದ್ದು (ತಿಳಿ ಗುಲಾಬಿ ಬಣ್ಣದ ಈ ಗರಿಗಳು, ಕಪ್ಪು ವರ್ಣದ ಕಡ್ಡಿಗಳನ್ನು ಸಮಾನಾಂತರ ಅಳತೆಯಲ್ಲಿ ಹೊಂದಿದ್ದು, ಅಂಚು ಹಳದಿ ಮತ್ತು ಬಿಳಿ ಬಣ್ಣ ಹಾಗೂ ತಿಳಿ ಗುಲಾಬಿ ಬಣ್ಣಗಳಿಂದ ಕೂಡಿದೆ) ಕಾಮನಬಿಲ್ಲನ್ನು ಜ್ಞಾಪಿಸುವಂತಿವೆ. ಈ ಅರ್ಧ ಸ್ತ್ರೀ ಅರ್ಧ ಪಕ್ಷಿಯಾಕೃತಿಯ ಗುದದ್ವಾರಭಾಗ ಗೋಲಾಕಾರದಲ್ಲಿ ಅರಳಿಕೊಂಡಿದ್ದು ಅದು ಹಳದಿ ಬಣ್ಣದಿಂದ ತುಂಬಿದೆ. ಅದರ ಅಂಚು ನೀಲವರ್ಣದ ಕಿರು ಪಟ್ಟಿಗಳಿಂದ (ಅಚ್ಚುಕಟ್ಟಾಗಿ ಎಳೆದಿರುವ ಕೂಡಿರುವುದರ ಜೊತೆಗೆ ತುಸು ದಪ್ಪನಾಗಿದ್ದು ಅಗಲ ಕಿರಿದಾಗಿ ಆಗುವ  ದ್ವಾರದ ಭಾಗದಲ್ಲಿ) ಸಾಗಿದೆ. ಈ ಗುದದ್ವಾರದ ಹಳದಿ ವರ್ಣಯುಕ್ತ ಭಾಗದಲ್ಲಿ ಗಿಡುಗದ ಮುಖಛಾಯೆಯಿದೆ.

ಅದರ ಆಚೆಗೆ ಮತ್ತೆ ದಪ್ಪನಾದ ಬಿಳಿಯ ಬಣ್ಣದ ಇನ್ನೊಂದು ಆವರಣ ತೆಳುವಾದ ನಿಖರವಾದ ನೀಲಿವರ್ಣದ ಅಂಚುಗೆರೆ ಹೊಂದಿದೆ ಈ ಕೃತಿಯಲ್ಲಿ ಹೆಣೆದಿರುವ ಜಾನಪದೀಯ ಜಗತ್ತಿನ ವೈವಿಧ್ಯಮಯ

೧೧. ಎನ್. ಮರಿಶಾಮಚಾರ್: ಸರ್ರಿಯಲಿಸಂ, ಪು-೫

ಮಾತೃರೂಪಿ, ಅಷ್ಟೇ ಸಂಕೀರ್ಣಮಯ ಸಂಸ್ಕೃತಿಯ ಮಗ್ಗಲುಗಳನ್ನು ಈ ವಿಚಿತ್ರ ಆಕಾರ ಮತ್ತು ಅದರಲ್ಲಿ ತುಂಬಿರುವ ವರ್ಣಗಳ ಮೂಲಕ ಸಾರಾಂಶೀಕರಿಸಲು ಕಲಾವಿದರು ಪ್ರಯತ್ನಿಸಿದ್ದಾರೆ ಎನ್ನಬಹುದು. ಈ ಮುಖಪುಟದ ಚಿತ್ತಾರಕ್ಕೆ ನೀಡಿದ ಪ್ರಾಧಾನ್ಯತೆ/ಕಲಾತ್ಮಕ ಸ್ಪರ್ಶ ಇಲ್ಲಿನ ಶೀರ್ಷಿಕಾ ಅಕ್ಷರಗಳಿಗೆ ನೀಡಿರುವುದಿಲ್ಲ. ಹಾಗಾಗಿ ಈ ಮುಖಪುಟವಿನ್ಯಾಸದಲ್ಲಿ ಚಿತ್ರಾಂಶ ಆಕರ್ಷಣೆಯೆದುರು, ದೊಡ್ಡದಾಗಿ ಕಪ್ಪು ವರ್ಣದಲ್ಲಿ ಅರ್ಧಂಬರ್ಧ ಜಾನಪದೀಯ ಶೈಲಿಯಲ್ಲಿ ಬರೆಯಲ್ಪಟ್ಟಿರುವ ಶೀರ್ಷಿಕೆ ಅಕ್ಷರಗಳು ಎದ್ದು ಕಾಣುವುವಾದರೂ ಒಂದು ರೀತಿಯ ಅಸಂಗತ ಜೋಡಣೆಗಳಂತೆ ತೋರಿಬರುತ್ತವೆ.

ಅಲ್ಲದೆ ಕೃತಿ ಶೀರ್ಷಿಕೆಯ ಮೇಲ್ಗಡೆ ಚಿಕ್ಕದಾಗಿ ಬರೆದ ಲೇಖಕರ ಹೆಸರಿನ ಕಪ್ಪುಬಣ್ಣದ ಅಕ್ಷರಗಳ ಕೆಲವೆಡೆ ದಪ್ಪ ಮತ್ತು ಕೆಲವೆಡೆ ತೀರಾ ತೆಳು ರೇಖಾತ್ಮಕವಾದವು. ಕೃತಿಯ ಶೀರ್ಷಿಕೆಯ ಅಕ್ಷರ ಶೈಲಿಗೂ ಲೇಖಕರ ಹೆಸರಿನ ಅಕ್ಷರ ಶೈಲಿಗೂ ಹೊಂದಾಣಿಕೆಯಿಲ್ಲ. ಅಲ್ಲದೆ ಶೀರ್ಷಿಕೆಯನ್ನು ರೂಪಿಸುವಾಗ ಮುಖಪುಟ ಗಾತ್ರಕ್ಕೆ ಅನುಸಾರವಾಗಿ ಅಕ್ಷರಗಳ ಗಾತ್ರದ ಆಯ್ಕೆಯ ಬಗ್ಗೆಯಾಗಲಿ, ಪರಸ್ಪರ ಅಕ್ಷರಗಳ ನಡುವೆ ಪದಗಳ ನಡುವೆ/ಪದ ಸಾಲುಗಳ ನಡುವೆ ಸೂಕ್ತ ಅವಕಾಶ ತೋರ್ಪಡಿಕೆಯ ಬಗ್ಗೆಯಾಗಲಿ, ವಿನ್ಯಾಸ ಸಮಂಜಸತೆ ಬಗ್ಗೆಯಾಗಲಿ ಇಲ್ಲಿ ಕಲಾವಿದರು ಗಮನಹರಿಸಿರುವುದಿಲ್ಲ.

**೫.೩.೧೩. ಕಟ್ಟು (೧೯೭೬)**

'ಕಟ್ಟು' ಕೃತಿಯ ಮುಖಪುಟ ವಿನ್ಯಾಸ ಅದರಲ್ಲಿ ಒಳಗೊಂಡಿರುವ ಆಕೃತಿಗುಂಪಿನ ವಿಶಿಷ್ಟತೆಯ ಕಾರಣದಿಂದ ಮಹತ್ವದ್ದೆನಿಸುತ್ತದೆ. ಅಮೂರ್ತ ಆಯಾಮಗಳನ್ನು ಹೊಂದಿರುವ ಘನಾಕೃತಿ ಪಂಥದ (Cubism) ಲಕ್ಷಣಯುಕ್ತ ಆಕಾರ ಹೊಂದಿರುವ ಇಲ್ಲಿನ ಸಮೂಹ ರೂಪಗಳು ಪರಸ್ಪರ ಒತ್ತೊತ್ತಾಗಿ ಕೂಡಿಕೊಂಡಿರುವ ರೀತಿ ಮತ್ತು ನಿರೂಪಿಸಲ್ಪಟ್ಟಿರುವ ವಿಭಿನ್ನ ಬಗೆಯ ಸಾಂಕೇತಿಕ ಭಾಗಗಳಿಂದಾಗಿ ಗಮನ ಸೆಳೆಯುತ್ತವೆ. ತಿಳಿ ಬೂದು ಬಣ್ಣದ ಹಿನ್ನೆಲೆಯಲ್ಲಿ ದಟ್ಟ ಕಪ್ಪು ಬಣ್ಣವನ್ನು ಯಾವ ಛಾಯಾಕರಣ ಭೇದವಿಲ್ಲದೆ (ಸಮಾನವಾಗಿ) ಏಕಪ್ರಕಾರವಾಗಿ ಎಲ್ಲ ಆಕೃತಿಗಳಿಗೆ ಲೇಪಿಸಿದ್ದರೂ ಅವುಗಳಲ್ಲಿನ ಪ್ರತಿಯೊಂದು ಆಕೃತಿಯ ತಲೆ ಮತ್ತು ಕೈಗಳು ಅಭಿವ್ಯಕ್ತಗೊಳಿಸಲ್ಪಟ್ಟಿರುವ ಭಂಗಿ (Posture) ಒಂದೊಂದೂ ಅನನ್ಯವಾಗಿಯೇ ತೋರ್ಪಡಿಕೆ–ಯಾಗುವುದರಿಂದ ಒಟ್ಟಾರೆಯಾಗಿ ಈ ಸಮೂಹ ಸೃಷ್ಟಿಯಲ್ಲಿ ಒಂದು ಜೀವಧ್ವನಿ ಗೋಚರಿಸುತ್ತಿದೆ. 'ವಾಸ್ತವವಾಗಿ ಘನಾಕೃತಿ ಪಂಥದ ಕಲಾವಿದ ಒಂದು ಘನಾಕೃತಿಯಲ್ಲಿಯೇ ಅನೇಕ ಜ್ಯಾಮಿತಿ ಆಕಾರಗಳನ್ನು (ಚೌಕ, ತ್ರಿಭುಜ, ಶಂಕು ಇತ್ಯಾದಿ) ಸಂಲಗ್ನಗೊಳಿಸಿರುತ್ತಾನೆ. ಆದರೆ ಇಲ್ಲೂ ಕಲಾವಿದ/ವಿನ್ಯಾಸಗಾರರು ಹೊರಗಿನ ಒಟ್ಟಾರೆ ಆಕೃತಿಯ ಅಂಚನ್ನು ಮಾತ್ರ ಘನಾಕೃತಿ ಪಂಥಕ್ಕನುಗುಣವಾಗಿ ರೂಪಿಸಿದ್ದು ಆಕಾರಗಳ ಒಳಗಿನ ಅವಕಾಶದ ತುಂಬೆಲ್ಲಾ ಚಪ್ಪಟೆಯಾಗಿ ದಟ್ಟವಾಗಿ ಕಪ್ಪುಬಣ್ಣ ಲೇಪಿಸಿದ್ದಾರೆ.'[೧೨]

ಆದಾಗ್ಯೂ ಈ ಗುಂಪಿನಲ್ಲಿ ಸಂಯೋಜಿಸಿರುವ ಪ್ರತಿಯೊಂದು ಆಕೃತಿಯ ಅಮೂರ್ತತೆಯಲ್ಲಿಯೂ ಆಯಾ ಆಕಾರದ ಮುಖ ಮತ್ತು ಕೈಗಳ ವಿಶಿಷ್ಟ ಭಂಗಿಯಿಂದಾಗಿ (ಇಲ್ಲಿ ಕೆಂಪು ಮಾನವ ಮುಖಗಳು ಮತ್ತು ಅವುಗಳ ಕೈಗಳು ಮತ್ತೆ ಕೆಲವು ತುಸು ಬಾಗು, ಇನ್ನು ಕೆಲವು ಅಲ್ಪ ಓರೆ, ಮತ್ತೆ ಕೆಲವು ಓರೆಯಾಗಿ

---

೧೨. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ. ದಿ:೨೦೧೬

ಮೇಲಕ್ಕೆ, ಇನ್ನು ಕೆಲವು ಸರಳ ಬದಿಯ ನೋಟ ಇತ್ಯಾದಿ) ಕುತೂಹಲ ಬುದ್ಧಿಯ ಓದುಗರಲ್ಲಿ, ಕಲಾಸಕ್ತ ಪ್ರಜ್ಞೆಯುಳ್ಳ ವಾಚಕರಲ್ಲಿ/ನೋಡುಗರಲ್ಲಿ ಒಂದು ವಿಶಿಷ್ಟ ರೀತಿಯ ಅನುಭವ ಉಂಟು ಮಾಡುವಂತಿವೆ. ಮುಖಪುಟದ ಮೇಲ್ಗಡೆಯ ಎಡಪಾರ್ಶ್ವದಲ್ಲಿ ಕಪ್ಪುಬಣ್ಣದ (ಘನಾಕೃತಿ ಪಂಥಕ್ಕನುಗುಣವಾಗಿ) ಆವರಣದಲ್ಲಿ ಬಿಳಿಯಬಣ್ಣದಲ್ಲಿ ಆಕೃತಿಗಳನ್ನು ರೂಪಿಸಿದ ಶೈಲಿಗೆ ಹೊಂದಿಕೆಯಾಗುವಂತೆ ಘನಾಕೃತಿ ಪಂಥವನ್ನು/ ಜಾನಪದೀಯ ಅಕ್ಷರ ವಿನ್ಯಾಸವನ್ನು ಜ್ಞಾಪಿಸಬಲ್ಲ ಕೃತಿ ಶೀರ್ಷಿಕೆ ನೋಡುಗರ ಗಮನ ಸೆಳೆಯಬಲ್ಲ ಗಾತ್ರದಲ್ಲಿ ಬರೆಯಲ್ಪಟ್ಟಿದ್ದು, ಕೆಳಗಡೆ(ತಳಭಾಗ) ಪಾರ್ಶ್ವದಲ್ಲಿ ಕೃತಿಶೀರ್ಷಿಕೆ ಮುಖಪುಟ ಚಿತ್ರಾಕೃತಿಗಳು ಇವುಗಳಿಗೆ ಹೊಂದಿಕೆಯಾಗುವಂತೆ ಜಾನಪದೀಯ ಮತ್ತು ಕ್ಯೂಬಿಸ್ಟ್ ಶೈಲಿಯಲ್ಲಿದ್ದು, ಲೇಖಕರ ಹೆಸರನ್ನು ಕಪ್ಪು ಬಣ್ಣದಲ್ಲಿ ಬರೆಯಲಾಗಿದೆ.

ಇದು ೧೯೭೬ರಲ್ಲಿ ಎ.ಎಸ್.ಮೂರ್ತಿ ಎನ್ನುವವರಿಂದ ರಚಿತವಾದ ಲಿನೋ ವಿ.ಚಲಪತಿ ಎನ್ನುವವರಿಂದ ಮುಖಪುಟ ವಿನ್ಯಾಸಗೊಳಿಸಲ್ಪಟ್ಟಿದ್ದುದಾಗಿರುತ್ತದೆ. ಇಲ್ಲಿ ಅನುಸರಿಸಲ್ಪಟ್ಟ ಆಕೃತಿ ನಿರೂಪಣೆ ಶೈಲಿ 'ಕಲಾವಲಯದ ಪಂಡಿತರುಗಳಿಗೆ/ಕಲಾಮೀಮಾಂಸಕರುಗಳಿಗೆ ಮಾತ್ರ ರುಚಿಸುವಂತಹದ್ದು. ಶ್ರೀಸಾಮಾನ್ಯವಲಯದಲ್ಲಿ ಇದು ರುಚಿಸದ/ ಅರ್ಥವಾಗದ ಮುಖಪುಟ ವಿನ್ಯಾಸವೆಂದು ಕಂಡು ಬರುವುದಾದರೂ ಸೃಜನಶೀಲತೆಯ ದೃಷ್ಟಿಯಿಂದ ಆ ಸಂದರ್ಭದಲ್ಲಿ (೧೯೭೦-೮೦ರಲ್ಲಿ) ಇದು ಗಮನಾರ್ಹ ಮತ್ತು ಪ್ರಯೋಗಾತ್ಮಕ ದೃಷ್ಟಿಕೋನದ ವಿನ್ಯಾಸ ವಿಶಿಷ್ಟತೆ ಎಂದು ಅಭಿಪ್ರಾಯಪಡಬಹುದು.'[೧೩] ಮುಖಪುಟ ವಿನ್ಯಾಸದಂತಹ ಕಾರ್ಯದಲ್ಲಿ ಕಲಾವಿದ ಕೃತಿಕಾರನ ಮತ್ತು ಓದುಗರ ಮರ್ಜಿಯನ್ನು ಅನುಸರಿಸಿ, ಚಿತ್ರಿಸಬೇಕಾದ ಅನಿವಾರ್ಯತೆ ಇದ್ದಾಗ್ಯೂ ಸೃಜನಶೀಲತೆಯನ್ನು ಮುನ್ನೆಲೆಗೆ ತರುವಲ್ಲಿ ಇಲ್ಲಿನ ವಿನ್ಯಾಸಗಾರರು ಗಂಭೀರವಾದ/ಪ್ರಾಮಾಣಿಕವಾದ ಪ್ರಯತ್ನವನ್ನು ನಡೆಸಿರುವರೆಂದು ತೀರ್ಮಾನಿಸಬಹುದು.

**೫.೩.೧೪. ಬಣ್ಣದ ಪ್ರಪಂಚ (೧೯೭೬)**

'ಬಣ್ಣದ ಪ್ರಪಂಚ' ನಾಟಕ ಕೆ.ಮಾಧು ಎನ್ನುವವರಿಂದ ರಚಿತವಾಗಿದ್ದು, ಶ್ರೀರಾಮ ಪ್ರಿಂಟರ್ಸ್ ರವರಿಂದ ಮುದ್ರಣಗೊಂಡಿದೆ. ಆ ಸಂದರ್ಭದ ನಾಟಕ ಸ್ಪರ್ಧೆಯಲ್ಲಿ ಬಹುಮಾನಗಳಿಸಿದ ಈ ಕೃತಿಯ ಮುಖಪುಟ ವಿನ್ಯಾಸದ ದೃಷ್ಟಿಯಿಂದ ಸಾಧಾರಣ ಮಟ್ಟದ್ದೆಂದೇ ಹೇಳಬಹುದು ಚಿಂತಾಮಗ್ನಳಾದ, ತುಟಿಗೆ ಎಡಗೈ ಬೆರಳು ತಾಗಿಸಿಟ್ಟಿರುವ ಸ್ತ್ರೀಯೋರ್ವಳ ಭಾವಚಿತ್ರ ಮುಖಪುಟದ ಶೇ. ೯೫ ಭಾಗವನ್ನು ಆಕ್ರಮಿಸಿಕೊಂಡಿದ್ದು ನೀಲಿಶಾಯಿಯಿಂದ ಸೃಷ್ಟಿಗೊಂಡಿರುವ ರೇಖಾಚಿತ್ರ. ಈ ಸ್ತ್ರೀ ಮುಖದ ಹಿಂಗಡೆಯ ಅವಕಾಶದಲ್ಲಿ ಎಡಬಲ ಪಾರ್ಶ್ವಗಳಲ್ಲಿ ಅಲ್ಲಲ್ಲಿ ಆಕೆಯ ತಲೆಗೂದಲು ಅಲೆ-ಅಲೆಯೋಪಾದಿಯಲ್ಲಿ ತೇಲಾಡಿದೆ. ಉಳಿದ ಭಾಗದಲ್ಲಿ ತೀರಾಕಣ್ಣುಕುಕ್ಕದ, ತೀರಾ ಮಂದವೂ ಅಲ್ಲದ ಮಧ್ಯಮಗತಿಯ ಹದದಲ್ಲಿ ನೀಲಿ ಬಣ್ಣ ಲೇಪಿಸಲ್ಪಟ್ಟಿದೆ. ನೈಜ ಶೈಲಿಯಲ್ಲಿ ನಿರೂಪಿಸಲ್ಪಟ್ಟಿರುವ ಹೆಣ್ಣಿನ ಭಾವಚಿತ್ರದಲ್ಲಿ ರೇಖಿಸಲ್ಪಟ್ಟ ಕಣ್ಣುಗಳ ನೋಟ ಬಹಳ ವ್ಯಾಕುಲತೆಯನ್ನು ತುಂಬಿಕೊಂಡಿರುವುದು ನೋಡುಗನ ಗಮನಕ್ಕೆ ತತ್‌ಕ್ಷಣದಲ್ಲಿಯೇ ಬರುವ ಹಾಗೆ ಅಷ್ಟು ಸಮರ್ಥವಾಗಿ ಅಭಿವ್ಯಕ್ತಗೊಂಡಿದೆ.

---

೧೩. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ. ದಿ:೨೦೧೬

ಹೀಗೆ ಇಲ್ಲಿನ ರೇಖಾಚಿತ್ರದ ಕಲಾಶೈಲಿ ಸ್ಪಷ್ಟವಾಗಿ ನೈಜತೆಯಿಂದ ಕೂಡಿದ್ದು ಕಲಾವಿದರು ಸಿದ್ಧಿಸಿಕೊಂಡಿರುವ ಭಾವಚಿತ್ರ ನಿರೂಪಣೆಯ ಸಾಮರ್ಥ್ಯವನ್ನು ಸಾಕ್ಷೀಕರಿಸುತ್ತದಾದರೂ, ಒಟ್ಟಾರೆ ಸಂಯೋಜನಾ ಸೃಜನಶೀಲತೆಯ ಕೊರತೆ ಇಲ್ಲಿ ಎದ್ದು ಕಾಣುತ್ತದೆ, ಆಗಿನ ಸಂದರ್ಭದಲ್ಲೂ (೧೯೭೦ರ ದಶಕದಲ್ಲಿ) ರಂಗ ಭೂಮಿಯ ಪ್ರಚಾರ ಫಲಕ/ಭಿತ್ತಿ ಪತ್ರಗಳಲ್ಲಿ ಅಚ್ಚಾಗುತ್ತಿದ್ದ ಚಿತ್ರ ಮಾದರಿಯನ್ನು ನೆನಪಿಸುವಂತಹ ಮುಖಪುಟ ವಿನ್ಯಾಸವಿದು, ಈ ಮುಖಪುಟದ ತಳಭಾಗದಲ್ಲಿ ಸರಿಸುಮಾರು ಶೇ. ೫ ರಷ್ಟು ಭಾಗದ ಅವಕಾಶದಲ್ಲಿ ಕೇಸರಿ ಬಣ್ಣದ ಹಿನ್ನೆಲೆಯಲ್ಲಿ ಒಂದೇ ರೀತಿಯ ವಿನ್ಯಾಸದಲ್ಲಿ ಕೃತಿ ಶೀರ್ಷಿಕೆಯ ಎಲ್ಲ ಅಕ್ಷರಗಳೂ ಬಿಳಿ ಬಣ್ಣದಲ್ಲಿ ರಚನೆಯಾಗಿವೆ.

**೫.೩.೧೫. ಸ್ವತಂತ್ರವ್ವ-೩೦ (೧೯೭೭)**

'ಸ್ವತಂತ್ರವ ೩೦' ಎಂಬ ನಾಟಕವನ್ನು ರಚಿಸಿದವರು ಬಸವರಾಜ ಕಟ್ಟೀಮನಿ ಎಂಬ ಸಾಹಿತಿಗಳು, ಶಾರದಾ ಮುದ್ರಣಾಲಯದಿಂದ ಪ್ರಕಟಗೊಂಡಿದುದಾಗಿದೆ ಈ ಕೃತಿಯ ಮುಖಪುಟ ರೂಪಿಸಿದ ಕಲಾವಿದರೂ ಸಹ ಅನಾಮಧೇಯರಾಗಿಯೇ ಉಳಿದಿದ್ದಾರೆ. ಈ ಕೃತಿಯ ಮುಖಪುಟ ವಿನ್ಯಾಸ ಹೀಗಿದೆ: – ಮುಖಪುಟದ ಅಗ್ರ ಭಾಗದಲ್ಲಿ (ಪಿಂಕ್) ಗುಲಾಬಿ ಬಣ್ಣದ ಆವರಣದಲ್ಲಿ ಸ್ವತಂತ್ರ ಕೈ ಬರಹ ಎಂದು ಉಲ್ಲೇಖಿಸಬಹುದಾದ ಮಾದರಿಯಲ್ಲಿ ಈ ಕೃತಿಯ ಶೀರ್ಷಿಕಾ ಅಕ್ಷರಗಳು ಬರೆಯಲ್ಪಟ್ಟಿವೆ ಪ್ರತಿ ಅಕ್ಷರದ ಮೇಲ್ಗಡೆ ಬೆಂಕಿಯ ಜ್ವಾಲೆಯನ್ನು ನಿರೂಪಿಸಲಾಗಿದೆ. ಈ ಶೀರ್ಷಿಕೆಯ ಕೆಳಗಡೆ ಪುಢಾರಿಯೊಬ್ಬ ಪಾನಗೋಷ್ಠಿಯಲ್ಲಿ ಮಾನನಿಯೊಬ್ಬಳ ಸೊಂಟವನ್ನು ಬಾಚಿ ತಬ್ಬಿರುವ ದೃಶ್ಯವಿದೆ. ಪುಢಾರಿಯ ಕೈನಲ್ಲಿ ಬಂಧಿಯಾಗಿರುವ ಆಕೆ ಪುಢಾರಿಯ ಕಡೆ ನೋಡುತ್ತಿದ್ದು ಆಕೆ ಸೊಂಟದ ತುಸು ಕೆಳಗೆ ಸೀರೆ ಧರಿಸಿದ್ದು ಅರ್ಧತೋಳಿನ ಬ್ಲೌಸ್ ತೊಟ್ಟ ದೇಹದಲ್ಲಿ ಲಾವಣ್ಯ ನಲಿದಾಡುತ್ತಿದೆ. ನೋಟದಲ್ಲಿ ಮಾದಕತೆ ವ್ಯಕ್ತಗೊಂಡಿದೆ ಒಟ್ಟಾರೆಯಾಗಿ ದೇಹ ಭಾಷೆಯಲ್ಲಿ ಕಾಮೋತ್ತೇಜಕತೆ ಹರಳುಗಟ್ಟಿದೆ.ಪುಢಾರಿ ಸ್ಥೂಲಕಾಯನಾಗಿದ್ದು. ತಲೆಯಲ್ಲಿ ಗಾಂಧಿ ಟೊಪ್ಪಿಗೆ ಧರಿಸಿದ್ದು, ಮುಖದಲ್ಲಿ ಅಟ್ಟಹಾಸವಿದೆ ಮಾನನಿಯ ಸಂಗಲೋಲುಪತೆಯಲ್ಲಿ ತಲ್ಲೀನಯುಕ್ತಭಾವ ಮುಖದಲ್ಲಿ ಕೇಂದ್ರೀಕೃತವಾಗಿದೆ. ಇದು ರೇಖಾಚಿತ್ರ, ಇಲ್ಲಿ ಕಲಾವಿದ ಮಾನನಿಯನ್ನು ನೈಜ ಶೈಲಿಯಲ್ಲಿ ನಿರೂಪಿಸಿದ್ದರೆ, ಪುಢಾರಿಯನ್ನು ವ್ಯಂಗ್ಯ ಚಿತ್ರ ಮಾದರಿಯಲ್ಲಿ ಚಿತ್ರಿಸಿದ್ದಾನೆ. ಕೃತಿಯ ಸಾರ ಸ್ಪಷ್ಟೀಕರಣ ಉದ್ದೇಶದಿಂದ ಈ ರೀತಿಯ ಚಿತ್ರ ವಿನ್ಯಾಸವನ್ನು ಒಪ್ಪಿಕೊಳ್ಳಬಹುದಾದರೂ, ಕಲಾಲೋಕದ ಅಲಿಖಿತ ನಿಯಮಾನುಸಾರ ಲಾಗಾಯ್ತಿನಿಂದ ಚಲಾವಣೆಯಲ್ಲಿರುವ ಕಲಾ ಮೌಲ್ಯಗಳನ್ನು ಗಣಿಸಿದರೆ (ಗಮನಿಸಿದರೆ) ಇದು ಸ್ವಂತ ಶೈಲಿಯ ಕೊರತೆಯಿಂದ ನಲುಗುವ ಮುಖಪುಟ ವಿನ್ಯಾಸವಾಗಿ ಕಂಡು ಬರುತ್ತದೆ. ಅಂತೆಯೆ ಈ ನಾಟಕ ಕೃತಿಯ ಸಾರಾಂಶವನ್ನು ಜನಸಾಮಾನ್ಯರ ಸ್ವರದಲ್ಲಿ ಅರ್ಥೈಸುವಲ್ಲಿ ಈ ಮುಖಪುಟವಿನ್ಯಾಸ ಬಲುಮಟ್ಟಿಗೆ ಯಶಸ್ಸು ಸಾಧಿಸಿರಬಹುದೆಂದು ಊಹಿಸಬಹುದಷ್ಟೆ.

**೫.೩.೧೬. ರಣಧೀರ (೧೯೭೮)**

೧೯೭೮ರಲ್ಲಿ ಪ್ರಕಟಣೆಗೊಂಡಿರುವ 'ರಣಧೀರ' ಕೃತಿಯ ಒಟ್ಟಾರೆ ಮುಖಪುಟದ ಸರಿಸುಮಾರು

ಶೇ. ೧೦ರಷ್ಟು ಭಾಗದಲ್ಲಿ ಆಯತಾಕಾರದ ಆವರಣದಲ್ಲಿ ಚಿತ್ರ ಹೊಂದಿದ್ದು ಉಳಿದಂತೆ ತಿಳಿಹಸಿರು ಬಣ್ಣದ ಹಿನ್ನೆಲೆಯಿದೆ. ಚಿತ್ರಕ್ಕಿಂತಲೂ ನಾಟಕ ಎಂಬ ಅಕ್ಷರಗಳೇ ದಟ್ಟಬಿಳಿ ಬಣ್ಣದಲ್ಲಿ ಸರಳಗೈ ಶೈಲೀಕೃತವಾಗಿ ಬರೆಯಲ್ಪಟ್ಟಿರುವುದರಿಂದ ಚಿತ್ರಕ್ಕಿಂತಲೂ ಆ ಅಕ್ಷರಗಳೇ ಎದ್ದು ಕಾಣುವಂತಾಗಿರುವುದು ಇಲ್ಲಿನ ವಿಶೇಷ. ಇಲ್ಲಿ ಮುಖಪುಟಕ್ಕೆ ಸಂಬಂಧಿಸಿದಂತೆ ಕಪ್ಪು ಬಿಳುಪು ಮಾಧ್ಯಮದಲ್ಲಿ ಗಿಡುಗನ ರೇಖಾಚಿತ್ರವಿದೆ. ಗಿಡುಗ ಬೇಟೆಗಾಗಿ  ದಾಳಿಯ ಭಂಗಿಯಲ್ಲಿದೆ. ಉಳಿದಂತೆ ಗಿಡುಗನ ಸುತ್ತಲಿನ ಆವರಣ ಖಾಲಿಯಿದೆ. ರಚಿಸಲ್ಪಟ್ಟಿರುವ ಗಿಡುಗ ಪಕ್ಷಿ ಶುದ್ಧ ನೈಜಶೈಲಿಯಲ್ಲಿದೆ, ಅಷ್ಟೇ ಭಾವಪೂರ್ಣವೂ ಅಗಿ ಚಿತ್ರಿತವಾಗಿದೆ. ಗಿಡುಗ ಪಕ್ಷಿಯ ಒಟ್ಟಾರೆ ಚಿತ್ರವನ್ನು ಅವಲೋಕಿಸಿದರೆ ಈ ಕೃತಿಯ ಮುಖಪುಟ ವಿನ್ಯಾಸಗೊಳಿಸಿದ ಕಲಾವಿದರು ಪಕ್ಷಿಗಳ ನೈಜಶೈಲಿಯ ಚಿತ್ರಗಾರಿಕೆಯಲ್ಲಿ ಸಿದ್ಧಹಸ್ತರು ಎನ್ನುವುದು ಸ್ಪಷ್ಟಗೊಳ್ಳುತ್ತದೆ, ಆದರೆ ಮುಖಪುಟ ವಿನ್ಯಾಸದಲ್ಲಿ ಯಾವುದಕ್ಕೆ ಎಷ್ಟು ಮಹತ್ವ ಕೊಡಬೇಕೆಂಬ ಅರಿವಿನ ಕೊರತೆ ಇಲ್ಲಿ ಎದ್ದುಕಾಣುವ ಅಂಶ. ಅಂತೆಯೇ ಈ ಕಲಾವಿದರಿಗೆ ಸಂಯೋಜನೆಯೊಂದರಲ್ಲಿ 'ತನ್ನ ಕಲಾವಿದತನ' ತೋರ್ಪಡಿಸುವಿಕೆಯತ್ತಲೂ ಗಮನ ಹರಿದಿಲ್ಲ ಎನ್ನಬಹುದು. ಹೇಗೆಂದರೆ ಪಕ್ಷಿಯ ಚಿತ್ರ ನೈಜ ಶೈಲಿಯಲ್ಲಿದೆ, ಕೃತಿಯ ಶೀರ್ಷಿಕೆ 'ರಣಧೀರ' ಎಂಬ ಪದ ಒಂದು ರೀತಿಯಲ್ಲಿ ಕನ್ನಡ ಅಕ್ಷರ ಬರಹದ ಶಾಸ್ತ್ರೀಯ ಮಾದರಿಯಲ್ಲಿದೆ. (ಬೇರೆ ಶೈಲಿಯಲ್ಲಿದೆ).

ಕೃತಿಯ ಪ್ರಕಾರದ ಹೆಸರು ಜಾನಪದೀಯ ಸರಳಗೈ (Free Hand Writing) ಶೈಲಿಯಲ್ಲಿ ಮತ್ತು ಲೇಖಕರ ಹೆಸರೂ ಸಹ ಪುಟ್ಟದಾದ ಕಪ್ಪು ಅಕ್ಷರಗಳಲ್ಲಿ ಜಾನಪದೀಯ ಸರಳಗೈ (Free Hand Writing) ಶೈಲಿಯಲ್ಲಿದೆ. ಒಂದೇ ಮುಖಪುಟ ವಿನ್ಯಾಸದಲ್ಲೇ ಕಲಾ ಶೈಲಿಯಲ್ಲಿ ವ್ಯತ್ಯಸ್ತಗೊಂಡಿರುವುದರಿಂದ ಒಬ್ಬ ಕಲಾವಿದರಿಂದಲೇ ಈ ಮುಖಪುಟ ರೂಪಿಸಲ್ಪಟ್ಟಿದೆಯೋ ಅಥವಾ ಇನ್ನೂ ಅನೇಕ ಕಲಾವಿದರ ಕೈಚಳಕ ಇಲ್ಲಿ ಕೆಲಸ ಮಾಡಿದೆಯೋ ಎಂಬ ಅನುಮಾನ ಮಾಡುವಂತಾಗಿದೆ. ಅಲ್ಲದೆ, 'ಕೃತಿಯೊಂದರ ಮುಖಪುಟದಲ್ಲಿ ಕೃತಿಯ  ಸಾರರೂಪದ ಚಿತ್ರ ಪ್ರಧಾನ ಲಕ್ಷ್ಯಕ್ಕೆ ಬರುವಂತೆ, ಎದ್ದುಕಾಣುವಂತೆ ರೂಪಿಸಬೇಕಾದುದು ನುರಿತ ಕಲಾವಿದನ (ಮುಖಪುಟ ವಿನ್ಯಾಸಕಾರನ) ಗುರಿಯಾಗಿರುತ್ತದೆ ಅಲ್ಲದೆ, ಕೃತಿಯ ಲೇಖಕರ/ಮುದ್ರಕರ ಆಶಯವೂ ಬಹುಮಟ್ಟಿಗೆ ಅದೇ ಆಗಿರುತ್ತದೆ.'[೧೪] ಆದರೆ ಇಲ್ಲಿ ಆ ಒಂದು ಕನಿಷ್ಠ ಅಂಶವೂ ಸಹ ಈಡೇರಿಲ್ಲ ಎನ್ನಬಹುದು. ಒಟ್ಟಿನಲ್ಲಿ ಅಭಿಪ್ರಾಯಪಡುವುದಾದರೆ ಇದೊಂದು ಅಪಕ್ವ ಮುಖಪುಟ ಚಿತ್ರ ವಿನ್ಯಾಸಗಾರಿಕೆ ಎನ್ನಬಹುದು. ಈ ಕೃತಿಯ ಮುಖಪುಟ ರೂಪಿಸಿದ ಚಿತ್ರಕಾರರ ಹೆಸರು ನಮೂದಿಸಲ್ಪಟ್ಟಿಲ್ಲ, ಇದರ ಲೇಖಕರು ರಾ. ಗೋಪಾಲಕೃಷ್ಣ, ಮುದ್ರಕರು ಮಹಾದೇಶ್ವರಸ್ವಾಮಿ ಪ್ರಿಂಟರ್ಸ್.

**೫.೩.೧೭. ಒಂದು ಲೋಕ ಕಥೆ (೧೯೭೮)**

೧೯೭೮ ನೆಯ ಇಸ್ವಿಯಲ್ಲಿ ರಚಿತವಾದ ನಾಟಕ 'ಒಂದು ಲೋಕ ಕಥೆ' ಎಂಬುದು ಇದನ್ನು ರಚಿಸಿದವರು ಪ್ರಸನ್ನ ಎಂಬುವರು. ಇದು ಮುದ್ರಣ ಕಂಡಿದ್ದು ಸಾಗರದ ಅಕ್ಷರ ಪ್ರಕಾಶನದಿಂದ. ಇದರ ಮುಖಪುಟವನ್ನು ವಿನ್ಯಾಸಗೊಳಿಸಿದ ಕಲಾವಿದರೂ ಕೂಡ ನೇಪಥ್ಯದಲ್ಲೇ ಉಳಿದಿದ್ದಾರೆ. ಇಲ್ಲಿ ಎದ್ದು

೧೪. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩-೧೪

ಕಾಣುವ ಮುಖ್ಯ ಅಂಶಗಳೆಂದರೆ ಮುಖಪುಟದ ಮಧ್ಯದಲ್ಲಿ ಅಡ್ಡಲಾಗಿ ಫ್ರೀ ಹ್ಯಾಂಡ್ ಶೈಲಿಯಲ್ಲಿ (ಸರಳಗೈ ಅಕ್ಷರ ಬರಹ) ನೀಲಿ ವರ್ಣದಲ್ಲಿ ಒಂದು ಮಧ್ಯಮ ಗಾತ್ರದಲ್ಲಿ ತೀರ ಚಿಕ್ಕದೂ ಅಲ್ಲ, ತೀರ ದೊಡ್ಡದೂ ಅಲ್ಲ ರೂಪಿಸಿದ ಶೀರ್ಷಿಕಾ ಅಕ್ಷರಗಳು ಮತ್ತು ಅದರ ಎಡ-ಬಲ ಪಕ್ಕಗಳಲ್ಲಿ ಜಾನಪದೀಯ ಶೈಲಿಯಲ್ಲಿ ಹಾವಿನ ಗತಿಶೀಲತೆಯಂತೆಯೇ ಬಳುಕಿ ಸಾಗರ ದಪ್ಪನಾದ ತೆಳುಕಂದು ಬಣ್ಣದ ರೇಖೆ ಮತ್ತು ಆ ರೇಖೆಯ ಗುಂಟ ಡ್ರೈ ಬ್ರಶ್ ಬಳಸಿ ಬಣ್ಣಗಳನ್ನು ಸ್ಪ್ರೇ ಮಾಡಿ ಸೃಷ್ಟಿಸಿದ ಮೈವಳಿಕೆಗಳು. ಅಲ್ಲದೇ ಎರಡೂ ಕಡೆ ಸಾಗಿರುವ ಆ ರೇಖೆಯ ಮುಗ್ಗುಲಿನಲ್ಲಿ ದಪ್ಪನಾಗಿರುವ ಬಿಂದು ಸಾಲುಗಳು ರೂಪಿಸಲ್ಪಟ್ಟಿದ್ದು ಮತ್ತೇ ಆ ಎರಡು ಕಡೆಗಳಲ್ಲಿ ಇರುವ ಆ ಸಾಲುಗಳ ಪಕ್ಕದಲ್ಲಿ ಒತ್ತೊತ್ತಾಗಿ ಸೃಷ್ಟಿಗೊಂಡಿರುವ ಡ್ರೈ ಬ್ರಶ್ ಸ್ಪ್ರೇಯಿಂದ ರೂಪಿಸಿದ ಬಣ್ಣದ ಸಾಲುಗಳು (ಇವು ಒತ್ತೊತ್ತಾಗಿ ನಿರ್ಮಿತವಾಗಿರುವುದರಿಂದ ದಪ್ಪನಾದ ರೇಖೆಯ ಪರಿಣಾಮ ಉಂಟುಮಾಡಿವೆ) ಮಧ್ಯದಲ್ಲಿ ಅಡ್ಡವಾಗಿ ರೂಪಿಸಿರುವ ಕೃತಿ ಶೀರ್ಷಿಕೆ ಥಟ್ಟನೆ ಓದುಗನ ಗಮನಸೆಳೆಯುತ್ತದೆ ಅಕ್ಕ-ಪಕ್ಕಗಳಲ್ಲಿ ಮೂಡಿರುವ ಈ ಮೇಲೆ ಉಲ್ಲೇಖಿಸಿದ ವಿನ್ಯಾಸಗಳು ತುಸು ಮಂದ ವರ್ಣದಲ್ಲಿ ರೂಪಿತವಾಗಿರುವುದರಿಂದ ಶೀರ್ಷಿಕೆಯೇ ಈ ಮುಖಪುಟದ ಪ್ರಧಾನ ಸ್ಥಾನಗಳಿಸಿದೆ. ಇವಿಷ್ಟನ್ನು ಹೊರತುಪಡಿಸಿದರೆ. ಅಲ್ಲಿ ಯಾವುದೇ ರೀತಿಯ ಜೈವಿಕ ಆಕಾರಗಳಾಗಲ್ಲಿ ಕುಸುರಿ ವಿನ್ಯಾಸಗಳಾಗಲಿ ರಚನೆಗೊಂಡಿರದೆ ಒಟ್ಟಾರೆಯಾಗಿ ಹೇಳುವುದಾದರೆ ಇದೊಂದು ತೀರಾ ಸರಳ ರೀತಿಯಲ್ಲಿ ರೂಪಿತವಾದ ಮುಖಪುಟ.

**೫.೩.೧೮. ತಿರುಕನ ಕನಸು (೧೯೭೯)**

೧೯೭೦-೮೦ರ ದಶಕದಲ್ಲಿನ ಕಪ್ಪು ಬಿಳಿ ಸಿನಿಮಾ ಪೋಸ್ಟರ್‌ಗಳನ್ನು ನೆನಪಿಸುವ ಮುಖಪುಟ ವಿನ್ಯಾಸ 'ತಿರುಕನ ಕನಸು' ಎಂಬ ಏಕಾಂಕ ನಾಟಕದ್ದು, ತುಂಬಾ ಮಂದ ಗುಲಾಬಿ ವರ್ಣದ ಹಿನ್ನೆಲೆಯಲ್ಲಿ, ನೋಟಕನ ಕಣ್ಣಿಗೆ ತತ್‌ಕ್ಷಣದಲ್ಲಿ ಎದ್ದು ಕಾಣುವಂತೆ ಗಾಂಧಿ ಟೋಪಿಧಾರಿಯ ರಾಜಕೀಯ ವ್ಯಕ್ತಿಯನ್ನು ಹೋಲುವ ವ್ಯಕ್ತಿಯೊಬ್ಬನ ಕಪ್ಪು ಬಿಳಿಪಿನ ರೇಖಾ ಭಾವಚಿತ್ರವು (ಆತ ತುಸು ಓರೆನೋಟದಲ್ಲಿದ್ದಾನೆ,ಗಲ್ಲಕ್ಕೆ ಕೈಕೊಟ್ಟಿದ್ದಾನೆ) ಮುನ್ನೆಲೆಯಲ್ಲಿ ಮುಖಪುಟದ ಶೇ ೫೦ರಷ್ಟು ಭಾಗದಲ್ಲಿ ರಚಿತವಾಗಿದೆ. ಹಿನ್ನೆಲೆಯಲ್ಲಿ ಪುರುಷ-ಸ್ತ್ರೀಯರ ಬೇರೆ ಬೇರೆ ಭಾವಭಂಗಿಗಳ ಕಿರುರೇಖಾಚಿತ್ರಗಳು ಚಿಕ್ಕದಾಗಿ ಮುನ್ನೆಲೆಯ ವ್ಯಕ್ತಿಯ ಭಾವ ರೇಖಾಚಿತ್ರದ ಸುತ್ತೆಲ್ಲ ಇರುವ ಅವಕಾಶಗಳಲ್ಲಿ ರಚಿತವಾಗಿವೆ ಮುನ್ನೆಲೆಯಲ್ಲಿ ಚಿತ್ರಿಸಿರುವ ರಾಜಕಾರಣಿಯನ್ನು ಹೋಲುವ ರೇಖಾಬಾವಚಿತ್ರವು ಕಪ್ಪು-ಬಿಳಿ ಛಾಯಾಕರಣವನ್ನು ಕಲಾ ಶಾಸ್ತ್ರೀಯ ಪದ್ಧತಿಗನುಗುಣವಾಗಿ ಹೊಂದಿದ್ದು, ಹಿನ್ನೆಲೆಯಲ್ಲಿ ಸರಳ ರೇಖಾಚಿತ್ರದ ರೀತಿಯಲ್ಲಿ ಚಿತ್ರಿತವಾಗಿರುವ ಮಾನವರ (ಸ್ತ್ರೀ-ಪುರುಷ) ಬೇರೆ ಬೇರೆ ಭಂಗಿಗಳೂ/ಸನ್ನಿವೇಶಗಳೂ ನೈಜಶೈಲಿಯಲ್ಲೆ ಇವೆ. ಚಿತ್ರಿಸಿದ ಚಿತ್ರಗಳೆಲ್ಲ ಮುಖಭಾವಾಭಿವ್ಯಕ್ತಿ, ದೇಹದ ಚಲನಶೀಲತೆ ನಿರೂಪಣೆ, ವಿವಿಧ ಸನ್ನಿವೇಶಗಳಲ್ಲಿ ವ್ಯಕ್ತಗೊಳ್ಳುವ ದೇಹಭಾವ ವೈವಿಧ್ಯತೆ, ಅಂಗಾಂಗಗಳ ಚಿತ್ರಣದಲ್ಲಿ ಪ್ರಮಾಣ ಬದ್ಧತೆ ಮತ್ತು ಒಟ್ಟಾರೆ ದೇಹ ಭಂಗಿಗಳಲ್ಲಿ ಸಂತುಲನತೆ ಎಲ್ಲ ಲಕ್ಷಣಗಳೂ ಇಲ್ಲಿ ಉತ್ತಮ ರೀತಿಯಲ್ಲಿ ಚಿತ್ರಿತವಾಗಿವೆ.

'ಈ ಮುಖಪುಟ ವಿನ್ಯಾಸಕಾರರು ನುರಿತ ಶಾಸ್ತ್ರೀಯ ಶೈಲಿಯ ಚಿತ್ರಕಾರರಾಗಿರುವುದಲ್ಲದೆ,

ಮಾನವ ರೇಖಾಚಿತ್ರಗಾರಿಕೆಯಲ್ಲೂ ಸಹ ಉತ್ತಮ ಪ್ರೌಢಿಮೆ ಹೊಂದಿರುವವರೆಂಬುದು ಇಲ್ಲಿನ ಚಿತ್ರಗಳಿಂದ ಸ್ಪಷ್ಟಗೊಳ್ಳುತ್ತದೆ.'[೧೫] ಮುಖಪುಟದ ಮೇಲ್ಭಾಗದಲ್ಲೂ ಮುಖಪುಟದ ಚಿತ್ರಗಳಿಗೆ ಧಕ್ಕೆ ಬರದ ರೀತಿಯಲ್ಲಿ ಮತ್ತು ನೋಡುಗನ ಕಣ್ಣಿಗೂ ಗಮನಕ್ಕೆ ಬರುವ ತರದಲ್ಲಿ ಕಪ್ಪು ಬಣ್ಣದಲ್ಲಿ ಸರಳಗ್ಯೆ ಮಾದರಿಯಲ್ಲಿ (free hand writing) ಕೃತಿ ಶೀರ್ಷಿಕೆ ಬರೆಯಲಾಗಿದೆ, ತಳಭಾಗದಲ್ಲೂ ಕಪ್ಪು ಬಣ್ಣದ ದುಂಡಗಿನ ಪುಟ್ಟ ಅಕ್ಷರಗಳಲ್ಲಿ ಲೇಖಕರ ಹೆಸರು ಬರೆಯಲಾಗಿದೆ. ಇಲ್ಲಿನ ವಿನ್ಯಾಸದಲ್ಲಿ ಯಾವ ಹೊಸತನವೂ ಇಲ್ಲ. ಕೃತಿಯ ಸಾರಾಂಶವನ್ನು ನೈಜ ಶೈಲಿಯ ಚಿತ್ರಗಳ ಮೂಲಕ ರೂಪಕದ ಮಾದರಿಯಲ್ಲಿ ಸ್ಪಷ್ಟೀಕರಿಸುವ ನಿರೂಪಿಸುವ ಪ್ರಯತ್ನವಿದೆ. ಇದರ ಲೇಖಕರು ಪ್ರೊ. ಎಂ.ಎನ್. ಭಾವಿಮಠ, ಮುದ್ರಿಸಿದವರು ವಿನಾಯಕ ಪ್ರಿಂಟಿಂಗ್ ಪ್ರೆಸ್‌ನವರು

### ೫.೩.೧೯. ಚಾರ್ವಾಕ (೧೯೭೯)

'ಚಾರ್ವಾಕ'ದ ಮುಖಪುಟಚಿತ್ರ ನವ್ಯೋತ್ತರ ಶೈಲಿಯದ್ದು, ಆಕಾರಗಳನ್ನು ವಿರೂಪಗೊಳಿಸಿ, ಸಾಂಕೇತಿಕ ಅರ್ಥಗಳನ್ನು ಧ್ವನಿಸುವ ವಿಚಿತ್ರ ಪ್ರತೀಕಗಳಾಗಿ ಅಭಿವ್ಯಕ್ತಗೊಂಡಿರುವುದು, ತಿಳಿ ಬೂದು ಬಣ್ಣದ ಹಿನ್ನೆಲೆಯಲ್ಲಿ ಕಪ್ಪು ಮತ್ತು ಕೆಂಪು ಬಣ್ಣವನ್ನು ಬಳಸಿಕೊಂಡು ನಿರೂಪಿಸಿದ ಆಕಾರಗಳಿವು, ಇಲ್ಲಿ 'ಕ್ಯೂಬಿಸಂ ಶೈಲಿ, ಸರಿಯಲಿಸಂ ದೃಷ್ಟಿಕೋನ, ಎಕ್ಸ್‌ಪ್ರೆಶನಿಸಂ ಪ್ರಭಾವ'[೧೬] ಹೀಗೆ ಅನೇಕ ಬಗೆಯ ನವ್ಯ ಪಂಥಗಳ ಪ್ರಭಾವವೇ ಸಮ್ಮಿಲನಗೊಂಡಿದೆ. ಅಮೂರ್ತ ಆಕಾರಗಳಲ್ಲಿ ಚಾರ್ವಾಕ ಸ್ವರೂಪವನ್ನು ತಿಳಿಸುವ ಪ್ರಯತ್ನವಿದೆ. ೧೯೭೯ರಲ್ಲಿ ಸತ್ಯನಾರಾಯಣರಾವ್ ಅಣತಿ ಎಂಬುವರಿಂದ ಬರೆಯಲ್ಪಟ್ಟು ವಿ.ಆರ್. ಪದ್ಮನಾಭನ್ ಎನ್ನುವವರಿಂದ ವಿನ್ಯಾಸಗೊಳಿಸಲ್ಪಟ್ಟ ಈ ಕೃತಿಯ ಮುಖಪುಟದ ಒಟ್ಟಾರೆ ಚಿತ್ರ ಲಕ್ಷಣ ತತ್‌ಕಾಲೀನ ಸಂದರ್ಭದಲ್ಲಿ ಅತಿವಿಶಿಷ್ಟವೂ, ಚಾರ್ವಾಕ ಪಂಥದಂತೆಯೇ ಕ್ಲಿಷ್ಟ ರಸಾಸ್ವಾದ್ಯವೂ ಆಗಿ ಮೂಡಿ ಬಂದಿದೆ. ಮೇಲ್ಗಡೆ ಮುಖಪುಟದ ಬಲ ಮೂಲೆಯಲ್ಲಿ ಕೃತಿ ಶೀರ್ಷಿಕೆ ಕೆಂಪುಬಣ್ಣದಲ್ಲಿ ಸರಳಗ್ಯೆ (Free hand) ಬರಹದ ಮಾದರಿಯಲ್ಲಿದ್ದು ಮುಖಪುಟದ ಮಧ್ಯಭಾಗದಲ್ಲಿ ಜ್ಯಾಮಿತಿಕ ಅಂಕುಡೊಂಕುಗಳನ್ನು ಪಡೆದುಕೊಂಡು, ಎರಡು ಆಕೃತಿಗಳ ನಡುವೆ ಹಾದುಹೋದ ಕೆಂಪುಬಣ್ಣದ ಕೋಲ್ಮಿಂಚುರೇಖೆ ಮತ್ತು ಮುಖಪುಟ ತಳ ಭಾಗದಲ್ಲಿ ಚಿಕ್ಕದಾಗಿ ಸರಳಗ್ಯೆ ಮಾದರಿಯಲ್ಲಿ ಕೆಂಪುಬಣ್ಣದಲ್ಲೇ ಬರೆಯಲ್ಪಟ್ಟಿರುವ ಲೇಖಕರ ಹೆಸರು ಮುಖಪುಟದಲ್ಲಿ ಸಮತೋಲನಯುಕ್ತ ವರ್ಣನಿರೂಪಣೆಯ ಪ್ರಯತ್ನವನ್ನು ಸ್ಪಷ್ಟೀಕರಿಸುವಂತಿದೆ.

ಇಲ್ಲಿನ ಮುಖಪುಟಕ್ಕೆ ರೂಪಿಸಿರುವ ಆಕೃತಿ ವಿನ್ಯಾಸ ಕಲಾವಿದರ ಸಮಕಾಲೀನ ಕಲಾ ಪ್ರಜ್ಞೆಯನ್ನು ಅವರಲ್ಲಿ ಹುದುಗಿರುವ ಸೃಜನಶೀಲ ರೂಪಣಾ ಪ್ರತಿಭೆಯನ್ನು ಧ್ವನಿಸುತ್ತದೆ. ಚಾರ್ವಾಕ ಎಂಬ ಪದದ ಅರ್ಥ ವಿತಂಡವಾದ ಎನ್ನುವುದಾಗಿದ್ದು, ಇಲ್ಲಿ 'ಕಲಾವಿದರು ವಿನ್ಯಾಸಕಾರರು ವಿಕೃತಿಗಳಿಂದ ಮುಖಪುಟ ಸಂಯೋಜಿಸುವುದರ ಮೂಲಕ ಬಹಳ ಸಮರ್ಥವಾಗಿ ಸಾಂಕೇತಿಕವಾಗಿ ಚಾರ್ವಾಕ ದರ್ಶನವನ್ನು

---

೧೫. ಸಂದರ್ಶನ: ಕೆ. ಕೆ. ಮಕಾಳಿ (ಮುಖಪುಟ ಕಲಾವಿದರು), ಕ.ವಿ.ವಿ., ಹಂಪಿ. ದಿ:೨೦೧೫

೧೬. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ. ದಿ:೨೦೧೬

ಗಂಭೀರ ನೆಲೆಗಟ್ಟಿನ (ಪ್ರಜ್ಞೆಯ) ಓದುಗರಿಗೆ ಮಾಡಿಸಲು ಪ್ರಯತ್ನಿಸಿದ್ದಾರೆನ್ನಬಹುದು. ಶ್ರೀ ಸಾಮಾನ್ಯರಿಗೆ ಈ ರೀತಿಯ ವಿನ್ಯಾಸ ಗ್ರಹಿಕೆಗೆ ನಿಲುಕದಂತಹುದು, ನವ್ಯಕಲಾ ಸಂದರ್ಭದ ಅರಿವುಳ್ಳವರಿಗೆ, ಒಳಗಣ್ಣಿನಿಂದ ನೋಡುವ ಕುತೂಹಲಿಗಳಿಗೆ, ಪಾಶ್ಚಾತ್ಯ ನವ್ಯಕಲಾ ಪಂಥಗಳನ್ನು ಓದಿಕೊಂಡಿರುವವರಿಗೆ ಮಾತ್ರ ಅಷ್ಟಿಷ್ಟು ಗ್ರಹಿಕೆಗೆ ನಿಲುಕಬಲ್ಲುದು ಮುಖಪುಟ ವಿನ್ಯಾಸಕಾರಿಕೆಯ ಪ್ರಪಂಚದಲ್ಲಿ ಈ ಮುಖಪುಟ ವಿನ್ಯಾಸವನ್ನು ಆ ಸಂದರ್ಭದ ಮಟ್ಟಿಗೆ ನಡೆಸಿದ ಅತ್ಯಪೂರ್ವ ಮತ್ತು ಧೈರ್ಯಯುಕ್ತ ಪ್ರಯತ್ನ"[೧೭] ಎಂದು ಅಭಿಪ್ರಾಯ ಪಡಬಹುದು.

### ೫.೩.೨೦. ಸಂಪನ್ನ ಸಮಾಜ (೧೯೭೯)

'ಸಂಪನ್ನ ಸಮಾಜ' ಸರಳಗೈ ಬರಹದ (Free Hand Writing) ಮಾದರಿಯ ಶೀರ್ಷಿಕೆಯನ್ನು ಮತ್ತು ಲೇಖಕರ ಹೆಸರನ್ನು ಕಪ್ಪುಬಣ್ಣದ ಅಕ್ಷರಗಳಲ್ಲಿ ಮೇಲ್ತುದಿಯಲ್ಲಿ ಎದ್ದು ಕಾಣುವಂತೆ ಬರೆಯಲ್ಪಟ್ಟಿರುವ ಇದರ ಮುಖಪುಟ ಕೇಸರಿ ಮತ್ತು ಬೂದು ಬಣ್ಣದಿಂದ ಕೂಡಿದುದು ಮುನ್ನೆಲೆಯಲ್ಲಿ ತಲೆಗೆ ಪೇಟಾ ಸುತ್ತಿಕೊಂಡಿರುವ ದಪ್ಪ ಮೀಸೆ ಹೊಂದಿದ ಶ್ರೀಮಂತನೋರ್ವ ತುಟಿಗೆ ಕೈಬೆರಳು ತಾಗಿಸಿ, ಕೆಳಗಡೆ ಅದೆತ್ತಲೋ ಚಿಂತಾಕ್ರಾಂತನಾಗಿ ನೋಡುತ್ತಿದ್ದಾನೆ. ಆತನ ಎಡಭಾಗದ ಕಣ್ಣಿಗೆ ಮಾತ್ರ ಗಾಂಧಿ ಕನ್ನಡಕವಿದೆ, ಎದೆಯ ಮಟ್ಟದ ಈ ಚಿತ್ರದ ಹಿಂದುಗಡೆಯಲ್ಲಿ ಬಲ ಪಾರ್ಶ್ವದಲ್ಲಿ ಮಧ್ಯ ವಯಸ್ಕ ಸ್ತ್ರೀಯೋರ್ವಳು ವೀಣೆ ಹಿಡಿದು ನಿಂತಿರುವ ರೇಖಾಚಿತ್ರವಿದೆ. ಎಡ ಪಾರ್ಶ್ವದಲ್ಲಿ ವೃದ್ಧಾಪ್ಯದ ಸಮೀಪಿಸಿದ ತಲೆಯ ಕೂದಲನ್ನು ಇಳಿತುರುಬಾಗಿ ಕಟ್ಟಿಕೊಂಡಿರುವ ಸ್ತ್ರೀಯ ರೇಖಾಚಿತ್ರವಿದೆ.

ಮುನ್ನೆಲೆಯಲ್ಲಿ ರಚಿಸಲ್ಪಟ್ಟಿರುವ ಚಿಂತಾಮಗ್ನ ಶ್ರೀಮಂತನ ಕಡೆಗೆ ವೀಕ್ಷಕನ ದೃಷ್ಟಿ ಕೇಂದ್ರಿಕೃತವಾಗುವ ತರದ (ರೀತಿಯಲ್ಲಿ) ಮುಖಪುಟದಲ್ಲಿ ಸರಿಸುಮಾರು ೫೦% ರಷ್ಟು ಭಾಗದಲ್ಲಿ ಆತನ ಭಾವಚಿತ್ರ ನಿರೂಪಿಸಲ್ಪಟ್ಟಿದ್ದು ಕಣ್ಣುಗಳ ದೃಷ್ಟಿ ನಿರೂಪಣೆ, ಮುಖದಲ್ಲಿ ಮೂಡಿಸಿರುವ ಸುಕ್ಕುಗಳು, ತುಟಿಯಂಚಿನಲ್ಲಿ ಕಲಾವಿದ ವ್ಯಕ್ತಪಡಿಸಿದ ಚಿಂತಾಮಗ್ನತೆ. ವಾಲಿಕೊಂಡಿರುವ ತಲೆಭಾಗ ಮತ್ತು ಭುಜಭಾಗಗಳು-ಹೀಗೆ ಒಟ್ಟಾರೆ ಈ ಚಿತ್ರದ ದೇಹ ಭಾಷೆ ಗಂಭೀರ ವ್ಯಾಕುಲಚಿತ್ತತೆಯನ್ನು ಗರ್ಭೀಕರಿಸಿಕೊಂಡಿದ್ದು ಆತನ ಚಿಂತೆಗೆ ತೆರೆಮರೆಯಲ್ಲಿ ಕಾರಣರಾದವರು ಹಿಂದುಗಡೆಯಲ್ಲಿ ರೇಖಾಯುಕ್ತವಾಗಿ ನಿರೂಪಿತವಾಗಿರುವ ಆ ಎರಡು ಸ್ತ್ರೀಯರು ಎನ್ನುವುದನ್ನು ಕಲಾವಿದರು ತೋರ್ಪಡಿಸಲು ಪ್ರಯತ್ನಸಿದ್ದಾರೆ. ಹಿನ್ನಲೆಯಲ್ಲೂ ಸಹ ವೀಣೆ ಹಿಡಿದಿರುವ ನಡುವಯಸ್ಕ ಗೃಹಿಣಿ ತನ್ನ ಬಲಗೈ ಬೆರಳುಗಳನ್ನು ವೀಣೆಗೆ ಸ್ಪರ್ಶಿಸಿದ್ದರು ಅಗಲವಾದ ಕಣ್ಣುಗಳಲ್ಲಿ ಮಂದಸ್ಮಿತ ಒಡನಾಟದಲ್ಲಿ ಒಂದು ಅವ್ಯಕ್ತ ಚಿಂತೆ ಮಡುಗಟ್ಟಿವೆ. ಮತ್ತೊಂದು ಬದಿಯಲ್ಲಿ ರೇಖಿಸಲ್ಪಟ್ಟಿರುವ ವೃದ್ಧಾಪ್ಯ ಸಮೀಪಿಸಿದ ಸ್ತ್ರೀ ಸಹ ಬಲಗೈಯನ್ನು ತನ್ನ ಗದ್ದಕ್ಕೆ ತಾಗಿಸಿಕೊಂಡಿದ್ದು ಆ ಕೈಗೆ ಎಡಗೈ ಹಸ್ತ ಆಧಾರದಂತೆ ತಾಗಿಸಿಕೊಂಡಿದೆ. ಅವಳ ಮುಖಚರ್ಯೆಯಲ್ಲೂ ಸಹ ಚಿಂತೆಯೇ ತುಂಬಿದೆ. ಇಲ್ಲಿ ಕಲಾವಿದರು ನೈಜ ಶೈಲಿಯನ್ನು ಅನುಸರಿಸಿದ್ದು, ರಚಿಸಿದ ಮೂರೂ ಮಾನವಾಕಾರಗಳಲ್ಲು ಚಿಂತಾಕ್ರಾಂತಭಾವ ಪ್ರಧಾನ ಭಾವವಾಗಿ ಮೂಡಿಬಂದಿದೆ.

---

೧೭. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ. ದಿ:೨೦೧೬

ಈ ಆಕೃತಿಗಳ ಸಂಯೋಜನೆಯಲ್ಲಿ ಹೊಸತನವೇನೂ ಕಂಡುಬರದಿದ್ದರೂ ಶ್ರೀ ಸಾಮಾನ್ಯನಿಗೂ ಅಸಾಧ್ಯವೆನಿಸಿದ ನೈಜ ಶೈಲಿಯಲ್ಲಿ ಎಲ್ಲಾ ಆಕೃತಿಗಳ ಸಂರಚನೆ ಏರ್ಪಟ್ಟಿರುವುದರಿಂದ ಸುಲಭವಾಗಿ ಕೃತಿಯ ಆಶಯ ಅಂದರೆ ಇಲ್ಲೂ ಸಂಪನ್ನ ವೆನಿಸಿದ ಸಮಾಜದ, ಅಂತರಂಗದ ಭಾವನೆಯ ಅನಾವರಣವಾಗಿದೆ. ಮುಖಪುಟದಲ್ಲೂ ರಚಿಸಿರುವ ಎಲ್ಲಾ ಅಂಕುರೇಖೆಗಳೂ ಸರಾಗವಾಗಿ ಎಳೆಯಲ್ಪಟ್ಟಿದ್ದು ಕಲಾವಿದರ ರೇಖಾ ಕೌಶಲ್ಯವನ್ನೂ ನಿರೂಪಿಸುತ್ತವೆ. ಈ ಕೃತಿಯ ಲೇಖಕರು ಸಿ.ಕೆ. ನಾಗರಾಜರಾವ್ ಮುದ್ರಿಸಿದವರು ಅಂಜಲಿ ಮುದ್ರಣ.

**೫.೩.೨೧. ದಶಾವತಾರ (೧೯೭೯)**

'ದಶಾವತಾರ' ಎಂಬ ನಾಟಕವನ್ನು ೧೯೭೯ನೆಯ ಇಸ್ವಿಯಲ್ಲಿ ಬರೆದವರು ಬಿ.ಪುಟ್ಟಸ್ವಾಮಯ್ಯ ಎನ್ನುವ ಸಾಹಿತಿಗಳು. ಇದು ಶಾರದಾ ಪ್ರಕಾಶನ ಬೆಂಗಳೂರು ಇವರಿಂದ ಪ್ರಕಟಿತವಾಗಿದೆ. ಈ ಕೃತಿಯ ಮುಖಪುಟ ವಿನ್ಯಾಸಗೊಳಿಸಿದ ಕಲಾವಿದರು ಯಾರೆಂಬುದು ಕೃತಿಯಲ್ಲಿ ನಮೂದಾಗಿಲ್ಲ. ಈ ಕೃತಿಯ ಮುಖಪುಟ ವಿನ್ಯಾಸ ತುಂಬ ಸರಳ ಮಾದರಿಯದ್ದು. ಮಹಾವಿಷ್ಣುವಿನ ದಶಾವತಾರಗಳ ಚಿತ್ರಹೊಂದಿದ ಕ್ಯಾಲೆಂಡರ್‌ಗಳನ್ನು ನೆನಪಿಸುವ ಚಿತ್ರಗಳಿವು ಮುಖಪುಟದ ಮಧ್ಯದಲ್ಲಿ ಶಂಖ, ಚಕ್ರ, ಗದೆ, ಪದ್ಮಧಾರಿಯಾನಾದ ಮಹಾವಿಷ್ಣು ನಿಂತಿದ್ದಾನೆ. ಆತನ ತಲೆಯ ಮೇಲೆ ಸುಂದರ ಕಿರೀಟ, ಕೊರಳಲ್ಲಿ ಭವ್ಯವಾದ ಹೂವಿನ ಹಾರವಿದೆ, ಆಭರಣ ಭೂಷಿತನಾಗಿದ್ದಾನೆ. ತಲೆಯ ಹಿಂದುಗಡೆ ಆತನ ದಿವ್ಯ ತೇಜಸ್ಸನ್ನು ಪ್ರತಿನಿಧಿಸುವ ಬೃಹತ್ ಪ್ರಭಾವಳಿಯಿದೆ. ಈ ಚಿತ್ರದ ಸುತ್ತಲೂ ವಿಷ್ಣುವಿನ ದಶಾವತಾರ ರೂಪಗಳ ಕಿರುಚಿತ್ರಗಳಿವೆ ಇಲ್ಲಿ ಮೂಡಿಬಂದಿರುವುಗಳೆಲ್ಲ ರೇಖಾಚಿತ್ರಗಳು ನೈಜ ಶೈಲಿಯ ರೇಖಾಚಿತ್ರಗಳಿವು. ಕೃತಿಯ ಶೀರ್ಷಿಕೆ ಗೋಥಿಕ್ ಶೈಲಿಗೆ ಹೊಂದುವಂತಿದ್ದು ಅಕ್ಷರಗಳನ್ನು ಎಂಬೋಸಿಂಗ್ (ಉಬ್ಬು ಮಾದರಿ) ತಂತ್ರಗಾರಿಕೆ ಭ್ರಮೆ ಮೂಡುವಂತೆ ವಿನ್ಯಾಸಗೊಳಿಸಲಾಗಿದೆ.

**೫.೪. ಎಂಬತ್ತರ ದಶಕದ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

**೫.೪.೧. ಫೋಟೊ ಅವಾಂತರ (೧೯೮೦)**

ಮಲ್ಲಿಕಾರ್ಜುನ ಮುದ್ರಣಾಲಯದಿಂದ ೧೯೮೦ ರಲ್ಲಿ ಪ್ರಕಟಣೆ ಕಂಡ 'ಫೋಟೊ ಅವಾಂತರ' ಎಂಬ ನಗೆನಾಟಕದ ಮುಖಪುಟಚಿತ್ರ ಶೀರ್ಷಿಕೆಗೆ ಅನ್ವರ್ಥಕವಾದುದು. ಕೃತಿ ಶೀರ್ಷಿಕೆಯ ಮೇಲ್ಗಡೆ ಪಾರ್ಶ್ವದಲ್ಲಿ ಎರಡು ಮಾನವ ಮುಖಗಳ ಕಾರ್ಟೂನ್‌ಗಳ ರೇಖಾಚಿತ್ರಗಳ ರಚನೆಯಾಗಿದ್ದು ಅವುಗಳಲ್ಲಿ ಒಂದು ಕಾರ್ಟೂನ್ ಮುಖದಲ್ಲಿ ನಗು ಉಕ್ಕಿದರೆ, ಮಗದೊಂದರಲ್ಲಿ ದುಗುಡ/ಆತಂಕ ಆವರಿಸಿದೆ. ತಲೆಯಿಲ್ಲದೆ ಕೇವಲ ಮುಖಮಾತ್ರ ಹೊಂದಿರುವ ಇವುಗಳಲ್ಲಿ ಹಣೆ ಭಾಗದಲ್ಲಿನ ಸಣ್ಣರಂಧ್ರದಲ್ಲಿ ಲಂಬವಾಗಿ ಮತ್ತು ವಕ್ರಗತಿಯಲ್ಲಿ ಬಿಳಿಯ ಬಣ್ಣದ ರೇಖೆ ಮೇಲಕ್ಕೆ ಹರಿದಾಡಿದೆ. ಈ ಮುಖ ಕ್ಯಾರಿಕೇಚರ್‌ಗಳು ಕೃತಿ ಶೀರ್ಷಿಕೆಯ ಸುತ್ತ ರೂಪಿಸಲ್ಪಟ್ಟ ಹಸಿರು ಅಂಚಿನ ಬಿಳಿಯ ಆವರಣದ ಅಂಚಿನಲ್ಲಿ ಸಂಯೋಜಿಸಲ್ಪಟ್ಟಿದ್ದು ಶೀರ್ಷಿಕೆಯ ಅಕ್ಷರಗಳು ಕಪ್ಪು ಬಣ್ಣದಲ್ಲಿ ಸರಳಗೈ (Free Hand) ಶೈಲಿಯಲ್ಲಿ ಬರೆಯಲ್ಪಟ್ಟಿವೆ. ಹಿನ್ನೆಲೆಯಲ್ಲಿ

ತಿಳಿ ಹಸಿರುಬಣ್ಣ ಲೇಪನಗೊಂಡಿದ್ದು, ಓದುಗರ ಗಮನಕ್ಕೆ ಬರುವ ಹಾಗೆ/ಮುಖಪುಟದಲ್ಲಿ ಎದ್ದು ಕಾಣುವ ಹಾಗೆ ಬಿಳಿಯ ಬಣ್ಣದಲ್ಲಿ ನಾಟಕ ಎಂಬ ಶಬ್ದ ಬರೆಯಲ್ಪಟ್ಟಿದೆ. ಅದರ ಶೈಲಿಯು ಸಹ ಸರಳಗೈ (Free Hand) ಮಾದರಿಯದ್ದೆ ಆಗಿದೆ. ಮೇಲ್ಗಡೆ ಮೂಲೆಯಲ್ಲಿ ಕಪ್ಪು ಬಣ್ಣದಲ್ಲಿ ಸರಳಗೈ (free hand) ಶೈಲಿಯಲ್ಲಿಯೇ ಪುಟ್ಟದಾಗಿ ಕೃತಿ ಲೇಖಕ ಎಸ್.ಗುಂಡೂರಾವ್ ಅವರ ಹೆಸರು ಬರಯಲ್ಪಟ್ಟಿದೆ. ಇಲ್ಲಿ ಕೃತಿಯ ಅರ್ಥವನ್ನು ಧ್ವನಿಸುವ ಮಾದರಿ ಕಂಡುಬರುವುದು ಮುಖಪುಟದಲ್ಲಿ ರೇಖಿಸಿರುವ ಈ ಮೇಲೆ ವಿವರಿಸಿದ ಎರಡು ಕಾರ್ಟೂನ್ (ವ್ಯಂಗ್ಯ ಚಿತ್ರ) ಶೈಲಿಯ ಮುಖಗಳಲ್ಲಿ ಮಾತ್ರ. ಉಳಿದಂತೆ ಶೀರ್ಷಿಕೆಯ ಅಕ್ಷರ ವಿನ್ಯಾಸದಲ್ಲಾಗಲಿ, ನಾಟಕ ಎಂಬ ಪದದ ಮತ್ತು ಲೇಖಕರ ಹೆಸರಿನ ಅಕ್ಷರಗಳಲ್ಲಾಗಲಿ ಕೃತಿಯ ಆಶಯವನ್ನೂ ಸಂಕೇತಿಸುವ ಯಾವ ಲಕ್ಷಣಗಳೂ ಕಂಡು ಬರುವುದಿಲ್ಲ ಇಲ್ಲಿನ ಮುಖಪುಟ ರೂಪಿಸಿದ ಕಲಾವಿದರ ಹೆಸರು ಉಲ್ಲೇಖವಾಗಿಲ್ಲ.

**೩.೪.೨. ಷಾಜಹಾನ್ (೧೯೮೧)**

ಬಿ ಪುಟಸ್ವಾಮಯ್ಯ ಎಂಬ ಲೇಖಕರ 'ಷಾಜಹಾನ್' (೧೯೮೧) ಎಂಬ ಕೃತಿಯಲ್ಲಿ ಮುಖ ಪುಟದ ತುಂಬೆಲ್ಲ ಕಪ್ಪು ಬಿಳುಪು ಚಿತ್ರಗಳು ತುಂಬಿವೆ. ಈ ಮುಖಪುಟದಲ್ಲಿ ಓದುಗರ ಗಮನವನ್ನು ಸೆಳೆಯುವುದು ಕೃತಿಯ ಶೀರ್ಷಿಕೆ ಮುಖಪುಟದ ಮೇಲ್ತುದಿಯಲ್ಲೂ ಬರೆಯಲ್ಪಟ್ಟದ್ದು, ಇದರ 'ಪ್ರಥಮ ಅಕ್ಷರ 'ಷಾ' ವಿಶಿಷ್ಟ ಕ್ಯಾಲಿಗ್ರಾಫಿ (ಅಕ್ಷರಲೇಖನ) ಶೈಲಿಯಲ್ಲಿ ರಚನೆಯಾಗಿದ್ದು ಉಳಿದ ಮೂರು ಅಕ್ಷರಗಳು (ಜಹಾನ್) ರೋಮನ್ ಶೈಲಿಯಲ್ಲಿ ಬರೆಯಲ್ಪಟ್ಟಿವೆ. ಮುಖಪುಟದಲ್ಲಿ ರಚಿಸಿದ ಚಿತ್ರಗಳು ರೇಖಾತ್ಮಕವಾದವು (Single Tone) ನಲ್ಲಿ ರೂಪಿಸಲ್ಪಟ್ಟಿವೆ. ಚಪ್ಪಟೆತನ ಢಾಳಾಗಿ ಕಾಣಿಸುತ್ತದೆ. ಚಿತ್ರಗಳು ನೈಜಶೈಲಿಯಲ್ಲಿವೆ ಕೃತಿಯ ಶೀರ್ಷಿಕೆಯ ನಿರೂಪಣೆಯಲ್ಲೂ ತೋರ್ಪಡಿಸಿದ ಸೃಜನಶೀಲತೆ ನಿರೂಪಣಾ ಪ್ರಯತ್ನ ಚಿತ್ರಗಳಲ್ಲಿ ವ್ಯಕ್ತಗೊಂಡಿಲ್ಲ'[೧೮] ಇಲ್ಲಿ ರೂಪಿಸಲ್ಪಟ್ಟಿರುವ ಮಾನವ ಆಕಾರಗಳಲ್ಲಿ ಭಾವನೆ ಕಂಡು ಬರುವುದಾದರೂ ಛಾಯಾಕರಣದ ಸವಿವರ ತೋರ್ಪಡಿಕೆ ಇಲ್ಲವಾದುದರಿಂದ ಚಿತ್ರಗಳು ಜಿಂಕ್ ಪ್ಲೇಟಿನ ಮೇಲೆ ಮೂಡಿಸಿದ (Zink Plate) ಸರಳ ತಂತ್ರಯುಕ್ತ ಕೊರೆಚಿತ್ರಗಳಂತೆ ಕಂಡುಬರುತ್ತವೆ.

ಕೃತಿಯ ಶೀರ್ಷಿಕೆಯಲ್ಲೂ ಒಂದು ಸಮರ್ಪಕ ಸಮತೋಲನ ಗೋಚರಿಸುವುದಿಲ್ಲ .ಏಕೆಂದರೆ ಪ್ರಥಮ ಅಕ್ಷರ ವಿಶೇಷ (ವಿಶಿಷ್ಟ) ಅಕ್ಷರಶೈಲಿಯಲ್ಲಿ ರೂಪಿತವಾಗಿದ್ದು ಸಾಮಾನ್ಯರಿಗೆ ಇದನ್ನು ಸುಲಭವಾಗಿ ಅರ್ಥೈಸಿಕೊಳ್ಳಲು ಆಗುವುದಿಲ್ಲ ಗೊಂದಲ ಮೂಡುತ್ತದೆ. ಆದರೆ ಉಳಿದ ಮೂರು ಅಕ್ಷರಗಳು ಇನ್ನೊಂದೆ ಶೈಲಿಯಲ್ಲೂ ರೂಪಿತವಾಗಿರುವುದು ಆಕಾಡೆಮಿಕ್ ನೆಲೆಗಟ್ಟಿನಲ್ಲೂ ಗ್ರಹಿಸ ಹೊರಟ ಓದುಗ ವಲಯಕ್ಕೆ ಇದು ಒಂದು ವಿಚಿತ್ರ ಆಭಾಸ/ ಅಪರಿಪಕ್ವ ಎನಿಸುವ ಕೃತಿ ಶೀರ್ಷಿಕೆಯಾಗಿ ಉಳಿದು ಬಿಡುತ್ತದೆ. ಇಲ್ಲಿ ಕಲಾವಿದರು– ಅಕ್ಷರ ವಿನ್ಯಾಸದಲ್ಲೂ ಸೃಜನಶೀಲ ಮನೋಭಾವ ಹೊಂದಿರುವರಾದರೂ ಅದನ್ನು ಕೃತಿ ಶೀರ್ಷಿಕೆಯ ಎಲ್ಲ ಅಕ್ಷರಗಳ ಮಟ್ಟಿಗೂ ಸರಿಯಾದ ರೀತಿಯಲ್ಲೂ ಅಭಿವ್ಯಕ್ತಗೊಳಿಸುವಲ್ಲಿ ಎಡವಿದ್ದು /

---

೧೮. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

ಗಮನ ಹರಿಸದೇ ಇದ್ದುದು ಒಂದು ನ್ಯೂನತೆಯಾಗಿ ಎದ್ದೂ ಕಾಣುತ್ತದೆ. ಇದನ್ನು ಶಾರದಾ ಪ್ರಕಾಶನ ಬೆಂಗಳೂರು ಇವರು ಮುದ್ರಿಸಿರುತ್ತಾರೆ.

### ೫.೪.೩. ಪ್ರೇಮವೆಂದರೆ (೧೯೮೨)

ಎಂ.ವೀರಪ್ಪ ಮೊಯಿಲಿಯವರು ಬರೆದ 'ಪ್ರೇಮವೆಂದರೆ', 'ಮಿಲನ', 'ಪರಾಜಿತ' ಎಂಬ ಕೃತಿಗಳ ಮುಖಪುಟಗಳು ವಿಶೇಷ ಗಮನ ಸೆಳೆಯುವಂತಹ ಮುಖಪುಟ ಚಿತ್ರಗಳನ್ನು ಹೊಂದಿವೆ. ಕರ್ನಾಟಕದ ಕಲಾರಂಗದಲ್ಲಿ ಶಾಸ್ತ್ರೀಯ ಮತ್ತು ನವ್ಯ ಈ ಎರಡೂ ಪ್ರಕಾರಗಳಲ್ಲೂ ಸಾಕಷ್ಟು ಹೆಸರುಗಳಿಸಿರುವ ಕಲಾವಿದ ಪ.ಸ.ಕುಮಾರ್ ಎನ್ನುವವರಿಂದ ರೂಪಿತವಾದ ಮುಖಪುಟಗಳಿವು. ಇಲ್ಲಿ ಕಲಾವಿದರು 'ಶಿಷ್ಟ ಮತ್ತು 'ಸಾಮಾನ್ಯ' ಈ ಎರಡೂ ವರ್ಗಗಳನ್ನು ಸೆಳೆಯಬಲ್ಲ ಒಂದು ಮಧ್ಯಮ ಶೈಲಿಯನ್ನು ಅನುಸರಿಸಿರುವುದು ಗಮನಿಸತಕ್ಕ ಅಂಶ. ವಿನ್ಯಾಸದಲ್ಲಿ ಕೃತಿಕಾರನ/ಸಾಹಿತ್ಯ ಸೃಷ್ಟಿಸಿದವರ ಆಶಯವನ್ನು ತೋರ್ಪಡಿಸುವುದರ ಜೊತೆಗೆ, ತಮ್ಮ ಸ್ವಂತಿಕೆಯನ್ನು ಬಿಟ್ಟು ಕೊಡದೇ ಇರುವುದು ಒಂದಿಷ್ಟು ಸೂಕ್ಷ್ಮ ಕಲಾ ಪ್ರಜ್ಞೆಯುಳ್ಳ ನೋಡುಗರಿಗೆ ಪ್ರಥಮದಲ್ಲಿಯೇ ಗಮನಕ್ಕೆ ಬರುವ ಅಂಶವಾಗಿದೆ.'[೧೯]

'ಪ್ರೇಮವೆಂದರೆ' ಕೃತಿಯ ಮುಖಪುಟದಲ್ಲಿ – ಪ್ರೇಮಪಾಶದಲ್ಲಿ ಸಿಲುಕಿದ ಗಂಡು–ಹೆಣ್ಣುಗಳ ಸುಖಮಿಲನ ಮತ್ತು ಪ್ರೇಮ ವೈಫಲ್ಯದಿಂದಾಗಿ/ವಿರಹ ವೇದನೆಯಿಂದಾಗಿ ಪರಿತಪಿಸುವ – ಮನಸ್ಸಿನ ಒಳಗೊಳಗೆ ಕುದಿವ ಹತಾಶೆಯ ಸ್ಥಿತಿ ಹೀಗೆ ಎರಡೂ ರೀತಿಯ ಭಾವ ಬಂಧಗಳ ಚಿತ್ರಣವಿದೆ. ಇಲ್ಲಿ ಆಕೃತಿ ನಿರೂಪಣೆ ಶೈಲಿಯ ದೃಷ್ಟಿಯಿಂದ ನೈಜವಾಗಿರುವುದಾದರೂ ಆ ಅವಧಿಯ ಮಟ್ಟಿಗೆ–ಸಂಯೋಜನಾ ವೈಖರಿ ಹೊಸತನದ ಪರಿಕಲ್ಪನೆಯದು ಎನ್ನಬಹುದು. ದಟ್ಟ ಕಂದು ಬಣ್ಣದ ಹಿನ್ನೆಲೆಯಲ್ಲಿ ಚಿತ್ತಾಕರ್ಷಕ ಬಣ್ಣಗಳ ಬಳಕೆಯೊಂದಿಗೆ ನಿರ್ವಹಣೆಗೊಂಡಿರುವ ಇಲ್ಲಿನ ಸಂಯೋಜನೆಯಲ್ಲಿ ಎರಡು ಸ್ತರಗಳಲ್ಲೂ ಚಿತ್ರ ಆಯೋಜನೆಗೊಂಡಿದ್ದು ಕೆಳಗಿನ ಭಾಗದಲ್ಲೂ ಪ್ರೇಮಿಗಳು ಮಿಲನ ಮಹೋತ್ಸವದಲ್ಲಿ ಮೈಮರೆತಿದ್ದರೆ, ಮೇಲಿನ ಸ್ತರದಲ್ಲಿ ಭಗ್ನ ಪ್ರೇಮಿಯ ಭಾವಚಿತ್ರ ಬಗೆಬಗೆಯ ಬಣ್ಣಗಳ ಅಲೆಗಳ ಮಧ್ಯೆ ಅತೀವ ವ್ಯಾಕುಲ ಭಾವಯುಕ್ತವಾಗಿ ಚಿತ್ರಿತವಾಗಿದೆ. ಈ ಎರಡೂ ಸ್ತರಗಳ ಮಧ್ಯಭಾಗದಲ್ಲೂ ಈ ಎರಡೂ ಸ್ತರಗಳಲ್ಲಿನ ಚಿತ್ರಗಳನ್ನು ಒಂದು ಬಂಧದಲ್ಲಿ ಬೆಸೆಯುವ ಸಂಕೇತವು ಎಂಬಂತೆ ಕೇಸರಿ ಬಣ್ಣದ ದೀರ್ಘವೃತ್ತ ನಿರೂಪಿತವಾಗಿದೆ. ಇಲ್ಲಿನ ಮುಖಪುಟ ವಿನ್ಯಾಸದ ಚಿತ್ತಾಕರ್ಷಕ ಅಂಶವೆಂದರೆ ಕಣ್ ಸೆಳೆಯಬಲ್ಲ ಬಣ್ಣಗಳು. ಇಲ್ಲಿ ಲೇಪಿಸಿದಂತಹ ವೈವಿಧ್ಯಪೂರ್ಣ – ಪ್ರಖರವೆನಿಸಿದ ಬಣ್ಣಗಳು ಕೃತಿಶೀರ್ಷಿಕೆ ಮತ್ತು ಚಿತ್ರಗಾರಿಕೆಯ ನಡುವೆ ಒಂದು ವಿಶೇಷ ಸಾಹಚರ್ಯವನ್ನು ಏರ್ಪಡಿಸಿದ್ದು ಭಾವಲೋಕದೊಳಗೆ ಯಾನ ಕೈಗೊಳ್ಳಬಲ್ಲ ಓದುಗರನ್ನು / ನೋಟಕರನ್ನು ಸರಾಗವಾಗಿ ಸೆಳೆಯುತ್ತವೆ ಮತ್ತು ಅರ್ಥಸಾಂಗತ್ಯವನ್ನು ಮನವರಿಕೆ ಮಾಡಿಕೊಡುತ್ತವೆ. ಇಲ್ಲಿನ ಒಟ್ಟಾರೆ ನಿರೂಪಣಾ ವೈಖರಿ ಒಂದು ರೂಪಕದಂತೆಯೇ ಮೂಡಿಬಂದಿದೆ. ಅಲ್ಲದೆ ಕೃತಿಯ ಸಾರಾಂಶವನ್ನು ಭಾವಪೂರ್ಣವಾಗಿ ಅಭಿವ್ಯಕ್ತಿಸಲಿಲ್ಲ. ಇಲ್ಲಿ ಕಲಾವಿದರು

---

೧೯. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩-೧೪

ಸಾರ್ಥಕ ಪ್ರಯತ್ನ ನಡೆಸಿರುವುದೂ ಸುಸ್ಪಷ್ಟ. ಉದಾಹರಣೆಗೆ:–ಮುಖಪುಟದ ಕೆಳಭಾಗದಲ್ಲಿರುವ ಪ್ರೇಮಿಗಳ ಮಿಲನದ ಚಿತ್ರಣದಲ್ಲಿ ಪ್ರೇಮಿಗಳ ಸುತ್ತೆಲ್ಲಾ ಆಕರ್ಷಕವೆನಿಸಿದ ಬಣ್ಣ ಬಣ್ಣದ ಪುಷ್ಪರಾಶಿಗಳಿಂದ ಸಂಯೋಜಿಸಲಾಗಿದೆ. ತನ್ಮೂಲಕ ಪ್ರೇಮದ ಹುಚ್ಚಿನಲ್ಲಿ ತನ್ಮಯರಾಗುವ ಪ್ರೇಮಿಗಳ ಭಾವಲಹರಿಯನ್ನು ಸಂಕೇತಿಸಲಾಗಿದೆ. ಅಂತೆಯೇ ಕೇಸರಿಗೋಳದ ಮೇಲ್ಭಾಗದಲ್ಲಿನ ವಿಷಣ್ಣ / ನಿರಾಶ / ಹತಾಶ ಮನೋಭಾವದ ವ್ಯಕ್ತಿಯ (ಪುರುಷನ) ಮುಖದ ಸುತ್ತಲೂ ಬಣ್ಣದ ಬಣ್ಣದ ತರಂಗಗಳು (ಅಲೆಗಳು) ಹಾದು ಹೋಗಿವೆ. ಪ್ರೇಮವೆಂಬ ಒಂದು ಭ್ರಾಂತ ಲೋಕದಲ್ಲಿನ ವ್ಯರ್ಥ ಪಯಣದಲ್ಲಿ ತನ್ನ ಮನದಾಳದಿಂದ ಹೊರಹೊಮ್ಮಿದ ಬಗೆಬಗೆಯ ಬಣ್ಣ ಬಣ್ಣದ ಕನಸುಗಳನ್ನು ಕಾಣುತ್ತಲೆ ಸೋತು ಹೋದ/ಹೋಗುವ ವ್ಯಕ್ತಿಯ ಭಾವನಾ ವಲಯದ ಪರಿಕಲ್ಪನೆಯನ್ನು ಅವು ಕಟ್ಟಿಕೊಡುವಲ್ಲಿ ಸಮರ್ಥವಾಗಿವೆ. ಇಲ್ಲಿ ನೀಲಿ ಬಣ್ಣದಲ್ಲಿ ಚಿತ್ರಿಸಿರುವ ಪುರುಷನೊಬ್ಬನ ಮುಖದಲ್ಲಿನ ಕಣ್ ಚಿತ್ರಣ ಆ ವ್ಯಕ್ತಿಯ ತಳಮಳದ ಗಂಭೀರತೆಯನ್ನು ಮನೋಜ್ಞವಾಗಿ ನಿರೂಪಿಸುತ್ತಿದೆ.

ಒಂದು ಇಲ್ಲಿನ ಎಲ್ಲ ಆಕೃತಿಗಳ ಅಂಶಗಳಿಗೂ ತೆಳುವಾದ ನಿಖರವಾದ ಬಣ್ಣದ ಅಂಚಿನೊಂದಿಗೆ ಸರಾಗವಾಗಿ ಸಾಗಿದ ಅಂಚು ರೇಖೆಗಳಿವೆ, ಮೇಲ್ಭಾಗದ ಆಕೃತಿ ಕೆಳಭಾಗದ ಆಕೃತಿಗಳು ಇವೆಲ್ಲವುಗಳಲ್ಲಿನ ವರ್ಣವ್ಯತ್ಯಾಸ ತೋರ್ಪಡಿಕೆಯು ಅವುಗಳಲ್ಲಿ ಹಾಯ್ದು ಹೋದ ಅಂಚುರೇಖೆಗಳ ಮೂಲಕ ಗಮನಕ್ಕೆ ಬರುವಂತೆ ಚಿತ್ರಿಸಲಾಗಿದೆ. ಅಲ್ಲದೆ ಚಿತ್ರಾಕೃತಿಯ ತುಂಬ ಪ್ರೇಮದ ಅಂಶವಾಗಿ ಕಂಡು ಬರುವ ಕಣ್ಣಿಗೆ ಎದ್ದು ಕಾಣುವಂತೆ ಲೇಪಿಸಿದ ವರ್ಣಗಳ ಅಲೆಗಳ ನಿರೂಪಣೆಯಲ್ಲಿ ಸಹ ವರ್ಣಸಮತೋಲನಾ ಸೂತ್ರವನ್ನು ಕಾಯ್ದುಕೊಂಡಿದ್ದಾರೆ (ಕೆಳಭಾಗದಲ್ಲಿನ ಪ್ರೇಮಿಗಳ ಸುತ್ತಲಿನ ಹೂ ಸಂಕುಲದ ಕುರಿತಾಗಿಯು ಇದೇ ಮಾತು ಅನ್ವಯಿಸುತ್ತದೆ) ಆಕೃತಿಗಳ ಚಿತ್ರಣದಲ್ಲೂ ಸಹ ಒಂದು ಸಮತೋಲನ (Balance) ವನ್ನು ಬಣ್ಣಗಾರಿಕೆ ಆಕೃತಿಗಳ ರೂಪ ಮಾದರಿ ಛಾಯಾಕರಣ ನಿರೂಪಣೆ ಇತ್ಯಾದಿಗಳಲ್ಲಿ) ಕಲಾವಿದರು ಕಾಯ್ದು ಕೊಂಡಿರುವುದರಿಂದ ವಿನ್ಯಾಸಗಾರಿಕೆ ಪ್ರಬುದ್ಧವಾದುದೆಂದು ಅಭಿಪ್ರಾಯಪಡಬಹುದು (ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಕೃತಿಶೀರ್ಷಿಕೆಯನ್ನು ಬರೆದ ರೀತಿ ಒಟ್ಟಾರೆ ಕೃತಿಯಲ್ಲಿ ಹೇಗೆ ಕಣ್ಣಿಗೆ ಸೆಳೆಯುವಂತಹ ಬಣ್ಣಗಳನ್ನು ಲೇಪಿಸಿರುವರೊ ಹಾಗೆಯೇ ಶೀರ್ಷಿಕೆಯ ಬರವಣಿಗೆಯಲ್ಲೂ ಕೂಡ ಅಚ್ಚಬಿಳಿಯ ಬಣ್ಣದ ಲೇಪನವಿದೆ. ಅವುಗಳ ತಂಪಿನಲ್ಲಿ ಮತ್ತು ಅಂಚಿಗೆ ಕಪ್ಪುಬಣ್ಣ ನಿರ್ವಹಣೆಯಿದೆ. ಅಲ್ಲದೆ ಅಲ್ಲಿನ ಅಕ್ಷರಗಳು ಸರಳಗೈ (Free Hand) ಶೈಲಿಯಲ್ಲಿರುವುದರಿಂದ ಚಿತ್ರದ ಒಟ್ಟೊಟ್ಟಿಗೇ ಶೀರ್ಷಿಕೆಯ ಕಡೆಗೂ ಓದುಗರ ಗಮನ ಸೆಳೆಯಲ್ಪಡುವಂತೆ ಮಾಡುವಲ್ಲಿ ಕಲಾವಿದರು ಶ್ರಮಿಸಿರುವುದು ಗಮನಕ್ಕೆ ಬರುತ್ತದೆ. ಹೀಗೆ ಮುಖಪುಟದಲ್ಲಿ ಪ್ರಧಾನವಾಗಿ ಕಾಣಬೇಕಾದ ಪ್ರತಿ ಅಂಶದ ಬಗ್ಗೆಯೂ ಕಲಾವಿದರ ಲಕ್ಷ್ಯವಹಿಸಿರುವುದು ಕಂಡು ಬರುತ್ತದೆ.

**೫.೪.೪. ಮಿಲನ (೧೯೮೨)**

'ಮಿಲನ'ದ ಮುಖಪುಟ ವಿನ್ಯಾಸವು ಶೃಂಗಾರ ರಸವನ್ನು ಧ್ವನಿಸುತ್ತಿದೆ. ಕೇಸರಿ ಬಣ್ಣದ ಹಿನ್ನೆಲೆಯಿದ್ದು

ಮುನ್ನೆಲೆಯಲ್ಲಿ ಯುವ ಜೋಡಿ ಮಿಲನ ಕಾತರದಲ್ಲಿದೆ ಆ ಜೋಡಿಯ ಹಿಂದುಗಡೆ ಬಣ್ಣ ಬಣ್ಣದ ಹೂ ಎಲೆ ಭರಿತ ಸಮೃದ್ಧ ವೃಕ್ಷವೊಂದಿದೆ. ಆ ವೃಕ್ಷದ ಹಿಂದುಗಡೆಯಲ್ಲಿರುವ ಚೌಕಟ್ಟೊಂದರಲ್ಲಿ ಪ್ರೇಮಿಗಳಾದ ಗಂಡು ಹೆಣ್ಣಿನ ಪರಸ್ಪರ ಎದುರು ಬದುರಾಗಿರುವ ನೋಟದ ಚಿತ್ರವಿದೆ. ಅದರ ಆಚೆಗೆ ಹಿಂದುಗಡೆ ಈ ಚೌಕವನ್ನು ಆಕ್ರಮಿಸಿಕೊಂಡಿರುವ (ಸುತ್ತವರಿದಿರುವ) ವೃತ್ತವೊಂದಿದ್ದು ಅದೂ ಸಹ ಬಣ್ಣ ಬಣ್ಣಗಳ ವಿನ್ಯಾಸಗಳಿಂದ ತುಂಬಿದೆ. ಈ ಜೋಡಿಯ ಹಿಂದಿರುವ ವೃಕ್ಷದ ಬುಡಭಾಗದಲ್ಲಿ (ಯುವ ಜೋಡಿಯ ಹಿಂದೆ ಬಲಭಾಗದಲ್ಲಿ) ಹಾವಿನ ದೇಹ ಮಾನವ ಮುಖಹೊಂದಿರುವ ವಿಚಿತ್ರಾಕಾರವೊಂದು ಚಿತ್ರಿತವಾಗಿದೆ. ಇಲ್ಲಿನ ಮುಖಪುಟದ ಒಟ್ಟೂ ಅವಕಾಶದಲ್ಲಿ ಸರಿಸುಮಾರು ಶೇ. ೯೫ ರಷ್ಟು ಭಾಗ ಚಿತ್ರಗಾರಿಕೆಗೆ ಬಳಕೆಗೊಂಡಿದ್ದು ಉಳಿದ ಶೇ. ೫ ರಷ್ಟು ಭಾಗದಲ್ಲಿ ಕೃತಿಯ ಶೀರ್ಷಿಕೆ ಮತ್ತು ಕೃತಿಯ ಬರಹಗಾರರ ಹೆಸರು ಇದೆ. ಇಲ್ಲಿ ಅವಕಾಶದ ಕೇಂದ್ರದಲ್ಲಿ ಚಿತ್ರಿಸಲ್ಪಟ್ಟಿರುವ ಯುವ ಜೋಡಿ ಆಕೃತಿಗಳು ಭಾರತೀಯ ಆಲಂಕಾರಿಕ ಎನ್ನಬಹುದಾದ ಶೈಲಿಯಲ್ಲಿದ್ದು ಈ ಜೋಡಿಯ ಪಾದಭಾಗದಲ್ಲಿನ ಹಾವಿನ ದೇಹ ಮಾನವ ಮುಖದ ಆಕೃತಿ ಮತ್ತು ಬಣ್ಣ ಬಣ್ಣದ ಎಲೆ ಹೂಗಳಿಂದ ಕೂಡಿದ ವೃಕ್ಷ. ಇವು ಸರ‍್ರಿಯಲಿಸಂ ಲಕ್ಷಣಗಳಿಂದ ಕೂಡಿವೆ ಚೌಕಟ್ಟಿನೊಳಗೆ ಚಿತ್ರಿಸಲ್ಪಟ್ಟ ಹೆಣ್ಣುಗಂಡಿನ ಮುಖ ಆಕೃತಿ ಸ್ವರೂಪದ ದೃಷ್ಟಿಯಿಂದ ನೈಜ ಶೈಲಿಯಲ್ಲಿದ್ದು ವರ್ಣಗಾರಿಕೆ ನೈಜಾತೀತವಾಗಿದೆ.

ಪ್ರೇಮ-ಕಾಮ ಭಾವೋನ್ಮತ್ತಳಾದ ಪ್ರೇಯಸಿ ವೈಯ್ಯಾರದಿಂದ ಪ್ರಿಯತಮನ ಎದೆಯ ಮೇಲೆ ಕೈಯಿಟ್ಟು ಕಾತುರ ಭಾವದಿಂದ ಆತನನ್ನೆ ದಿಟ್ಟಿಸುತ್ತಿದ್ದಾಳೆ. ಅದಕ್ಕೆ ಪ್ರತಿಯಾಗಿ ಪ್ರಿಯಕರ ಆಕೆಯೆಡೆಗೆ ಸಂತೈಸುವಿಕೆಯ ನೋಟ ಬಿರುತ್ತ ಆಕೆಯನ್ನು ಆಲಂಗಿಸಿಕೊಳ್ಳುವ ತವಕದಲ್ಲಿದ್ದಾನೆ. ಇಬ್ಬರ ಪಾದಗಳು ಒಬ್ಬರಿಗೊಬ್ಬರು ಒಲವಿನ ನಡೆ ಇಡುತ್ತಿರುವುದನ್ನು ಸಂಕೇತಿಸುತ್ತಿವೆ. ಪ್ರೇಯಸಿಯ ಬಲಗೈಲ್ಲಿರುವ ಹಳದಿ ಮತ್ತು ಕೇಸರಿ ಬಣ್ಣದ ಕಮಲದ ಹೂಗಳು ಶುಭ ಕಾಮನೆಗಳೊಂದಿಗೆ ಪ್ರಿಯತಮನಿಂದ ಉಲ್ಲಾಸ ಮತ್ತು ಪೌರುಷವನ್ನು ಅಪೇಕ್ಷಿಸುತ್ತಿರುವುದನ್ನು ಸಂಕೇತಿಸುತ್ತವೆ. ಈ ಜೋಡಿಯ ಹಿಂದುಗಡೆಯಲ್ಲಿನ ವೃಕ್ಷದಲ್ಲಿ ದಟ್ಟವಾಗಿ ಅರಳಿ ನಿಂತಿರುವ ಹಳದಿ ತಿಳಿಗೆಂಪು, ಕೇಸರಿ, ನೀಲಿ ವರ್ಣಗಳ ಎಲೆ-ಹೂಗಳು ಸಮೃದ್ಧವಾದ ಸಂತಸದಾಯಕವಾದ ಫಲವತ್ತತೆಯನ್ನು ಪ್ರತಿನಿಧಿಸುತ್ತಿದ್ದು ಹೆಣ್ಣು-ಗಂಡಿನ ಪರಸ್ಪರ ಮಿಲನದಿಂದ ಉತ್ಪನ್ನವಾಗುವ ಸಂತತಿ ಇಲ್ಲಿನ ವರ್ಣಭರಿತ ವೃಕ್ಷದಂತೆಯೇ ಆನಂದಕರವಾದುದ್ದಾಗಲಿ ಎಂಬ ಆಶಯವೂ ಇಲ್ಲಿ ವ್ಯಕ್ತವಾದಂತಿದೆ. ಆ ವೃಕ್ಷಕ್ಕೆ ತಾಗಿ ಹಿಂದುಗಡೆ ಇರುವ ಚೌಕಟ್ಟಿನ ತಳಭಾಗದಲ್ಲಿಯ ಬಣ್ಣ ಬಣ್ಣದ ದಳಗಳಿಂದಾವೃತವಾದ ಹೂವಿದ್ದು ಹೆಣ್ಣು ಗಂಡು ಪರಸ್ಪರ ಕಾತರಪೂರಿತ ನೋಟದಲ್ಲಿದ್ದಾರೆ. ನೀಲಿ ಮತ್ತು ಹಳದಿ ಬಣ್ಣಗಳು ಮುಖಕ್ಕೆ ಲೇಪಿತವಾಗಿವೆ. ಪ್ರೇಮವೆಂಬುದು ಒಂದು ವ್ಯವಸ್ಥಿತ ಶಿಸ್ತೆಂಬ ಚೌಕಟ್ಟಿನಲ್ಲಿರಬೇಕೆಂಬ ಆಶಯ ಕಲಾವಿದರದ್ದಿರಬೇಕು. ಅಂದಾಗ ಮಾತ್ರ ಜೀವನ ಚಕ್ರವೆಂಬ ವರ್ಣರಂಜಿತ ಅಧ್ಯಾಯ ನಿಜಾರ್ಥದಲ್ಲಿ ಸಾರ್ಥಕಗೊಳ್ಳುತ್ತದೆಂಬ ಸಂದೇಶ ನೀಡುವುದಕೋಸ್ಕರ ಈ ಚೌಕಟ್ಟಿನ ಸುತ್ತ ಬಣ್ಣ ಬಣ್ಣದ ಕುಸುರಿ ವಿನ್ಯಾಸವುಳ್ಳ ವರ್ಣಮಂಡಲ ರೂಪಿಸಿರಬಹುದೆಂಬುದನ್ನು ಭಾವಿಸಬಹುದು/ ಊಹಿಸಬಹುದು.

ಪ್ರೇಮಿಗಳ ಪಾದಗಳ ಹಿಂದುಗಡೆ ಚಿತ್ರಿಸಲ್ಪಟ್ಟಿರುವ ಹಾವಿನ ದೇಹ ಮಾನವ ಮುಖದ ಆಕೃತಿಯು ಹಾವಿನ ಅಂಕುಡೊಂಕು (ಬಾಗು-ಬಳುಕು) ಮಾದರಿಯಲ್ಲಿ ತನ್ನ ದೇಹವನ್ನು ಬಿಚ್ಚಿಕೊಂಡಿದ್ದು ಅದರ ಪುರುಷಕಾರದ ಮುಖದ ದಟ್ಟವಾದ ತಲೆಕೂದಲು ನೀಲಿ ಬಣ್ಣದ ದೊಡ್ಡ ಮೀಸೆ, ಕೆಂಪು ಬಣ್ಣದಿಂದಾವೃತ ಕಣ್ಣುಗುಡ್ಡೆಯನ್ನು ಹೊಂದಿದ್ದು ದೃಢವಾಗಿ ನಿಂತು ಭಂಗಿಯಲ್ಲಿದ್ದು ಹಿಂದಿರುಗಿದ ನೋಟದಲ್ಲಿದೆ. ದೇಹದ ಭಾಗಕ್ಕೆ ದಟ್ಟ ಬೂದು ಬಣ್ಣ ಎಳೆಯಲಾಗಿದೆ. ಹಾವಿನ ಮೈಮೇಲಿನ ಪದರುಗಳನ್ನು ಅಡಿಮೈಯಲ್ಲಿನ ಬಳೆಗಳ ಮಾದರಿಯನ್ನು ಶೈಲೀಕೃತವಾಗಿ ರೇಖಾತ್ಮಕವಾಗಿ ನಿರೂಪಿಸಲಾಗಿದ್ದು, ಈ ವಿಚಿತ್ರಕಾರದ ಇಕ್ಕೆಲಗಳಲ್ಲಿ ಕೇಸರಿ ಹಳದಿ ಬಣ್ಣಗಳ ಪುಷ್ಪಗಳು ಅರಳಿ ನಿಂತಿವೆ ಇಲ್ಲಿನ ಈ ವಿಚಿತ್ರ ಪ್ರಾಣಿಯ ಹಾವಿನ ದೇಹದ ಉಬ್ಬು ತಗ್ಗು (ಏರಿಳಿತಗಳು) ಗತಿಶೀಲತೆ ಜೀವನವೆಂಬ ಯಾತ್ರೆಯಲ್ಲಿ ಬರುವ ಅನೇಕ ಬಗೆಯ ಏರಿಳಿತಗಳನ್ನು ಸಂಕೇತಿಸುತ್ತವಲ್ಲದೆ, ದೃಢವಾಗಿ ಹಿಂದಿರುಗಿ ನೋಡುತ್ತಿರುವ ಅದರ ಮುಖ ಅದೇನೆ ಏರಿಳಿತಗಳಿದ್ದರೂ ಅವುಗಳನ್ನೆಲ್ಲ ದೃಢಚಿತ್ತದಿಂದ ಎದುರಿಸಿ ಎದ್ದು ನಿಲ್ಲಬೇಕೆಂಬ ಸಂದೇಶವನ್ನು ಪ್ರೇಮಿಗಳಿಗೆ ಕಲಾವಿದ ನೀಡುತ್ತಿರುವುದೇನೊ ಎಂದು ಭಾವಿಸಬಹುದು. ಅಂತೆಯೇ ಅದರ ಅಕ್ಕ ಪಕ್ಕಗಳಲ್ಲಿ ಚಿತ್ರಿಸಿರುವ ಹೂಗಳ ಬದುಕಿನಲ್ಲಿ ಬರುವ ಕಷ್ಟ ಸುಖಗಳನ್ನು ದೃಢ ವಿನ್ಯಾಸದಿಂದ ಎದುರಿಸಿ ನಿಂತರೆ ಮಾತ್ರ ಆನಂದದ ಸಿಂಚನವಾಗಬಲ್ಲದೆಂಬುದನ್ನು ಸೂಚ್ಯವಾಗಿ ನಿರ್ದೇಶಿಸುತ್ತಿರುವುವೇನೊ ಎಂದು ಕೂಡ ಊಹಿಸಲು ಶಕ್ಯವಿದೆ.

ಕೃತಿಯುದ್ದಕ್ಕೂ ಲೆಕ್ಕಾಚಾರಯುಕ್ತವಾದ ವರ್ಣ ಸಂಯೋಜನೆ ಸಾಮರಸ್ಯ ಏರ್ಪಟ್ಟಿದೆ. ಮಾನವ ದೇಹದ ಅಂಗ ವಿನ್ಯಾಸವನ್ನು ತೋರ್ಪಡಿಸುವಾಗ ಲಾವಣ್ಯಕ್ಕೆ ಮತ್ತು ಉತ್ಪ್ರೇಕ್ಷಾ ಕ್ರಮಕ್ಕೆ ಹೆಚ್ಚು ಆದ್ಯತೆ ನೀಡಿರುವುದು ಸ್ಪಷ್ಟಗೋಚರವಾಗುತ್ತದೆ. ಕೃತಿಯಲ್ಲಿ ಅಲ್ಲಲ್ಲಿ ಕಲಾ ವ್ಯಾಕರಣ ಪದ್ಧತಿಯನ್ನು ಸಮದೂಗಿಸುವುದಕ್ಕಾಗಿ ಕೆಲವು ವಿನ್ಯಾಸ ವಿಶೇಷಗಳು ಮತ್ತು ವರ್ಣಗಾರಿಕೆಯನ್ನು ಆಯ್ದುಕೊಂಡಿರುವುದು ಕಲಾ ವಿದ್ಯಾರ್ಥಿಗಳಿಗೆ ಮನದಟ್ಟಾಗುವ ಅಂಶ. ಜನಸಾಮಾನ್ಯ ವರ್ಗವನ್ನು ರಂಜಿಸುವ ಆಕಾರ ಸ್ವರೂಪವನ್ನು ಒಟ್ಟಾರೆ ಕೃತಿಯಲ್ಲಿ ಬಹಳಷ್ಟು ಭಾಗದಲ್ಲಿ ಆಯ್ದುಕೊಂಡು ಹಾವಿನದೇಹ ಮಾನವ ಮುಖಧಂತಹ ವಿಚಿತ್ರಾಕಾರವೊಂದನ್ನು ಕಲಾವಲಯದ ಪರಿಭಾಷೆಯಲ್ಲಿ 'ಸರ್‍ರಿಯಲಿಸಂ ಪಂಥದ ಲಕ್ಷಣವಿರುವ'[೨೦] ಸೃಷ್ಟಿಸುವುದರ ಮೂಲಕ ಇಲ್ಲಿನ ಚಿತ್ರ ವಿನ್ಯಾಸದ ಸಾರವನ್ನು ಗಂಭೀರ ನೆಲೆಗಟ್ಟಿಗೆ ಒಯ್ಯುವ ವೈಚಾರಿಕ ಪ್ರಜ್ಞೆಗೆ ಒಂದಿಷ್ಟು ಇಂಬುಕೊಡುವ ಜೊತೆಗೆ ಮೂರ್ತದಿಂದ ಅಮೂರ್ತತೆಯತ್ತ ಕೃತಿಯ ಬಹಿರಂಗದಿಂದ ಅದರ ಅಂತರಂಗದ ವಿಶ್ಲೇಷಣೆಯ ಕಡೆಗೆ ಒಂದಿಷ್ಟು ಗಂಭೀರ ಕಲಾವಿದ್ಯಾರ್ಥಿಗಳನ್ನು/ಕಲಾವಿದರನ್ನು ಪ್ರೇರೇಪಿಸುವ ಇಂಗಿತವೂ ಇಲ್ಲಿ ಸಮ್ಮಿಳಿತವಾಗಿದೆ ಎನ್ನಬಹುದು.

ಒಟ್ಟಾರೆಯಾಗಿ ಅಭಿಪ್ರಾಯಪಡುವುದಾದರೆ ಇಲ್ಲಿನ ಚಿತ್ರ ವಿನ್ಯಾಸವನ್ನು 'ಮುಖಪುಟಚಿತ್ರ' ಎಂಬ ಸ್ತರದಿಂದ 'ಸಾರ್ವಕಾಲಿಕ ಒಪ್ಪಿತವಾಗಬಲ್ಲ ಕಲಾಕೃತಿ'ಯ ಮಟ್ಟಕ್ಕೆ ನಿರೂಪಿಸುವ ಪ್ರಾಮಾಣಿಕ ಪ್ರಯತ್ನ ಎದ್ದು ಕಾಣುತ್ತದೆ. ೧೯೮೦ರ ದಶಕದಲ್ಲಿ ಈ ರೀತಿಯ ಚಿತ್ರಕಲಾ ನಿರೂಪಣೆ ಅತ್ಯಂತ ಪ್ರಬುದ್ಧ ಮಟ್ಟದ್ದೆನಿಸಿತ್ತು ಎಂಬುದೂ ಸಹ ಇಲ್ಲಿ ಉಲ್ಲೇಖನೀಯ ಸಂಗತಿ'[೨೧] ಈ ಕೃತಿಯ ಲೇಖಕರ ಹೆಸರು ಸರಳಗೈ ಶೈಲಿಯಲ್ಲಿದ್ದರೆ, ಕೃತಿ ಶೀರ್ಷಿಕೆ ರೋಮನ್ ಕ್ಯಾಲಿಗ್ರಾಫಿ (ಬರವಣಿಗೆ) ಮಾದರಿಯನ್ನು ಬಹುಮಟ್ಟಿಗೆ ಹೋಲುತ್ತದೆ.

೨೦. ಎನ್. ಮರಿಶಾಮಚಾರ್: ಸರ್‍ರಿಯಲಿಸಂ, ಪು–೫

೨೧. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩–೧೪

**೫.೪.೫. ಪರಾಜಿತ (೧೯೮೨)**

'ಪರಾಜಿತ' ಕೃತಿಯ ಮುಖಪುಟ ವಿನ್ಯಾಸದಲ್ಲಿ ವ್ಯಕ್ತಿಯೋರ್ವನು ಹತಾಶೆಯಿಂದೊಡಗೂಡಿದವನಾಗಿ ದಿಗಂತದತ್ತ ದೃಷ್ಟಿಯನ್ನು ನೆಟ್ಟಿರುವ ಭಾವಚಿತ್ರವಿದ್ದು ಅವನ ಭುಜದ ಭಾಗದಲ್ಲಿ ಹೃದಯದಲ್ಲೂ ಚಿಕ್ಕ ವೃತ್ತವೊಂದರಲ್ಲಿ ನಗುತ್ತಿರುವ ಸುಂದರಿಯೋರ್ವಳ ಮುಖ ವರ್ಣಮಯ ಚೌಕಟ್ಟಿನಲ್ಲಿ ಚಿತ್ರಿತವಾಗಿದೆ. ದಿಗಂತದತ್ತ ನೋಡುತ್ತಿರುವ ವ್ಯಕ್ತಿಯ ಮೇಲ್ಗಡೆ ಅವರಿಂದ ಅಂಚಿನಲ್ಲಿ ಕಪ್ಪುಬಣ್ಣ ಲೇಪಿತವಾಗಿದ್ದು ಅಲ್ಲಿಯೇ ಹಳದಿ ಬಣ್ಣದ ಪುಟ್ಟ ಪಕ್ಷಿಯೊಂದು ಹಾರುತ್ತಿದೆ. ತಿಳಿಯಾದ ಬೂದುಬಣ್ಣದ ಹಿನ್ನೆಲೆಯಲ್ಲಿ ತಿಳಿನೀಲಿ ಬಣ್ಣದಲ್ಲಿ ಕನ್ನಡದಲ್ಲಿ 'ಕೆಲಸ ಖಾಲಿ ಇಲ್ಲ' ಎಂಬ ಬರಹ ಇಂಗ್ಲಿಷಿನಲ್ಲಿ No vacancy ಎಂಬ ಪದಗಳಿದ್ದು ಇವುಗಳ ನಡುವೆ ಹಳದಿ ಬಣ್ಣದಲ್ಲಿ No ಎಂಬ ಪದವಿದೆ. ತಿಳಿ ಬೂದು ಬಣ್ಣದಲ್ಲಿಯೆ ಒಂದಿಷ್ಟು 'ಉದ್ಯೋಗವಿಲ್ಲ' ಎಂಬರ್ಥ ನೀಡುವ ಪದಗಳು ರಚನೆಯಾಗಿವೆ. ಹತಾಶೆಯಿಂದ ದಿಗಂತದತ್ತ ಮುಖ ಮಾಡಿರುವ ವ್ಯಕ್ತಿಯ ಮುಖ ಮತ್ತು ತಲೆಯ ಭಾಗ ಹಾಗೂ ಭುಜದವರೆಗಿರುವ ಶರ್ಟು ನೀಲಿ, ಹಳದಿ ಮತ್ತು ಹಸಿರು ವರ್ಣಗಳಿಂದ ನಿರ್ವಹಿಸಲ್ಪಟ್ಟಿದೆ. ಕೃತಿಯ ಶೀರ್ಷಿಕೆ ಮತ್ತು ರೂಪಿಸಿದ ಮುಖಪುಟ ವಿನ್ಯಾಸವನ್ನು ಗಮನಿಸಿದರೆ / ಹೋಲಿಸಿದರೆ ಶೀರ್ಷಿಕೆಯನ್ನು ಸ್ಪಷ್ಟಪಡಿಸುವ ಸರಳ ಪ್ರಸ್ತುತಿ ಇದು ಎಂಬುದು ಸ್ಪಷ್ಟವಾಗುತ್ತದೆ. ಹುಡುಗಿಯೊಬ್ಬಳನ್ನು ತನ್ನ ಹೃದಯಾಂತರಂಗದಲ್ಲಿ ಅತೀವವಾಗಿ ಇಷ್ಟಪಡುತ್ತಾ ಬಣ್ಣ ಬಣ್ಣದ ಕನಸುಗಳನ್ನು ಹೆಣೆದುಕೊಂಡಿದ್ದ ಯುವ ಪುರುಷ ಉದ್ಯೋಗ ಸಿಗದೆ ಇರುವುದರಿಂದ ಹತಾಶೆಯಿಂದ ಆಕಾಶದತ್ತ ನೋಟನೆಟ್ಟಿದೆ ಎಂದು ಸರಳವಾದ ಊಹೆಯನ್ನು ಈ ಚಿತ್ರದ ಮೂಲಕ ಮಾಡಬಹುದು.

'ಶೈಲಿಯ ದೃಷ್ಟಿಯಿಂದ ಇಲ್ಲಿನ ರೂಪ (ಆಕಾರ) ಅನುಸರಣೀಯವಾಗಿರುವುದು ನೈಜ ಶೈಲಿಯಲ್ಲಿ. ಆದರೆ ವರ್ಣಗಾರಿಕೆಯಲ್ಲಿ ನೈಜತೆಯಲ್ಲಿ ಆಕೃತಿಯ ಅಂಚಿಗೆ ಮತ್ತು ಬೇರೆ ಬೇರೆ ಬಣ್ಣಗಳ ಲೇಪನದ ಅಂಚುಗಳಿಗೆ ಅಂಚುರೇಖೆ ಕಪ್ಪು ಬಣ್ಣದಿಂದ ಎಳೆದಿದ್ದು ಆ ರೇಖೆಗಳು ಕೆಲವೆಡೆ ಮಂದವಾಗಿ ಮತ್ತೆ ಕೆಲವೆಡೆ ತುಸು ಸ್ಪಷ್ಟವಾಗಿ–ಹೀಗೆ ಬೇರೆ ಬೇರೆ ತೆರನಾದ ಗತಿಶೀಲತೆಯಿಂದ ಕೂಡಿವೆ.'[೨೨] ಆ ವ್ಯಕ್ತಿಯ ಎದೆ ಭುಜದ ಭಾಗದಲ್ಲಿ ವೃತ್ತದಲ್ಲಿ ರೇಖಿಸಿದ ಯುವತಿಯ ಭಾವ ಚಿತ್ರ ಶುದ್ಧ ರೇಖಾತ್ಮಕವಾದುದು ಆಕೆಯ ರೇಖಾ ಭಾವಚಿತ್ರದ ಸುತ್ತಲೂ ರೂಪಿಸಿರುವ ವಿನ್ಯಾಸಗಳು ಹಳದಿ ನೀಲಿ ತಿಳಿಹಸಿರು ಹೀಗೆ ಬಣ್ಣ ಬಣ್ಣಗಳಿಂದ ಕೂಡಿರುವುದು ಆಕೆಯ ಮನಸ್ಸಿನಲ್ಲಿ ಗರಿಗೆದರಿರುವ ಸ್ವಪ್ನದ ಹೊಳೆಯನ್ನು ಧ್ವನಿಸುತ್ತವೆಂದು ಭಾವಿಸಬಹುದಾಗಿದೆ. ಗಾಳಿಗೆ ಲಯಬದ್ಧವಾಗಿ ಹರಡಿರುವ ಆಕೆಯ ತಲೆಗೂದಲು ಮುಖದಲ್ಲಿ ಮೂಡಿರುವ ಆಕರ್ಷಕ ಮುಗುಳ್ನಗು ಮುಖದಲ್ಲಿ ವ್ಯಕ್ತಗೊಂಡಿರುವ ಯೌವ್ವನದ ಆಸೆಗಳು ಇವೆಲ್ಲ ಕಲಾವಿದರಿಂದ ಕೌಶಲ್ಯಪೂರ್ಣವಾಗಿ ಅಭಿವ್ಯಕ್ತಿಸಲ್ಪಟ್ಟಿವೆ.

ಕೃತಿಯ ಶೀರ್ಷಿಕೆ ಹಸಿರು ಬಣ್ಣದ ಹಿನ್ನೆಲೆಯಲ್ಲಿ ಸರಳಗ್ಯೆ ಶೈಲಿಯಲ್ಲಿ ಹಳದಿ ಬಣ್ಣದಲ್ಲಿ ಮುಖಪುಟದಲ್ಲಿ ಎದ್ದು ಕಾಣುವಂತೆ ಬರೆಯಲ್ಪಟ್ಟಿದೆ. ಇಲ್ಲಿನ ಅಕ್ಷರಗಳ ಅಂಚಿಗೆ ಕಪ್ಪು ಬಣ್ಣದಲ್ಲಿ

೨೨. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು). ದಾವಣಗೆರೆ. ದಿ:೨೦೧೫

ಅಂಚುರೇಖೆ ಎಳೆದಿದ್ದು ಆ ರೇಖೆ ಕೆಲವೆಡೆ ದಪ್ಪನಾಗಿಯೂ, ಮತ್ತೆ ಕೆಲವೆಡೆ ತೆಳುವಾಗಿಯೂ, ಕೆಲವು ಕಡೆ ಸತ್ವಯುತವಾಗಿಯೂ ಮತ್ತೆ ಕೆಲವೆಡೆ ಮಂದವಾಗಿಯೂ ಸಾಗಿದೆ (ನಿರ್ವಹಿಸಲ್ಪಟ್ಟಿದೆ) ಶೀರ್ಷಿಕೆಯ ಕೆಳಗಡೆ ಕಪ್ಪು ಬಣ್ಣದಲ್ಲಿ ಸರಳಗ್ಯೆ ಶೈಲಿಯುಕ್ತ ಪುಟ್ಟ ಅಕ್ಷರಗಳ ಮೂಲಕ ಲೇಖಕರ ಹೆಸರನ್ನು ನಮೂದಿಸಲಾಗಿದೆ.

**೫.೪.೬. ಧರ್ಮ ಭೂಮಿ (೧೯೮೨)**

ಖ್ಯಾತ ಕಲಾವಿದ ಆರ್. ಎಸ್.ನಾಯ್ಡು ರವರು ಮುಖಪುಟ ವಿನ್ಯಾಸಗೊಳಿಸಿದ ನಾಟಕ ಕೃತಿ 'ಧರ್ಮಭೂಮಿ'. ಇದರ ಲೇಖಕರು ಕೆ.ಸಿ. ಚೌಡಪ್ಪರೆಡ್ಡಿ. ಇದು ಪ್ರಕಟಗೊಂಡ ವರ್ಷ ೧೯೮೨. ಮುಖಪುಟದ ಸರಿಸುಮಾರು ಅರ್ಧಕ್ಕರ್ಧ ಭಾಗದಷ್ಟು ಬೃಹತ್ ಜಾಗದಲ್ಲಿ ಮುಖವಾಡವೊಂದಿದ್ದು (ಭೂತ ಕಲ್ಪನೆಯ) ಅದು ಒಳಗಡೆ ಸಂಪ್ರದಾಯಸ್ಥ ಗೃಹಿಣಿಯೊರ್ವಳು ಕೈಮುಗಿದು ಕುಳಿತಿರುವ ಭಂಗಿಯ ಪಾರ್ಶ್ವನೋಟವಿದೆ ಅದರ ಕೆಳಗಡೆ ದೀಪದ ಹಣತೆಯಿದೆ. ಅದಕ್ಕಿಂತಲೂ ಕೆಳಗಿನ ಸ್ತರದಲ್ಲಿ ಕುದುರೆ, ಎತ್ತು ಚಿತ್ರಿಸಲ್ಪಟ್ಟಿದ್ದು ಅವುಗಳ ನಡುವೆ ಚಕ್ರದ ಚಿತ್ರಗಳಿವೆ ಅಗ್ರಭಾಗದಲ್ಲಿ (ತುದಿಭಾಗದಲ್ಲಿ) ಕೃತಿಯ ಶೀರ್ಷಿಕೆ ಬಿಡಿ ಬಿಡಿ ಅಕ್ಷರಗಳಲ್ಲಿ ಬರೆಯಲ್ಪಟ್ಟಿದ್ದು ಅದರ ಹಿನ್ನಲೆಯಲ್ಲಿ ಸರಳಗ್ಯೆ ಚಿತ್ರಣವಿದೆ. (ನಕ್ಷಾ ವಿನ್ಯಾಸಗಳಿವೆ) ಇಲ್ಲಿನ ಚಿತ್ರಗಳೆಲ್ಲ ರೇಖಾಚಿತ್ರಗಳು ಇಲ್ಲಿ ರೇಖಿಸಲ್ಪಟ್ಟಿರುವ ಮುಖವಾಡ ಜಾನಪದೀಯ ಶೈಲಿಯಲ್ಲಿದ್ದರೆ, ಉಳಿದ ಆಕೃತಿಗಳು ನೈಜತೆಗೆ ಹತ್ತಿರದಲ್ಲಿವೆ ಜಾನಪದ ಪರಿಸರದ ಒಂದು ಸಾಂಕೇತಿಕ ಚಿತ್ರಣ ಇಲ್ಲಿ ಅಭಿವ್ಯಕ್ತಗೊಂಡಿದೆಯೆನ್ನಬಹುದು (ಮುಖವಾಡವೂ ಜಾನಪದ ಸಾಂಸ್ಕೃತಿಯ ಕೆಲವು ಆಚರಣೆಗಳ ಭಾಗವಾಗಿ ಬರುತ್ತದೆ).

ಇಲ್ಲಿನ ಚಿತ್ರಗಳ ಅಂಚು ರೇಖೆಗಳಲ್ಲಿ ನೀಲಿ ಬಣ್ಣದ ರೇಖೆಗಳು ವಿನ್ಯಾಸಕಾರ ತಮ್ಮ ಆಯ್ಕೆಯ ಅವಕಾಶಗಳಲ್ಲಿ ಕಿರುಗೀಟುಗಳನ್ನು (ಗೆರೆಗಳನ್ನು)ಎಳೆದು/ನೀಲಿಬಣ್ಣ ಎದ್ದು ಕಾಣುವಂತೆ ನಿರ್ವಹಿಸಿ, ಮುಖಪುಟದಲ್ಲಿ ನೀಲಿ ಬಣ್ಣವೇ ಇಲ್ಲಿನ ಪೂರ್ಣ ಬಣ್ಣವಾಗಿ ಕಣ್ ನೋಟಕ್ಕೆ ದಕ್ಕುವಂತೆ ನಿರೂಪಿಸಿದ್ದಾರೆ. ಈ ಮುಖಪುಟದ ಕೆಳಗಿನ ಅಂಚಿಗೆ ಮತ್ತು ಪಾರ್ಶ್ವದಲ್ಲಿ ಹಾಗೂ ಕೃತಿ ಶೀರ್ಷಿಕೆಯ ಅಕ್ಷರಗಳಿಗೆ ಬಂಗಾರ ಬಣ್ಣ ಲೇಪಿಸಲ್ಪಟ್ಟಿದ್ದು ವರ್ಣ ಸಮತೋಲನದ ದೃಷ್ಟಿಯಿಂದ ಮಹತ್ವವೆನಿಸುತ್ತದೆ. ಇಲ್ಲಿನ ಮುಖಪುಟ ವಿನ್ಯಾಸವನ್ನು ಒಟ್ಟಾರೆ ಗಮನಿಸಿದಾಗ ಜನಸಾಮಾನ್ಯ ವರ್ಗದ ದೃಷ್ಟಿಯಿಂದ ಅಷ್ಟೊಂದು ಆಪ್ಯಾಯಮಾನ–ವೆನಿಸದಿದ್ದರೂ ೧೯೮೨ರ ಕಾಲಾವಧಿಯ ಮಟ್ಟಿಗೆ ವಿಭಿನ್ನವಾಗಿ ಸಂಯೋಜನೆ–ಗೊಂಡಿರುವಂತಹ ಮುಖಪುಟ ವಿನ್ಯಾಸ ಎಂದು ಅಭಿಪ್ರಾಯಪಡಬಹುದು.

**೫.೪.೭. ಹರಕೆಯ ಕುರಿ (೧೯೮೩)**

೧೯೮೩ 'ಹರಕೆಯ ಕುರಿ' ನಾಟಕ ಕೃತಿಯ ಮುಖಪುಟ ವಿನ್ಯಾಸ ಚಿತ್ತಾರ ನವ್ಯಶೈಲಿಯಲ್ಲಿ ರೂಪುಗೊಂಡಿರುವುದು. ಈ ಚಿತ್ರ 'ಮುಖಪುಟ ಚಿತ್ರ' ಎಂಬ ಮಿತಿಯನ್ನೂ ಮೀರಿ, ಅದರಾಚೆಗಿನ ಅಸೀಮತ್ತ್ವವನ್ನು ಪಡೆದುಕೊಂಡು ಸಾರ್ವಕಾಲಿಕ–ಕಲಾಕೃತಿಯಾಗಿ ನಿಲ್ಲುವ ಮೌಲ್ಯವುಳ್ಳದ್ದು, ಸರ್ವಾಧಿಕಾರದ

ದಬ್ಬಾಳಿಕೆಯ ಹಲವು ಮಜಲುಗಳನ್ನು/ಕೋನಗಳನ್ನು ಸಾಂಕೇತಿಕವಾಗಿ, ಶಕ್ತಿಶಾಲಿಯಾಗಿ ಧ್ವನಿಸಿದ ಚಿತ್ರವಿದು ಎಂದು ಅಭಿಪ್ರಾಯಪಡಬಹುದು. ಅಧಿಕಾರ, ಅಂತಸ್ತೆಂಬ ಸಾಮರ್ಥ್ಯದ ಹಿನ್ನೆಲೆಯಲ್ಲಿ ಅಮಾಯಕರ ಮೇಲೆ ನಿರ್ದಾಕ್ಷಿಣ್ಯವಾಗಿ ನಡೆಯುತ್ತಿರುವ ಕೊಲೆ. ಸುಲಿಗೆ, ರಕ್ತಪಾತಗಳಂತಹ ಪಾತಕ ಕೃತ್ಯಗಳಲ್ಲಿ ರಾಜಕೀಯ ಶಕ್ತಿಗಳ ಪ್ರಬಲವಾದಂತಹ, ಬಹುಆಯಾಮದ ಬೆಂಬಲಪಡೆದು ರಾಜಕೀಯ ದರ್ಪಗಾರಿಕೆ ಮತ್ತು ಉನ್ನತಾಧಿಕಾರ ವರ್ಗದ ಸ್ಥಾನ-ಮಾನ ಕಾರಣದಿಂದಾಗಿ ಅಂಟಿಕೊಳ್ಳುವ ಹಳದಿನೋಟದ ಕಾಮಾಲೆ ರೋಗ ಸಹಜಸ್ಥಿತಿ ಇವೆಲ್ಲವೂ ತೀರಾ ಸಾಂಕೇತಿಕವಾಗಿ ರೂಪಕಗಳ ಮಾದರಿಯಲ್ಲಿ ಅಭಿವ್ಯಕ್ತಗೊಂಡಿವೆ.

ಇಲ್ಲಿ 'ಸರ್‍ರಿಯಲಿಸಂ ಲಕ್ಷಣಗಳನ್ನು'[೨೩] ಅಳವಡಿಸಿಕೊಳ್ಳಲಾಗಿದೆ ಅವಾಸ್ತವನೆಲೆಯದೆಂದು ನಿರ್ಧರಿಸಲ್ಪಡಬಹುದಾದ ಪರಸ್ಪರ ಅಂಟಿಕೊಂಡಿರುವ ಜೋಡಿ ತಲೆಗಳು, ನೈಜ ಜಾಗದಲ್ಲಿ ಕಾಣಲು ಅಸಾಧ್ಯವೆನಿಸುವ ವಿಚಿತ್ರ ವಿನ್ಯಾಸದ ಕೈ ಮುದುರಿ ಬದುಕುಳಿಯಲು ಸಾಧ್ಯವೇ ಇರದ ಪರಸ್ಪರ ಅಂಟಿರುವ ಎರಡೂ ಮುಖಗಳನ್ನು ತನ್ನೊಳಗೆ ಸೇರಿಸಿಕೊಂಡಿರುವ ಕಣ್ಣು, ಕಿವಿ, ಮೂಗು, ಬಾಯಿಗಳಿಂದ, ಕೊನೆಯಲ್ಲಿ ಹಳದಿ ಬಣ್ಣದ ಗಾಂಧಿಟೋಪಿಯನ್ನು ಧರಿಸಿರುವ ಶಿರೋಭಾಗ ಇವೆಲ್ಲವೂ ಶುದ್ಧ ಸರ್‍ರಿಯಲಿಸಂ ಪಂಥೀಯ ಗುಣ-ಸ್ವಭಾವಗಳಾಗಿವೆ. ಬಹುಪಾಲು ದಟ್ಟ ಕಪ್ಪು ಬಣ್ಣ ಹೊಂದಿರುವ, ತೀರ ಸ್ವಲ್ಪವೇ ಭಾಗದಲ್ಲಿ ದಟ್ಟಬೂದು ಬಣ್ಣವನ್ನು ಹೊಂದಿರುವ ಹಿನ್ನೆಲೆಯಲ್ಲಿ ಅಚ್ಚಹಳದಿ, ಹಸಿರು, ಬಿಳಿ, ಕೆಂಪು ಬಣ್ಣಗಳಲ್ಲಿ ಮುಖಪುಟದ ಅವಕಾಶದಲ್ಲಿ ಎದ್ದುಕಾಣುವಂತೆ ಚಿತ್ರ ನಿರೂಪಿಸಲ್ಪಟ್ಟಿರುವುದರಿಂದ ಸಹಜವಾಗಿಯೇ ಒಮ್ಮೆಂದೊಮ್ಮೆಲೇ ನೋಡುಗರ ಗಮನ ಈ ಚಿತ್ರದ ಕಡೆಗೆ ಹರಿಯುವಂತೆ ರೂಪಿಸಲಾಗಿದೆ. ಕೃತಿಯ ಶೀರ್ಷಿಕೆ ಮುಖಪುಟದ ಚಿತ್ರದ ಮೇಲೆ ಅರ್ಧ ಚಂದ್ರಾಕಾರದಲ್ಲಿ, ಹಳದಿಬಣ್ಣದಲ್ಲಿ ಬರೆಯಲ್ಪಟ್ಟಿದ್ದು, ಅದರ ಮೇಲ್ಗಡೆ ಮಂದ ಬಿಳಿ ಬಣ್ಣದಲ್ಲಿ ಪುಟ್ಟ ಅಕ್ಷರಗಳಲ್ಲಿ ಲೇಖಕನ ಹೆಸರನ್ನು ಬರೆಯಲಾಗಿದೆ. ಕೃತಿಶೀರ್ಷಿಕೆಯ ಅಕ್ಷರಗಳಲ್ಲಿ ಲೇಖಕರ ಹೆಸರು, ಗೋಥಿಕ್/ರೋಮನ್ ಮಾದರಿಯಲ್ಲಿ ಸರಳಗೈ (Free Hand) ಶೈಲಿಯಲ್ಲಿವೆ.

### ೫.೪.೮. ವಾಸನಾ ಕಾಂಡ (೧೯೮೪)

೧೯೮೪ 'ವಾಸನಾ ಕಾಂಡ'ದ ಮುಖಪುಟ ಚಿತ್ರ ನೈಜಶೈಲಿಯದ್ದು, ಮುಖಪುಟದ ಒಟ್ಟಾರೆ ಸ್ವಭಾವ ಸರಿಸುಮಾರು ಶೇ. ೯೦ ರಷ್ಟು ಭಾಗ ಹಿನ್ನೆಲೆ ಮುನ್ನೆಲೆ ಚಿತ್ರಗಾರಿಕೆಗೆ ಮೀಸಲಾಗಿದ್ದು, ಶೇ.೧೦ ರಷ್ಟು ಭಾಗ ನಿರಾಕೃತಿ ತೆರಪು ಮತ್ತು ಕೃತಿಶೀರ್ಷಿಕೆ ಹಾಗೂ ಲೇಖಕರ ಹೆಸರಿಗೆ ವಿನಿಯೊಗಿಸಲ್ಪಟ್ಟಿದೆ (ಬಳಕೆಯಾಗಿದೆ), ಇಲ್ಲಿ ತುಸು ಕಂದು ಮಿಶ್ರಿತ ಹಸಿರುಬಣ್ಣದ ಸ್ಥಳಾವಕಾಶದಲ್ಲಿ ಯುವತಿ(ಪ್ರಾಯ ಪ್ರಬುದ್ಧ ತರುಣಿ)ಯೋರ್ವಳ ನೈಜಶೈಲಿಯ ಭಾವರೇಖಾಚಿತ್ರ ಮುನ್ನೆಲೆಯಲ್ಲಿ ಚಿತ್ರಿಸಲ್ಪಟ್ಟಿದ್ದು, ಅವಳ ಹಿಂದುಗಡೆ ಮೇಲ್ಭಾಗದಲ್ಲಿ ಚಿಕ್ಕದಾಗಿ ಗಂಡು-ಹೆಣ್ಣು ಜೊತೆಯಾಗಿ ನಿಂತಿವೆ ಉಳಿದ ಹಿನ್ನೆಲೆಯ

---

೨೩. ಎನ್. ಮರಿಶಾಮಚಾರ್: ಸರ್‍ರಿಯಲಿಸಂ,ಪು-೫

ಆವರಣದಲ್ಲಿದ್ದ ಕಾಮೋತ್ತೇಜಕ ಭಂಗಿಯಲ್ಲಿ ಹೆಣ್ಣುಗಳ ನಗ್ನ ದೇಹದ ಬಾಹ್ಯ ನೋಟದ ರೇಖಾಚಿತ್ರಗಳಿವೆ. ಇವು ವಿವರ ಪೂರ್ಣವಾಗಿಲ್ಲ. ಅಂದರೆ ಇವುಗಳ ಕಣ್ಣು, ಕಿವಿ, ಮೂಗು, ಬಾಯಿ ಇತ್ಯಾದಿ ಮುಖ ವಿವರಗಳಾಗಲಿ, ಹಸ್ತವಾರಗಳ ಸ್ಪಷ್ಟ ಚಿತ್ರಣವಾಗಲಿ ಇಲ್ಲ. ಹಿನ್ನೆಲೆಯಲ್ಲಿ ರೂಪಿಸಲ್ಪಟ್ಟ ಈ ನಗ್ನಹೆಣ್ಣುಗಳ ಭಂಗಿಗಳ ರೇಖಾ ವಿನ್ಯಾಸ ಹೆಣ್ಣಿನ ಮನಸ್ಸಿನಲ್ಲಿ ಹುದುಗಿರುವ ಕಾಮವಾಂಛೆಯನ್ನು, ವಿಷಯ ವಾಸನೆಯನ್ನು ಧ್ವನಿಸುತ್ತದೆ. (ಅಲ್ಲದೆ ಈ ನಗ್ನಕಾರಗಳ ಸುತ್ತಲೂ ದಟ್ಟ ಕಪ್ಪು ಆವರಣವನ್ನು ಹೊಂದಿವೆ. ಬಹುಶಃ (ಕಪ್ಪು ಆವರಣ) ಇದು ಕಾಮವೆಂಬ ಅಂಧಕಾರವನ್ನು ಸಂಕೇತಿಸುವುದೆಂಬ ಅರ್ಥ ಹೊಂದಿರುವುದೇನೋ?) ಇಲ್ಲಿನ ಮುಖಪುಟ ವಿನ್ಯಾಸದಲ್ಲಿ ಸಾಮಾನ್ಯಸ್ತರದ ಜನಸಮುದಾಯವನ್ನು ತಲುಪಬಲ್ಲ/ಅಂಥವರಿಗೆ ಅರ್ಥವಾಗಬಲ್ಲ ಸ್ಪಷ್ಟತೆಯುಳ್ಳ ಶೈಲಿಯ ಚಿತ್ರಗಳು ರಚಿಸಲ್ಪಟ್ಟಿವೆ. ಇದು ಒಂದು ರೀತಿಯಲ್ಲಿ ಸರಳವಾದ ರಾಗಾಲಾಪನೆ ಹೊಂದಿರುವ ಭಾವಗೀತವಿದ್ದಂತೆ ಎನ್ನಬಹುದು.

ಇಲ್ಲಿನ ಎಲ್ಲ ರೂಪಗಳೂ ನೈಜ ಶೈಲಿಯಲ್ಲಿ ಅಭಿವ್ಯಕ್ತಗೊಂಡಿರುವುದರಿಂದ ಶೈಲಿಯ ದೃಷ್ಟಿಯಿಂದ ಶ್ರೀ ಸಾಮಾನ್ಯನಿಗೆ ಹತ್ತಿರವಾದುದು. '೧೯೮೦ರ ದಶಕದ ಸಿನಿಮಾ, ರಂಗಭೂಮಿ ಬ್ಯಾನರ್‌ಗಳಲ್ಲಿ/ ಪೋಸ್ಟರ್‌ಗಳಲ್ಲಿ ಪ್ರಚಲಿತದಲ್ಲಿದ್ದ ಚಿತ್ರಗಾರಿಕೆಯ ವಿಧಾನವೇ ಇಲ್ಲೂ ಅನ್ವಯಿಸಲ್ಪಟ್ಟಿದೆ. ಹಾಗಾಗಿ ಇಲ್ಲಿನ ಚಿತ್ರಗಾರರಿಗೆ ಆ ರೀತಿಯ ಪ್ರಭಾವದ ಗಾಢತೆ ದಟ್ಟೈಸಿರಬಹುದೆಂದು ಊಹಿಸಬಹುದಷ್ಟೆ'[೨೪] ಅಂತೆಯೇ ಕೃತಿ ಶೀರ್ಷಿಕೆಯ ಬರಹದಲ್ಲೂ ಸಹ ಸರಳಗೈ (Free Hand) ಬರಹ ವಿಧಾನವಿರುವುದಾದರೂ ತೀರ ಕನಿಷ್ಠ ಮಟ್ಟದ ಅಕ್ಷರಜ್ಞಾನವಿರುವ ವ್ಯಕ್ತಿಗೂ ಸ್ಪಷ್ಟವಾಗಿ ಅರ್ಥವಾಗಬಲ್ಲ ಅಕ್ಷರ ವಿನ್ಯಾಸ ಕ್ರಮ ಇಲ್ಲಿ ಅನುಸರಣೀಯವಾಗಿದೆ. ಮುಖ್ಯವಾಗಿ ಚಿತ್ರಕೃತಿಗಳ ಶೈಲಿಗೂ, ಅಕ್ಷರ ಶೈಲಿಗೂ ಹೊಂದಾಣಿಕೆಯಿದೆ. ಒಂದು ಸಮತೋಲನ, ಸಂತುಲತೆ ಏರ್ಪಟ್ಟಿದೆ. ಇಲ್ಲಿನ ಚಿತ್ರಕಾರರು ಸಮಕಾಲೀನ ಚಿತ್ರಶೈಲಿಯನ್ನು ಇಲ್ಲಿ ಅನುಸರಿಸದೇ ಇದ್ದರೂ, ಸೃಜನಶೀಲತೆಯ ಕಡೆಗೆ ಗಮನಹರಿಸದಿದ್ದರೂ, ಇಲ್ಲಿನ ಸಂಯೋಜಿತ ಅಂಗಗಳಲ್ಲಿ (ಚಿತ್ರಗಾರಿಕೆಯ ಶೈಲಿ, ಬರಹಶೈಲಿ ಸಂಯೋಜನಾ ಮಾದರಿ) ಒಂದು ಕ್ರಮಬದ್ಧತೆ ಕಾಯ್ದುಕೊಂಡಿರುವುದರಿಂದ ಚಿತ್ರಕಲಾರಂಗದಲ್ಲಿ ಅನುಭವಹೊಂದಿರುವ ಕಲಾವಿದರು ಎಂದು ನಿರ್ಣಯಿಸಬಹುದು. ಕೇಶವ ಮೊರಬ್ ಎನ್ನುವ ಲೇಖಕರು ಬರೆದ ಈ ಕೃತಿಯನ್ನು ಎಸ್.ಎಲ್.ಎನ್. ಪ್ರಿಂಟಿಂಗ್ ಪ್ರೆಸ್ ಮುದ್ರಿಸಿದೆ.

**೫.೪.೯. ಅಗೋಚರ (೧೯೮೫)**

೧೯೮೫ ರಲ್ಲಿ ಕೇಶವ್ ಮೊರಬ್ ಎನ್ನುವವರಿಂದ ರಚಿತವಾದ 'ಅಗೋಚರ' ಕೃತಿ ನಿರ್ಮಲ ಪ್ರಿಂಟರ್ಸ್‌ನಲ್ಲಿ ಮುದ್ರಣ ಕಂಡಿದ್ದು, ಈ ಕೃತಿಯ ಮುಖಪುಟ ಮಂದ ಕಪ್ಪು – ಬಿಳಿ ಬಣ್ಣದಿಂದ ಆವೃತವಾಗಿದ್ದು (ಮಂಜು ಮುಸುಕಿದ ರೀತಿ) ಮುಖಪುಟದ ಮಧ್ಯಭಾಗದ ಮುನ್ನೆಲೆಯಲ್ಲಿ ಮುಸುಕಾಗಿ ಒಬ್ಬ ಪುರುಷಕಾರ ಅರ್ಧ ಪ್ರಮಾಣದಲ್ಲಿ ಚಿತ್ರಿಸಲ್ಪಟ್ಟಿದ್ದು ಅದರ ಸುತ್ತಮುತ್ತೆಲ್ಲ ಪಾಳುಬಿದ್ದ ಅಸ್ಪಷ್ಟ ಬಿಳಲುಗಳು/ಅವಶೇಷಗಳು ಇವೆ. ಈ ಮುಖಪುಟದ ವಿನ್ಯಾಸವೆಲ್ಲಾ ಯಾವೊಂದು ಸ್ಪಷ್ಟ ಆಕಾರ ನಿರೂಪಣೆಗಳು

೨೪. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

ಇರದ ನೋಡುಗನನ್ನು ಒಂದು ರೀತಿಯ ಮಬ್ಬುಗತ್ತಲ ಭಾವನಾವಲಯಕ್ಕೆ ತಳ್ಳುವಂತಹ ಅಭಿವ್ಯಕ್ತಿ ಕಲಾ ಶೈಲಿಯ ದೃಷ್ಟಿಯಿಂದ ಆ ಕಾಲಘಟ್ಟಕ್ಕೆ ಇದು ನವ್ಯದ ಹಾದಿ ಹಿಡಿದಿರುವಂತಹುದು. ಶೈಲಿಯ ಕುರಿತಂತೆ ಪ್ರಯೋಗಾತ್ಮಕ ದೃಷ್ಟಿಕೋನದಿಂದ ಕೂಡಿದುದು ಅಂತೆಯೇ ಶೀರ್ಷಿಕೆಗೂ ಕೂಡ ತಕ್ಕುದಾಗಿಯೇ ಅನ್ವಯವಾದುದ್ದಾಗಿದೆ. ಇಲ್ಲಿನ ಶೈಲಿ ಕೃತಿಯ ಶೀರ್ಷಿಕೆಯ ಅಕ್ಷರಗಳು ಬಿಳಿ ಮತ್ತು ತಿಳಿಗೆಂಪು ಮಿಶ್ರಿತ ವರ್ಣದಲ್ಲಿ ಗೋಥಿಕ್ ಶೈಲಿಯಲ್ಲಿ ಬರಯಲ್ಪಟ್ಟಿದ್ದು ಮುಖಪುಟದಲ್ಲಿ ಅದೇ ಎದ್ದು ಕಾಣುತ್ತದೆ. ಮುಖಪುಟದ ತಳಭಾಗದಲ್ಲಿ ಕಪ್ಪು ಮತ್ತು ಬೂದು ಬಣ್ಣದಲ್ಲಿ ಕೃತಿಯ ಲೇಖಕರ ಹೆಸರು ಸರಳವಾಗಿ ಓದುಗರ ಗಮನಕ್ಕೆ ಬರುವಂತೆ, ಚಿತ್ರವಿನ್ಯಾಸ ಅದಕ್ಕೆ ಆಭಾಸವಾಗದ ರೀತಿಯಲ್ಲಿ ಪುಟ್ಟ ಅಕ್ಷರಗಳಲ್ಲಿ ಕ್ಯಾಲಿಗ್ರಾಫಿ ಶೈಲಿಯಲ್ಲಿ ಬರೆಯಲಾಗಿದೆ.

**೫.೪.೧೦. ಒಗಟಾದಳು ಹೆಣ್ಣು (೧೯೮೫)**

೧೯೮೫ ರಲ್ಲಿ ರೋಹಿದಾಸ್ ಮಹಾಲೆಯವರಿಂದ ರಚನೆಯಾದ 'ಒಗಟಾದಳು ಹೆಣ್ಣು' ನಾಟಕ ಕೃತಿಯ ಮುಖಪುಟ ವಿನ್ಯಾಸ ಗೊಳಿಸಿದವರು ಜಿ.ಎಂ.ಹೆಗಡೆ ಎಂಬ ಕಲಾವಿದರು ಕಂದು ಬಣ್ಣದ ಅವಕಾಶದಲ್ಲಿ ಗ್ರಾಫಿಕ್ ತಂತ್ರಯುಕ್ತ ಅಭಿವ್ಯಕ್ತಿಯಲ್ಲಿದ್ದು, ಸ್ಮರಣಚಿತ್ರಣ ಪ್ರಕಾರದ ಚಿತ್ರಕೌಶಲವನ್ನು ನೆನಪಿಸುವಂತಹ ಆಕೃತಿಗಳು ಇಲ್ಲಿನವು ಮುಖಪುಟದ ಒಟ್ಟು ಅವಕಾಶದಲ್ಲಿ ಸರಿಸುಮಾರು ಶೇ. ೬೫ ರಷ್ಟು ಭಾಗದಲ್ಲಿ ಆಯತಾಕಾರದ ಆವರಣ ಶಿಸ್ತಿನಲ್ಲಿ ರಚನೆಗೊಂಡು ಇಲ್ಲಿನ ವಿನ್ಯಾಸ ಚಿತ್ರಗಳಲ್ಲಿ ಮಾನವ ಬೇರೆ ಬೇರೆ ಭಾವದ ಮತ್ತು ಭಂಗಿಯ ಮೂರು ಮಾನವ ರೂಪಗಳು ಇಡಿಯ/ಸಾರಭೂತ ಅರ್ಥಧ್ವನಿಸುವ ಕೃತಿಯ ಕುರಿತಾದ ರೂಪಕಗಳಂತೆ ತೋರಿಬಂದಿವೆ. ಅರ್ಧ ಛಾಯಾಕರಣ (Half Tone) ಕೌಶಲ್ಯದಲ್ಲಿ (ತಂತ್ರಗಾರಿಕೆ) ರೇಖಾತ್ಮಕತೆ ಮತ್ತು ಏಕವರ್ಣಯುಕ್ತವಾಗಿ ರಚಿತವಾದವುಗಳಿವು.

ಈ ಕೃತಿಯ ಮುಖಪುಟದ ಒಂದೆಡೆ ಚಿತ್ರಿಸಲ್ಪಟ್ಟಿರುವ ಚಿಂತಾಕ್ರಾಂತ ಮಹಿಳೆಯ ಭಾವಚಿತ್ರ ಮಹಿಳೆಯ ಅಬಲತ್ವವನ್ನು/ಅಸಹಾಯಕತೆಯನ್ನು ಸೂಚಿಸಿದರೆ ಮುಖತಿರುಗಿಸಿ ಎದೆಸೆಟೆದು) ನಿಂತ ಪೋಲೀಸ್ ಸಮವಸ್ತ್ರದಲ್ಲಿರುವ ಯುವತಿಯೋರ್ವಳು ಕ್ರೋಧಾಮಿಷ್ಯಳಾಗಿ ಪಿಸ್ತೂಲನ್ನೂ ತನ್ನ ಹಿಂದುಗಡೆ ಗುರಿಯಿರಿಸಿ ಹಿಡಿದಿರುವ ಭಂಗಿ ಹೆಣ್ಣಿನ ಇನ್ನೊಂದು ಮಗ್ಗುಲನ್ನು (ಮುಖವನ್ನು) ಪರಿಚಯಿಸುತ್ತಿದೆ. ಮುನ್ನೆಲೆಯಲ್ಲಿ ಒಂದಿಷ್ಟು ಪುಸ್ತಕ ಲೇಖನ ಸಾಮಗ್ರಿಗಳೊಂದಿಗೆ ಟೇಬಲ್ ಮೇಲೆ ಕೈಯೊಂದನ್ನು ಊರಿ ಗಲ್ಲಕ್ಕೆ ಹಸ್ತ ಇಟ್ಟು (ಗಲ್ಲಕ್ಕೆ ಹಸ್ತವನ್ನು ತಾಗಿಸಿ) ಮುಖ ಕೆಳಗೆ ಮಾಡಿರುವ ಪುರುಷನ ರೇಖಾಚಿತ್ರ ಹೆಣ್ಣಿನ ಬಗೆಬಗೆಯ ಭಾವಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಪುರುಷ ಅಪ್ಪಿಕೊಳ್ಳುವ ಸೋಲನ್ನು ಸಂಕೇತಿಸುವಂತಿದೆ.

ಒಟ್ಟಿನಲ್ಲಿ ಸರಳರೂಪಕದ ಮಾದರಿಯಲ್ಲಿ ರೂಪುಗೊಂಡಿರುವ ಈ ಮುಖಪುಟದ ಚಿತ್ರದ ಸಾರವನ್ನು ಇದರ ಶೀರ್ಷಿಕೆಯೊಟ್ಟಿಗೆ ಹೋಲಿಸಿ ಒಂದಿಷ್ಟು ಲಕ್ಷ್ಯವಹಿಸಿ ನೋಡುವ ವ್ಯವಧಾನ ಹೊಂದಿದ ಯಾರಿಗೇ ಆದರೂ ಇಲ್ಲಿನ ಚಿತ್ರ ಅರ್ಥವಾಗುವಂತಿದೆ. ಇಲ್ಲಿನ ಒಟ್ಟಾರೆ ಚಿತ್ರ ವಿನ್ಯಾಸವನ್ನು ಗಮನಿಸಿದರೆ ಕಲಾವಿದರಿಗೆ ಸಂಯೋಜನೆಯೊಂದರಲ್ಲಿ ಕಾಯ್ದುಕೊಳ್ಳಬೇಕಾದ ಶೈಲಿ, ತಂತ್ರಗಾರಿಕೆ, ಆಕೃತಿ ನಿರೂಪಣೆಗಳಲ್ಲಿನ ಲಯಗಾರಿಕೆ

ಮತ್ತು ವೈಯಕ್ತಿಕತೆಯ ಕುರಿತು ತಕ್ಕಮಟ್ಟಿಗಾದರೂ ಅರಿವು ಮೂಡಿದ್ದಿತು ಎಂದು ಪರಿಭಾವಿಸಬಹುದು (ಊಹಿಸಬಹುದು) ಮುಖಪುಟದ, ಚಿತ್ತಾವರಣದ ಹಿನ್ನೆಲೆಯಲ್ಲಿ ಬೀಡುಬೀಸಾಗಿ ಎಳೆದಿರುವ ಕಪ್ಪು ಬಣ್ಣದ ಓರೆ ಬೀಸುಗಳು ಮತ್ತು ಆಕೃತಿಗಳ ಅಂಚುಗಳಲ್ಲಿ ಎಳೆದಿರುವ ರೇಖೆಗಳ ವೇಗ ಮತ್ತು ಸತ್ವ ಅರ್ಧ ಛಾಯಾಕರಣ ತೋರ್ಪಡಿಸುವಲ್ಲಿ ಮನಮುಟ್ಟುವಂತೆ ರಭಸವಾಗಿ ನಿರ್ವಹಿಸಿದ ಕಂದು ಬಣ್ಣದ ಅರ್ಧ ಛಾಯಾಗ್ರಹಣ ಪರಿಣಾಮ ಈ ಎಲ್ಲ ಅಂಶಗಳಲ್ಲಿ ಒಂದು ಏಕಸೂತ್ರತೆ ಲಯಬದ್ಧತೆ ಕಂಡು ಬಂದಿರುವುದೂ ಸಹ ಇಲ್ಲಿ ಗಮನ ಸೆಳೆಯುವಂತಹ ಅಂಶವಾಗಿದೆ. ಕೊಂಚಮಟ್ಟಿಗೆ ಸೃಜನಶೀಲತೆಯ ಅಲ್ಪ ಪ್ರಭಾವ ಇಲ್ಲಿ ಸಮ್ಮಿಳಿತಗೊಂಡಿರುವುದು ಸಹ ಸೂಕ್ಷ್ಮವಾಗಿ ಅವಲೋಕಿಸಿದಾಗ ಲಕ್ಷ್ಯಕ್ಕೆ ಬರುವ ಸಂಗತಿಯಾಗಿದೆ.

೫.೪.೧೧. ಪ್ರಶಸ್ತಿ (೧೯೮೫)

'ಪ್ರಶಸ್ತಿ' (೧೯೮೫) ಮಲಗಿರುವ ಹೆಣ್ಣೊಬ್ಬಳ ರೇಖಾಚಿತ್ರ ಹೊಂದಿರುವ ಕೃತಿಯ ಮುಖಪುಟ ವಿನ್ಯಾಸ ಸೃಜನಶೀಲತೆಯಿಂದ ಕೂಡಿದುದು ಎನ್ನಬಹುದು. (ಇದರ ಲೇಖಕರು ಕೇಶವ ಮೊರಬ್, ಮುದ್ರಿಸಿದವರು ಎಸ್.ಎಲ್.ಎನ್. ಪ್ರಿಂಟಿಂಗ್ ಪ್ರೆಸ್,) ಹೆಣ್ಣಿನ ರೇಖಾಚಿತ್ರವೊಂದನ್ನು ಬಿಟ್ಟರೆ ಹಿನ್ನೆಲೆಯಲ್ಲಿ ಬಳಸಿದ ಕಡುಗಪ್ಪು ಬಣ್ಣ ಮುಖಪುಟದ ಎರಡೂ ನೈಜಶೈಲಿಗೆ ಹತ್ತಿರವಾಗಿರುವ ಅಂಚುಗಳಿಗೆ ಲೇಪಿಸಿರುವ ತಿಳಿ ಹಸಿರು ಮತ್ತು ಕಂದು ಮಿಶ್ರಿತ ತಿಳಿ ಹಸಿರು ಬಣ್ಣದ ಲೇಪನ ಪದ್ಧತಿ ಇವೆಲ್ಲ ಜಾನಪದೀಯ ಮಾದರಿಯಲ್ಲಿದ್ದು, ಮುಖಪುಟದ ಮಧ್ಯದ ವಿಶಾಲ ಅವಕಾಶಕ್ಕೆ ಲೇಪಿಸಿದ ದಟ್ಟಕಪ್ಪು ಮತ್ತು ಬಿಳಿ ಬಣ್ಣ ಕಪ್ಪು ಬಿಳಿ ವಿರುದ್ಧ ಸಂಯೋಜನೆಯನ್ನು ಉಂಟುಮಾಡಿರುವುದರಿಂದ ಸಹಜವಾಗಿ ಕಣ್ ಸೆಳೆಯುತ್ತದೆ.ಅಲ್ಲದೆ ಅಲ್ಲಿ ರೇಖಿಸಲ್ಪಟ್ಟಿರುವ ಹೆಣ್ಣಿನ ಆಕಾರದೆಡೆಗೆ ನೋಡುಗರ ಗಮನವನ್ನು ಕೇಂದ್ರೀಕರಿಸುತ್ತದೆ. ತಲೆಯ ಕಡೆಗೆ ತನ್ನ ಎಡಗೈ ಒರಗಿಸಿ ಮಲಗಿರುವ ಹೆಣ್ಣಿನ 'ಶಯನ ಭಂಗಿಯೇ' ಇಲ್ಲಿನ ಪ್ರಧಾನ ರೂಪವಿನ್ಯಾಸ ಈ ಹೆಣ್ಣಿನ ಆಕಾರ ಚಿತ್ರಣದಲ್ಲಿ ಮಾನವ ಶರೀರ ಶಾಸ್ತ್ರದ (Anatomical Structures) ಅಂಗ ಪ್ರಮಾಣ ಪಾಲನೆಗೊಂಡಿಲ್ಲ. ಕಲಾವಿದರು ಉದ್ದೇಶಪೂರ್ವಕವಾಗಿ ಆ ರೀತಿ ಚಿತ್ರಿಸಿಲ್ಲ ಅರೆಬೆತ್ತಲೆಯಾಗಿ ಮಲಗಿರುವ ಹೆಣ್ಣಿನ ದೇಹದ ಬಾಹ್ಯ ರೇಖೆ ಸರಾಗವಾಗಿ ಹರಿದಾಡಿರುವುದಾದರೂ ಹಸ್ತ /ಕೈ ಬೆರಳುಗಳು ನೈಜತೆಯಿಂದ ಇಲ್ಲ ಮತ್ತು ಸ್ಪಷ್ಟ ಚಿತ್ರಣವಿಲ್ಲ. ಹೆಣ್ಣಿನ ಕುಪ್ಪಸಕ್ಕೆ ಮಂದ ಕಂದು ಮಿಶ್ರಿತ ತಿಳಿಹಸಿರು ಹೋಲುವ ಬಣ್ಣ ಲೇಪಿಸಲ್ಪಟ್ಟಿದ್ದು ಮುಖಪುಟ ವರ್ಣಸಂಯೋಜನೆಯ ಸಮತೋಲನ ದೃಷ್ಟಿಯಿಂದ, ಮಾಡಿದ ನಿರ್ವಹಣೆ ಅದು ಎಂದು ಅಭಿಪ್ರಾಯ ಪಡಬಹುದು.

ಬಿಳಿಯ ಬಣ್ಣದ ಅವಕಾಶದ ಸಮತೋಲನ ದೃಷ್ಟಿಯಿಂದ ಮತ್ತು ಮುಖಪುಟದಲ್ಲಿ ಶೀರ್ಷಿಕೆ ಢಾಳಾಗಿ ಕಾಣಬೇಕೆಂಬ ದೃಷ್ಟಿಯಿಂದ ಹೀಗೆ ಎರಡೂ ದೃಷ್ಟಿಗಳಿಂದಲೂ ಕೃತಿಯ ಶೀರ್ಷಿಕೆ ಅಚ್ಚಬಿಳಿಯ ಬಣ್ಣದಲ್ಲಿ ದೊಡ್ಡದಾಗಿ ಬರೆಯಲ್ಪಟ್ಟಿದ್ದುದು ಸೂಕ್ತವಾದ ಕ್ರಮ / ಪದ್ಧತಿ ಎನ್ನಬಹುದು. ತಳಭಾಗದಲ್ಲಿ ಮಂದವಾದ ಕಂದು ಮತ್ತು ಹಸಿರು ಮಿಶ್ರಿತ ತೆಳುಗೆರೆ ತುಂಬಾ ಮಂದವಾಗಿ ಕೃತಿಕಾರನ ಹೆಸರಿನ ಮೇಲೆ ಮತ್ತು ಕೆಳಗೆ ಎಳೆದಿರುವದೂ ಸಹ ವರ್ಣ ಸಾಮರಸ್ಯದ ಪ್ರತೀಕವೇ ಆಗಿ ಪರಿಗಣಿತವಾಗುತ್ತದೆ. ಒಟ್ಟಿನಲ್ಲಿ

ಅನಾಮಧೇಯರಾಗಿಯೇ ಉಳಿದ ಇಲ್ಲಿನ ಕಲಾವಿದರು ಸಾಕಷ್ಟು ಪ್ರಬುದ್ಧತೆ ಹೊಂದಿದ್ದವರು ಎನ್ನುವದು ಈ ಮುಖಪುಟ ವಿನ್ಯಾಸಗಾರಿಕೆಯಿಂದ ಮನದಟ್ಟಾಗುತ್ತದೆ. ಹೆಣ್ಣಿನ ಆಕೃತಿಯಂಚಿಗೆ ಹಾಯ್ದ ರೇಖಾ ವೈಖರಿ, ಮುಖಪುಟದ ಎರಡೂ ಪಾರ್ಶ್ವಗಳ (ಬದಿಗಳ) ಅಂಚುಗಳ ನಡುವೆ ರೂಪಿಸಿರುವ ಅಂಕುಡೊಂಕಾಗಿ-ಕಿರಿದಾಗಿ ರೂಪುಗೊಂಡ ತೆರಪು (ಅವಕಾಶ) ಗಳ ಮಾದರಿ ಇಲ್ಲೆಲ್ಲ ಒಂದು ಅನೂನ್ಯ ಹೊಂದಾಣಿಕೆ ಕಂಡು ಬರುತ್ತದೆ. ಒಟ್ಟಾರೆ ನಿರ್ವಹಣೆಯಲ್ಲಿ ಮುಖಪುಟ ವಿನ್ಯಾಸಕ್ಕೊಂದು ಕಲಾಕೃತಿಯ ಸ್ವರೂಪ ನೀಡುವ ಪ್ರಯತ್ನ ನಡೆದಿರುವುದು ಗಮನಕ್ಕೆ ಬರುವ ಅಂಶ ಇಲ್ಲಿನ ಕೃತಿಶೀರ್ಷಿಕೆಯ ಅಕ್ಷರಗಳು ಸರಳಗೈ (Free Hand) ಶೈಲಿಯಲ್ಲಿವೆ.

**೫.೪.೧೨. ಪ್ರೀತಿಯ ಕಣ್ಣೀರು (೧೯೮೭)**

ತ.ಲಿಂಗಣ್ಣ ಚೊಟ್ನಳ್ಳಿಯವರ 'ಪ್ರೀತಿಯ ಕಣ್ಣೀರು' ಇದರ ಮುಖಪುಟಕ್ಕೆ ವಿನ್ಯಾಸ ರೂಪಿಸಿದವರು ಗೋವಿಂದ ರಾಜು ಎನ್ನುವವರು. ಇದು ಪ್ರಕಟಗೊಂಡಿದ್ದು ೧೯೮೭ ರಲ್ಲಿ ಇದರಲ್ಲಿನ ಚಿತ್ರಗಳು ಶೈಲಿಯ ದೃಷ್ಟಿಯಿಂದ ಗಮನಿಸಿದರೆ ನೈಜಕ್ಕೆ (ನೈಜಶೈಲಿಗೆ) ಹತ್ತಿರದಲ್ಲಿ ನಿಲ್ಲುವವುಗಳು ಕಪ್ಪು-ಬಿಳಿಪು ರೇಖಾ ಚಿತ್ರಗಳ ವರ್ಗದಲ್ಲಿ ಪರಿಗಣಿಸಲ್ಪಡುವವುಗಳು. ಚಿತ್ರವಕಾಶದಲ್ಲಿಯ ತಳಭಾಗದಲ್ಲಿ – ಮುನ್ನೆಲೆಯಲ್ಲಿ ವೀಕ್ಷಕರ ಗಮನ ಕೇಂದ್ರೀಕೃತವಾಗುವಂತೆ ರೂಪಿಸಲ್ಪಟ್ಟ ತುಸು ವಯೊವೃದ್ಧ ಬೊಬ್ಬಿಡುತ್ತಿದ್ದು ಮಧ್ಯದಲ್ಲಿ ಬೃಹತ್ತಾದ ಮರವೊಂದಕ್ಕೆ ಒಬ್ಬ ವ್ಯಕ್ತಿ ನೇಣಿಗೆ ಶರಣಾಗಿದ್ದಾನೆ. ಇಲ್ಲಿನ ಅವಕಾಶದ ಮೇಲ್ತುದಿಯಲ್ಲಿ ಇಬ್ಬರು ಪುರುಷರು ಅದ್ಯಾವುದೊ ವಸ್ತು ವಿನಿಮಯದಲ್ಲಿ ತಲ್ಲೀನರಾಗಿದ್ದಾರೆ. ಈ ಇಬ್ಬರು ವ್ಯಕ್ತಿಗಳಲ್ಲಿ ತಲೆಗೆ ಟವೆಲ್ ಸುತ್ತಿಕೊಂಡಾತನೇ ನೇಣಿಗೆ ಶರಣಾಗಿರುವವ ಎಂದು ಸೂಚಿಸುವ ಸಲುವಾಗಿ ಟವೆಲ್ ಸುತ್ತಿಕೊಂಡಾತನ ಬದಿಯಿಂದ ನೇಣಿಗೆ ಏರಿದ (ನೇಣು ಹಾಕಿಕೊಂಡ) ವ್ಯಕ್ತಿಯ ಕಡೆ ಗುರುತನ್ನು ತೋರಿಸಲಾಗಿದೆ.

ಇಲ್ಲಿನ ಕಲಾವಿದರ ಕಲಾಕೌಶಲ್ಯದ ಕುರಿತು ವಿಶ್ಲೇಷಿಸುವುದಾದರೆ ಮುನ್ನೆಲೆಯಲ್ಲಿ ಬೊಬ್ಬಿಡುತ್ತಿರುವ ಸ್ತ್ರೀಯ ಆಕೃತಿ ಸಾಕಷ್ಟು ಭಾವಪೂರ್ಣವಾಗಿಯೂ, ಹೆಚ್ಚು ನೈಜತೆಯಿಂದಲೂ ಚಿತ್ರಿಸಲ್ಪಟ್ಟಿದೆ. ಆದರೆ ಮೇಲ್ತುದಿಯಲ್ಲಿ ಪ್ರತ್ಯೇಕ ಆವರಣದಲ್ಲಿ ರಚಿತವಾದ ಎರಡು ಪುರುಷ ಕೃತಿಗಳು ಮುಖಚರ್ಯೆಯಲ್ಲಿ ಭಾವ ಪೂರಿತವಾಗಿ ಚಿತ್ರಣಗೊಂಡಿದ್ದರೂ ಅಂಗಾಂಗ ನಿರೂಪಣೆಯಲ್ಲಿ ಮಾನವ ಶರೀರ ಶಾಸ್ತ್ರದ ಅಂಗಭಂಗಿಗಳ ಸಹಜ ಅಭಿವ್ಯಕ್ತಿ ತೋರ್ಪಡಿಸುವಲ್ಲಿ ಎಡವಿದ್ದು ಸ್ಪಷ್ಟವಾಗಿ ಗಮನಕ್ಕೆ ಬರುವ ಅಂಶ. ಉದಾ: ಟವೆಲ್ ಸುತ್ತಿರುವವನ ಎದುರಿಗೆ ವ್ಯವಹರಿಸುತ್ತಿರುವ ತರುಣನ ಹಸ್ತ ವಿನ್ಯಾಸಗಳು ತಪ್ಪಾಗಿ ಚಿತ್ರಿತವಾಗಿವೆ. ಅಂತೆಯೆ ಟವೆಲ್ ಸುತ್ತಿಕೊಂಡಿರುವವನ ಕೈಗಳೂ ಸಹ ಮಾನವ ಶರೀರ ಶಾಸ್ತ್ರದ ಪ್ರಕಾರ ಗಮನಿಸಿದರೆ ಸೂಕ್ತ ರೀತಿಯಲ್ಲಿ ಚಿತ್ರಿತವಾಗಿಲ್ಲ. ಮುಖಪುಟದ ಮಧ್ಯ ಅವಕಾಶದಲ್ಲಿ ರೂಪಿಸಿದ ವೃಕ್ಷಗಳಲ್ಲಿ ಶ್ರದ್ಧಾಪೂರ್ಣ ನಿರ್ವಹಣೆಯನ್ನು ಮನಗಾಣಬಹುದು ಮರದ ತೊಗಟೆಗಳ ಸುಳಿಗಳನ್ನು ತೋರ್ಪಡಿಸುವಲ್ಲಿ ಎಲೆಗಳ ತೋರ್ಪಡಿಕೆಯಲ್ಲಿ ಗಹನವಾದ ತಾಳ್ಮೆಯಿಂದ ನಿರ್ವಹಿಸಿರುವದೂ ಸಹ ಗಮನಕ್ಕೆ ಬರುವ

ಅಂಶ .ಅಂತೆಯೆ ಮುನ್ನೆಲೆ ಮತ್ತು ಹಿನ್ನೆಲೆಯ ನಿರೂಪಣೆಯಲ್ಲಿ ತಕ್ಕಮಟ್ಟಿಗೆ ಯಥಾದರ್ಶನ ನಿಯಮ ಅಳವಡಿಕೆಯಾಗಿರುವದೂ ಸಹ ಗಮನಕ್ಕೆ ಬರುತ್ತದೆ. ಉದಾ:- ಮುಖಪುಟದ ಮೇಲ್ತುದಿಯಲ್ಲಿ ಚಿತ್ರಿಸಿದ ವ್ಯಕ್ತಿಗಳ ಹಿಂದಿನ ದೃಶ್ಯವನ್ನು ಬಹಳ ಮಸುಕು ಮಸುಕಾಗಿ ತೋರಿಸಲಾಗಿದೆ. (ಮಾನವ ಕಣ್ಣ ದೃಷ್ಟಿಯಿಂದ ಬಹಳ ದೂರದಲ್ಲಿರುವ ಸನ್ನಿವೇಶ/ ಸಂಗತಿ/ ವಸ್ತುಗಳಲ್ಲಿ ಮಸುಕಾಗಿಯೇ ಕಾಣುತ್ತವೆ ಎನ್ನುವದು ನಿತ್ಯ ನಮ್ಮಅರಿವಿಗೆ ಬರುತ್ತಿರುವ ಸಹಜ ನೈಸರ್ಗಿಕ ನಿಯಮವೇ ಆಗಿದೆ.) ಇಲ್ಲಿನ ಸಮಪಾತಳಿಯಲ್ಲಿ ಸರಿಸುಮಾರು ಶೇ. ೯೮ ಭಾಗ ರೇಖಾಚಿತ್ರಗಳಿಗೆ ಮೀಸಲಾಗಿದೆ. ಉಳಿದ ಶೇ. ೨ ಭಾಗ ಪ್ರತ್ಯೇಕವಾದ ಆಯತಾಕಾರದ ಚೌಕಟ್ಟಿನೊಳಗೆ ಕಪ್ಪು ಬಿಳುಪು ಮಾದರಿಯಲ್ಲೆ (single tone) ಇದ್ದು ಶೀರ್ಷಿಕೆಯ ಅಕ್ಷರಗಳೆಲ್ಲ ಅಚ್ಚ ಬಿಳಿಯ ಬಣ್ಣದಲ್ಲಿ ಕಡು ಕಂದು ಬಣ್ಣದ ಹಿನ್ನೆಲೆಯಲ್ಲಿ ರೂಪಿತವಾಗಿವೆ. ಇವುಗಳ ಶೈಲಿ ಸರಳಗೈ ಶೈಲಿ ಎನ್ನಬಹುದು. ಉಳಿದಂತೆ ಆ ಚೌಕಟ್ಟಿನ ಅವಕಾಶವೆಲ್ಲ ಒತ್ತೊತ್ತಾದ ತೆಳುವಾದ ಲಂಬ ಗೆರೆಗಳಿಂದ ಪೂರ್ತಿಗೊಳಿಸಲ್ಪಟ್ಟಿದೆ. ಮುಖಪುಟದಲ್ಲಿ ಕೃತಿಕಾರನ ಹೆಸರನ್ನು ಉಲ್ಲೇಖಿಸದೆ ಇರುವುದು ಇಲ್ಲಿನ ವಿಶೇಷ ಅಂಶವೂ ಹೌದು. ಜೊತೆಗೆ ಎದ್ದು ಕಾಣುವ ನ್ಯೂನತೆಯೂ ಹೌದು ಅಲ್ಲದೆ ಇಲ್ಲಿನ ಮುಖಪುಟ ವಿನ್ಯಾಸಕಾರರು ಅಷ್ಟೊಂದು ಈ ಕ್ಷೇತ್ರದಲ್ಲಿ ಪಳಗಿದವರಲ್ಲ ಎಂಬುದನ್ನು ಓದುಗರಿಗೆ ಢಾಳಾಗಿ ತೋರಿಸುವ ಅಂಶವೂ ಕೂಡ ಇಲ್ಲಿನ ಸಂಯೋಜನೆಯಲ್ಲಿ ನಿರೂಪಣ ಕ್ರಮದಲ್ಲಿ ಯಾವ ಹೊಸತನವೂ ಇಲ್ಲ. ಸಾಧಾರಣ ನೆಲೆಗಟ್ಟಿನಲ್ಲಿ ನಿಲ್ಲುವ ಮುಖಪುಟ ವಿನ್ಯಾಸವಿದು.

**೫.೪.೧೩. ಸಾಂಬಶಿವ ಪ್ರಹಸನ (೧೯೮೭)**

ಚಂದ್ರಶೇಖರ ಕಂಬಾರರ 'ಸಾಂಬಶಿವ ಪ್ರಹಸನ' (೧೯೮೭) ಎಂಬ ಕೃತಿ ಮುಖಪುಟ ವಿನ್ಯಾಸದಲ್ಲಿಯೇ ಕೃತಿಯೊಳಗಿನ ವಿಡಂಬನಾ ಧ್ವನಿಯನ್ನು ಹೊರಗೆಡಹುತ್ತಿದೆ. ಅಕಾಡೆಮಿಕ್ / ಶಾಸ್ತ್ರೀಯ ಎಂದು ಗುರುತಿಸುವ ಎಲ್ಲ ಕಲಾ ಅಂಶಗಳನ್ನು ಬದಿಗೊತ್ತಿ ರಚಿಸಿದಂತಹುದು. ಇಲ್ಲಿನ ಪ್ರತಿಯೊಂದು ಘಟಕವೂ ವ್ಯಂಗ್ಯವನ್ನು ಪ್ರಕಟಪಡಿಸುತ್ತಿದೆ. ವಿನೋದವನ್ನು ಹೊರಸೂಸುತ್ತಿದೆ (ಪ್ರಹಸನ ಎಂಬ ಶಬ್ದದ ಅರ್ಥವೇ ಹಾಸ್ಯ ಮಿಶ್ರಿತವಾದದ್ದು ವಿನೋದಮಯವಾದುದು ಎಂಬುದಾಗಿದೆ) ಹಳದಿ ಮತ್ತು ತಿಳಿಬೂದು ಬಣ್ಣದ ಹಿನ್ನೆಲೆಯಲ್ಲಿ ಕಪ್ಪು-ಬಿಳುಪಿನಿಂದ ಕೂಡಿದ ಚಿತ್ರಗಳು ಇವುಗಳನ್ನು ವರ್ಗೀಕರಿಸುವುದಾದರೆ ಇವು ವ್ಯಂಗ್ಯಚಿತ್ರಗಳೇ ಸರಿ. ಮದವೇರಿದ ಲೈಂಗಿಕ ಕಾಮನೆಗೊಳಗಾದ ಗಂಡು ಕತ್ತೆ ಲೈಂಗಿಕೋದ್ರೇಕಕ್ಕೊಳಗಾಗಿ ಕಿವಿ ನಿಮಿರಿಸಿ ನಿಂತಿದೆ. ಕಿವಿಗಳು ಕಾಲುಗಳು ಬಿಳಿಯ ಬಣ್ಣದಲ್ಲಿದ್ದು, ಮೈಗೆ ಕಪ್ಪು ಬಣ್ಣ ಬಳಿಯಲಾಗಿದೆ. ಅದರ ಪಕ್ಕದಲ್ಲಿಯೆ ಧಡೂತಿ ವ್ಯಕ್ತಿಯೊಬ್ಬ ಅವಿವೇಕತನದ ಪರಮಾವಧಿಯ ಮನಃಸ್ಥಿತಿಯಲ್ಲಿದ್ದಂತೆ ಇರೂವವೂ ಅಲ್ಲಿಯೇ ಕುಳಿತಿದ್ದಾನೆ.

ಹಿನ್ನೆಲೆಯಲ್ಲಿ ಅನತಿ ದೂರದಲ್ಲಿ ತಲೆಗೆ ಭರ್ಜರಿ ಪೇಟಾ/ಪಟಗಾ ಸುತ್ತಿಕೊಂಡಾತನೊಬ್ಬ ಕತ್ತೆ ಮತ್ತು ಧಡೂತಿ ವ್ಯಕ್ತಿಯ ಕಡೆ ಹಿಂದಿರುಗಿ ನೋಡುತ್ತಿದ್ದಾನೆ. ಸರಳಗೈ ಶೈಲಿಯಲ್ಲಿ ಕಪ್ಪು ಶಾಯಿಯಲ್ಲಿ ಕೃತಿ ಶೀರ್ಷಿಕೆ ಬರೆಯಲ್ಪಟ್ಟಿದ್ದು ಹಳದಿ ಹಿನ್ನೆಲೆಯಲ್ಲಿದೆ. ಕುಳಿತಿರುವ ಧಡೂತಿ ವ್ಯಕ್ತಿಗಿಂತಲೂ ತುಸು ಕೆಳಭಾಗದಲ್ಲಿ ಪುಟ್ಟ ಅಳತೆಯಲ್ಲಿ ಎರಡು ಮಾನವ ಆಕಾರಗಳು ಚಿತ್ರಿಸಲ್ಪಟ್ಟಿವೆ. (ಗ್ರಂಥಾಲಯದ ನೋಂದಣಿ

ಸ್ಟಿಕ್ಕರ್ ಅದರ ಮೇಲೆಯೆ ಅಂಟಿಸಲ್ಪಟ್ಟಿರುವುದರಿಂದ ಆ ಆಕೃತಿಗಳ ಭಂಗಿ ಅವುಗಳೊಟ್ಟಿಗಿನ ಇನ್ನಿತರ ವಿವರಗಳೇನೂ ಕಾಣಿಸುವುದಿಲ್ಲ) ಹಳದಿ ಬಣ್ಣದ ಹಿನ್ನೆಲೆಯುಳ್ಳ ಸಂಯೋಜನೆಯ ಒಂದು ಬದಿಯಲ್ಲಿ ಮತ್ತು ಶೀರ್ಷಿಕೆಯ ಅಕ್ಷರಗಳ ನಡುವೆ ಒಂದಿಷ್ಟು ಕಪ್ಪು ಬಣ್ಣ ಅಸ್ತವ್ಯಸ್ತವಾಗಿ ಚೆಲ್ಲಿದೆ (ಸಿಂಪಡಣೆಯಾಗಿದೆ). ಉಳಿದಂತೆ (ಬಾಕಿ ಇರುವ) ಆವರಣವೆಲ್ಲ ಕೈಯಿಂದ ಎಳೆಯಲ್ಪಟ್ಟ ಕಪ್ಪು ಬಣ್ಣದ ಕಾಟು ಗೀಟುಗಳಿಂದ ಕೂಡಿದೆ. ತೀರ ಕೆಳಗೆ 'ಚಂದ್ರಶೇಖರ ಕಂಬಾರ ಪ್ರಹಸನ'ಸಾಂಬಶಿವ ಪ್ರಹಸನ ಪದ ಪುಂಜಗಳು ಜಾನಪದೀಯ ಶೈಲಿ ಮತ್ತು ವಿನ್ಯಾಸಗಳೊಂದಿಗೆ ಬರೆಯಲ್ಪಟ್ಟಿ ವೆ. ಶೀರ್ಷಿಕೆಯನ್ನು ಮತ್ತು ಮುಖಪುಟ ವಿನ್ಯಾಸವನ್ನು ಒಟ್ಟೊಟ್ಟಿಗೆ ಹೋಲಿಸಿದರೆ ಸಾಂಬಶಿವ ಎಂಬ ವ್ಯಕ್ತಿಯ ಪಾತ್ರವೊಂದು ಎಲ್ಲ ದುಷ್ಟ ಗುಣಗಳ ಮತ್ತು ಬೌದ್ಧಿಕ ದಾರಿದ್ರ್ಯದ ಮೊತ್ತದಂತಿದ್ದು ಅದರಿಂದ ಪಸರಿಸಿರುವದು. ಗಾಢ ವಿಷಮಯ ಪರಿಸರ ಎಂಬುದನ್ನು (ಕೃತಿಯ ಶೀರ್ಷಿಕೆಯ ಅಕ್ಷರಗಳ ನಡುವೆ ಹಾಗೂ ಕೃತಿಯ ಪಾರ್ಶ್ವವೊಂದರಲ್ಲಿ ಧೂಮದ /ಹೊಗೆಯ ತರಹ ಲೇಪಿಸಲ್ಪಟ್ಟ ಕಪ್ಪು ಬಣ್ಣ ವಿಷಮಯ ಸನ್ನಿವೇಶ ಪರಿಸರವನ್ನು ಧ್ವನಿಸುತ್ತದೆ).

ಇಲ್ಲಿ ತೋರ್ಪಡಿಸಲು ಪ್ರಯತ್ನಿಸಲಾಗಿದೆ ಎಂದು ಊಹಿಸಲು ಅವಕಾಶವಿದೆ. ಸೂಕ್ಷ್ಮ ನೋಟವನ್ನು ವಿನ್ಯಾಸಗಾರಿಕೆಯ ಮೇಲೆ ಬೀರಬಲ್ಲ ನೋಡುಗರು /ಓದುಗರು ಈ ಮೇಲೆ ಉಲ್ಲೇಖಿಸಿದ ಅರ್ಥವನ್ನು ಸುಲಭವಾಗಿ ಮಾಡಿಕೊಳ್ಳಬಲ್ಲರು. ಇಲ್ಲಿನ ವಿನ್ಯಾಸದಲ್ಲಿ ಆಯೋಜಿಸಿದ ಪ್ರತಿ ಅಂಶವೂ ವಿಡಂಬನಾತ್ಮಕವಾಗಿಯೇ ರೂಪಿತಗೊಂಡಿರುವುದು ಉಲ್ಲೇಖನೀಯ ಮತ್ತು ಇದು ಕಲಾವಿದರ ಕಲಾಪ್ರಜ್ಞೆಯ ಸ್ತರದ ಔನ್ನತ್ಯವನ್ನು ಮತ್ತು ಕಲಾಕೃತಿ ನಿರ್ವಹಣೆಯಲ್ಲಿ / ವಿನ್ಯಾಸಗಾರಿಕೆಯ ನಿರ್ವಹಣೆಯಲ್ಲಿನ ಈ ಕಲಾವಿದರು ಪಳಗಿದವರಾಗಿರಲೇಬೇಕು ಎಂಬ ಹೊಳೆಯನ್ನು ಸಹ ಕಾಳಜಿಪೂರ್ವಕವಾಗಿ ಚಿತ್ರ ಕಲಾವಲಯದ ಒಳಹೊಕ್ಕು ವಿವೇಚಿಸಬಲ್ಲವರಿಗೆ, ಈ ಮುಖಪುಟ ವಿನ್ಯಾಸ ಮನದಟ್ಟು ಮಾಡಿಕೊಡಬಲ್ಲದು. ಸಮಕಾಲೀನ ಕಲಾಸಂದರ್ಭಕ್ಕೂ ಸ್ವೀಕೃತವಾಗಬಲ್ಲ ಮುಖಪುಟ ವಿನ್ಯಾಸವಿದು ಎಂದು ಅಭಿಪ್ರಾಯಪಡಬಹುದು. ಈ ಕೃತಿಯ ಮುಖಪುಟ ವಿನ್ಯಾಸಗೊಳಿಸಿದವರು ಪ್ರಸನ್ನ ಎಂಬ ಕಲಾವಿದರು.

**೫.೪.೧೪. ಕಾಲಜ್ಞಾನಿ ಕನಕ (೧೯೮೮)**

ಸಾಹಿತಿ / ವಿಮರ್ಶಕ ಕಿ.ರಂ. ನಾಗರಾಜ್ ರವರಿಂದ ರಚಿಸಲ್ಪಟ್ಟ 'ಕಾಲಜ್ಞಾನಿ ಕನಕ' ಕೃತಿಗೆ ಬೆನಕ ನಾಗರಾಜ ಎಂಬ ಕಲಾವಿದರು ಇದರ ಮುಖಪುಟ ರಚನೆಮಾಡಿದ್ದಾರೆ. ಮುಖಪುಟವು ಸರಳ ಮತ್ತು ಮಾರ್ಮಿಕವಾದುದು. ಅರ್ಧಕಡು ಕಪ್ಪು ಉಳಿದರ್ಧ ತುಸು ತಿಳಿಗಪ್ಪು (ಕಡುಕಪ್ಪಿಗಿಂತಲೂ ಅದಕ್ಕಿಂತಲೂ ಸ್ವಲ್ಪ) ಹಿನ್ನೆಲೆಯಲ್ಲಿ ಸಮಾನಾಂತರವಾಗಿ ಮೇಲಿನಿಂದ ಕೆಳಕ್ಕೆ ಎಳೆಯಲ್ಪಟ್ಟ ಜಾನಪದೀಯ ಶೈಲಿಯ ಬಿಳಿಯ ಬಣ್ಣದ ಸಮಾಂತರ ರೇಖೆಗಳು ಸಮನಾದ ಎರಡು ಭಾಗಗಳನ್ನು ಮುಖಪುಟದಲ್ಲಿ ನಿರ್ಮಿಸಿವೆ. ಈ ರೇಖೆಗಳನ್ನು ಇನ್ನಷ್ಟು ಒಪ್ಪಗೊಳಿಸಲೋ ಎಂಬಂತೆ ಬಿಳಿಯ ಬಣ್ಣದಲ್ಲಿ ರೇಖೆಗಳು ಹಾಯ್ದು ಹಾದಿಯ ಪಕ್ಕದಲ್ಲಿ ಚಿಕ್ಕ ಚಿಕ್ಕ ಕುಸುರಿ ನಕ್ಷೆಗಳು ರಚನೆಯಾಗಿವೆ. ಒಂದು ಭಾಗದ ಆವರಣದ ತುದಿಯಲ್ಲಿ ಹಳದಿ ಬಣ್ಣದಲ್ಲಿ ತುಸು ದೊಡ್ಡದಾಗಿ (ನೋಡುವವರಿಗೆ ಗಮನಕ್ಕೆ ಬರುವಷ್ಟು ದೊಡ್ಡದಾಗಿ)

ಹಳದಿ ಬಣ್ಣದ ಚುಕ್ಕೆ ಅದೇ ಬಣ್ಣದಲ್ಲಿ ದಪ್ಪ ಅಂಚನ್ನು ಹೊಂದಿದೆ. ಅದೇ ಆವರಣದ ಕೆಳಭಾದಲ್ಲಿ ಕನಕನನ್ನು ಸಾಂಕೇತಿಕವಾಗಿ ಅಮೂರ್ತವಾಗಿ ಚಿತ್ರಿಸಲಾಗಿದೆ.

ಇನ್ನೊಂದು ಆವರಣದ ಕೆಳಭಾಗದಲ್ಲಿ ಹಳದಿ ಬಣ್ಣದಲ್ಲಿ ಸರಳಗೈ ಶೈಲಿಯಲ್ಲಿ ಕೃತಿಯ ಶೀರ್ಷಿಕೆ ಮತ್ತು ಅದೇ ಹಳದಿ ಬಣ್ಣದಲ್ಲಿಯೇ ಪುಟ್ಟ ಅಕ್ಷರಗಳಲ್ಲಿ ಲೇಖಕರ ಹೆಸರನ್ನು ಬರೆಯಲಾಗಿದೆ. ಈ ಹೆಸರೂ ಕೂಡ ಸರಳಗೈ ಶೈಲಿಯಲಿಯೇ ಇದೆ. ಇಲ್ಲಿನ ಇಡೀ ಮುಖಪುಟವನ್ನು ಗಮನಿಸಿದರೆ ಸರಿಸುಮಾರು ಶೇ ೮೦ ರಷ್ಟು ಭಾಗ ಖಾಲಿ ಅವಕಾಶವಿದ್ದು ಚಿತ್ರಗಾರಿಕೆ/ವಿನ್ಯಾಸಗಾರಿಕೆ ಸರಿಸುಮಾರು ಶೇ.೨೦ ಭಾಗದಲ್ಲಿ ಮಾತ್ರ ರಚನೆಯಾಗಿದೆ. ಮುಖಪುಟದ ಮೇಲ್ಭಾಗದಲ್ಲಿನ ಹಳದಿ ಬಣ್ಣದ ದಪ್ಪ ಚುಕ್ಕೆ ಮತ್ತು ಕೆಳಭಾಗದಲ್ಲಿ ಹಳದಿ ಬಣ್ಣದಲ್ಲಿಯೇ ಬರೆದಿರುವ ಕೃತಿಯ ಮತ್ತು ಲೇಖಕರ ಹೆಸರು ಹಾಗೂ ಸಮಾನಾಂತರವಾಗಿ ಮೇಲಿಂದ ಕೆಳಕ್ಕೆ ಬಿಳಿಯ ಬಣ್ಣದಲ್ಲಿ ಎಳೆಯಲ್ಪಟ್ಟ ಸಮಾನಾಂತರ ರೇಖೆಗಳು ಮತ್ತು ಆ ರೇಖೆಗಳ ಹಾದಿಯುದ್ದಕ್ಕೂ ಮಂದ ಬಿಳಿಯ ಬಣ್ಣದಲ್ಲಿ ರೂಪಿಸಿರುವ ಚಿಕ್ಕ ಚಿಕ್ಕ ಕುಸುರಿ ವಿನ್ಯಾಸಗಳ ಮುಖಪುಟದ ತಳಭಾಗದಲ್ಲೂ ಅಚ್ಚ ಬಿಳಿಯ ಬಣ್ಣದಲ್ಲಿ ಅಮೂರ್ತಾಕಾರದಲ್ಲಿರುವ ಕನಕನ ಚಿತ್ರಗಳು ಇವೆಲ್ಲಾ ಒಂದಕ್ಕೊಂದು ವರ್ಣ ಸಮತೋಲನಾ ಪರಿಕಲ್ಪನೆಯ ಮೂಲಕ ರೂಪಿತವಾದವುಗಳು/ಸೃಷ್ಟಿಸಲ್ಪಟ್ಟವುಗಳು ಎನ್ನಬಹುದು. ಇಲ್ಲಿ ವಿನ್ಯಾಸಕಾರರು ಅವಕಾಶದಲ್ಲಿ ಸಮತೋಲನದ (ರೂಪ ಮತ್ತು ಬಣ್ಣಗಳ ದೃಷ್ಟಿಯಿಂದ) ಮಹತ್ವವನ್ನು ಪ್ರಜ್ಞಾವಂತ ಓದುಗರಿಗೆ ಅರ್ಥೈಸಲು ಪ್ರಯತ್ನಿಸಿದ್ದಾರೆಂದು ಅಭಿಪ್ರಾಯ ಪಡಬಹುದು.

ಇಲ್ಲಿನ ಸಂಯೋಜನೆ ಸೃಜನಶೀಲವಾದುದು, ರೂಪಗಳೂ ಸಹ ಅಮೂರ್ತವಾಗಿರುವುದರಿಂದ ಸಂಯೋಜನೆಯ ಸೃಜನಶೀಲತೆಯೊಂದಿಗೆ ತುಂಬ ಹೊಂದಾಣಿಕೆಗೊಂಡು ಬಂದಿವೆ 'ಕಲೆ ಸರಳವಾಗಿರಬೇಕು ಮತ್ತು ಅರ್ಥಪೂರ್ಣತೆಯಿಂದ ಕೂಡಿರಬೇಕು ಎನ್ನುವದು ಅಮೃತಾ ಶೇರಗಿಲ್ ಮೊದಲಾದ ಭಾರತೀಯ ನವ್ಯ ಕಲಾವಿದರ ಆಶಯವಾಗಿತ್ತು ಈ ಮುಖಪುಟ ವಿನ್ಯಾಸಗೊಳಿಸಿದ ಕಲಾವಿದರು ಬಹುಶಃ ಅಂತಹ ಕಲಾವಿದರುಗಳ ಬಗ್ಗೆ ಒಂದಿಷ್ಟಾದರು ಅರಿವು ಹೊಂದಿದವರಾಗಿದ್ದಿರಬೇಕು, ನವ್ಯಕಲೆಯಲ್ಲಿ ಒಂದಿಷ್ಟು ಅನುಭವಗಳಿಸಿದವರಾಗಿರಬೇಕೆಂದು ನಾವು ಆಶಿಸಬಹುದು. ನವ್ಯ, ನವ್ಯೋತ್ತರ ಕಲಾ ಕ್ಷೇತ್ರದಲ್ಲಿದ್ದವರಿಗೆ, ಕಲೆಯ ಕುರಿತಂತೆ ವಿಶೇಷ ಕಾಳಜಿಪೂರ್ಣ ನೋಟ ಹರಿಸಬಲ್ಲವರಿಗೆ, ನವ್ಯವನ್ನು ಸಕಾರಾತ್ಮಕವಾಗಿ ಗ್ರಹಿಸಬಲ್ಲವರಿಗೆ ಈ ಮುಖಪುಟ ವಿನ್ಯಾಸ ತುಂಬ ಹಿಡಿಸಬಲ್ಲುದು'[೨೫] ಇಂತಹ ಮುಖಪುಟ ವಿನ್ಯಾಸಗಳು ಪ್ರಸಕ್ತ ೨೦೧೬ರ ಸಾಲಿಗೂ ಸಹ ಹೊಂದಿಕೆಯಾಗಿ ನಿಲ್ಲಬಲ್ಲ /ಪ್ರಸ್ತುತವೆನಿಸಿ ಉಳಿಯಬಲ್ಲ ಮುಖಪುಟ ವಿನ್ಯಾಸಗಳು ಎಂದು ಅಭಿಪ್ರಾಯ ಪಡಬಹುದು.

### ೫.೪.೧೫. ದಾಹ ನಾಟಕ (೧೯೮೯)

೧೯೮೯ ರಲ್ಲಿ ಪ್ರಕಟಗೊಂಡ 'ದಾಹ' ಮುಖಪುಟ ಕಪ್ಪು ಬಿಳಿ ರೇಖಾಚಿತ್ರಗಳಿಂದ ಕೂಡಿದೆ. ಚಿತ್ರಗಳ ಶೈಲಿ ನೈಜ ಶೈಲಿ ವರ್ಗೀಕರಿಸಿದರೆ ಸ್ಮರಣ ಚಿತ್ರಣ ಪ್ರಕಾರಕ್ಕೆ ಸೇರುವಂತವುಗಳು. ಇಲ್ಲಿನ

೨೫. ಸಂದರ್ಶನ: ದತ್ತಾತ್ರೇಯ ಎನ್. ಭಟ್ (ಕಲಾ ಇತಿಹಾಸ ಉಪನ್ಯಾಸಕರು), ದಾವಣಗೆರೆ. ದಿ:೨೦೧೬

ಚಿತ್ರಗಳು. ಇಲ್ಲಿನ ಚಿತ್ರಗಳು ಒಂದು ಸರಣಿಯೋಪಾದಿಯಲ್ಲಿದ್ದು, ರೂಪಕದಂತೆಯೇ ಭಾಸವಾಗುತ್ತವೆ. ಸೃಜನೇತರ ಪ್ರಕಾರದ್ದೆಂದು ನಿರ್ಣಯಿಸತಕ್ಕವುಗಳು, ಇಲ್ಲಿನ ಚಿತ್ರಗಳು ಅವಕಾಶ ವಿಂಗಡಣೆ, ಸಂಯೋಜನಾ ಪದ್ಧತಿ, ಛಾಯಾಕರಣ ತೋರ್ಪಡಿಸುವಿಕೆ, ಹಿನ್ನೆಲೆ ಮುನ್ನೆಲೆಗಳ ವ್ಯತ್ಯಾಸ ತೋರ್ಪಡಿಸುವಿಕೆ ಇವೇ ಮೊದಲಾದ ಯಾವ ಕಲಾ ತಾಂತ್ರಿಕ ಪರಿಣತಿಗಳು ಇಲ್ಲದ ತೀರಾ ಸಾಮಾನ್ಯ ದರ್ಜೆಯ ವಿನ್ಯಾಸ ಚಿತ್ತಾರಗಳು ಎಂದು ನಿರ್ಣಹಿಸಬಲ್ಲವುಗಳು (ನಿರ್ಣಯಕ್ಕೆ ಬರಲು ಯೋಗ್ಯವಾದವುಗಳು). '೧೯೬೦–೭೦ರ ದಶಕದ ಹೊತ್ತಿಗೆ ವೃತ್ತಿನಾಟಕ ಕಂಪನಿಗಳ ಪ್ರದರ್ಶನ ಜಾಹಿರಾತು ನೆನಪಿಸುವಂತಹ ವಿನ್ಯಾಸಗಾರಿಕೆ ಇಲ್ಲಿನದು ಆಕೃತಿ ನಿರೂಪಣೆಯಲ್ಲಿ, ಭಾವ ತೋರ್ಪಡಿಕೆಯಲ್ಲಿ ಇಲ್ಲಿನ ಕಲಾವಿದರ ಹಸ್ತ ಕೌಶಲ್ಯ ಒಂದು ಮಟ್ಟದಲ್ಲಿ ಇದೆಯಂಬುದನ್ನು ಒಪ್ಪಬಹುದಾದರೂ ಈ ಮೇಲೆ ಉಲ್ಲೇಖಿಸಿದ ಚಿತ್ರ ಕಲಾಕೃತಿಯಲ್ಲಿರಬೇಕಾದ ಕಲಾತಾಂತ್ರಿಕ ಮೌಲ್ಯಗಳು ಈ ಚಿತ್ರಗಳಲ್ಲಿ (ಮುಖಪುಟ ವಿನ್ಯಾಸದ) ಕಂಡುಬರುವುದಿಲ್ಲವಾದ್ದರಿಂದ ಓದುಗರನ್ನು ಮುಖಪುಟದೆಡೆಗೆ ಆಕರ್ಷಿಸಲು ಸೋಲುತ್ತದೆ ಎಂದು ಅಭಿಪ್ರಾಯಪಡಬಹುದು.'[೨೬] ಮೇಲ್ತುದಿಯಲ್ಲಿ ನಾಟಕದ ಶೀರ್ಷಿಕೆ ಕಪ್ಪು ಬಿಳಿ ಮಾಧ್ಯಮದಲ್ಲಿಯೇ ಓದುಗರ ಗಮನಕ್ಕೆ ಸುಲಭವಾಗಿ ಬರುವಷ್ಟು ಗಾತ್ರದಲ್ಲಿ ರಚನೆಯಾಗಿದೆ. 'ದಾಹ' ಶಬ್ದದ ಅಕ್ಷರಗಳನ್ನು ಆಹಾರಕ್ಕಾಗಿ ಬಾಯ್ದೆರೆದು ಹೊಂಚು ಹಾಕಿ ಹವಣಿಸುವ ಹಾವಿನ ಮಾದರಿಗೆ ಪರಿವರ್ತನೆಗೊಳಿಸಿ ಬರೆದಿರುವದು ಇಲ್ಲಿ ತುಸು ಆಕರ್ಷಣೀಯ ಅಂಶವಾಗಿ ಪರಿಣಮಿಸಿರುತ್ತದೆ. ಅಲ್ಲದೆ ಈ ರೀತಿಯ ಅಕ್ಷರವಿನ್ಯಾಸವೇ ಕೃತಿಯ ಸಾರಾಂಶವನ್ನು ಸೂಚ್ಯವಾಗಿ ಹೇಳುತ್ತಿದೆ. ಈ ಅಕ್ಷರಗಳ ಮಾದರಿಯು ಸರಳಗೈ (Free Hand) ಶೈಲಿಯದ್ದು. ಈ ಕೃತಿಯ ಕರ್ತೃ ತ.ಲಿಂಗಣ್ಣ ಚೊಟ್ನಳ್ಳಿ ಇಲ್ಲಿನ ಮುಖಪುಟ ವಿನ್ಯಾಸಗಾರರು ಗೋವಿಂದ ರಾಜು ಎನ್ನುವವರು.

**೫.೪.೧೬. ಮೀರಿದ ಮಡದಿ (೧೯೪೯)**

೧೯೪೯ ರಲ್ಲಿ ಮುದ್ರಣಗೊಂಡ 'ಮೀರಿದ ಮಡದಿ' ನಾಟಕ ಕೃತಿಯ ಮುಖಪುಟ ವಿನ್ಯಾಸ ಸೃಜನಶೀಲವಲ್ಲದಿದ್ದರೂ ರಮಣೀಯ ನೋಟ ಒಳಗೊಂಡಿರುವಂತಹುದು. ಇದರ ಲೇಖಕರು ಎಸ್.ವಿ.ಎನ್. ನಾಯ್ಡು, ಮುದ್ರಕರು ಶಶಿ ಪ್ರಿಂಟರ್ಸ್ ಪಿಂಕ್ ವರ್ಣದ ಹಿನ್ನೆಲೆಯುಳ್ಳ ಈ ಮುಖಪುಟದ ಕೇಂದ್ರಭಾಗದಲ್ಲಿ ಹಳದಿ ಬಣ್ಣದ ಬೃಹತ್ ವೃತ್ತವೊಂದಿದ್ದು ಅದರ ಮುಂದುಗಡೆ ತರುಣಿಯೋರ್ವಳು ತನ್ನ ಎಡಕಂಕುಳನ್ನು ಮೇಲೆತ್ತಿ ಆಸೆ ಕಂಗಳಿಂದ ಮೇಲೆಲ್ಲಿಯೊ ನೋಡುತ್ತಿದ್ದಾಳೆ. ಕೇಶವಿನ್ಯಾಸ, ವಸ್ತ್ರಾಲಂಕಾರ ಇವೆಲ್ಲಾ ಆಧುನಿಕ ರೀತಿಯಲ್ಲಿದ್ದು, ತುಟಿಗೆ ಲಿಪ್‌ಸ್ಟಿಕ್ ಬಳಿದಿದ್ದಾಳೆ. ಅವಳ ಆಚೀಚೆ ಬಣ್ಣಬಣ್ಣದ ಚಿಟ್ಟೆಗಳು/ ಪಾತರಗಿತ್ತಿಗಳು ಹಾರಾಡುತ್ತಿದ್ದು ಕೆಳಭಾಗದಲ್ಲಿ ಕೆಂಪು ಬಣ್ಣದ ಒಂದಿಷ್ಟು ಹೂಗಳು ಅರಳಿ ನಿಂತಿವೆ. ಇವಿಷ್ಟು ನಮಗೆ ಇಲ್ಲಿ ಹೊರನೋಟಕ್ಕೆ ಕಂಡು ಬರುವ ಸ್ಥೂಲ ಚಿತ್ರಣವಾದರೆ, ಇದರ ಶೀರ್ಷಿಕೆ ಮತ್ತು ಇಲ್ಲಿನ ವಿನ್ಯಾಸಗಾರಿಕೆಯನ್ನು ಹೋಲಿಸಿ ವಿವೇಚಿಸಿದರೆ ಇಲ್ಲಿನ ಪ್ರತಿಯೊಂದು ವಿವರವೂ ಉಪಮೆಗಳ ರೀತಿಯಲ್ಲಿ ಆಯೋಜಿಸಲ್ಪಟ್ಟಿದೆ ಎನ್ನಬಹುದು. ಪಾತರಗಿತ್ತಿ ಹೂವಿಂದ ಹೂವಿಗೆ ಮಕರಂದ ಹೀರುವ ಸಲುವಾಗಿ ಹಾರುವ ಜೀವಿ. ಅವುಗಳಂತೆಯೇ ಇಲ್ಲಿನ ತರುಣಿಯು ಸಹ ಕಾಮಸುಖಕ್ಕಾಗಿ ಹಾಸಿಗೆಯನ್ನು

೨೬. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

ಬದಲಿಸುತ್ತಲೇ ಇರುವವಳು ಎಂಬಂತಹ ಅರ್ಥ ಇಲ್ಲಿ ಮಾಡಬಹುದು. (ಏಕೆಂದರೆ ಶೀರ್ಷಿಕೆಯೇ 'ಮೀರಿದ ಮಡದಿ' ಎಂದಿದೆ) ಕಲಾವಿದರು ಅಂತಹ ವ್ಯಕ್ತಿತ್ವವನ್ನೇ ನಮಗೆ ಕಟ್ಟಿಕೊಡವಂತಹ ಆಕಾರ ವೈಶಿಷ್ಟ್ಯವನ್ನೇ ಇಲ್ಲಿ ಅಭಿವ್ಯಕ್ತಿಸಿದ್ದಾರೆ. ಇಲ್ಲಿ ಸೃಜನಶೀಲತೆ ಇಲ್ಲದಿದ್ದರೂ ಕಲಾವಿದರ ಹಸ್ತಕೌಶಲ್ಯ (Draftsmanship) ಮತ್ತು ಲಾವಣ್ಯಭರಿತ ಸನ್ನಿವೇಶಗಳನ್ನು ಚಿತ್ರಿಸುವುದರಲ್ಲಿ ಸಾಕಷ್ಟು ಪರಿಣತರೇ ಆಗಿದ್ದಾರೆ ಎನ್ನುವುದನ್ನು ಈ ಮುಖಪುಟ ವಿನ್ಯಾಸ ಪುಷ್ಟೀಕರಿಸುತ್ತದೆ. ಆದರೆ ಈ ಕಲಾವಿದರ ಹೆಸರು ನಮೂದಾಗಿಲ್ಲ.

**೫.೫. ತೊಂಬತ್ತರ ದಶಕದ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

**೫.೫.೧. ನಿರ್ಧಾರ (೧೯೯೭)**

'ನಿರ್ಧಾರ' (೧೯೯೭) ಕೃತಿಯ ಮುಖಪುಟ ವಿನ್ಯಾಸ ೧೯೭೦-೮೦ ರ ದಶಕದ ಮುಖಪುಟ ಸಂಪ್ರದಾಯ ಮಾದರಿಯದು. ಈ ಕೃತಿಯನ್ನು ಬರೆದ ಲೇಖಕರು ಮನೋರಮಾ ಎಂ. ಭಟ್ ಇದನ್ನು ವಿನ್ಯಾಸಗೊಳಿಸಿದವರು ಪುರುಷೋತ್ತಮ ಕಾರಂತ ಕಡು ಕೇಸರಿ, ಆಕಾಶನೀಲಿ, ಕಪ್ಪು ಬಣ್ಣದ ಹಿನ್ನೆಲೆಯುಳ್ಳ ಈ ಮುಖಪುಟದಲ್ಲಿ ಕೆಳಭಾಗದ ಸರಿಸುಮಾರು ಶೇ ४೦-४೫ ರಷ್ಟು ಭಾಗ ಚಿತ್ರಗಳಿಂದ ಕೂಡಿದೆ. ಚಿತ್ರಗಳು ಸ್ಮರಣಚಿತ್ರಣ ಮಾದರಿಯವು ಅವುಗಳಲ್ಲಿ ಹೊಸತನವೇನೂ ಕಾಣಿಸದು. ಕಪ್ಪು ಬಿಳುಪು ಚಿತ್ರಗಳಿವು ಬಾಲ್ಯವಿವಾಹದ ಸನ್ನಿವೇಶವೊಂದನ್ನು ಕಲಾವಿದ ಕಟ್ಟಿಕೊಡಲು ಪ್ರಯತ್ನಿಸಿದಂತಿದೆ. ವಿವಾಹ ಬಂಧನಕ್ಕೊಳಪಡುವ ಅಪ್ರಾಪ್ತೆಯ ಕೈಯಲ್ಲಿ ಹೂಮಾಲೆಯಿದೆ ಅಕ್ಕಪಕ್ಕಗಳಲ್ಲಿ ಆಕೆಯ ತಂದೆ ತಾಯಿ ಸಂಪ್ರದಾಯಸ್ಥ ಉಡಿಗೆಯಲ್ಲಿದ್ದು ಕನ್ಯಾದಾನ ಮಹತ್ತರ ಮತ್ತು ಪುಣ್ಯತಮ ಕರ್ತವ್ಯವನ್ನು ನೆರವೇರಿಸುತ್ತಿರುವುವೆಂಬ ಸಂತಸದ ಭಾವದಲ್ಲಿರುವರೆಂಬುದನ್ನು ಅವರುಗಳ ಮುಖ ಲಕ್ಷಣ ಸ್ಪಷ್ಟ ಪಡಿಸುತ್ತಿದೆ. ಕಪ್ಪುಬಣ್ಣದ ಹಿನ್ನೆಲೆಯಲ್ಲಿ ದೂರದಲ್ಲಿ ಮನೆ ಚಿತ್ರಿತವಾಗಿದೆ ಮೇಲ್ಗಡೆ ಕಪ್ಪು ಬಣ್ಣದಲ್ಲಿ ತಿಳಿನೀಲ ಅವಕಾಶದಲ್ಲಿ ಒಂದಿಷ್ಟು ಹಕ್ಕಿಗಳು ಹಾರಾಡುತ್ತಿರುವಂತೆ ಚಿತ್ರಿಸಲಾಗಿದ್ದು, ವಿವಾಹ ಬಂಧನಕ್ಕೊಳಗಾದ ಗಂಡು ಹೆಣ್ಣಿನ ಬದುಕು ಹಕ್ಕಿಗಳ ಹಾರಾಟದಂತೆ ಆನಂದದಾಯಕವಾಗಿರಲಿ ಎಂಬ ಸಂದೇಶವನ್ನು ಕಲಾವಿದ ನೀಡುತ್ತಿರುವರೆಂದು ಊಹಿಸಬಹುದು. ಕಣ್ಣಿಗೆ ಎದ್ದು ಕಾಣುವಂತೆ ಕಪ್ಪು ಬಣ್ಣದಲ್ಲಿ ದಪ್ಪನಾದ ಕೃತಿ ಶೀರ್ಷಿಕಾ ಅಕ್ಷರಗಳು ಸರಳಗೈ (Free Hand) ಗೋಥಿಕ್ ಶೈಲಿಯಲ್ಲಿ ಬರೆಯಲ್ಪಟ್ಟಿದ್ದು ಇನ್ನಿತರ ವಿವರ ಕಪ್ಪು ಬಣ್ಣದಲ್ಲಿ ಪುಟ್ಟ ಅಕ್ಷರಗಳಲ್ಲಿ ಬೆರಳಚ್ಚುಗಾರರಿಂದ ಕೃತಿ ಶೀರ್ಷಿಕೆಯ ಕೆಳಗೆ ನೀಲಿ ಆವರಣದಲ್ಲಿ ಬೆರಳಚ್ಚು (Typing) ಗೊಂಡಿವೆ. ಅಪ್ರಾಪ್ತ ವಧುವಿನ ಚಿತ್ರ ಮಾತ್ರ ಇಲ್ಲಿ ನೀಲಿ ಸೀರೆಯಲ್ಲಿ ಅಭಿವ್ಯಕ್ತವಾಗಿದ್ದು ಆಕೆಯ ತಂದೆ-ತಾಯಿ / ಪೋಷಕರು ಕಪ್ಪು ಬಿಳುಪು (Black and White) ವರ್ಣದಲ್ಲಿ ರಚನೆಗೊಂಡಿದ್ದಾರೆ. ಇಲ್ಲಿನ ಚಿತ್ರಗಳು ರೇಖಾ ಪ್ರಧಾನವಾದವುಗಳು.

**೫.೫.೨. ಕಲೆಯಾಗಿ ಪ್ರಸಾಧನ (೧೯೯೮)**

'ಕಲೆಯಾಗಿ ಪ್ರಸಾಧನ' ಎಂಬ ಕೃತಿ ೧೯೯೮ ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು

ಇವರಿಂದ ಪ್ರಕಾಶನಗೊಂಡಿದ್ದು ಇದರ ಲೇಖಕರು ಮೇಕಪ್ ನಾಣಿ. ಈ ಮುಖಪುಟದ ಮೇಲ್ತುದಿಯ ಪಾರ್ಶ್ವವೊಂದರಲ್ಲಿ ಮೂರು ಮುಖಗಳ ಪುಟ್ಟ ವ್ಯಂಗ್ಯಚಿತ್ರ ನಗುತ್ತಿರುವ, ವಿಸ್ಮಯಗೊಂಡ, ಗಾಬರಿಗೊಂಡ ಭಾವಗಳು ಬಿಟ್ಟರೆ ಉಳಿದ ವಿನ್ಯಾಸಗಾರಿಕೆಯೆಲ್ಲಿ ಛಾಯಾಗ್ರಹಣ (Photography) ತಾಂತ್ರಿಕ ಕೌಶಲ್ಯ ಬಳಕೆಯಿಂದ ನಿರ್ವಹಣೆಗೊಂಡುದಾಗಿದೆ. ಮುನ್ನೆಲೆಯಲ್ಲಿ ಸಿಖ್ ಸಂಪ್ರದಾಯ (ಮತ) ಕ್ಕೆ ಸೇರಿದವನಂತೆ ಕಾಣುವ ವ್ಯಕ್ತಿಯೊಬ್ಬನ ಪಾಸ್‌ಪೋರ್ಟ್ ಅಳತೆಗಿಂತಲೂ ತುಸು ದೊಡ್ಡದಾದ ಉತ್ತಮ ಭಾವಚಿತ್ರವಿದ್ದು, ಅದರ ಹಿಂದುಗಡೆ ಛಾಯಾಗ್ರಹಣ ತಂತ್ರಗಾರಿಕೆಯ ಸಹಾಯದಿಂದ ವ್ಯಕ್ತಿಯೊಬ್ಬನ ಭಾವಚಿತ್ರವನ್ನು ಮುಖಪುಟ ಗಾತ್ರಕ್ಕೆ ತಕ್ಕಂತೆ ಸರಿಹೊಂದಿಸಿ, ಅದರ ಹಿಂದುಗಡೆ ತಾಂತ್ರಿಕ ಕೌಶಲ್ಯ ಉಪಯೋಗಿಸಿಕೊಂಡು ಬಹಳ ಮಂದವಾದ ವರ್ಣ ಸಂಯೋಜನಾಯುಕ್ತ ಹಿನ್ನೆಲೆ ಸನ್ನಿವೇಶ ರೂಪಿಸಲಾಗಿದೆ. ವ್ಯಕ್ತಿಯೊಬ್ಬನಿಗೆ ಪ್ರಸಾಧನ ಗೈದಾಗ ಆ ವ್ಯಕ್ತಿಯ ಮುಖಚರ್ಯೆಯ ಹೊರನೋಟ ಎಷ್ಟೊಂದು ಬದಲಾಗಿ ತೋರ್ಪಡಿಕೆ–ಗೊಳ್ಳುತ್ತದೆಂಬುದನ್ನು ಬಹಳ ಸೂಚ್ಯವಾಗಿ ಮತ್ತು ಪರಿಣಾಮಕಾರಿಯಾಗಿ ನಾಟಕ / ರಂಗಭೂಮಿಯ ಕಲಾರಸಿಕರಿಗೆ ವೈಶಿಷ್ಟ್ಯಯುತ ವಿನ್ಯಾಸಗಾರಿಕೆಯ ಮೂಲಕವೆ ಮನದಟ್ಟು ಮಾಡಿಕೊಡುವ ಪ್ರಯತ್ನ ಇಲ್ಲಿ ನಡೆದಿದೆಯೆಂದು ಅಭಿಪ್ರಾಯಪಡಬಹುದು.

ಮುನ್ನೆಲೆಯಲ್ಲಿ ಎದ್ದು ಕಾಣುವ ಛಾಯಾಚಿತ್ರಣ ಅದರ ಹಿನ್ನೆಲೆಯಲ್ಲಿ ಮುನ್ನೆಲೆಗಿಂತಲೂ ಮಂದವರ್ಣ ಸಂಯೋಜನೆಯ ಛಾಯಾಚಿತ್ರಣ ಅದಕ್ಕೂ ಹಿಂದಿನ ಸನ್ನಿವೇಶಕ್ಕೆ ಮುನ್ನೆಲೆಯ ಭಾವಚಿತ್ರದ ಹಿಂದಿರುವ ಭಾವಚಿತ್ರಕ್ಕೆ ನಿರ್ವಹಿಸಿರುವುದಕ್ಕಿಂತಲೂ ಮಂದವಾದ ವರ್ಣಸಂಯೋಜನೆ ಮಧ್ಯದಲ್ಲಿರುವ ದೊಡ್ಡಗಾತ್ರದ ಛಾಯಾಚಿತ್ರಕ್ಕೆ ತೋರಿಸಿದ ಮಂದವರ್ಣಕ್ಕಿಂತಲೂ ಮಂದವಾಗಿ ಹಿನ್ನೆಲೆಯಲ್ಲಿ ಛಾಯಾಗ್ರಾಹಣ ತಂತ್ರಗಾರಿಕೆ ಉಪಯೋಗಿಸಿ ನಿರ್ವಹಿಸಿದ ಅರ್ಧಭಾಗ ಮಂದ ಮತ್ತರ್ಧಭಾಗ ತುಸು ಗಾಢ ವರ್ಣ ಸಂಯೋಜನೆ ಇವುಗಳಿಂದ ತೀರ ಕಡಿಮೆ ಸಂಖ್ಯೆಯ ವರ್ಣ ಸಂಯೋಜನೆಯ ಮೂಲಕ ಅರ್ಥಗರ್ಭಿತ ಸ್ವರೂಪವನ್ನು ಇಲ್ಲಿನ ಮುಖಪುಟಕ್ಕೆ ದೊರಕಿಸಿಕೊಡುವಂತಹ ವಿನ್ಯಾಸಗಾರಿಕೆ ಇಲ್ಲಿನದು. ಪ್ರಸಕ್ತ ಸಂದರ್ಭಕ್ಕೂ 'ಸೈ' ಎನಿಸಬಲ್ಲ ಮುಖಪುಟ ವಿನ್ಯಾಸವಿದು. ಮೇಲ್ತುದಿಯಲ್ಲಿ ಕೆಂಪು ಬಣ್ಣದಲಿ ಚಿಕ್ಕ ಅಳತೆಯಲ್ಲಾದರೂ ಒಪ್ಪವಾಗಿ (ಶಿಸ್ತಾಗಿ) ಕೃತಿಯ ಶೀರ್ಷಿಕೆ ಬರೆಯಲಾಗಿದೆ. ತಳಭಾಗದಲ್ಲಿ ಅದೇ ಕೆಂಪು ಬಣ್ಣದಲ್ಲಿಯೇ ಕೃತಿಯ ಶೀರ್ಷಿಕೆಯ ಅಕ್ಷರಗಳಿಗಿಂತಲೂ ಕಿರಿದಾದ ಅಳತೆಯ ಅಕ್ಷರಗಳಲ್ಲಿ ಲೇಖಕರ ಹೆಸರನ್ನು ಶಿಸ್ತಾಗಿ (ಅಚ್ಚುಕಟ್ಟಾಗಿ) ಬರೆಯಲಾಗಿದೆ. ಕೃತಿಯ ಶೀರ್ಷಿಕೆಯ ಅಕ್ಷರಗಳು ಮತ್ತು ಲೇಖಕರ ಹೆಸರಿನ ಅಕ್ಷರಗಳ ಶೈಲಿಯ ದೃಷ್ಟಿಯಿಂದ ರೋಮನ್ ಮಾದರಿಯವು ಕೃತಿಯ ಲೇಖಕರೇ ಇದರ ಮುಖಪುಟ ವಿನ್ಯಾಸಗೊಳಿಸಿರುವುದು ವಿಶೇಷವಾದ ಅಂಶ.

**೫.೫.೩. ಗಾಂಧಾರಿ ನಾಟಕ (೨೦೦೦)**

ಮಹಾಭಾರತ ಕಥೆಯಲ್ಲಿ ಬರುವ ಗಾಂಧಾರಿಯ ವ್ಯಕ್ತಿತ್ವವನ್ನು ಕಟ್ಟಿಕೊಡುವ 'ಗಾಂಧಾರಿ'(೨೦೦೦) ಯ ಪಾತ್ರದಂತಹ ವ್ಯಕ್ತಿತ್ವದ ಕುರಿತಾಗಿಯೇ ರಚಿತವಾದ ನಾಟಕ 'ಗಾಂಧಾರಿ' ಎನ್ನುವುದನ್ನು ಈ ಕೃತಿಯ ಮುಖಪುಟ ವಿನ್ಯಾಸವೇ ಸ್ಪಷ್ಟಪಡಿಸುತ್ತಿದೆ. ಈ ಕೃತಿಯ ಮುಖಮುಟದ ಕೇಂದ್ರಸ್ಥಳದ ಚೌಕಟ್ಟಿನಲ್ಲಿ

ಮಹಾಭಾರತ ಕಥೆಯಲ್ಲಿ ಉಲ್ಲೇಖವಾಗುವ ಕಣ್ಣಿಗೆ ಬಟ್ಟೆಕಟ್ಟಿಕೊಂಡು ಉದ್ದೇಶಪೂರ್ವಕವಾಗಿ ತನ್ನನ್ನು ತಾನೇ ಕುರುಡಿಯಾಗಿಸಿಕೊಳ್ಳುವ 'ಗಾಂಧಾರಿ' ಯಂತೆಯೇ ಇಲ್ಲಿನ ಚೌಕಟ್ಟಿನಲ್ಲಿ ಕಣ್ಣಿಗೆ ಬಟ್ಟೆಕಟ್ಟಿಕೊಂಡ ರಾಣಿಯ ಭಾವರೇಖಾ ಚಿತ್ರ (ಕಪ್ಪು ಬಿಳಿ ಮಾದರಿಯದು) (ರಮಣೀಯ ರೇಖಾ ಚಿತ್ರವೆಂದು ಉಲ್ಲೇಖಿಸಲು ಕಾರಣವೇನೆಂದರೆ – ಚೌಕಟ್ಟಿನಲ್ಲಿನ ಸ್ತ್ರೀ ಭಾವಚಿತ್ರದ ಹಿಂದುಗಡೆ ಸಿಂಹಾಸನವನ್ನು ಹೋಲುವ ವಿನ್ಯಾಸ ಚಿತ್ರಿತವಾಗಿದೆ.) ಅದರ ಕೆಳಗಡೆ ಸರಳಗ್ಗೈ ಶೈಲಿಯಲ್ಲಿ ಆಕಾಶ ನೀಲಿ ಬಣ್ಣದಲ್ಲಿ 'ಗಾಂಧಾರಿ' ಎಂಬ ಶಬ್ಧ ಬರೆಯಲಾಗಿದ್ದು ಅದರ ಕೆಳಗಡೆ ಕಂಸ ಚಿನ್ಹೆಯ ಒಳಗೆ ನಾಟಕ ಎಂದು ಕಪ್ಪು ಬಣ್ಣದಲ್ಲಿ ಸ್ಪಷ್ಟವಾಗಿ ಮುದ್ರಣ ಅಕ್ಷರಗಳಿವೆ. ಇವುಗಳ ಕೆಳಗೆ ಲೇಖಕರ ಹೆಸರನ್ನು ಪುಟ್ಟದಾಗಿ ಆಕಾಶ ನೀಲಿ ಬಣ್ಣದಲ್ಲಿ ಮುದ್ರಿಸಲಾಗಿದೆ.

ಇದಕ್ಕಿಂತಲೂ ಕೆಳಭಾಗದಲ್ಲಿ ತುಂಬಾ ಪುಟ್ಟದಾದ ಅಕ್ಷರಗಳಲ್ಲಿ ಪ್ರಕಾಶಕರ ಹೆಸರನ್ನು ಮುದ್ರಿಸಲಾಗಿದೆ ಈ ಎಲ್ಲ ವಿವರಗಳು 'ಗಾಂಧಾರಿ' ಭಾವರೇಖಾ ಚಿತ್ರದ ಚೌಕಟ್ಟಿನ ಆಚೆಗಿನ ತುಸು ದೊಡ್ಡದಾದ ಚೌಕಟ್ಟಿನ ಆವರಣದಲ್ಲಿ ರೂಪುಗೊಂಡಿವೆ. ಈ ಚೌಕಟ್ಟಿನ ಆಚೆಗಿನ ಅವಕಾಶದಲ್ಲಿ ತಿಳಿಕಂದು ಬಣ್ಣದಲ್ಲಿ ಆಯತ ಚೌಕ ನಮೂನೆಯ ಕಿರಿದಾದ ಅಲಂಕರಣ ವಿನ್ಯಾಸವಿದೆ. ಅವು ಆ ರೀತಿಯ ವಿನ್ಯಾಸದಿಂದ ನಿರ್ಮಾಣಗೊಂಡ ಗೋಡೆಯ ಕಲ್ಪನೆಯನ್ನು ಸೊಗಸಾಗಿ ಕಟ್ಟಿಕೊಡುತ್ತಿವೆ. ಗೊಡೆಗಳ ಮೇಲ್ಮೈಗೆ ಅಳವಡಿಸುವ ಟೈಲ್ಸ್(ಹಾಸುಗಲ್ಲು)ಗಳನ್ನು ಇವು ನೆನಪಿಸುತ್ತವೆ. ಈ ಮುಖಪುಟ ವಿನ್ಯಾಸದಲ್ಲಿ ಹೇಳಿಕೊಳ್ಳುವ ಯಾವ ಕಲಾತ್ಮಕ ಅಂಶಗಳೂ, ತಾಂತ್ರಿಕ ವಿಶೇಷತೆಗಳೂ ಕಾಣಿಸುವುದಿಲ್ಲ. ಈ ಕೃತಿಯನ್ನು ಮುದ್ರಿಸಿದವರು ಶಿವಮೊಗ್ಗದ ವಿಕ್ರಮ್ ಆರ್ಟ್ಸ್ ಇವರು, ಕೃತಿಕಾರರು ಮಧುಸೂದನ್ ಜೆ. ಘಾಟೆ

**೫.೬. ಇಪ್ಪತ್ತೊಂದನೆಯ ಶತಮಾನದ ಮೊದಲನೆಯ ದಶಕದ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

೨೦೦೧ ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಕೆಲವು ರಂಗ ಕರ್ಮಿಗಳ ಜೀವನ ಸಾಧನೆಯ ಕುರಿತಂತೆ ಕಿರು ಹೊತ್ತಿಗೆಗಳನ್ನು ಪ್ರಕಟಿಸಿದೆ. ಈ ಹೊತ್ತಿಗೆಗಳ ಮುಖಪುಟದ ವಿನ್ಯಾಸ ರೂಪು ರೇಖೆಯೆಲ್ಲಾ ಒಂದೇ ಮಾದರಿಯದ್ದು. ಯಾವುದಾದರೊಂದು ಮಂದಬಣ್ಣ (ಸಾಮಾನ್ಯವಾಗಿ ಬೂದು ಬಣ್ಣ) ಅವಕಾಶ ಹೊಂದಿರುವ ತಿಳಿಹಸಿರು, ತಿಳಿಗುಲಾಬಿ ಬಣ್ಣ ಮುಖಪುಟದ ಮಧ್ಯ ಭಾಗದಲ್ಲಿ ಯಾವ ಸಾಧಕ / ಸಾಧಕಿಯ ಕುರಿತು ಬರಹವಿದೆಯೊ ಅವರ ಭಾವಚಿತ್ರವಿದ್ದು ಮುಖಪುಟದಲ್ಲಿ ಕೆಳಗಿನಿಂದ ಮೇಲಕ್ಕೆ ಅಡ್ಡಲಾಗಿ/ಓರೆಯಾಗಿ ಬಣ್ಣದ ಪರದೆಯ ಎಳೆಯ ಮಾದರಿಯ ಕುಂಚಬೀಸು ಆ ಭಾವಚಿತ್ರದ ಹಿನ್ನೆಲೆಯಲ್ಲಿ ಸಾಗಿ ಹೋಗಿರುತ್ತದೆ (ಸಾಮಾನ್ಯವಾಗಿ ಈ ರೀತಿ ಅಡ್ಡಲಾಗಿ / ಓರೆಯಾಗಿ ಕೆಳಗಿನಿಂದ ಮೇಲಕ್ಕೆ ಹಾಸಿ ಹೋದ ಕುಂಚ ಬೀಸು, ಹಸಿರೊ, ಕೇಸರಿಯೋ, ಬಿಳಿ ಬಣ್ಣದಲ್ಲೊ ಹೀಗೆ ಯಾವುದಾದರೊಂದು ಬಣ್ಣದಲ್ಲಿ ನಿರೂಪಿತವಾಗಿರುತ್ತದೆ) ಉದಾ:–೨೦೦೧ ರಲ್ಲಿ ಟ.ಆರ್.ಮಹಾದೇವಯ್ಯ ಅವರಿಂದ ರಚಿತವಾದ (ಬರೆಯಲ್ಪಟ್ಟ) 'ಹೆಚ್. ಜಿ. ಸೋಮಶೇಖರ್‌ರಾವ್', ಆರ್.ಜಿ. ಹಳ್ಳಿ ನಾಗರಾಜ್‌ರವರಿಂದ ಬರೆಯಲ್ಪಟ್ಟ 'ಎಚ್.ಟಿ.ಅರಸು', ಡಾ. ಮಲ್ಲಿಕಾರ್ಜುನ ಮೇತ್ರಿಯವರಿಂದ ಬರೆಯಲ್ಪಟ್ಟ 'ಕೆ. ಅಮೀನ್ ಪೇಂಟರ್',

ಶ್ಯಾಮಸುಂದರ ಬಿದರಕುಂದಿಯವರಿಂದ ರಚಿತವಾದ 'ಶ್ರೀಪಾದರಾಯರು' ಇತ್ಯಾದಿ. ಈ ಎಲ್ಲ ಪುಸ್ತಕಗಳ ಮುಖಪುಟದ ಮೇಲಿನ ಕೃತಿ ಶೀರ್ಷಿಕೆ ಬರಹಗಳು ವಿವಿಧ ನಮೂನೆಯಲ್ಲಿವೆ.

ಇಲ್ಲಿನ ಕೃತಿ ಶೀರ್ಷಿಕೆಯ ಅಕ್ಷರಗಳು ರೋಮನ್, ಗೋಥಿಕ್, ಕಟ್ ಬ್ರಶ್/ಕ್ಯಾಲಿಗ್ರಾಫಿ ಶೈಲಿಯಲ್ಲಿವೆ ಮತ್ತು ಲೇಖಕರ ಹೆಸರಿನ ಅಕ್ಷರಗಳು ರೋಮನ್ ಶೈಲಿಯಲ್ಲಿ ಬರೆಯಲ್ಪಟ್ಟಿವೆ. ಆದರೆ ಮುಖಪುಟದಲ್ಲಿ ಎಲ್ಲಿಯೂ ಇದನ್ನು (ಗ್ರಂಥ) ಪ್ರಕಟಿಸಿದ ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು, ಇದರ ಹೆಸರು/ ಲೋಗೊ ನಮೂದಾಗಿಲ್ಲ. ಈ ಎಲ್ಲ ಪುಸ್ತಕಗಳನ್ನು ವಿನ್ಯಾಸಗೊಳಿಸಿದವರು ಕೃಷ್ಣ ರಾಯಚೂರು ಎನ್ನುವವರು. ಈ ಪುಸ್ತಕಗಳ ಮುಖಪುಟ ವಿನ್ಯಾಸ ಒಂದೇ ಮಾದರಿಯದಾಗಿರುವುದರಿಂದ ಏಕತಾನತೆಯಿಂದ ಸೊರಗಿದಂತಿದ್ದು ನೀರಸ ಎನಿಸುತ್ತದೆ.

ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು ಈ ಶತಮಾನದ ಆರಂಭದ ಹೊತ್ತಿನಲ್ಲಿ (೨೦೦೧ ರಿಂದ) ರಂಗಭೂಮಿಯಲ್ಲಿ ಗಣನೀಯ ಸಾಧನೆಗೈದ ಮಹನೀಯರನ್ನು ಗುರ್ತಿಸಿ ಅವರುಗಳ ಜೀವನ-ಸಾಧನೆಯ ಕುರಿತು ಪರಿಣಿತ ಲೇಖಕರಿಂದ ಕಿರುಪುಸ್ತಕ ಬರೆಯಿಸಿ ಪ್ರಕಟಿಸುವ ಯೋಜನೆ ಹಮ್ಮಿಕೊಂಡಿದ್ದು ಅದರಡಿಯಲ್ಲಿ ಒಂದಿಷ್ಟು ಕಿರುಪುಸ್ತಕಗಳು ಅಚ್ಚಾಗಿವೆ. ಇಲ್ಲಿ ಮುಖ್ಯವಾಗಿ 'ರಂಗಸಂಪನ್ನರು' ಎಂಬ ಮಾಲಿಕೆಯ ರೂಪದಲ್ಲಿ ಹೊರಬಂದಿವೆ. ಇಲ್ಲಿ ಆಯಾ ವ್ಯಕ್ತಿಗಳ ಮುಖ ಚಿತ್ರ ಆಯಾ ವ್ಯಕ್ತಿಗಳ ಕುರಿತಾದ ಪುಸ್ತಕದಲ್ಲಿ ಬರೆಯಲಾಗಿದೆಯೆಂಬ ಅಂಶವನ್ನು ಹೊರತು ಪಡಿಸಿದರೆ ಮುಖ ಚಿತ್ರ (ಭಾವಚಿತ್ರ) ಸಂಯೋಜನಯೆ ಮಾದರಿ, ವಿನ್ಯಾಸ ವೈಖರಿ, ಮುಖಪುಟದಲ್ಲಿ ಅಚ್ಚಿಸಿದ ಸಾಧನೆಗೈದ ಮಹನೀಯರ ಹೆಸರಿನ ಅಕ್ಷರ ವಿನ್ಯಾಸ ನಮೂನೆ, ಲೇಖಕರ ಹೆಸರಿನ ಅಕ್ಷರ ವಿನ್ಯಾಸಗಾರಿಕೆ ಇವೆಲ್ಲಾ ಏಕರೂಪದಲ್ಲಿವೆ.

ಇವುಗಳಲ್ಲಿ ೨೦೦೧ರಲ್ಲಿ ಅಚ್ಚಾದ ಈ ರೀತಿಯ ಪುಸ್ತಕ ಮುಖಪುಟ ವಿನ್ಯಾಸ, ೨೦೦೪ ರಲ್ಲಿ ಅಚ್ಚಾದ ಈ ರೀತಿ ಪುಸ್ತಕಗಳ ಮುಖಪುಟ ವಿನ್ಯಾಸ ಎಂದು ಎರಡು ಪ್ರಕಾರವಾಗಿ ವಿಂಗಡಿಸಬಹುದು. ೨೦೦೪ರಲ್ಲಿ ಅಚ್ಚಾದ ಕ. ನಾ. ಅ. ಬೆಂಗಳೂರು ಇದರ ಈ ಮಾಲಿಕೆ ಪ್ರಕಟಣೆಯ ಮುಖಪುಟ ವಿನ್ಯಾಸ ಹಿನ್ನೆಲೆ (ಮೇಲ್ಭಾಗದಲ್ಲಿ) ರಂಗ ಮಂದಿರವಿದ್ದು, ಒಂದು ಪಾರ್ಶ್ವದಿಂದ ಬೆಳಕು ಬಿದ್ದಿದೆ, ಕೆಳಗಡೆ ಹಿನ್ನೆಲೆಯಲ್ಲಿ ರಂಗಪರದೆ ಸರಿದಿದೆ (ಇಳಿಬಿದ್ದಿದೆ). ತಳಭಾಗದಲ್ಲಿ ಆಕರ್ಷಕ ನೆರಳು ಬೆಳಕಿನಾಟ ಏರ್ಪಟ್ಟಿದೆ.

ಮುನ್ನೆಲೆಯಲ್ಲಿ ಮುಖಪುಟದ ಮಧ್ಯಭಾಗದಲ್ಲಿ ಛಾಯಾಗ್ರಹಣ ತಂತ್ರಗಾರಿಕೆ ಬಳಸಿಕೊಂಡು ಎದ್ದು ಕಾಣುವಂತೆ ಸಂಬಂಧಿಸಿದ ಸಾಧಕರ/ಸಾಧಕಿಯರ ಭಾವಚಿತ್ರ (ಪಾಸ್‌ಪೋರ್ಟ್ ಅಳತೆಗಳಿಗಿಂತಲೂ ಸ್ವಲ್ಪ ದೊಡ್ಡ ಅಳತೆಯದ್ದು) ಅಚ್ಚಾಗಿರುತ್ತದೆ/ ವಿನ್ಯಾಸಗೊಂಡಿರುತ್ತದೆ. ಉದಾ: ೨೦೦೪ ರಲ್ಲಿ 'ರಂಗಸಂಪನ್ನರು' ಮಾಲಿಕೆಯಡಿಯಲ್ಲಿ ಪ್ರೊ.ಲಿಂಗದೇವರು ಹಳೆಮನೆಯಿಂದ ರಚನೆಗೊಂಡ 'ಸಿ.ಜಿ. ಕೃಷ್ಣಸಾಮಿ' ಎಂಬ ಕಿರುಹೊತ್ತಿಗೆ (ಪುಸ್ತಕ), ಶೂದ್ರ ಶ್ರೀನಿವಾಸ ರವರಿಂದ ಇದೇ ಮಾಲಿಕೆಯಲ್ಲಿ ಬರೆಯಲ್ಪಟ್ಟ 'ಡಾ.ಮರುಳಸಿದ್ದಪ್ಪ,' ಎಂಬ ಪುಸ್ತಕ ಅಂತೆಯೇ ಶ್ರೀಮತಿ ಡಾ. ಎಚ್. ನಾಗವೇಣಿಯವರಿಂದ ರಚಿತವಾದ 'ಡಾ. ಚಂದ್ರಶೇಖರ ಕಂಬಾರ', ಸತೀಶ್ ಶಿಲೆ ಇವರಿಂದ ರಚನೆಗೊಂಡ 'ಡಾ. ಬಿ.ವಿ. ವೈಕುಂಠರಾಜು' ಇತ್ಯಾದಿ. ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು ಇವರಿಂದ ಮಾಲಿಕೆಯಡಿಯಲ್ಲಿ ಪ್ರಕಟಗೊಂಡ ಈ ಪುಸ್ತಕಗಳ ಮುಖಪುಟಗಳ

ಮೇಲೆ ಬರೆಯಲ್ಪಟ್ಟಂತಹ ಕೃತಿ ಶೀರ್ಷಿಕೆ ಮತ್ತು ಕೃತಿಕಾರರ ಹೆಸರು ಮತ್ತು ಪ್ರಕಟವಾದ ಸಂಸ್ಥೆಯ ಹೆಸರು ಮತ್ತು ಮೀಸಲಿರಿಸಿದ ಸ್ಥಳ ಇವೆಲ್ಲ ಮಾಲಿಕೆಯ ಎಲ್ಲ ಪುಸ್ತಕಗಳಲ್ಲೂ ಒಂದೇ ಮಾದರಿಯಲ್ಲಿವೆ ಎನ್ನುವದೂ ಸಹ ಮುಖ್ಯವಾಗಿ ಗಮನಿಸತಕ್ಕ ಅಂಶ.

ಇಲ್ಲಿನ ಈ ಪುಸ್ತಕಗಳಿಗೆ ವಿನ್ಯಾಸ ನೀಡಿದವರನ್ನು ಪುಸ್ತಕದಲ್ಲಿ (ಆಯಾ ಪುಸ್ತಕಕ್ಕೆ ವಿನ್ಯಾಸ ಮಾಡಿದವರನ್ನು) ಉಲ್ಲೇಖಿಸಿದ್ದು ಡಾ. ದಿವಸ್ಪತಿ ಹೆಗಡೆಯವರು ಬರೆದ (ಗಿರೀಶ್) ಕಾರ್ನಾಡ್ ಎಂಬ ಪುಸ್ತಕಕ್ಕೆ ವಿನ್ಯಾಸಪಡಿಸಿದ ಕೃಷ್ಣ ರಾಯಚೂರ್‌ರವರನ್ನು ಬಿಟ್ಟರೆ, ಉಳಿದ ನಾಲ್ಕು ಪುಸ್ತಕಗಳಿಗೆ ವಿನ್ಯಾಸ ರೂಪಿಸಿದವರು ಹೆಚ್.ಕೆ. ದ್ವಾರಿಕನಾಥ ಎನ್ನುವವರು. ಇಲ್ಲಿ ಲಕ್ಷಿಸಬೇಕಾದ ಅಂಶವೆಂದರೆ ಕೃಷ್ಣ ರಾಯಚೂರು ವಿನ್ಯಾಸಗೊಳಿಸಿದ ಗಿರೀಶ್ ಕಾರ್ನಾಡ್ ಎಂಬ ಪುಸ್ತಕದ ವಿನ್ಯಾಸವೂ ಸಹ ಶೇ.೯೫ ರಷ್ಟು ಹೆಚ್.ಕೆ. ದ್ವಾರಿಕನಾಥ ರವರು ರೂಪಿಸಿದ ಪುಸ್ತಕ ವಿನ್ಯಾಸಗಳಂತೆಯೇ ಇದೆ. ವಿನ್ಯಾಸಗಾರರು ಬದಲಾದರೂ ವಿನ್ಯಾಸ ಮಾದರಿಯಲ್ಲಿ ಅಂಥ ಹೇಳಿಕೊಳ್ಳುವ ಯಾವ ಬದಲಾವಣೆಯೂ ಆಗಿಲ್ಲ. ಸರ್ಕಾರ ನಿಗದಿಪಡಿಸುವ ಮಾನದಂಡಗಳು, ವಿನ್ಯಾಸಗಾರ/ ಕಲಾವಿದ/ವಿನ್ಯಾಸಗಾರ್ತಿ/ ಕಲಾವಿದೆ ಇವರಿಗೆ ಸರ್ಕಾರವೇ ನಿರ್ಧಿಷ್ಟಗೊಳಿಸುವ ಸಂಭಾವನೆ ಇತ್ಯಾದಿ ಸರ್ಕಾರಿ ನೀತಿ ನಿಬಂಧನೆಗಳಿಗೆ ಸೀಮಿತವಾಗಿ ಕಾರ್ಯ ಮಾಡಬೇಕಾದ ಸಂದರ್ಭ ಇರುವುದರಿಂದ, ಈ ರೀತಿಯಲ್ಲಿ ಇಂತಹ ಪುಸ್ತಕಗಳ ಮುಖಪುಟ ವಿನ್ಯಾಸಗೊಂಡಿರಬೇಕು ಎಂದು ಅಭಿಪ್ರಾಯ ಪಡಬಹುದು/ ಉಹಿಸಬಹುದು.

ಇಲ್ಲಿನ ಕೃತಿ ಮಾಲಿಕೆಯ ಪದದ ಅಕ್ಷರ ವಿನ್ಯಾಸ ಕ್ಯಾಲಿಗ್ರಾಫಿ ಮಾದರಿಯಲ್ಲಿದ್ದು, ಕೃತಿ ಶೀರ್ಷಿಕೆ ಮಾಲಿಕೆಯ ಪದದ ಅಕ್ಷರವಿನ್ಯಾಸ ಹಾಗೂ ಕೃತಿಗಳ ಕರ್ತೃಗಳ ಹೆಸರಿನ ಅಕ್ಷರಗಳು ರೋಮನ್ ಮಾದರಿಯ ರೀತಿಯಲ್ಲಿವೆ ಮತ್ತು ಇವುಗಳನ್ನು ಹೊರತಂದ ಈ ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು ಎಂಬ ಪದಪುಂಜಗಳ ಅಕ್ಷರ ಮಾದರಿ ಗೋಥಿಕ್ ಶೈಲಿಯ ಗುಣಲಕ್ಷಣಹೊಂದಿವೆ. ಒಟ್ಟಾರೆ ೨೦೦೧ ಮತ್ತು ೨೦೦೪ ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಹೊರತಂದ ಇಂಥ ಮಾದರಿಯ ಗ್ರಂಥಗಳ ರಕ್ಷಾಪುಟ ವಿನ್ಯಾಸಕ್ಕೆ ಮುಖಪುಟ ವಿನ್ಯಾಸ ಪ್ರಕಾರಗಳಲ್ಲಿ 'ಏಕತಾನತೆ ಮುಖಪುಟ ವಿನ್ಯಾಸ' ಎಂದು ಪರಿಗಣಿಸಬಹುದು/ ಹೆಸರಿಸಬೇಕು. ಕಾರಣ ಓದಗರು/ನೋಡುಗರು ಇಂಥ ಮಾದರಿಯ ವಿನ್ಯಾಸಗಳ ಗ್ರಂಥಗಳು ನೋಡಿದ ಕ್ಷಣ ಇದು ಯಾರ ಬರಹ?, ಯಾರು ಪ್ರಕಾಶಕರು?, ಯಾವ ವರ್ಷ ಮುದ್ರಣಗೊಂಡಿದೆ?, ಮತ್ತು ಎಲ್ಲಿ ಇತ್ಯಾದಿ ಅಂಶವುಗಳು ಸುಲಭವಾಗಿ ಗುರುತಿಸುತ್ತಾರೆ.

ಒಟ್ಟಾರೆ ಈ ಅಧ್ಯಾಯಕ್ಕೆ ಆಯ್ಕೆ ಮಾಡಿಕೊಂಡ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಪ್ರಾತಿನಿಧಿಕ ಗ್ರಂಥಗಳ ಮುಖಪುಟ ವಿನ್ಯಾಸದಲ್ಲಿನ ಚಿತ್ರಗಳನ್ನು ಈ ಮುಂದಿನಂತೆ ಕಂಡುಬಂದಿವೆ. ೧೯೦೯ರಿಂದ ೧೯೪೭ರ ವರಗೆ ಆರು ಗ್ರಂಥಗಳ ಮುಖಪುಟದಲ್ಲಿ ಹಾಗೂ ೧೯೫೦ರಿಂದ ೧೯೭೮ರ ವರಗೆ ನಾಲ್ಕು ಗ್ರಂಥಗಳ ಮುಖಪುಟದಲ್ಲಿ ಅಕ್ಷರಗಳೇ ಮಹತ್ವದಾಗಿವೆ, ಇಲ್ಲಿ ಬೇರೆ ಯಾವ ಚಿತ್ರ, ಚಿನ್ಹೆಗಳಿಲ್ಲ. ಅಲ್ಲದೆ ೧೯೭೦ರಿಂದ ೨೦೧೫ರ ವರಗೆ ಹದಿನೈದರಿಂದ ಇಪ್ಪತ್ತು ಗ್ರಂಥಗಳ ರಕ್ಷಾಪುಟ

ವಿನ್ಯಾಸವು ನೈಜಕಲಾ ಶೈಲಿ ಮಾದರಿಯದಾಗಿವೆ. ೧೯೬೦ರಿಂದ ೧೯೭೦ ದಶಕದ ಅವಧಿಯ ಮುಖಪುಟ ವಿನ್ಯಾಸದಲ್ಲಿ ರೇಖಾಚಿತ್ರಗಳು ದ್ವಿವರ್ಣಗಳಲ್ಲಿ ಚಪ್ಪಟೆಲೇಪನ ಕ್ರಮಾನುಸರಿಸಿದ್ದು ಕಂಡುಬಂದಿದೆ. ಮತ್ತು ೧೯೭೦ ನಂತರ ಕಾಲಘಟದಿಂದ ರಕ್ಷಾಪುಟ ವಿನ್ಯಾಸದಲ್ಲಿಯೂ ನವ್ಯ ಮತ್ತು ಅಮೂರ್ತ ಕಲಾಶೈಲಿ ಮಾದರಿಯನ್ನು ಉಪಯೋಗಿಸಿದ್ದು ಅವಲೋಕನದಿಂದ ತಿಳಿದುಬಂದಿದೆ. ಜೊತೆಗೆ ಇಪ್ಪತ್ತೊಂದನೆ ಶತಮಾನದ ಮೊದಲ ದಶಕದ ಅವಧಿಯ ಅನೇಕ ಗ್ರಂಥಗಳ ಮುಖಪುಟ ವಿನ್ಯಾಸಕ್ಕೆ ತಂತ್ರಜ್ಞಾನ ಉಪಯೋಗಿಸಿಕೊಂಡಿದ್ದು ಸಹ ಕಂಡುಬರುತ್ತದೆ.

❑❑❑

# ಸ್ವಾತಂತ್ರ್ಯಪೂರ್ವ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟಗಳು




೧೯೦೯




೧೯೦೯




೧೯೧೪




೧೯೧೪




೧೯೩೪




೧೯೪೬




೧೯೪೬




೧೯೪೭

## ಸ್ವಾತಂತ್ರ್ಯೋತ್ತರ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟಗಳು




೧೯೬೦




೧೯೬೦




೧೯೬೨




೧೯೬೫



೧೯೬೯




೧೯೭೦

ಎಪ್ಪತ್ತರ ದಶಕದ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟಗಳು




೧೯೭೦




೧೯೭೨




೧೯೭೩




೧೯೭೩




೧೯೭೩




೧೯೭೪




೧೯೭೮




೧೯೭೮




೧೯೭೯



೧೯೭೯




೧೯೭೯




೧೯೭೯

ಎಂಬತ್ತರ ದಶಕದ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟಗಳು




೧೯೮೦



೧೯೮೧




೧೯೮೩




೧೯೮೪




೧೯೮೫




೧೯೮೫




೧೯೮೯




೧೯೮೯

ತೊಂಬತ್ತರ ದಶಕದ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟಗಳು




೧೯೯೭



೧೯೯೮



# ಗಾಂಧಾರಿ

(ನಾಟಕ)

ಮಧುಸೂದನ ಜಿ. ಘಾಟೆ

ಪ್ರಕಾಶಕ :
... ವೀರಶೈವ ಅಧ್ಯಯನ ಸಂಸ್ಥೆ, ಶಿವಮೊಗ್ಗ.



೨೦೦೦

ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟಗಳು




೨೦೦೧




೨೦೦೧




೨೦೦೩




೨೦೦೪

## ಏಕಮಾದರಿಯ ಕನ್ನಡ ನಾಟಕ ಗ್ರಂಥಗಳ ರಕ್ಷಾಪುಟಗಳು

**ಹೆಚ್.ಜಿ. ಸೋಮಶೇಖರರಾವ್**



ಟಿ.ಆರ್. ಮಹಾದೇವಯ್ಯ

೨೦೦೧

**ಎಚ್. ಟಿ. ಅರಸು**



ಆರ್. ಜಿ. ಹಳ್ಳಿ ನಾಗರಾಜ್

೨೦೦೧

**ಗರುಡ ಶ್ರೀಪಾದರಾಯರು**



ಶ್ಯಾಮಸುಂದರ ಬಿದರಕುಂದಿ

೨೦೦೧

**[illegible]**



[illegible]

೨೦೦೧




೨೦೦೪




೨೦೦೪




೨೦೦೪




೨೦೦೪

ಅಧ್ಯಾಯ : ಆರು

# ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

- ಸ್ವಾತಂತ್ರ್ಯೋತ್ತರ ಕನ್ನಡ ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟ ಚಿತ್ರಕಲೆ
- ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

## ಅಧ್ಯಾಯ : ಆರು

# ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಕರ್ನಾಟಕದಲ್ಲಿ ಜಾನಪದ ಮತ್ತು ಯಕ್ಷಗಾನ ಕಲೆಗಳು ನಿತ್ಯ ನಿರಂತರ ಪರಿವರ್ತನೆ ಆಗುತ್ತಿರುವ ಕಲಾ ಪ್ರಕಾರಗಳಲ್ಲಿ ತನ್ನದೇ ಆದ ಸ್ಥಾನ ಹೊಂದಿರುವ ವಿಶಿಷ್ಟವಾದ ಕಲೆಯಾಗಿದೆ. ಕನ್ನಡ ನಾಡು ಸಾಂಸ್ಕೃತಿಕವಾಗಿ ಕಟ್ಟಲು ಈ ಕಲೆಗಳ ಕೊಡುಗೆಯು ಅಪಾರವಾದದ್ದು ಮತ್ತು ಇಂತಹ ಕಲೆಗಳೆ ಸುಂದರ ಕನ್ನಡನಾಡು ಕಟ್ಟಲು ಭದ್ರಬೂನಾದಿಯಾಗಿವೆ. ಈ ಹಿನ್ನೆಲೆಯಲ್ಲಿ ಜಾನಪದ ಮತ್ತು ಯಕ್ಷಗಾನ ಕಲೆಗಳ ಕುರಿತು ಮುದ್ರಣಗೊಂಡ ಪ್ರಾತಿನಿಧಿಕ ಗ್ರಂಥಗಳ ಮುಖಪುಟ ವಿನ್ಯಾಸ, ಸಂಯೋಜನೆ, ವರ್ಣವೈಖರಿ, ಕೃತಿ ಶೀರ್ಷಿಕೆ ಅಕ್ಷರ ಶೈಲಿ ಮತ್ತು ನೋಡುಗರ/ಓದುಗರರಿಗೆ ಈ ಮುಖಪುಟಗಳು ಹೇಗೆ ಆಕರ್ಷಿಸುತ್ತಲಿವೆ ಎಂಬುವುದುನ್ನು ಇಲ್ಲಿ ತಾಂತ್ರಿಕತೆಯ ಹಿನ್ನೆಲೆಯಲ್ಲಿ ವಿವರಿಸಲಾಗುವುದು.

### ೬.೧. ಸ್ವಾತಂತ್ರ್ಯೋತ್ತರ ಕನ್ನಡ ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

#### ೬.೧.೧. ಭಾರತದ ಜಾನಪದ ಕತೆಗಳು (೧೯೭೧)

೧೯೭೧ರಲ್ಲಿ ಪ್ರಕಟಗೊಂಡ ಐ.ಬಿ.ಹೆಚ್. ಪ್ರಕಾಶನದ 'ಭಾರತದ ಜಾನಪದ ಕಥೆಗಳು' ಎಂಬ ಶೀರ್ಷಿಕೆ ಮುಖಪುಟದ ಅಕ್ಷರಗಳು ಸುಮಾರು ಶೇ. ೩೦ ಭಾಗದಷ್ಟು ಸ್ಥಳವನ್ನಾಕ್ರಮಿಸಿಕೊಂಡಿದ್ದು, ಎಪ್ಪತ್ತರ ದಶಕದಲ್ಲಿ ಉಪಲಬ್ದ ವಿದ್ದ ಅಕ್ಷರಶೈಲಿ ಬಳಸಿಕೊಂಡು ಕಪ್ಪು ವರ್ಣದಿಂದ ಆಕರ್ಷಣೀಯವಾಗಿ ನಿರ್ಮಿತಗೊಂಡಿದೆ. ಕನ್ನಡದ ಜಾನಪದ ಕಥೆಗಳನ್ನು ಎಲ್ಲಾ ವರ್ಗದ ಜನತೆ ಕೇಳಿ, ಓದಿ ಆನಂದಿಸುವುದನ್ನು ಚಿತ್ರದಲ್ಲಿ ಕಾಣುತ್ತೇವೆ. ಸುಸಂಸ್ಕೃತ ಮನೆತನದ ಗೃಹಿಣಿಯೊಬ್ಬಳು ತನ್ನ ಎಳೆಯ ಕಂದಮ್ಮಗಳಿಗೆ ಜನಪದ ಕಥೆಯನ್ನು ಓದಿ ಹೇಳುವ ಮೂಲಕ ಎರಡು ಪುಟಾಣಿಗಳು ಕಥೆ ಆಲಿಸುವಲ್ಲಿ ನಿರತರಾಗಿದ್ದಾರೆ. ತಾಯಿ

ಮಡಿಲಲ್ಲಿ ಮೈಗೂಡಿಸಿಕೊಂಡ ತದೇಕ ಚಿತ್ತದಿಂದ ಪುಸ್ತಕವನ್ನು ವೀಕ್ಷಿಸುತ್ತಾ ಕಥೆ ಆಲಿಸುವ ಸಾಹಿತ್ಯಾಸಕ್ತ ವಾತಾವರಣ ಇಲ್ಲಿದೆ. ಕಪ್ಪು ಬಿಳಿಪು ರೇಖಾಚಿತ್ರದ ಮೂಲಕ ಹಾಗೂ ಹಿನ್ನೆಲೆ ಹಳದಿಬಣ್ಣ ಹೊಂದಿರುವ, ಇಲ್ಲಿನ ಈ ದೃಶ್ಯ ಕಾತುರದಿಂದ ಕಥೆ ಆಲಿಸುವ ಮಕ್ಕಳ ಭಾವಪೂರ್ಣ ಚಿತ್ರ ಕಲ್ಪನೆಯನ್ನು ಮತ್ತೆ ಮತ್ತೆ ನೋಡಬೇಕೆನಿಸುತ್ತದೆ. ಈ ರಕ್ಷಾಪುಟ ವಿನ್ಯಾಸದಲ್ಲಿ ನೋಡಗನ ದೃಷ್ಟಿಯು ಮುಖಪುಟದ ಎಡಭಾಗಕ್ಕೆ ಹೆಚ್ಚು ಚಲಿಸುವಂತಿದೆ. ರಕ್ಷಾಪುಟ ವಿನ್ಯಾಸಕ್ಕೆ ದ್ವಿವರ್ಣ ಬಳಸಲಾಗಿದೆ. ಇದರ ಲೇಖಕರು ಡಾ.ಶಿವರಾಮ ಕಾರಂತರು ಹಾಗೂ ಮುದ್ರಕರು ವಿಜಯಾನಂದ ಪವರ್.

**೬.೧.೨. ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು (೧೯೭೯)**

'ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು' ಶೀರ್ಷಿಕೆಯ ಡಾ. ಬಸವರಾಜ ಮಲ್ಲಶೆಟ್ಟಿ ಸಂಪಾದಿಸಿದ ಕೃತಿಯ ರಕ್ಷಾಪುಟಚಿತ್ರ ರಚಿಸಿದವರು ಜಿ. ಬಿ. ಮನ್ವಾಚಾರ್‌ರವರು. ೧೯೭೯ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಪ್ರಕಟಣೆಯಾಗಿದ್ದು, ಇಡೀ ಮುಖಪುಟ ಆಕಾಶ ನೀಲಿ ಬಣ್ಣ ಹೊಂದಿದ್ದು ನೋಡಲು ಆಕರ್ಷಣೆಯವಾಗಿದೆ. ಮುಖಪುಟದ ಮಧ್ಯದಲ್ಲಿ ಕುದುರೆ ಏರಿದ ಸರದಾರನ ಚಿತ್ರ, ವಿವಿಧ ರೀತಿ ಅಲಂಕೃತಗೊಂಡು ಕುಣಿಯುವ ಕುದುರೆ ಹಾಗೂ ಸವಾರನ / ನಾಯಕ ಉತ್ಸಾಹ ಇತ್ಯಾದಿ ಸಾರಂಶವನ್ನು ಈ ರಕ್ಷಾಪುಟಚಿತ್ರ ಪ್ರಸ್ತುತಪಡಿಸುತ್ತಿದೆ. ಕುದುರೆಯ ಮುಖದ ಮೇಲಿನ ಕಳೆ ಸವಾರನ ಮುಖಕಾಂತಿ, ಅಲ್ಲದೇ ಉದುರುತ್ತಿರುವ ಹೂಗಳು, ಎಲೆಗಳ ಚಿತ್ರಗಳು ಸವಾರನು ಕುದುರೆಯನ್ನು ಎಳೆದು ಹಿಡಿದ ಶೈಲಿ ಆತನ ವೇಶ ಭೂಷಣಗಳು ಮತ್ತು ಕಲ್ಪನೆ ಮಾಡಿಕೊಳ್ಳುತ್ತಿರುವ ಆತನ ಭಾವನೆಗಳು, ಹೀಗೆ ಒಬ್ಬ ಕಲಾವಿದ ಕೃತಿಯೊಳಗಿನ ಹೂರಣವನ್ನು ಇಲ್ಲಿ ಪ್ರಕಟಿಸಿದ್ದಾನೆ. ಅಲ್ಲದೆ ಜನಪದ ಕಥೆ ಏನೆಲ್ಲಾ ಕುತೂಹಲ ಹುಟ್ಟಿಸುತ್ತವೆ ಎಂಬುದನ್ನು ಬಿಳಿ ಬಣ್ಣದ ಕುದುರೆ ಹಾಗೂ ಸರದಾರನ ನೋಟವು ನಯನ ಮನೋಹರವಾಗಿದೆ. ಮುಖಪುಟಚಿತ್ರದ ಮೇಲ್ಗಡೆ ಬರೆದ ಕೃತಿ ಶೀರ್ಷಿಕೆಯ ಅಕ್ಷರಗಳು ಗೋಥಿಕ್ ಮಾದರಿ ಶೈಲಿ ಹೊಂದಿದ್ದು ಅವುಗಳು ಈ ರಕ್ಷಾಪುಟಚಿತ್ರಕ್ಕೆ ಒಪ್ಪುವಂತಿವೆ.

**೬.೧.೩. ಬಟ್ಟಲ ತುಂಬಾ ಬಾರೀಕಾಯಿ (೧೯೮೩)**

೧೯೮೩ರಲ್ಲಿ ಸಂಗಮ ಪ್ರಕಾಶನ ಚಡಚಣ ಇವರಿಂದ ಪ್ರಕಟಗೊಂಡ ಮ.ನಿ. ತೋಳನೂರ್ ರವರಿಂದ ರಚಿತವಾದ 'ಬಟ್ಟಲ ತುಂಬಾ ಬಾರೀಕಾಯಿ' ರಕ್ಷಾಪುಟಚಿತ್ರದಲ್ಲಿ ಜನಪದ ತಾಯಿಯೊಬ್ಬಳು ತನ್ನ ಎಳೆಯ ಮುದ್ದು ಮಗುವಿಗೆ ಆಟವಾಡಿಸುತ್ತಾ ಆಗಸದಲ್ಲಿರುವ ಚಂದಿರನನ್ನು ತೋರಿಸುತಿದ್ದಾಳೆ. ಅದಕ್ಕೆ ಮಗುವು ಕೂಡ ಆ ಚಂದಮಾಮ ನನಗೆ ಬೇಕು ಎಂದು ಹಠ ಮಾಡುವುದು ಅಲ್ಲದೆ ಅದೇ ಚಂದಿರನ ಮುಖವನ್ನು ನೋಡಿ ಆನಂದಿಸುವುದು ಇಲ್ಲಿ ಕಾಣುತ್ತೇವೆ. ಇವೆಲ್ಲದರ ಜೊತೆ ದೊಡ್ಡ ಮಗು ತನ್ನ ಪಾಡಿಗೆ ತಾನು ಆಟಿಕೆಯೊಂದಿಗೆ ಆಟವಾಡುತ್ತಿದೆ. ಮಕ್ಕಳು ತಿನ್ನುವ ಬಾರೀಕಾಯಿ ರುಚಿಯಂತೆ ಕಥೆಗಳು ಮಕ್ಕಳ ಮನಸ್ಸನ್ನು ಆಕರ್ಷಿಸುತ್ತವೆ ಎಂಬುದನ್ನು ತಿಳಿಯಲು ಈ ಚಿತ್ರ ನೆರವಾಗಿದೆ. ಕಪ್ಪು ಮೋಡ ಹಾಗೂ ಕತ್ತಲೆ ಸರಿದ ನಂತರವೇ ಚಂದ್ರನ ದರ್ಶನ ಆಗುವುದು ತಾಯಿಯ ಹಾಗೂ ದೊಡ್ಡ ಮಗುವಿನ ಚಂದಿರನ ಹಳದಿ ಬಣ್ಣ ನೋಡುಗರಿಗೆ ಆಕರ್ಷಕವಾಗಿದೆ. ಹಿನ್ನೆಲೆಯಾಗಿ ಮನೆ ಅಂಗಳದ

ಹಾಸಿದ ಚಾಪೆಯ ಮೇಲೆ ಕುಳಿತು ಆಟ ಆಡುವ ದೊಡ್ಡ ಮಗು ಹಾಗೂ ಪಕ್ಕದಲ್ಲೇ ದೊಡ್ಡ ಜೋಡಿ ತೆಂಗಿನ ಮರಗಳು ಮೌನವಾಗಿ ಚಂದಮಾಮನನ್ನು ನೋಡುವಂತೆಯಿವೆ. ತಾಯಿ ಮಗುವಿಗೆ ತಿನ್ನಿಸುವ ಬಾರೆಹಣ್ಣು ಬಟ್ಟಲವು ತನ್ನ ಕಣ್ಮುಂದೆ ಇದ್ದರೂ ದೂರದಲ್ಲಿ ಕಾಣುವ ಚಂದಮಾಮ ಮಗುವಿನ ಹಠಮಾರಿತನ ಹೋಗಲಾಡಿಸುತ್ತಾನೆಂದು ತಿಳಿಸುವ ಚಿತ್ರ ಇಲ್ಲಿ ನಿರೂಪಿತಗೊಂಡಿದೆ. ಕೃತಿ ಶೀರ್ಷಿಕೆಯ ಅಕ್ಷರಗಳು ಕ್ಯಾಲಿಗ್ರಾಫಿಕ್ ಶೈಲಿಯಿಂದ ನಿರ್ಮಾಣಗೊಂಡಿರುವುದರಿಂದ ಈ ಮುಖಪುಟ ಸೊಗಸಾಗಿ ಕಾಣುವಂತಾಗಿದೆ.

**೬.೧.೪. ಬೆದರುಗೊಂಬೆ ಮತ್ತು ಇತರ ಜನಪದ ಕಥೆಗಳು (೧೯೯೩)**

'೧೯೯೩ರಲ್ಲಿ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಪ್ರಕಟಗೊಂಡಿರುವ ಡಾ.ಡಿ.ಕೆ.ರಾಜೇಂದ್ರ ಬರೆದ 'ಬೆದರುಗೊಂಬೆ ಮತ್ತು ಇತರ ಜಾನಪದ ಕಥೆಗಳು' ಎಂಬ ಶೀರ್ಷಿಕೆಯ ಮುಖಪುಟ ಮುಖ್ಯವಾಗಿ ಹಸಿರು, ಬಿಳಿ, ತಿಳಿಹಳದಿ ಮತ್ತು ಕಪ್ಪು ವರ್ಣಗಳಿಂದ ಬಿಂಬಿತವಾಗಿದೆ ಲೇಖಕರ ಹೆಸರು ಹಸಿರುವರ್ಣ ಹಾಗೂ ಅಕಾಡೆಮಿ ಹೆಸರು ಬಿಳಿ ಬಣ್ಣದಲ್ಲಿದ್ದು ಹಿನ್ನೆಲೆಯ ಹಸಿರು ಬಣ್ಣ ಅದ್ಭುತವಾಗಿದೆ. ಮುಖಪುಟದ ಬಲ ಭಾಗಕ್ಕೆ ಬೆದರು ಗೊಂಬೆಯ ಚಿತ್ರ ಹಾಗೂ ಎಡಭಾಗಕ್ಕೆ ಸುಂದರ ಯುವತಿಯೊಬ್ಬಳು ಗದ್ದಕ್ಕೆ ಕೈಯೂರಿಕೊಂಡುಬಿಂಬಿಸುವ ಕಲ್ಪನೆ ಮಾಡಿಕೊಳ್ಳುತ್ತಿರುವ ಅವಳ ಮನೋವೇದನೆಗೆ ಹಿನ್ನೆಲೆಯಾಗಿರುವ ಭದ್ರವಾದ ಕೋಟೆ, ಗಿಡಮರಗಳ ವಿಶಾಲ ಬಯಲು ಆವರಿಸಿರುವುದು ಮುಂತಾದ ವಿಚಾರಗಳನ್ನು ಪ್ರಕಟಗೊಳಿಸಿದ ಈ ರಕ್ಷಾಪುಟ ಕಲಾವಿದ ಹೆಚ್. ಎಸ್. ಪಾರಕ್‌ರವರ ಮನಸ್ಸಿಗೆ ಜನಪದ ಕಥೆಗಳೇ ಕಲ್ಪನೆಗೆ ಮೂಲವಾಗಿವೆ. ಇಲ್ಲಿ ರೂಪಿಸಿರುವ ಜನಪದ ಶೈಲಿಯ ಕನ್ನಡ ಅಕ್ಷರಗಳು ನೋಡುಗರಿಗೆ ಭಿನ್ನವಾದ ಅನುಭವವನ್ನು ನೀಡುತ್ತಲಿವೆ.

**೬.೧.೫. ಬಂಗಾರ ಕೂದಲ ಜೈರಾಣಿ (೧೯೯೩)**

೧೯೯೩ರಲ್ಲಿ ಡಾ. ಎಂ. ಜಿ. ಈಶ್ವರಪ್ಪ ಅವರಿಂದ ರಚನೆಯದ 'ಬಂಗಾರ ಕೂದಲ ಜೈರಾಣಿ' ಸ್ಕೈ ಬ್ಲೂವ್ ಹಿನ್ನೆಲೆವುಳ್ಳದ್ದಾಗಿದೆ, ಬಂಗಾರದ ಕೂದಲಿನ ಜೈರಾಣಿ ಎಂಬ ಶೀರ್ಷಿಕೆ ಮತ್ತು ರಾಣಿಯ ಮುಖಚರ್ಯೆ ಹಾಗೂ ಅವಳ ಸೇವಕರು ಕೆಂಪು ವರ್ಣದವರಾಗಿದ್ದು ಅವಳ ಕೂದಲು ಮಾತ್ರ ಬಂಗಾರದ ಬಣ್ಣ (ಹಳದಿ) ಎಲ್ಲರನ್ನೂ ಆಕರ್ಷಿಸುತ್ತದೆ. ಶೀರ್ಷಿಕೆ ಮುಖಪುಟದ ಮೇಲ್ಭಾಗದಲ್ಲಿ ಎದ್ದು ಕಾಣುವಂತೆ ಗೋಥಿಕ್ ಶೈಲಿಯಲ್ಲಿ ಕೆಂಪುವರ್ಣದಿಂದ ಮುದ್ರಿಸಿದ್ದಾರೆ. ಕೆಳಭಾಗದಲ್ಲಿ ಫೋಟೋ ಪ್ರೇಂ ಗಳಂತಹ ಚೌಕಾಕಾರದ ೧೬ ರೇಖಾ ಚಿತ್ರಗಳಲ್ಲಿ ಪ್ರತಿ ಕಥೆಯಲ್ಲಿ ಇರಬಹುದಾದ ಕಾಲ್ಪನಿಕತೆಯನ್ನು ಮೂಡಿಸುವ ಪ್ರಯತ್ನ ಕಲಾವಿದ ಶಂಕರ ಪಾಟೀಲ್‌ರಿಂದಾಗಿದೆ. ಜನಪದ ಸಂಸ್ಕೃತಿಯ ಚಕ್ಕಡಿ, ಮಹಿಳೆಯರ ಕೆಲಸದ ಗುಂಪುಗಳು, ಆಕಳು ಮೇಯಿಸುವ, ಬೆಟ್ಟಗಳ ಬಂಡೆಗಳು, ಈಶ್ವರನ ದೇವಾಲಯ, ದಂಪತಿಗಳ ಜನಪದ ನೃತ್ಯ, ಮಜ್ಜಿಗೆ ಕಡೆಯುವ ಮಹಿಳೆಯರು ಒಟ್ಟಿನಲ್ಲಿ ಕೃತಿಯ ಅಂತರಂಗವನ್ನು ಒಂದೊಂದು ಪ್ರೇಂ ವರ್ಕ್‌ನಲ್ಲಿ ಹಿಡಿದಿಡುವಲ್ಲಿ ಕಲಾವಿದ ಯಶಸ್ವಿಯಾಗಿದ್ದಾರೆ. ಕೆಳಭಾಗದಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಕಪ್ಪುಬಣ್ಣದ ದಪ್ಪ ಸಾಲುಗಳನ್ನು ಹೊಂದಿದ್ದು ಸರಾಗವಾಗಿ ವಾಚಕರನ್ನು ಓದುಸಿಕೊಂಡು ಹೋಗುತ್ತಿದೆ.

### ೬.೧.೬. ವಜ್ರ ಚೂಡಾಮಣಿ (೧೯೯೪)

೧೯೯೪ರಲ್ಲಿ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಿಸಿದ ಸಿದ್ದಪ್ಪ ಜಕಬಾಳ ರಚಿಸಿದ 'ವಜ್ರ ಚೂಡಾಮಣಿ' ಕೃತಿಯ ಮುಖಪುಟ ಯಕ್ಷಗಾನ ಬಯಲಾಟದ ನಾಯಕನ ಮುಖದ ರೌದ್ರತೆಯನ್ನು ತೋರುವ ಕೇಂದ್ರ ವರ್ಣಕ್ಕೆ ಹಣೆಯಲ್ಲಿ ಧರಿಸಿದ ಬಿಳಿ ವಿಭೂತಿ ಹೊಂದಾಣಿಕೆಯಾಗಿದೆ. ಎಡ ಮತ್ತು ಬಲ ಭುಜಕ್ಕೆ ಧರಿಸಿದ ಆಭರಣ ಪರಿಕರಗಳು ತಲೆಗೆ ಧರಿಸಿದ ಸಾಧಾರಣ ಕಿರೀಟ ಹಳದಿ ವರ್ಣದಿಂದ ಕೂಡಿವೆ. ಕೊರಳಲ್ಲಿ ಧರಿಸಿದ ಮಾಲೆ ತಲೆಯ ಚೌರಿ ಕೂದಲು ಕಪ್ಪು ವರ್ಣದ ಜೊತೆ ಮಿಶ್ರಣವಾದ ಬಿಳಿ ಬಣ್ಣದ ಹೊಂದಾಣಿಕೆ, ಅಲ್ಲದೆ ಅಲಂಕರಿಸಿದ ಕೆಂಪು ಬಣ್ಣದ ಚುಕ್ಕೆ ಮತ್ತು ಚಿತ್ರದ ಮೇಲಿನ ಕುಂಚ ಬೀಸು (Brush Stroke) ಮಾದರಿಯ ಶೀರ್ಷಿಕೆ ಅಕ್ಷರ, ಯಕ್ಷಗಾನ ಕಲಾವಿದನ ಕೆಂಪು ವಸ್ತ್ರ ವಡವೆಗಳೆಲ್ಲಾ ಆಕರ್ಷಣಿಯವಾಗಿದೆ. ಪಾತ್ರಧಾರಿಯೇ ಇಡೀ ಮುಖಪುಟಕ್ಕೆ ಶೇ% ೯೦ ಆವರಿಸಿಕೊಂಡಂತಿದೆ. ಹಿನ್ನೆಲೆಯಾಗಿ ನೀಲಿಯ ಆಗಸ ಅದಕ್ಕೆ ರಂಗಾಗಿದೆ. ಪಾತ್ರದಾರಿಯ ಮುಖಚರ್ಯೆ, ಕಣ್ಣು, ಮೀಸೆ ಮುಖದ ಮಂದಹಾಸ ಅಲಂಕಾರ ಎಲ್ಲವು ಈ ರಕ್ಷಾಪುಟವಿನ್ಯಾಸದಲ್ಲಿ ಉತ್ತಮವಾಗಿದೆ.

### ೬.೧.೭. ನಮ್ಮ ಸುತ್ತಿನ ಜನಪದ ಕಥನಗೀತೆಗಳು (೧೯೯೪)

ಅಕಾಡೆಮಿಯಿಂದ ಪ್ರಕಟಣೆಗೊಂಡ ವಿಜಯಲಕ್ಷ್ಮಿ ಸೀತಾಪುರ ಬರೆದ 'ನಮ್ಮ ಸುತ್ತಿನ ಜನಪದ ಕಥನ ಗೀತೆಗಳು' ಹಸಿರು, ಕೆಂಪು, ಗುಲಾಬಿ, ಕಪ್ಪು, ಬಿಳುಪು, ಹಳದಿ ವರ್ಣಗಳ ಸಮಾಗಮವಾಗಿದೆ, ಲೇಖಕಿಯ ಹೆಸರು ಬಿಳಿ ವರ್ಣದಲ್ಲಿ, ಜಾನಪದ ಶಬ್ದವು ಕೆಂಪುವರ್ಣ ಅಕಾಡೆಮಿಯ ಹೆಸರು ನೇರಳೆ (ಪಿಂಕ್) ಹಿನ್ನೆಲೆಯಾಗಿ ಬಳಸಿದ್ದು ಹಾಗೂ ಬಿಳಿ ವರ್ಣದ ಅಕ್ಷರಗಳು ಹೊಂದಿವೆ ಅಲ್ಲದೆ ಸಂಕೇತವು (ಎಂಬ್ಲಾಮ್) ಯಕ್ಷನ ರೂಪದಲ್ಲಿ ಕಂಡು ಬರುತ್ತದೆ. ನೀಲಿ ಮತ್ತು ಕೆಂಪು ವರ್ಣದಲ್ಲಿ ಶೀರ್ಷಿಕೆ ೨೦ ಅಳತೆ (Font Size) ಯಲ್ಲಿ ಕಟ್ಪ್ ಲೇಟ್ಟರ್ ಶೈಲಿಯಲ್ಲಿ ಆಕರ್ಷಕವಾಗಿ ಬರೆಯಲಾಗಿದೆ. ಕಥೆಯ ಕಥನ ಗೀತೆಯ ಆಶಯ ಹೊಂದಿದ ಮುಖಪುಟದ ಚಿತ್ರದಲ್ಲಿ ಬಲೆಯ ವೈವಿಧ್ಯತೆ ಹಾಗೂ ದೊಡ್ಡ ಮೀನು ಅದರೊಟ್ಟಿಗೆ ಒಬ್ಬ ಹೆಣ್ಣು ಬಲೆಯಲ್ಲಿ ಬಂದಿತಳಾಗಿದ್ದಾಳೆ ಅದರಾಚೆ ನಿರ್ಭೀತಿಯಿಂದ ವೀಕ್ಷಿಸುತ್ತಿರುವ ಸ್ತ್ರೀಯರ ಅಚ್ಚರಿಯನೋಟ ಭಾವಪೂರ್ಣವಾಗಿದೆ. ಹಿನ್ನೆಲೆಯಾದ ಹಳದಿ ಬಣ್ಣ ಎಲ್ಲಕ್ಕೂ ಪ್ರೇರಣೆ ಆಗಿದೆ. ಆದರೆ ಲೇಖಕರ ಹೆಸರು ಬಿಳಿ ಬಣ್ಣದಿಂದ ತೋರ್ಪಡಿಸಿರುವುದು ಇಲ್ಲಿನ ನ್ಯೂನ್ಯತೆ ಎಂದು ಭಾವಿಸಕೊಳ್ಳಬಹುದು.

### ೬.೧.೮. ಗಾದೆಯ ಕಥೆಗಳು (೧೯೯೪)

ಅಕಾಡೆಮಿಯ ಇನ್ನೊಂದು ಕೃತಿ 'ಗಾದೆಯ ಕಥೆಗಳು' ಕೆ.ಕೃಷ್ಣಪ್ಪ ರೆಡ್ಡಿ ಬರೆದಿರುವ ಪುಸ್ತಕ ಮುಖಪುಟವು ತೀರಾ ಸಾಧಾರಣವಾಗಿದ್ದು ಕಥೆ ಶೀರ್ಷಿಕೆ ಲೇಖಕರ ಹೆಸರು ಜೊತೆ ತಿಳಿಕೆಂಪು ಚೌಕಾಕಾರದಲ್ಲಿ ಅಕಾಡೆಮಿ ಹೆಸರಿದೆ. ಉಳಿದಂತೆ ಚೌಕಾಕೃತಿಯ ರೇಖೆಗಳು ಅಷ್ಟೇನು ಚಿತ್ರಕಲ್ಪನೆ ನೀಡುವುದಿಲ್ಲ. ಕೇವಲ

ಅಕ್ಷರ ಮತ್ತು ವರ್ಣ ಬಳಕೆಯಿಂದ ಮಾತ್ರ ರಚನೆಗೊಂಡ ಮುಖಪುಟವಿನ್ಯಾಸವಿದು. ಯಾವುದೇ ಕಲಾತ್ಮಕತೆಯ ಅಂಶವನ್ನು ಈ ಮುಖಪುಟವಿನ್ಯಾಸದಲ್ಲಿ ಕಂಡುಬರುವುದಿಲ್ಲ.

**೬.೧.೯. ರಿಚರ್ಡ್ ಎಂ. ಡಾರ್ಸನ್ (೧೯೯೪)**

ಅಕಾಡೆಮಿಯ ಮತ್ತೊಂದು ಗ್ರಂಥ. ಖ್ಯಾತ ಜಾನಪದ ವಿದ್ವಾಂಸ 'ರಿಚರ್ಡ್ ಎಂ. ಡಾರ್ಸನ್' ಭಾವಚಿತ್ರದೊಂದಿಗೆ ಪ್ರಕಟಗೊಂಡಿದ್ದು ಡಾ. ಕೆ. ಆರ್. ಸಂಧ್ಯಾರೆಡ್ಡಿ ಅವರು ಬರೆದಿದ್ದಾರೆ. ಹಸಿರು ಹಿನ್ನೆಲೆವುಳ್ಳ, ಕೆಂಪು ವರ್ಣದಲ್ಲಿ ಕುಂಚ ಬೀಸು (Brush Stroke) ಮಾದರಿಯಲ್ಲಿ ಶೀರ್ಷಿಕೆ ಹಾಗೂ ಲೇಖಕರ ಹೆಸರು ಕಂಡು ಬಂದರೆ ನೀಲಿ ವರ್ಣದ ಚೌಕಟ್ಟಿನಲ್ಲಿ ನೀಲಿ ಹಿನ್ನೆಲೆಯ ಬಿಳಿ ಬಣ್ಣದ ಅಕ್ಷರಗಳು ಕಂಡು ಬರುತ್ತವೆ. ಇಡೀ ಮುಖಪುಟದ ಮಧ್ಯದಲ್ಲಿನ ಭಾವಚಿತ್ರದಲ್ಲಿ ಡಾರ್ಸನ್ ನಗುಮುಖದ ಹಾಗೂ ವಯೋವೃದ್ಧತೆಯಲ್ಲೂ ಹಸನ್ಮುಖಿಯಾಗಿದ್ದು, ಅವರ ಸೇವೆ ಗುರ್ತಿಸಿ ಅನೇಕ ಹಾರ-ತುರಾಯಿ ಅವರ ಕೊರಳಿನಲ್ಲಿ ಅಲಂಕರಿಸಿದೆ. ಅವರ ಕುಂದದ ಉತ್ಸಾಹ ನೋಡುಗರಿಗೆ ಮಾದರಿ ಯಾಗುವಂತೆ ವಿದ್ವಾಂಸನ ವ್ಯಕ್ತಿತ್ವವನ್ನು ಈ ಮುಖಪುಟದಲ್ಲಿ ಚಿತ್ರಿಸಿದ ರೀತಿ ಆಕರ್ಷಣೀಯವಾಗಿದೆ.

**೬.೧.೧೦. ಲಂಬಾಣಿ ಜನಪದ ಕತೆಗಳು (೧೯೯೪)**

'ಲಂಬಾಣಿ ಜನಪದ ಕಥೆಗಳು' ಎಂಬ ಕೃತಿಯ ಲೇಖಕರು ಸೋಮಣ್ಣ ಹೊಂಗಳ್ಳಿ ಎನ್ನುವವರು. ಈ ಕೃತಿಯ ಮುಖಪುಟವು ನೀಲಿ, ಹಸಿರು, ಹಳದಿ, ಕೆಂಪು, ಗುಲಾಬಿ, ಬಿಳಿ – ಮೊದಲಾದ ವರ್ಣಗಳಿಂದ ಕೂಡಿದ್ದು ಆರ್ಕಷಕವಾದ ಶೀರ್ಷಿಕೆಯ ಅಕ್ಷರಗಳು ಕ್ಯಾಲಿಗ್ರಾಫಿಕ್ ಶೈಲಿ ಹೊಂದಿದ್ದು ಹಳದಿ ವರ್ಣದಿಂದ ಲೇಪನಗೊಂಡಿದೆ. ಮುಖಪುಟದ ಮಧ್ಯದಲ್ಲಿರುವ ದೊಡ್ಡ ಭಾವಚಿತ್ರದ ಸೀರೆಯೂ ಅದೇ ಬಣ್ಣ ಹೊಂದಿದೆ, ಸುತ್ತಲೂ ಆವರಿಸಿ ನೀಲಿ ಬಣ್ಣ ಇದ್ದು ಕೆಳ ಭಾಗದಲ್ಲಿ ಪ್ರಕಟಗೊಂಡ ಅಕಾಡೆಮಿಯ ವಿಳಾಸ ಕೆಂಪು ಬಣ್ಣ ಹೊಂದಿದೆ. ಲಂಬಾಣಿ ಗೃಹಿಣಿಯೊಬ್ಬಳ ಮುಗ್ಧತೆ, ಅವಳ ವೇಷಭೂಷಣಗಳ ವೈಭವ ಜೊತೆಗೆ ಕಲಾ ಕುಸುರಿ ಕೆಲಸಗಳು ಅರ್ಧಮುಚ್ಚಿದ ಮುಖಭಾವದಲ್ಲಿನ ವಾರೆನೋಟ, ಲಜ್ಜೆ ಎಲ್ಲವನ್ನು ಸೆರೆಹಿಡಿಯಲಾಗಿದೆ, ಕೊರಳಲ್ಲಿ ಧರಿಸಿದ ವಿವಿಧ ಕಂಠೀಹಾರಗಳು, ಕಿವಿಯೋಲೆ, ಮೂಗುತಿ ಹಾಗೂ ತಾಳಿಗಳು ಅವಳ ಸೌಂದರ್ಯದ ಮೆರಗನ್ನು ಹೆಚ್ಚಿಸಿದೆ. ಇಡೀ ಮುಖಪುಟವು ಒಂದೇ ರೀತಿಯ ಸಮತೋಲನವನ್ನು ಸಾಧಿಸಿದೆ. ತಲೆಗೂದಲಿನ ಕಪ್ಪು ಬಣ್ಣ ಬಿಟ್ಟರೆ ಇಡೀ ಚಿತ್ರಪಟ ಲಂಬಾಣಿಗರ ಜನಪದ ಕಥೆಗಳ ಸಾಮರ್ಥ್ಯವನ್ನು ಸಮರ್ಪಕವಾಗಿ ನಿರೂಪಿಸುತ್ತದೆ. ೧೯೯೪ಳರಲ್ಲಿ ಪ್ರಕಟಗೊಂಡ ವಜ್ರ ಚೂಡಾಮಣಿ, ನಮ್ಮ ಸುತ್ತಿನ ಜನಪದ ಕಥೆಗಳು, ಗಾದೆಯ ಕಥೆಗಳು, ರಿಚರ್ಡ್ ಎಂ ಡಾರ್ಸನ್, ಲಂಬಾಣಿ ಜನಪದ ಕತೆಗಳು ಈ ಐದು ಗ್ರಂಥಗಳ ಮುಖಪುಟ ವಿನ್ಯಾಸದಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಲಾಂಛನವನ್ನು ಎಡಭಾಗದ ಕೆಳಗಡೆ ಒಂದೇ ಕಡೆ ಮುದ್ರಿಸಿರುವುದು ಹಾಗೂ ಅವುಗಳ ಮುಖಪುಟ ವಿನ್ಯಾಸಕಾರ ಬಿ. ಜಿ. ಕನಕೇಶವಮೂರ್ತಿ ಎಂಬ ಒಬ್ಬರೆ ಕಲಾವಿದರಾಗಿದ್ದು ಗಮನಿಸತಕ್ಕ ಅಂಶ.

೬.೧.೧೧. ಡಾ. ಎಂ.ಎಸ್. ಸುಂಕಾಪುರ (೧೯೯೫)

ಕರ್ನಾಟಕದ ಹೆಸರಾಂತ ಜಾನಪದ ವಿದ್ವಾಂಸ 'ಡಾ. ಎಂ. ಎಸ್. ಸುಂಕಾಪುರ' ಶೀರ್ಷಿಕೆಯ ಕೃತಿ ಲೇಖಕರು ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆಯವರು ಈ ಕೃತಿಯು ೧೯೯೫ರಲ್ಲಿ ಪ್ರಕಟಗೊಂಡಿದೆ. ಅಕಾಡೆಮಿಯ ಮೂಲಕ ಇಂತಹ ಸ್ಥಳೀಯ ವಿದ್ವಾಂಸರ ಸೇವೆ ಗುರುತಿಸಿ ಅವರ ಪರಿಚಯ ಮಾಡಿಕೊಡಲಾಗುತ್ತದೆ. ಇಲ್ಲಿನ ಮುಖಪುಟವು ತಿಳಿ ಕಂದು (ನಸಿಪುಡಿ) ಬಣ್ಣದು ಹಾಗೂ ಕೆಳಭಾಗದಲ್ಲಿ ಅಕಾಡೆಮಿಯ ವಿಳಾಸ ಕಪ್ಪು ಹಿನ್ನೆಲೆ,ಬಿಳಿ ಅಕ್ಷರಗಳಿಂದ ಕೂಡಿದ್ದು ಮುಖಪುಟದ ಮಧ್ಯಭಾಗದಲ್ಲಿ ಇರುವ ಭಾವಚಿತ್ರವೇ ಡಾ. ಎಂ. ಎಸ್. ಸುಂಕಾಪುರ ಅವರದು. ಭಾವಚಿತ್ರವು ಹಸನ್ಮುಖಿಯಾಗಿದ್ದು ಅವರ ವ್ಯಕ್ತಿತ್ವಕ್ಕೆ ಗಾಂಭೀರ್ಯತೆಗೆ ತಕ್ಕಂತೆ ಕಪ್ಪು ಬಿಳುಪು ಛಾಯಚಿತ್ರವಿದ್ದು ಕೋಟು ಧರಿಸಿ ಶಿಸ್ತಿನ ಸಿಪಾಯಿಯಂತೆ ಕಾಣುತ್ತಿರುವುದು ಭಾವಚಿತ್ರ ನೋಡಿಯೇ ಊಹಿಸಬೇಕಾದ ಅಂಶವಾಗಿದೆ. ಇದೊಂದು ಸಾಧಾರಣವಾದ ಮುಖಪುಟ ವಿನ್ಯಾಸ ಎಂದು ಕಂಡುಬರುತ್ತದೆ.

೬.೧.೧೨. ತೇರದಾಳದ ಲಾವಣಿಕಾರರು (೧೯೯೫)

೧೯೯೫ರಲ್ಲಿ ಪ್ರಕಟಗೊಂಡ 'ತೇರದಾಳದ ಲಾವಣಿಕಾರರು' ಲೇಖಕರಾದ ಡಾ. ಸಂಗಮೇಶ ಬಿರಾದಾರ, ಸ್ನೇಹ ಪ್ರಿಂಟರ್ಸ್ ಮೂಲಕ ಪ್ರಕಟಿಸಿರುವ ಕೃತಿಯ ಮುಖಪುಟವು ಜನಪದ ಕಲೆಗಳಲ್ಲೇ ಅತ್ಯಂತ ಜನಪ್ರಿಯವಾದ ಲಾವಣಿಕಾರರನ್ನು ಪರಿಚಯಿಸುವ ಪ್ರಯತ್ನ ಮುಖಪುಟನೋಡಿಯೇ ಹೇಳಬಹುದಾಗಿದೆ. ನೀಲಿ ಹಿನ್ನೆಲೆಯುಳ್ಳ ಆಕಾಶದಷ್ಟು ವಿಸ್ತಾರವುಳ್ಳ ಜಾನಪದ ಸಾಹಿತ್ಯದ ಆಳ-ಅಗಲ ಅಗೋಚರ ಎನಿಸುವುದನ್ನು ನೀಲಿ ಹಿನ್ನೆಲೆಯ ವರ್ಣ ತಿಳಿಸುತ್ತದೆ. ಅಲ್ಲದೆ ಕಲಾವಿದರು ನುಡಿಸುವ ತಮಟೆ ವಾದವೂ ಇಡೀ ಮುಖಪುಟದ ಮಧ್ಯದಲ್ಲಿ ಆಕರ್ಷಣೀಯವಾಗಿದೆ.

ಉತ್ತಮ 'ರೇಖಾವರ್ಣಗಳಿಂದ ಚಪ್ಪಟೆ ಲೇಪನ ಬಣ್ಣದೊಂದಿಗೆ ಮಿಂಚುತ್ತಿರುವ ಈ ವಾದ್ಯದ ಲಾವಣಿಕಾರರು ಭಾವಪೂರ್ಣತೆಯಿಂದ ಲಾವಣಿ ಗೀತೆ ನುಡಿಸುತ್ತಿದ್ದಾರೆ. ನೋಡುಗರ ಕಡೆ ನೇರ ಮುಖಮಾಡಿ ನಿಂತು ವಾದ್ಯ ನುಡಿಸುತ್ತಿರುವ ಈ ಲಾವಣಿಕಾರರ (ಕಲಾವಿದರ) ಸಾಮಾನ್ಯ ವೇಶಭೂಷಣಗಳು ಕೃತಿಯಲ್ಲಿನ ಹೂರಣವನ್ನು ಸಾರುತ್ತಿದೆ.'[೧] ಸ್ತ್ರೀ-ಪುರುಷರಾದಿಯಾಗಿ ವಿವಿಧ ವಯೋಮಾನದ ಎಲ್ಲರೂ ಜನಪದ ಲಾವಣಿಗಳನ್ನು ಹಾಡುವ ಸಾಂಕೇತಿಕತೆಯನ್ನು ಮುಖಪುಟ ವಿನ್ಯಾಸದಲ್ಲಿ ಸ್ಪಷ್ಟವಾಗಿ ಗಮನಕ್ಕೆ ಬರುವ ಅಂಶವಾಗಿದೆ. ಕಾಲಿಗೆ ಗೆಜ್ಜೆ ಕಟ್ಟಿದ ಕಲಾವಿದರ ಹುರುಪು-ಹುರುಷದ ಮುಖಭಾವ ನೋಡಿದರೆ ಎಂದಿಗೂ ದಣಿವುಯಿಲ್ಲದ ಕಲೆ ಲಾವಣಿ ಎಂದು ಹೇಳುವಂತಿದೆ. ಪುರುಷರ ಸಾಧಾರಣ ದಮ್ಮಡಿ ವಾದ್ಯವು, ಅಲಂಕೃತಗೊಂಡ ಸ್ತ್ರೀಯ ಕೈಯೊಳಗಿನ ವಾದ್ಯಕ್ಕಿಂತ ದೊಡ್ಡದಾಗಿದೆ. ಸ್ತ್ರೀ ಹಿಡಿದ ಅಲಂಕೃತ ವಾದ್ಯವು ಅವಳಷ್ಟೇ ವನಪು-ವೈಯ್ಯಾರದಿಂದ ಮೂಡಿದೆ. ಕುಣಿದು ಕುಪ್ಪಳಿಸಿ ಹಾಡುವ ಕಲಾ ಕೌಶಲ್ಯತೆ ಸಾರುವ ಈ ಮುಖಪುಟದಲ್ಲಿ ಸ್ತ್ರೀ-ಪುರುಷರ ಎರಡೂ ಚಿತ್ರವು ತಿಳಿಕಂದು ಸಾಧಾರಣ ವರ್ಣವನ್ನು

೦೧. ಸಂದರ್ಶನ: ಕೆ. ಕೆ. ಮಕಾಳೆ (ಮುಖಪುಟ ಕಲಾವಿದರು), ಕ.ವಿ.ವಿ., ಹಂಪಿ. ದಿ:೨೦೧೫

ಹೊಂದಿದ್ದು ಶೀರ್ಷಿಕೆಯಲ್ಲಿ ಕಪ್ಪು ಬಿಳಿಪು ಹಿನ್ನೆಲೆ, ದಟ್ಟನೀಲಿಬಣ್ಣದೊಂದಿಗೆ ರಚಿತವಾದ ಕೃತಿ ಶೀರ್ಷಿಕೆ ಓದುಗನನ್ನು ಸರಾಗವಾಗಿ ನೋಡುವಂತೆ ಕಲಾವಿದ ಮುಖಪುಟ ವಿನ್ಯಾಸ ರಚಿಸಿದ್ದಾನೆ.

**೬.೧.೧೩. ವ್ಲಜಿಮಿರ್ ಜೆ. ಪ್ರಾಪ್ (೧೯೯೫)**

೧೯೯೫ರಲ್ಲಿ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಪ್ರಕಟಗೊಂಡ ಡಾ.ಅಂಬಳಿಕೆ ಹಿರಿಯಣ್ಣ ಬರೆದ ಕೃತಿಗೆ ಕಲಾವಿದ ಎ. ಜೆ. ಸವುಲೇಂದ್ರ ಮುಖಪುಟ ವಿನ್ಯಾಸ ರಚಿಸಿದ್ದಾರೆ. 'ವ್ಲಜಿಮಿರ್ ಜೆ. ಪ್ರಾಪ್' ಎಂಬ ಶೀರ್ಷಿಕೆಯಲ್ಲಿ ಪ್ರಕಟಗೊಂಡಿದೆ. ಹಿರಿಯ ಜಾನಪದ ತಜ್ಞರಾದ ವ್ಲಜಿಮಿರ್ ಜೆ. ಪ್ರಾಪ್ ವ್ಯಕ್ತಿತ್ವ ಬಿಂಬಿಸುವ ಈ ಮುಖಪುಟವು ಅವರ ಭಾವಚಿತ್ರವನ್ನು ಎದ್ದು ಕಾಣುವಂತೆ ಪ್ರಕಟಿಸಿದೆ. 'ಅವರ ಮುಖದಲ್ಲಿನ ಪ್ರಸನ್ನತೆ ಶಾಂತ ಸ್ವಭಾವ, ವಿದ್ವತ್ತಿನ ಗಾಂಭೀರ್ಯತೆ ಅವರ ಚಿಂತನಾತ್ಮಕನೋಟ, ಮನಸ್ಸಿನ ಏಕಾಗ್ರತೆ ಅವರು ಧರಿಸಿರುವ ಉಡುಪು ಅದರಲ್ಲೂ ಕೋಟು ಮತ್ತು ಟೈ ಧರಿಸಿದ್ದು ಅವುಗಳಿಗೆ ಒಪ್ಪುವಂತೆ ತಲೆಗೂದಲು ನೀಟಾಗಿ ಬಾಚಿದ್ದುದು ಅಲ್ಲದೇ ಅಷ್ಟೇ ನೀಟಾಗಿ ಕತ್ತರಿಸಿದ ಬಿಳಿ ಮೀಸೆ ಹಾಗೂ ಅವರ ಮುಖದಲ್ಲಿ ಎದ್ದು ಕಾಣುವ ಭಾವಪೂರ್ಣತೆ ಅವರ ವಿದ್ವತ್ತನ್ನು ಸಾರುತ್ತದೆ,'[೨] ಚಿಂತನೆ ವಿದ್ವತ್ತು ಹರಳುಗಟ್ಟಿದ ಅತ್ಯಂತ ಸರಳತೆ ಮೈಗೂಡಿಸಿಕೊಂಡ ಇವರ ವ್ಯಕ್ತಿತ್ವ ಸಾರುವಂತ ಮುಖಪುಟವಿನ್ಯಾಸ ಇದಾಗಿದೆ. ಅರೆ ಛಾಯ (Half Tone) ಭಾವಚಿತ್ರ ಈ ಮುಖಪುಟದಲ್ಲಿ ಮುದ್ರಿಸಿದ್ದು ಅದರ ಸುತ್ತಲಿನ ಕುಸುರಿ ವಿನ್ಯಾಸ ಡಾ. ಎಂ. ಎಸ್. ಸುಂಕಾಪುರ ಕೃತಿಯ ಮುಖಪುಟದಲ್ಲಿನ ಕುಸುರಿ ವಿನ್ಯಾಸದ ಪಡಿ ಅಚ್ಚನ್ನೇ ವರ್ಣಭೇದ ಮಾಡಿ ಇಲ್ಲಿನ ವಿನ್ಯಾಸ ಯಥಾವತ್ತಾಗಿ ಮುದ್ರಿಸಿದ್ದಾರೆ.

**೬.೧.೧೪. ದುರುದುಂಡೀಶನ ಎರಡು ಯಕ್ಷಗಾನಗಳು ೧೯೯೫**

ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಣೆಯ ಮತ್ತೊಂದು (೧೯೯೫) ಕೃತಿ 'ದುರುಡುಂಡೀಶನ ಎರಡು ಯಕ್ಷಗಾನಗಳು' ಸ್ನೇಹ ಪ್ರಿಂಟರ್ಸ್‌ರವರು ಪ್ರಕಟಿಸಿದ ಡಾ.ಸಂಗಮೇಶ ಸೌದತ್ತಿಮಠ ರವರು ಬರೆದಿದ್ದು. ಇದರ ಮುಖಪುಟದಲ್ಲೇನು ವಿಶೇಷತೆಯಿಲ್ಲ. ಕೆಂಪು ನೀಲಿ ನೇರಳೆ ಮೂರು ವರ್ಣಗಳು ಮಾತ್ರ ಇರುವ ಎಡಭಾಗದ ಕೆಂಪುಪಟ್ಟಿ ಅಡಿಯಲ್ಲಿರುವ ಅಕಾಡೆಮಿ ಚಿಹ್ನೆ ಮತ್ತು ಹೆಸರುಗಳು ಓದಗರಿಗೆ ತಕ್ಷಣ/ಥಟ್ಟನೆ ಕಾಣುತ್ತವೆ. ದೊಡ್ಡ ವೃತ್ತದಲ್ಲಿ ಬರೆದ ದುರುದುಂಡೀಶನ ಎರಡು ಯಕ್ಷಗಾನಗಳು ಎಂಬ ಶೀರ್ಷಿಕೆ ಸಾಮಾನ್ಯ ಶೈಲಿಯ ೧೫ ಅಳತೆಯ (Font Size) ಅಕ್ಷರಗಳಾಗಿವೆ. ಈ ಮುಖಪುಟ ವಿನ್ಯಾಸದಲ್ಲಿ ಯಾವುದೇ ಭಾವನಾತ್ಮಕ, ವರ್ಣನಾತ್ಮಕ, ಕಾಲ್ಪನಿಕತೆ ಚಿತ್ರಗಳಿಲ್ಲದ ಸಾಧಾರಣ ಸರಳತೆ ಹೊಂದಿದ ಒಂದು ನೋಟವಾಗಿದೆ.

**೬.೧.೧೫. ಕರ್ನಾಟಕ ಬುಡಕಟ್ಟುಗಳು (೧೯೯೬)**

ಅಕಾಡೆಮಿಯಿಂದ ೧೯೯೬ರಲ್ಲಿ ಪ್ರಕಟವಾದ 'ಕರ್ನಾಟಕ ಬುಡಕಟ್ಟುಗಳು' ಎರಡನೇ ಸಂಪುಟದ

೦೨. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

ಮುಖಪುಟ ವಿನ್ಯಾಸವು ಬಿ.ಎಲ್. ಶ್ರೀನಿವಾಸ್ ಅವರಿಂದ ನಿರ್ಮಾಣಗೊಂಡಿದ್ದು 'ಬುಡಕಟ್ಟು ಜನಾಂಗದ ನೈಜತೆಗೆ ಸಾಕ್ಷಿಯಾಗಿ ಕಾಣುತ್ತದೆ. ಆ ಜನಾಂಗದ ಬುಡಕಟ್ಟು ಸಂಸ್ಕೃತಿವುಳ್ಳ ಗುಡಿಸಲೊಂದನ್ನು ತನ್ನ ಶ್ರಮ ಸಂಸ್ಕೃತಿಯ ಮೂಲಕ ಹೆಣೆದು ಬಿಗಿ ಮಾಡಿಕೊಳ್ಳುತ್ತಿರುವ ಆದಿವಾಸಿ ಜನಾಂಗದ ಪ್ರತಿನಿಧಿಯಾಗಿ ನೆಲೆಯೂರಲು ಒಂದು ಸೂರು ಬೇಕೆಂಬುದನ್ನು ಮುಖಪುಟಚಿತ್ರವು ಯಥಾವತ್ತಾಗಿ ಧ್ವನಿಸುತ್ತಿದೆ."[೩] ಕಟ್ಟುಮಸ್ತಾದ ಶರೀರವುಳ್ಳ ವ್ಯಕ್ತಿ ತನ್ನ ಗುಡಿಸಲು ಇಲ್ಲವೇ ವಾಸಿಸಲು ಆಸರೆಯಾಗಿರುವ ಸೂರನ್ನು ಸರಿಪಡಿಸಿಕೊಳ್ಳುವ ಪ್ರಯತ್ನದಲ್ಲಿದ್ದಾನೆ. ಹೊರಗೆ ಹಸಿರು ಬಳ್ಳಿ ಕಸಕಡ್ಡಿ ಬೆಳೆದಿದೆ ಅದನ್ನು ಶುಚಿಗೊಳಿಸುವುದು ಮತ್ತು ತನ್ನ ಸೂರನ್ನು ಭದ್ರಪಡಿಸಿಕೊಂಡು ತನ್ನ ಕಾಯಕ ಮುಂದುವರೆಸುತ್ತಿದ್ದಾನೆ. ಸುತ್ತಲೂ ಹಸಿರಿನ ಚೌಕಟ್ಟು ಭಾವಚಿತ್ರವೊಂದನ್ನು ಪ್ರದರ್ಶಿಸಿದಂತಿದೆ.

**೬.೧.೧೬. ಕೌಜಲಗಿ ನಿಂಗವ್ವ (೧೯೯೬)**

ಡಾ.ಶ್ರೀರಾಮ ಇಟ್ಟಣ್ಣನವರ ರಚಿಸಿದ 'ಕೌಜಲಗಿ ನಿಂಗವ್ವ' ಕೃತಿಯ ಮುಖಪುಟವು ಕಲಾವಿದ ಅಬ್ಬ್ಯಾಕಸ್‌ರವರಿಂದ ವಿನ್ಯಾಸಗೊಳಿಸಲಾಗಿದೆ. ಹಿರಿಯ ಜಾನಪದ ಚೇತನ ಕೌಜಲಗಿ ನಿಂಗವ್ವನ ವ್ಯಕ್ತಿತ್ವದ ಪ್ರತಿರೂಪವಾಗಿ. ಇಳಿ ವಯಸ್ಸಿನ ಈ ಮಾತೆಯ ಸುಕ್ಕುಗಟ್ಟಿದ ಮುಖ, ಮೌನವೇ ಸರ್ವಾಲಂಕಾರ ಎಂಬಂತೆ ಅವಳ ವ್ಯಕ್ತಿತ್ವವನ್ನು ಹೊಂದಿದೆ. ಮನೆಯಗೋಡೆ ಮೇಲೆ ನೇತು ಹಾಕಿದ ಭಾವಚಿತ್ರದಂತೆ ಸಾಧಾರಣವಾಗಿದ್ದ ಛಾಯಚಿತ್ರವನ್ನು ಇಲ್ಲಿನ ಮುಖಪುಟ ವಿನ್ಯಾಸಕ್ಕೆ ಬಳಸಿಕೊಂಡಿದ್ದು. ತಿಳಿ ಕಂದು ಬಣ್ಣದ ಹಿನ್ನೆಲೆವುಳ್ಳ ಈ ಮುಖಪುಟ ಕಪ್ಪು ಬಿಳುಪು ಮೂಲ ಹೊಂದಿದ್ದು ಅದರ ಕೊರತೆ ನೀಗಿಸಲು ಕೆಂಪು-ಕಪ್ಪು ಬಣ್ಣಗಳು ಕಾಣುತ್ತವೆ. ಕೃತಿ ಶೀರ್ಷಿಕೆಯ ಅಕ್ಷರಗಳು ಸಾಮಾನ್ಯ ರೋಮನ್ ಶೈಲಿಯಲ್ಲಿ ಹೊಂದಿವೆ. ಆಧುನಿಕ ಕಾಲದ ಯಾವುದೇ ವಿನೂತನ ಮಾದರಿಯ ತಂತ್ರಜ್ಞಾನ, ಕಲಾಶೈಲಿ, ವರ್ಣಗಾರಿಕೆ ಮುಂತಾದ ಅಂಶಗಳು ಈ ಮುಖಪುಟದಲ್ಲಿ ಬಳಕೆಯಾಗದೆ ರಚನೆಗೊಂಡಿರುವುದು ಇದರ ವಿನ್ಯಾಸವು ವಿಫಲಗೊಂಡಿದೆ ಎಂದು ಭಾವಿಸತಕ್ಕದ್ದು.

**೬.೧.೧೭. ಜಾಂಬವತಿ ಕಲ್ಯಾಣ (೧೯೯೭)**

ಬಿದರಹಳ್ಳಿ ನರಸಿಂಹಮೂರ್ತಿ ಅವರು 'ಜಾಂಬವತಿ ಕಲ್ಯಾಣ' ಎಂಬ ಕೃತಿ ೧೯೯೭ರಲ್ಲಿ ರಚಿಸಿದ್ದು ಆ ಕೃತಿಯ ಮುಖಪುಟವಿನ್ಯಾಸದಲ್ಲಿ ನೀಲಿಬಣ್ಣದ ಶೀರ್ಷಿಕೆಯ ಅಕ್ಷರಗಳು ರೋಮನ್ ಶೈಲಿಯದ್ದಾಗಿವೆ ಹಾಗೂ ಅವುಗಳು ಸ್ಪಷ್ಟವಾಗಿ ನೋಡುಗನಿಗೆ ಕಾಣುತ್ತಲಿವೆ. ನೇರಳೆ ವರ್ಣ ಹಿನ್ನೆಲೆಯಾಗಿಸುವ 'ಯಕ್ಷಗಾನ ಕಲಾವಿದನ ಮುಖವರ್ಣಿಕೆ ತುಂಬಾ ನಯನ ಮನೋಹರವಾಗಿದೆ. ಯಕ್ಷಗಾನ ಕಲಾವಿದನ ಮುಖದ ವಿವಿಧ ಬಣ್ಣ ಇಡೀ ಮುಖಪುಟದ ಮುಖ್ಯ ಆಕರ್ಷಣೆಯಾಗಿದೆ ಎಂದು ಪ್ರತಿಯೊಬ್ಬ ನೋಡಗರ ಗಮನಕ್ಕೆ ಬರುವ ಸತ್ಯ ಸಂಗತಿಯಾಗಿದೆ. ವಿಶಾಲವಾದ ಹಣೆಗೆ ಬಳಿದ ವಿಭೂತಿ, ಉದ್ದನೆಯ ಕೆಂಪು ನಾಮ ಕಣ್ಣಿನ ಮೇಲ್ಭಾಗದ ಬಣ್ಣಗಳು ಗದ್ದದಲ್ಲಿನ ಬಿಳಿ ಚುಕ್ಕೆಗಳ ಮಧ್ಯದ ಕೆಂಪು ಬಣ್ಣ ಯಥಾವತ್ತಾಗಿ

೦೩. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

ಮೂಡಿ ಬಂದಿವೆ. ತಲೆಗೆ ಧರಿಸಿದ ಯಕ್ಷಗಾನದ ಕಿರೀಟವು ಅಷ್ಟೇ ವೈವಿಧ್ಯಮಯವಾಗಿ, ಮನಮೋಹಕವಾಗಿ ಮೂಡಿ ಬಂದದ್ದು ಅದರ ಅಲಂಕಾರವಂತೂ ಹಲವು ಹತ್ತು ಕಲಾತ್ಮಕ ಕಣ್ಣುಗಳನ್ನು ತನ್ನತ್ತ ಸೆಳೆಯುತ್ತದೆ ಮತ್ತು ಆಲೋಚನೆಗೆ ಪ್ರೇರೇಪಿಸುತ್ತಿದೆ.[೪] ಕಪ್ಪು ಮಿಶ್ರಿತ ನೀಲಿ ಹಿನ್ನೆಲೆವುಳ್ಳ ಭಾವಚಿತ್ರ ಕಲಾವಿದನ ಮುಖಭಾವವು ಆಕರ್ಷಣೀಯವಾಗಿ ಕಾಣುವಂತೆ ಮಾಡುತ್ತದೆ.

**೬.೧.೧೮. ಪಾಠಾಂತರ ಕಥನ ಕವನಗಳು (೧೯೯೭)**

ರಶ್ಮಿ ಮುದ್ರಣದಲ್ಲಿ ೧೯೯೭ರಲ್ಲಿ ಪ್ರಕಟವಾದ ಡಾ.ಎನ್.ಆರ್.ನಾಯಕ್ ಬರೆದ 'ಪಾಠಾಂತರ ಕಥನ ಕವನಗಳು' ಕೃತಿ ಶೀರ್ಷಿಕೆಯ ಅಕ್ಷರಗಳು ನೀಲಿ ವರ್ಣದಲ್ಲಿ ಮೂಡಿ ಬಂದಿದೆ. ಯಕ್ಷಗಾನ ಕಲಾವಿದನ ಶರೀರದ ಬಣ್ಣ ತಿಳಿನೀಲಿ ಬಣ್ಣವಾಗಿದ್ದು, ಅಲಂಕಾರ ಹೊಂದಿದ ಕಿರೀಟ ಭುಜ ಕೀರ್ತಿಗಳು ಹಸಿರು ನಿಲುವಾಗಿ, ಹಳದಿ ಬಣ್ಣದ ರೇಷ್ಮೆ ಶಾಲು, ಕುಸುರಿ ಕೆಲಸ ಮಾಡಿದ ವೇಷಭೂಷಣಗಳು ಹೆಚ್ಚು ಆಕರ್ಷಣೀಯವಾಗಿವೆ. ಕಲಾವಿದನು ಯಕ್ಷಗಾನ ಕಲೆಯನ್ನು ಜೀವಂತ ಗೊಳಿಸುತ್ತಿರುವಂತೆ ಮುಖಪುಟ ಮೂಡಿಬಂದಿದೆ. ಇಡೀ ಮುಖಪುಟವಿನ್ಯಾಸದಲ್ಲಿ ಯಕ್ಷಗಾನ ವೇಷಭೂಷಣಧರಿಸಿದ ಛಾಯಾಚಿತ್ರವೆ ಶೇ. ೮೦ ರಷ್ಟು ಆಕ್ರಮಿಸಿಕೊಂಡಿದೆ.

**೬.೧.೧೯. ರತ್ನತ್ರಯರು ಮತ್ತು ಜಾನಪದ (೧೯೯೭)**

ಶಿಷ್ಟ ಸಾಹಿತ್ಯ ಮತ್ತು ಜಾನಪದ ಸಂವೇದನೆ ಮಾಲಿಕೆಯಡಿಯಲ್ಲಿ ೧೯೯೭ರಲ್ಲಿ ಪ್ರಕಟಣೆಯಾದ 'ರತ್ನತ್ರಯರು ಮತ್ತು ಜಾನಪದ' ಎಂಬ ಕೃತಿ ಬರೆದಿದ್ದು ಡಾ.ಸರಸ್ವತಿ ವಿಜಯಕುಮಾರ್. ಕೃತಿ ಶೀರ್ಷಿಕೆ ಲೇಖಕರ ಹೆಸರು ಹಾಗೂ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ವಿಳಾಸಗಳು ಬಿಳಿ ಬಣ್ಣದ ಅಕ್ಷರಗಳಿಂದ ಆಕರ್ಷಕವಾಗಿ ಮೂಡಿಬಂದಿವೆ. ಉಳಿದಂತೆ ಇಡೀ ಮುಖಪುಟ ಕೆಂಪು ವರ್ಣದಿಂದ ಎದ್ದು ಕಾಣುವಂತಿದೆ. ಅದರಲ್ಲಿ ಅರ್ಧದ ನಂತರದ ಕೆಳಭಾಗದಲ್ಲಿ ಹಳದಿ, ಹಸಿರು ಕಪ್ಪು ಬಣ್ಣಗಳಿಂದ ಕೆತ್ತನೆ ಮಾಡಿದ ಬಲ್ಕಿ ಹೂಗಳಂತೆ ಕಾಣುವಂತಹ ಕುಸುರಿ ಕೆಲಸ ಬಹಳ ನಾಜುಕಿನಿಂದ ರಚನೆಗೊಂಡಿದೆ ಎಂಬುವುದನ್ನು ಇಲ್ಲಿ ಮನಗಾಣಬಹುದು. ಹೆಣೆಯೂವಿಕೆಯನ್ನು (ಹೆಣಿಕೆ) ಮೀರಿಸುವಂತಿದೆ ಈ ಮುಖಪುಟ ಮೇಲಿನ ಕಲಾಕಾರ್ಯ.

**೬.೧.೨೦. ದೇವುಡು (೧೯೯೭)**

'ದೇವುಡು' ಶೀರ್ಷಿಕೆ ಕೃತಿಯು ಡಾ.ಕುಮಾರ ಚಲ್ಯ ರಚಿಸಿದ್ದಾರೆ. ದೇವುಡು ಅವರ ವ್ಯಕ್ತಿ ಚಿತ್ರವನ್ನು ಸಂಪೂರ್ಣ ಪ್ರತಿನಿಧಿಸುವಂತೆ ಮುಖಪುಟರಚಿಸಿ ಪ್ರಕಟವಾಗಿದ್ದು ಅವರ ಭಾವಚಿತ್ರ ತಿಳಿನೀಲಿ ಬಣ್ಣದಿಂದ ಕೂಡಿದೆ. ಕೆಂಪು ಬಣ್ಣದ ಹಿನ್ನೆಲೆಯೊಂದಿಗೆ ಅಕಾಡೆಮಿ ಹೆಸರು ಬಿಳಿ ವರ್ಣದಿಂದ ಕೂಡಿದೆ. ಕನ್ನಡ ನಾಡು, ನುಡಿ ಜನತೆಗೆ ಮಾಡಿರುವ ಅವರ ಸೇವೆ, ಅವರ ಗಾಂಭೀರ್ಯತೆ ಸಾರುವ ಭಾವಚಿತ್ರ ಅಪರೂಪದ ಅವರ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ. ಡ್ರೈ ಬ್ರಶ್ ವಿಧಾನ ವರ್ಣ ಲೇಪನದಿಂದ ಕೂಡಿದ

೦೪. ಸಂದರ್ಶನ: ಕೆ. ಕೆ. ಮಕಾಳಿ (ಮುಖಪುಟ ಕಲಾವಿದರು), ಕ.ವಿ.ವಿ., ಹಂಪಿ. ದಿ:೨೦೧೫

ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಮತ್ತು ಅದರ ಸುತ್ತಲೂ ಸರಳಗೈ ರೇಖಾವಿನ್ಯಾಸ ಹೊಂದಿರುವದು ಮುಖಪುಟದ ಮಧ್ಯದಲ್ಲಿ ಮೂಡಿ ಬಂದಿದೆ. ಕೃತಿಯ ಶೀರ್ಷಿಕೆ ತಿಳಿ ನೀಲಿ ವರ್ಣದಿಂದ ಕೂಡಿದ್ದು ದೇವುಡು ಅವರ ವ್ಯಕ್ತಿತ್ವವನ್ನು ಪುಷ್ಟಿಗೊಳಿಸಿದೆ. ಅಲ್ಲದೆ ತಿಳಿಗೆಂಪು ಬಣ್ಣದ ಹಿನ್ನೆಲೆ ಹೊಂದಿರುವ ಅಂದಿನ ಕಾಲದ ಚಿತ್ರಕ್ಕೆ ತಕ್ಕಂತಹ ಕಪ್ಪು ಬಿಳುಪು ಭಾವಚಿತ್ರವು ಅದಕ್ಕೆ ನೀಡಿದ ಬಣ್ಣ ಬಣ್ಣದ ಚೌಕಟ್ಟು ಎದ್ದು ಕಾಣುವಂತೆ ಮಾಡಿದ ಕಲಾವಿದ ನೆರಳು ಬೆಳಕಿನ ಸಂಯೋಜನೆಯನ್ನು ಅದರಲ್ಲಿ ಸೂಚಿಸಿದ್ದಾನೆ. ಇದನ್ನು ಪ್ರಗತಿ ಗ್ರಾಫಿಕ್ಸ್‌ಯಿಂದ ಮುದ್ರಣ ಮಾಡಿಸಲಾಗಿದೆ.

### ೬.೧.೨೧. ಸರ್ ಜೇಮ್ಸ್ ಜಾರ್ಜ್ ಫ್ರೇಜರ್ (೧೯೯೭)

ಇದೇ ವರ್ಷದಲ್ಲಿ ಪ್ರಕಟವಾದ ಮತ್ತೊಂದು ಕೃತಿ 'ಸರ್ ಜೇಮ್ಸ್ ಜಾರ್ಜ್ ಫ್ರೇಜರ್' ಶೀರ್ಷಿಕೆಯಲ್ಲಿದ್ದು ಡಾ.ವಾಮನ ನಂದಾವರು ಇದರ ಲೇಖಕರಾಗಿದ್ದು ಪ್ರಗತಿ ಗ್ರಾಫಿಕ್ಸ್ ಮುದ್ರಣಾಲಯದಿಂದ ಪ್ರಕಟಗೊಂಡಿದೆ. ಯಾವುದೇ ವ್ಯಕ್ತಿ ಪರಿಚಯದ ಭಾವಚಿತ್ರ-ಚಿತ್ರಪಟ ಇಲ್ಲಿಲ್ಲ. ಆದರೆ ಸರಳಗೈ ಚಿತ್ರದ ಸಾಂಕೇತಿಕತೆ ಕೃತಿಯ ಮುಖಪಟದ ಮದ್ಯ ಪ್ರಕಟವಾಗಿದ್ದು ಕೆಳಭಾಗದಲ್ಲಿ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ವಿಳಾಸ ಕೆಂಪು ಹಿನ್ನೆಲೆಯಲ್ಲಿನ ಬಿಳಿ ಅಕ್ಷರಗಳು ಓದುಗರಿಗೆ ಗೋಚರಿಸುತ್ತವೆ. ಮುಖಪುಟದಲ್ಲಿ ಕಡಿಮೆ ಬಣ್ಣಗಳನ್ನು ಬಳಸಿದ್ದು ಉಳಿದೆಲ್ಲವೂ ಸಾಂಕೇತಿಕವಾಗಿದೆ.

### ೬.೧.೨೨. ಬಂಡಾಯ ಕಾವ್ಯ ಮತ್ತು ಜಾನಪದ (೧೯೯೭)

ಡಾ.ಬಸವರಾಜ ಸಬರದ ರಚಿಸಿದ 'ಬಂಡಾಯ ಕಾವ್ಯ ಮತ್ತು ಜಾನಪದ' ಎಂಬ ಶೀರ್ಷಿಕೆಯಲ್ಲಿದ್ದು ಸ್ನೇಹ ಪ್ರಿಂಟರ್ಸ್‌ನಿಂದ ಪ್ರಕಟವಾಗಿದೆ. ಇಡೀ ಮುಖಪುಟ ಹಸಿರು ಹೊದಿಕೆ ಹೊಂದಿದ್ದು ಮಧ್ಯದಲ್ಲಿ ಮಾತ್ರ ಜಾನಪದ ಕಸೂತಿ ಕಲೆ ಹೊಂದಿರುವ ಪಟಗಳಿಂದ ಚಿತ್ರಿತವಾಗಿದೆ. ವಿವಿಧ ಬುಡಕಟ್ಟು ಹಾಗೂ ಆದಿವಾಸಿಗಳ ಚಿತ್ರಕಲೆ, ಕೌದಿ ಕಲೆಯನ್ನು ಬಿಂಬಿಸಿದ ಹಲವು ಬಣ್ಣಗಳುಳ್ಳ ಈ ಮುಖಪುಟದ ಮಧ್ಯದಲ್ಲಿ ಜನಪದ ದೈವದ ಮುಖ ಕಾಡು ಮೃಗ, ಕಸೂತಿ ವಿವಿಧ ಬಳ್ಳಿಗಳ ಕೈಮಗ್ಗದ ಚಿತ್ರಕಲೆಯನ್ನು ಅನಾವರಣಗೊಳಿಸಿದ್ದ ಮುಖಪುಟದಲ್ಲಿ ವಿಶೇಷ ನೋಟದ ಮೂಲಕ ಅರ್ಥೈಸಿಕೊಳ್ಳಬೇಕಾಗುತ್ತದೆ. ಕಲಾವಿದ ಹೀಗೆ ಅಡಗಿಸಿದ ಕಲೆಯನ್ನು ಸೂಕ್ಷ್ಮವಾಗಿ ಗ್ರಹಿಸಬೇಕಾಗಿದೆ.

### ೬.೧..೨೩. ವಡ್ಡಾರಾಧನೆ ಮತ್ತು ಜಾನಪದ, ಹರಿಹರ-ರಾಘವಾಂಕ ಮತ್ತು ಜಾನಪದ (೧೯೯೭)

'ವಡ್ಡಾರಾಧನೆ ಮತ್ತು ಜಾನಪದ' ಲೇಖಕರು ಡಾ. ಹಂಪ ನಾಗರಾಜಯ್ಯ ಹಾಗೂ 'ಹರಿಹರ-ರಾಘವಾಂಕ ಮತ್ತು ಜಾನಪದ' ಎಂಬ ಶೀರ್ಷಿಕೆಯ ಪ್ರೊ. ಶಿವರಾಮಯ್ಯ ಬರೆದಿದ್ದು. ಸ್ನೇಹ ಪ್ರಿಂಟರ್ಸ್ ಪ್ರಕಟಿಸಿರುವ ಈ ಎರಡು ಮುಖಪುಟಗಳು ಒಂದೇ ಶೈಲಿ ಹೊಂದಿವೆ. ಮೊದಲನೆಯದು ಒಂದೇ ಸಾಲಿನಲ್ಲಿ ಶೀರ್ಷಿಕೆ ಹೊಂದಿದ್ದರೆ, ಎರಡನೆಯದ್ದು ಎರಡು ಸಾಲುಗಳ ಶೀರ್ಷಿಕೆ ಹೊಂದಿದೆ. ಈ ಎರಡು ಕೃತಿಗಳಲ್ಲಿ ಮೊದಲನೆಯದು ಪಾಚಿ ತಿಳಿಹಸಿರು ಬಣ್ಣ ಹಿನ್ನೆಲೆಯಾಗಿ ಬಳಸಿದ್ದು ಮುಖಪುಟದಲ್ಲಿ ಮದ್ಯಭಾಗ ಹಳದಿ, ಕೆಂಪು, ನೀಲಿ, ಕಪ್ಪು ಬಣ್ಣಗಳ ಸಂಗಮವಾಗಿದೆ. ಎರಡನೆಯ ಮುಖಪುಟ ಚಿತ್ರವು

ಹಳದಿ ವರ್ಣದಿಂದ ಕೂಡಿದ್ದು ಮಧ್ಯದಲ್ಲಿ ಜನಪದ ಕೌದಿಕಲೆ, ಹಚ್ಚೆ ಕಲೆ, ರಂಗೋಲಿ ಕಲೆಗಳ ಪ್ರಕಟಣೆಯನ್ನು ಸೂಚಿಸುತ್ತಿದ್ದು ಕಪ್ಪು, ನೀಲಿ, ಕೆಂಪು, ಹಳದಿ ಬಣ್ಣಗಳ ಸಂಗಮವಾಗಿವೆ. ಇಲ್ಲಿ ಕಲಾವಿದರು ಜಾನಪದ ದೃಶ್ಯಕಲೆಗಳತ್ತ ಗಮನ ಕೇಂದ್ರಿಕರಿಸಲು ಪ್ರಯತ್ನಿಸಿರುತ್ತಾರೆ. ಅದೇ ರೀತಿ ಒಳ ಹೂರಣದಲ್ಲಿ ಏನಿದೆ ಎಂಬುದರ ಸ್ವಾರಸ್ಯವನ್ನು ಮುಖಪುಟ ಕಲಾವಿದ ಸೂಕ್ಷ್ಮವಾಗಿ ಅರಿತಿದ್ದು ಅವುಗಳನ್ನು ಸೂಚ್ಯವಾಗಿ ಸೂಕ್ಷ್ಮವಾಗಿ ಚಿತ್ರಿಸಿದ್ದಾನೆ.

ರತ್ನತ್ರಯರು ಮತ್ತು ಜಾನಪದ, ಬಂಡಾಯ ಕಾವ್ಯ ಮತ್ತು ಜಾನಪದ, ವಡ್ಡಾರಾಧನೆ ಮತ್ತು ಜಾನಪದ, ಹರಿಹರ–ರಾಘವಾಂಕ ಮತ್ತು ಜಾನಪದ ಈ ನಾಲ್ಕು ಗ್ರಂಥಗಳು ಒಂದೇ ಮಾಲಿಕೆಯಡಿಯಲ್ಲಿ ೧೯೯೭ ರಲ್ಲಿ ಮುದ್ರಣಹೊಂದಿರುವ ಕೃತಿಗಳು. ರಕ್ಷಾಪುಟಚಿತ್ರ/ವಿನ್ಯಾಸದಲ್ಲಿ 'ಏಕರೂಪತೆ' ಹೊಂದಿದ ಮುಖಪುಟ ವಿನ್ಯಾಸ ಎಂದು ಸೂಚಿಸಬಹುದು. ಪ್ರತಿಯೊಂದು ಕೃತಿಯ ಶೀರ್ಷಿಕೆ ಹೆಸರು ಮತ್ತು ಹಿನ್ನೆಲೆ ವರ್ಣದ ಬಳಕೆ ಬೇರೆ ಬೇರೆ ಇರುವುದನ್ನು ಹೊರತು ಪಡಿಸಿದರೆ ಬೇರೆ ಯಾವ ಅಂಶಗಳಲ್ಲಿ ವ್ಯತ್ಯಾಸ ಕಂಡು ಬರುವುದಿಲ್ಲ. ಈ ನಾಲ್ಕು ಮುಖಪುಟ ವಿನ್ಯಾಸಕ್ಕೆ ಬಳಸಿದ ಚಿತ್ರಪ್ರತಿ ಒಂದೇಯಾಗಿದ್ದು ಕೇವಲ ವರ್ಣಭೇದ/ಛಾಯಾಭೇದ ಬೇರೆಯಾಗಿದೆ. ಮುಖಪುಟದಲ್ಲಿನ ಸ್ಥಳ ಅವಕಾಶ ಮತ್ತು ಸ್ಥಳ ಹೊಂದಾಣಿಕೆ ಎಲ್ಲವೂ ಒಂದೇ ರೂಪದ್ದಾಗಿದೆ ಎಂಬುವುದು ಈ ಕೃತಿ ಮುಖಪುಟವಿನ್ಯಾಸಗಳಲ್ಲಿ ಓದುಗರು/ನೋಡಗರು ಗಮನಿಸಬಹುದು.

**೬.೧.೨೪. ಅ) ಜಾನಪದ (೧೯೯೩), ಜಾನಪದ (೧೯೯೫), ಜಾನಪದ (೧೯೯೬)**

'ಜಾನಪದ' ಎಂಬ ಶೀರ್ಷಿಕೆಯಲ್ಲಿ ೧೯೯೩ರಲ್ಲಿ ಡಾ. ರಂಗಾರೆಡ್ಡಿ ಕೋಡೀರಾಂಪುರ ಸಂಪಾದಿಸಿರುವ ಕೃತಿ ಹಾಗೂ ೧೯೯೫ರಲ್ಲಿ ಡಾ.ಹಿ.ಶಿ. ರಾಮಚಂದ್ರೇಗೌಡರು ಸಂಪಾದಿಸಿರುವ ಕೃತಿ ಹಾಗೂ ಡಾ. ಬಸವರಾಜ ನೆಲ್ಲಿ ೧೯೯೬ರಲ್ಲಿ ಸಂಪಾದಿಸಿರುವ ಈ ಮೂರು ಗ್ರಂಥಗಳು ಸ್ನೇಹ ಪ್ರಿಂಟರ್ಸ್ ಪ್ರಕಟಿಸಿದೆ. ಈ ಮೂರು ಕೃತಿಗಳ ಮುಖಪುಟದಲ್ಲಿ ಒಂದೇ ರೀತಿಯ ಚಿತ್ರಗಳು ಪ್ರಕಟವಾಗಿವೆ. ಕೇವಲ ಎರಡು ಮೂರು ಬಣ್ಣಗಳ ಸಂಯೋಜನೆಯೊಂದಿಗೆ ಹೊರ ಹೊಮ್ಮಿದ ಮುಖಪುಟದಲ್ಲಿ ಜಾನಪದ ಎಂಬ ಶೀರ್ಷಿಕೆ ಕುಂಚ ಬೀಸು (ಬ್ರಷ್ ಸ್ಟ್ರೋಕ್) ವಿಧಾನ ಆಕರ್ಷಕ ಶೈಲಿಯಲ್ಲಿ ಕಂಡು ಬರುತ್ತದೆ. ಅಲ್ಲದೆ ಕೆಳಭಾಗಕ್ಕೆ ಬಲ ಬದಿಗೆ ಅದೇ ಕೃತಿಯ ಸಂಪಾದಕರ ಹೆಸರು (ಸರಳವಾಗಿ) ಪ್ರಕಟಗೊಂಡಿವೆ.

ಉಳಿದಂತೆ ಕೊಡಗಿನ ವೀರ ಪರಂಪರೆಯ ಜಾನಪದ ಉಡುಪು ಧರಿಸಿದ ಸಾಂಪ್ರದಾಯಿಕ ಹಾಡು ಹೇಳುತ್ತಿರುವ ವಾದ್ಯಗಳೊಂದಿಗೆ ನುಡಿಸುವ, ಕುಣಿಯುವ ಮಹಿಳಾ ನೃತ್ಯಗಳನ್ನು ಬಿಂಬಿಸುವ ಮೂರು ಚಿತ್ರಗಳಲ್ಲಿ ಏಕರೂಪತೆಯಿದೆ.ಆದರೆ ಹಿನ್ನೆಲೆ ಬಣ್ಣಗಳಲ್ಲಿ ಮಾತ್ರ ವ್ಯತ್ಯಾಸವಿದೆ. 'ನೆಲದ ಮೇಲೆ ವೃತ್ತಾಕಾರವಾಗಿ ನರ್ತಿಸುವ ಹಾಡುವ ವಾದ್ಯನುಡಿಸುವ ವಿಶಿಷ್ಟ ಜಾನಪದ ಈ ಕೊಡಗಿನ ಶೈಲಿ ಇಲ್ಲಿನ ಗ್ರಂಥ ಮುಖಪುಟವಿನ್ಯಾಸಕ್ಕೆ ಕಿರೀಟ ಮುಡಿಸಿದಂತೆ ಕಾಣುತ್ತದೆ. ಕೊಡಗಿನ ವೀರರ ಸಾಂಪ್ರದಾಯಿಕ ವೇಷಭೂಷಣಗಳ ಆಡಂಬರ ಅಬ್ಬರದ ಜೊತೆಗೆ ತಮ್ಮದೇ ಆದ ನೃತ್ಯದ ವೈವಿಧ್ಯತೆ–ವೈಯ್ಯಾರ ಭಾವ

ತೀವ್ರತೆಯ ನರ್ತನ-ನಡಿಗೆಯ ಶೈಲಿ ಮುಖಭಾವಗಳ ಆಕರ್ಷಣೆ ಮುಮ್ಮುಖ ಹಿಮ್ಮುಖ ಚಿತ್ರಗಳನ್ನು ಕಲಾವಿದ ಈ ರಕ್ಷಾಪುಟದಲ್ಲಿ ನೈಜವಾಗಿ ನಿರೂಪಿಸಿದ್ದಾನೆ.'[೫] ಆದರೆ ಇಲ್ಲಿನ ರೇಖಾಚಿತ್ರ ಕಲಾವಿದನ ಹೆಸರು ಎಲ್ಲಿಯೂ ಉಲೇಖವಾಗಿಲ್ಲ ಎಂಬುದೇ ಕಾಲವಲಯದ ದುರದೃಷ್ಟಕರವಾದ ಸಂಗತಿ.

**೬.೧.೨೫. ಆ) ಜಾನಪದ ವರ್ಷ (೧೯೯೪), ಜಾನಪದ ವರ್ಷ (೧೯೯೬)**

೧೯೯೬ರಲ್ಲಿ ಡಾ.ಕೆ.ಆರ್.ಸಂಧ್ಯಾರೆಡ್ಡಿ ಬರೆದ ಕೃತಿ 'ಜಾನಪದ ವರ್ಷ ೧೯೯೪' ಹಾಗೂ ಪ್ರೊ. ಎ. ವಿ. ನಾವಡ ರಚಿಸಿದ 'ಜಾನಪದ ವರ್ಷ ೧೯೯೬' ಈ ಕೃತಿಗಳು ಮುಖಪುಟದಲ್ಲಿ ಏಕರೂಪತೆ ಹೊಂದಿವೆ. ಕೃತಿ ಶೀರ್ಷಿಕೆಯ ಜಾನಪದ ಅಕ್ಷರಗಳು ಶೈಲಿಯಲ್ಲಿ ವಿಶೇಷ ಆಕರ್ಷಣೆ ಹೊಂದಿವೆ. 'ಜನಪದರು ಆರಾಧಿಸುವ ದೈವದ ಹುಲಿಸವಾರಿ ಮಾಡಿರುವ ಗ್ರಾಮ ದೇವತೆಯ ಚಿತ್ರಪಟವು ಆದಿವಾಸಿ ಅಥವಾ ಬುಡಕಟ್ಟು ಚಿತ್ರಕಲೆಯ ವೈಭವವನ್ನು ಸಾರುತ್ತವೆ. ಬಾಲಗೌರಿಯಾಗಿ ಹುಟ್ಟಿದ ದೇವಿಯು ತನ್ನನ್ನು ಮೋಸಮಾಡಿ ವಿವಾಹವಾದ ಯುವಕನನ್ನು ಕೊಲ್ಲುವ ಅನಂತರದಲ್ಲಿ ಮಾರಿಯಾಗಿ ರುಂಡವನ್ನು ಚೆಂಡಂತೆ ಆಡುವ ಅವಳ ಕೈಯಲ್ಲಿರುವ ಹರಿತವಾದ ಸದಾ ಝಳಪಿಸುವ ರಣ ಖಡ್ಗ ಒಂದು ಅಚ್ಚರಿಯೇ ಆಗಿದೆ. ಇನ್ನು ಆಕೆಯ ಉಗ್ರವಾದ ಕಣ್ಣುಗಳು ಭಯಭೀತಿ ಹುಟ್ಟಿಸಿ ಆಕೆಯನ್ನು ಭಕ್ತಿಯಿಂದ ಪೂಜಿಸುವಂತೆ ಮಾಡಿವೆ. ಎಡ ಬಲಗೈಯಲ್ಲಿರುವ ಸರ್ಪಾಸ್ತ್ರ ಹಾಗೂ ಖಡ್ಗಗಳು ಆಕೆಯ ರೌದ್ರಾವತಾರವನ್ನು ಸೂಚ್ಯವಾಗಿ ತಿಳಿಸುತ್ತವೆ. ಅವಳ ವಾಹನ ಹುಲಿಯು ಕೂಡ ಭಯಂಕರವಾದ ಕಾಡು ಪ್ರಾಣಿಯಾಗಿದು ಅದನು ವಿಶೇಷವಾಗಿ ಅಲಂಕರಿತವಾಗಿದೆ. ಎಡಬಲದಲ್ಲಿ ಸೂರ್ಯ ಚಂದ್ರರಿರುವವರೆಗೂ ಆದಿಶಕ್ತಿ ಶಾಶ್ವತವಾಗಿ ನೆಲೆಸಿರುತ್ತಾಳೆಂಬ ಕಲ್ಪನೆಯನ್ನು ಕಟ್ಟಿಕೊಡುವಲ್ಲಿ ಕಲಾವಿದನ ಜಾಣ್ಮೆ ವ್ಯಕ್ತವಾಗುತ್ತದೆ. ಕಪ್ಪು ಬಣ್ಣದ ಹಿನ್ನೆಲೆಯಲ್ಲಿ ಪ್ರಕಟವಾದ ಬಿಳಿ ಚುಕ್ಕೆಗಳಿಂದ ರೇಖೆಗಳಿಂದ ನಿರ್ಮಿಸಿದ ಚಿತ್ರವು ಹಿನ್ನೆಲೆಯಲ್ಲಿರುವ ಬೆಟ್ಟಗುಡ್ಡಗಳ ನೀರವ ವಾತಾವರಣವು ಆದಿಶಕ್ತಿಗೆ ವಿಶೇಷ ಶಕ್ತಿ ತುಂಬಿವೆ. ಅವಳ ಆ ಭಾರಕ್ಕೆ ಮಣಿದ ಹುಲಿ ಮತ್ತೆ ಮತ್ತೆ ಆಕೆಯತ್ತ ಕರುಣ ಜನಕ ಕಥೆ ಹೇಳುವಂತೆ, ತನ್ನನ್ನು ಬಂಧ ಮುಕ್ತಗೊಳಿಸುವಂತೆ ದೈನ್ಯತೆಯ ದೃಷ್ಟಿ ಬೀರುತ್ತದೆ. ಹಾಗಾಗಿ ಜನಪದರ ದೈವ ಪ್ರಜ್ಞೆಯನ್ನು ಬಿಂಬಿಸುವ ಬಹು ಮುಖ್ಯವಾದ ಉದ್ದೇಶವನ್ನು ಜನಪದ ವರ್ಷವು ಒಳಗೊಂಡಿರುವುದನ್ನು ಇಲ್ಲಿನ ಮುಖಪುಟ ಪರಿಪೂರ್ಣವಾಗಿ ತೋರಿಸಿಕೊಟ್ಟಿದೆ.'[೬] ಈ ಎರಡು ಗ್ರಂಥಗಳ ಮುಖಪುಟ ವಿನ್ಯಾಸದಲ್ಲಿ ಹಿನ್ನೆಲೆಯ ವರ್ಣ ಭೇದ ಬಿಟ್ಟರೆ ಉಳಿದೆಲ್ಲ (ಅಕಾಡೆಮಿ ಲಾಂಛನದ ಸ್ಥಳ ಹೊಂದಾಣಿಕೆಯಲ್ಲೂ) ವಿಷಯಗಳಿಂದ ಒಂದೇ ತೆರನಾಗಿದೆ ಎಂದು ಕಂಡುಬರುತ್ತದೆ.

**೬.೧.೨೬. ರೈತ ಜಾನಪದ (೧೯೯೮)**

ಅಕಾಡೆಮಿ ಮೂಲಕ ಡಾ. ಮೃತ್ಯುಂಜಯ ಹೊರಕೇರಿ ಸಂಪಾದಿಸಿರುವ 'ರೈತ ಜಾನಪದ'

---

೦೫. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

೦೬. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

ಶೀರ್ಷಿಕೆಯ ಕೃತಿ ೧೯೯೮ರಲ್ಲಿ ಪ್ರಕಟಗೊಂಡಿದೆ. ಈ ಮುಖಪುಟ ವಿನ್ಯಾಸದಲ್ಲಿ ನೀಲಿ ಹಿನ್ನೆಲೆ ಇಡೀ ಮುಖಪುಟಕ್ಕೆ ಬಳಸಿದ್ದು, ಮೇಲ್ಭಾಗದಲ್ಲಿ ರೈತ ಜಾನಪದ ಎಂದು ಕಪ್ಪು ಬಣ್ಣದಿಂದ ಗೋಥಿಕ್ ಅಕ್ಷರ ಶೈಲಿಯಿಂದ ರೂಪಿತಗೊಂಡಿದ್ದು ಆಕರ್ಷಕವಾಗಿದೆ. ಇದನ್ನು ಪ್ರಗತಿ ಗ್ರಾಫಿಕ್ಸ್ ಮುದ್ರಣದಿಂದ ಮುದ್ರಿಸಿರುತ್ತಾರೆ. ಮುಖಪುಟ ಮಧ್ಯದಲ್ಲಿನ ಚಿತ್ರಪಟವು/ಮುಖಪುಟವು ಜನಪದ ಲೋಕವನ್ನು ಅದರ ಕಾರ್ಯಚಟುವಟಿಕೆಗಳನ್ನು ತಿಳಿಸಲು ಸಹಾಯಕವಾಗಿದೆ. ಕೆಳಭಾಗದಲ್ಲಿ ಕೆಂಪು ವರ್ಣದ ಅಕಾಡೆಮಿ ಲಾಂಛನ ಹಾಗೂ ನೀಲಿ ಹಿನ್ನೆಲೆಯಲ್ಲಿ ಮುಳುಗಿದ ಅಕಾಡೆಮಿ ವಿಳಾಸ ಅಷ್ಟೊಂದು ಎದ್ದು ಕಾಣುತ್ತಿಲ್ಲ. ಆದರೆ ಮದ್ಯಭಾಗದಲ್ಲಿ ಪ್ರಕಾಶಿಸುವ ಚಿತ್ರವು ಇಡೀ ರೈತ ಸಂಸ್ಕೃತಿಯ ಮೂಲವನ್ನು ಪರಿಚಯಿಸುತ್ತಿದೆ. ಅಲ್ಲಿ ದುಡಿವ ವರ್ಗದ ಜನತೆ, ಯುವತಿಯರು, ಮಕ್ಕಳು, ಗೃಹಿಣಿಯರು, ಪುರುಷರಾದಿಯಾಗಿ ತಮ್ಮ ತಮ್ಮ ಜಮೀನುಗಳಲ್ಲಿ ಕಳೆ–ಕಸ ತೆಗೆವುದು ಭೂಮಿ ಸ್ವಚ್ಛಗೊಳಿಸುವುದು ಹಾಗೂ ಪೈರು–ಫಸಲು ಎದ್ದು ಕಾಣುವಂತೆ ಮಾಡಲು ದಿನವಿಡಿ ಜಮೀನಿನಲ್ಲಿ ದುಡಿಯುತ್ತಿರುವ ದೃಶ್ಯ ರೈತ ಸಂಸ್ಕೃತಿಯ ನೆಲೆ ಎನಿಸಿದೆ. ಸುತ್ತಲೂ ಜಮೀನುಗಳಲ್ಲಿ ಹಲವಾರು ಕೃಷಿ ಕಾರ್ಮಿಕರು ತಮ್ಮ ಕಾಯಕದಲ್ಲಿ ನಿಷ್ಠೆಯಿಂದ ದುಡಿಯುತ್ತಿದ್ದಾರೆ. ರೈತ ಸಂಸ್ಕೃತಿಯನ್ನು ಸಾರುವ ಈ ಮುಖಪುಟ ರೈತ ಜಾನಪದ ಗ್ರಂಥದ ಮುಖಪುಟಕ್ಕೆ ಸಮಂಜಸವಾಗಿ ಮೂಡಿ ಬಂದಿದೆ.

ಸ್ವಾಭಾವಿಕವಾಗಿ ಜಮೀನಿನಲ್ಲಿ ಶ್ರಮವಹಿಸಿ ದುಡಿಯುತ್ತಿರುವ ಕೃಷಿ ಕೂಲಿಕಾರರ ಹಾಗೂ ಜಮೀನ್ದಾರರಲ್ಲಿ ಕೃಷಿ ಚಟುವಟಿಕೆ ನಿರತವಾದ ಶ್ರಮಿಕ ವರ್ಗವು ಎಡೆಬಿಡದೆ ಕೆಲಸದಲ್ಲಿ ತೊಡಗಿಕೊಳ್ಳುತ್ತಿರುವುದು ಕಂಡುಬರುತ್ತದೆ, ಹಿನ್ನೆಲೆಯಾಗಿ ಮೂಡಿ ಬಂದಿರುವ ನೈಜ ಪರಿಸರ ಸುತ್ತಲೂ ಬೆಳೆದ ಗಿಡಮರಗಳ ಸಾಲು ತೋಟ–ಜಮೀನುಗಳ ಫಸಲುಗಳ ನೋಟ ನಯನ ಮನೋಹರವಾಗಿದ್ದು ಪರಿಸರದ ನೈಜತೆಯನ್ನು ಯಥಾವತ್ತಾಗಿ ಕಲ್ಪಿಸಿಕೊಳ್ಳಲು ನೆರವಾಗಿದೆ. ದಟ್ಟವಾದ ಹಸಿರು ಉಟ್ಟ ಪರಿಸರವು ಸುತ್ತಲೂ ನಳನಳಿಸುವಂತೆ ಮುಖಪುಟ ಕಲಾವಿದನಿಂದ ಉತ್ತಮವಾದ ಚಿತ್ರಪಟವು ಇಲ್ಲಿನ ಶೀರ್ಷಿಕೆಗೆ ತಕ್ಕಂತೆ ಮೂಡಿಬಂದಿದೆ.

**೬.೧.೨೭. ಜಾನಪದ ಸೈದ್ಧಾಂತಿಕ ಪ್ರಜ್ಞೆ ಮತ್ತು ದೇಶೀವಾದ (೧೯೯೮)**

೧೯೯೮ರಲ್ಲಿ ಡಾ. ಅರವಿಂದ ಮಾಲಗತ್ತಿ ರಚಿಸಿದ 'ಜಾನಪದ ಸೈದ್ಧಾಂತಿಕ ಪ್ರಜ್ಞೆ ಮತ್ತು ದೇಶೀವಾದ' ಎಂಬ ಶೀರ್ಷಿಕೆಯಲ್ಲಿ ಚಂದನ ಪ್ರಿಂಟರ್ಸ್ ಪ್ರಕಟಿಸಿದ ಈ ಕೃತಿಯು ಹಳದಿ ಹಿನ್ನೆಲೆ ಹೊಂದಿದ್ದು ಮೇಲ್ಭಾಗದಲ್ಲಿ ಮೂರು ಸಾಲಿನಲ್ಲಿ ನೀಲಿ ಬಣ್ಣದ ಶೀರ್ಷಿಕೆ ಸಾಮಾನ್ಯ ಶೈಲಿ ಅಕ್ಷರಗಳಿಂದ ಮೂಡಿದೆ. ಅದರ ಕೆಳಗಡೆಗೆ ಶಿಷ್ಟ ಸಾಹಿತ್ಯದ ಜಾನಪದ ಸಿದ್ಧಾಂತಗಳನ್ನು ಪ್ರಸ್ತುತಪಡಿಸುವ ಬೃಹತ್ ಗ್ರಂಥಪುಟ ತೆರೆದುಕೊಂಡಿದ್ದು ಜಾನಪದ ಸೈದ್ಧಾಂತಿಕ ವಿಚಾರ ಸಂಕಿರಣದ ಮೂಲಕ ಜನತೆಗೆ ವಿದ್ಯಾವಂತ ಸಮೂಹಕ್ಕೆ ಜ್ಞಾನಾರ್ಜನೆ ನೀಡುತ್ತದೆ. ಜಾನಪದ ಅಭ್ಯಾಸ ಮಾಡ ಹೊರಟಿರುವ ಅನೇಕ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ಕ್ಷೇತ್ರಸಹಾಯಕರಿಗೆ, ಸಂಶೋಧನಾ ಮಾರ್ಗದರ್ಶಿಗಳಿಗೆ ವಿವಿಧ ವಿದ್ವತ್ ವಲಯದ ಅಪ್ಪಟ ವಿದ್ವಾಂಸರಿಗೆ ಜಾನಪದ ಸಿದ್ಧಾಂತಗಳ ಹಿನ್ನೆಲೆ ತಿಳಿಯಲೇ ಬೇಕಾಗಿದೆ. ಅದರಲ್ಲಿ ದೇಶೀವಾದದ ನೆಲೆ ಗಟ್ಟಿಗೊಳಿಸುವ ವಾದಗಳು ಮುಖ್ಯವಾಗಿದ್ದು ನಮ್ಮ ನೆಲದ ಸ್ಥಳೀಯ ಪ್ರಜ್ಞೆ ಮೂಡಿಸುವುದಕ್ಕಾಗಿ

ಅನೇಕ ಸಾಹಿತ್ಯಿಕ ಮೂಲಗಳಿಂದ ಆಧಾರಗಳನ್ನು ಹುಡುಕಿ ತೆಗೆಯಬೇಕಾಗಿದೆ.ಅದರ ಚಿಹ್ನೆಯನ್ನೇ ಮದ್ಯಭಾಗದಲ್ಲಿ ತೆರೆದ ಪುಸ್ತಕವು ಓದುಗರನ್ನು ಆಹ್ವಾನಿಸುತ್ತದೆ. ಕೆಳಗಡೆ ತಿಳಿಕಂದು (ಕಾಫಿ) ಬಣ್ಣದಲ್ಲಿ ಆಕರ್ಷಕವಾಗಿ ಮೂಡಿ ಬಂದಿರುವ ಅಕಾಡೆಮಿಯ ವಿಳಾಸವು ಪ್ರಕಟವಾಗಿದೆ. ಇದೊಂದು ಸಾಮಾನ್ಯ ಮುಖಪುಟ ವಿನ್ಯಾಸ ಎಂದು ತಿಳಿದುಬರುತ್ತದೆ.

**೬.೧.೨೮. ಮೂಡಲ ವೈಭವ (೧೯೯೮)**

ಡಾ. ಜಿ. ಆರ್. ತಿಪ್ಪೇಸ್ವಾಮಿಯವರು ೧೯೯೮ರಲ್ಲಿ ಅನೇಕ ವಿದ್ವಾಂಸರ ವಿದ್ವತ್‌ಪೂರ್ಣ ಬರಹಗಳನ್ನು ಸಂಗ್ರಹಿಸಿ ಸಂಪಾದಿಸಿರುವ ಕೃತಿ 'ಮೂಡಲ ವೈಭವ'. ಈ ಮುಖಪುಟದ ಮೇಲ್ಭಾಗದಲ್ಲಿ ನೀಲಿ ವರ್ಣದ ದೊಡ್ಡ ಅಕ್ಷರಗಳಲ್ಲಿ ಶೀರ್ಷಿಕೆ ರೋಮನ್ ಶೈಲಿಯಲ್ಲಿ ಪ್ರಕಟವಾಗಿದೆ. ಅದರ ಅಂಚಿನ ಅಡಿಯಲ್ಲಿ ವಿಚಾರ ಸಂಕಿರಣ ಪ್ರಬಂಧಗಳು ಎಂದು ಅದಕ್ಕೊಂದು ದಿಕ್ಕು ದಿಸೆಯನ್ನು ತೋರಿಸಿದೆ. ಕಾವಿ ಬಣ್ಣದ ಹಿನ್ನೆಲೆ ಇಡೀ ಮುಖಪುಟದಲ್ಲಿದೆ. ಸರಳಗೈ ಚಿತ್ರದ ಮೇಲಿನಿಂದ ಕೆಳಕ್ಕೆ ಲಂಬವಾಗಿ ಚೌಕಟ್ಟು ಹೊಂದಿದ್ದು, ಅದರ ನೀಲಿ ಬಣ್ಣದೊಳೊಡನೆ ಬಿಳಿಯ ಸರಳಗೈ ಚಿತ್ರವು ಆಕರ್ಷಕವಾಗಿದೆ. ಕೆಳಭಾಗದಲ್ಲಿ ಒಂದೇ ಸಾಲಿನಲ್ಲಿ  ಸಣ್ಣ ಅಕ್ಷರಗಳಲ್ಲಿ ಅಕಾಡೆಮಿಯ ಹೆಸರು ಪ್ರಕಟವಾಗಿದೆ. ಅಬ್ಯಾಕಸ್ ಎಂಬ ಕಲಾವಿದರು ಈ ಕೃತಿಯ ಮುಖಪುಟ ವಿನ್ಯಾಸ ರಚಿಸಿದ್ದಾರೆ. ಕೌಜಲಗಿ ನಿಂಗವ್ವ  ಕೃತಿಯ ಮುಖಪುಟ ವಿನ್ಯಾಸವು ಸಹ ಇದೆ ಕಲಾವಿದರು ರಚಿಸಿದ್ದು ಅಲ್ಲಿಯೂ ಯಾವುದೇ ಹೊಸ ಮಾದರಿಯ ತಂತ್ರಜ್ಞಾನ, ಕಲಾಶೈಲಿ, ವರ್ಣಗಾರಿಕೆ ಮುಂತಾದ ಅಂಶಗಳು ಆ ಮುಖಪುಟದಲ್ಲಿ ಬಳಕೆಯಾಗದೆ ರಚನೆಗೊಂಡಿರುವುದರಿಂದ ಈ ಎರಡು (ಕೌಜಲಗಿ ನಿಂಗವ್ವ, ಮೂಡಲ ವೈಭವ)ಮುಖಪುಟ ವಿನ್ಯಾಸವು ಪ್ರಸಕ್ತ ಕಾಲ ಮಾನದ ಓದುಗ ವರ್ಗಕ್ಕೆ ಆಕರ್ಷಿಸುವಲ್ಲಿ ವಿಫಲವಾಗುವಂತಿದೆ.

**೬.೧.೨೯. ಗಾದೆಗಳು (೧೯೯೯)**

ಶಕ್ತಿ ಪ್ರಿಂಟರ್ಸ್ ಇವರು ೧೯೯೯ರಲ್ಲಿ 'ಗಾದೆಗಳು' ಎನ್ನುವ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿಯ ಮುಖಪುಟ ಸಾಧಾರಣವಾಗಿದ್ದು ಮೇಲ್ಭಾಗದಲ್ಲಿ ಗಾದೆಗಳು ಎಂಬ ಶೀರ್ಷಿಕೆ ನೀಲಿ ವರ್ಣದಿಂದ ಪ್ರಕಟವಾಗಿದ್ದು ಪುಟದ ಕೆಳಭಾಗದಲ್ಲಿ ಅಕಾಡೆಮಿಯ ವಿಳಾಸ ಹೊಂದಿದೆ. ಇಲ್ಲಿ ಯಾವುದೇ ಚಿತ್ರಗಳ ಕಲ್ಪನೆ ಅಥವಾ ಇನ್ನಾವುದೇ ರೀತಿಯ ಕುತೂಹಲ ಆಸಕ್ತಿ ಕೆರಳಿಸುವ ಚಿತ್ರ ವಿನ್ಯಾಸಗಳು ಇಲ್ಲಿಲ್ಲ. ಖಾಲಿ ಇರುವ ಮುಖಪುಟ ಗಾದೆಗಳ ಮೂಲಕ ಏನೆಲ್ಲವನ್ನು ನಾವೇ ಕಲ್ಪಿಸಿಕೊಳ್ಳಲಿ ಎಂಬ ಕಲ್ಪನಾ ಸ್ವಾತಂತ್ರ್ಯವನ್ನು ಜಾನಪದ ಸಂದರ್ಭಕ್ಕೆ ಹಿನ್ನೆಲೆಯಾಗಿ ಮುಖಪುಟ ಕಲಾವಿದ ಓದುಗರಿಗೆ ಮುಕ್ತ ಅವಕಾಶ ನೀಡಿದ್ದಾನೆ. ಆಯಾ ಗಾದೆ ಮಾತುಗಳ ಒಳಾರ್ಥ-ಹೊರ ಅರ್ಥ ಎಲ್ಲವನ್ನು ಒಳಗೊಂಡಿದ್ದು ಓದುಗನ ಕಲ್ಪನೆಗೆ ಇಲ್ಲಿ ಮುಕ್ತ ಅವಕಾಶ ಕಲ್ಪಿಸಲಾಗಿದೆ. 'ಮೂಡಲ ವೈಭವ', 'ಗಾದೆಗಳು' ಈ ಎರಡು ಗ್ರಂಥಗಳ ಮುಖಪುಟ ವಿನ್ಯಾಸದಲ್ಲಿ ಅಕ್ಷರಳಿಂದಲೇ ನೋಡುಗರನ್ನು ಆಕರ್ಷಿಸಲು ವಿನ್ಯಾಸಗಾರರು ಪ್ರಯತ್ನಿಸಿದ್ದಾರೆ. ತೊಂಬತ್ತರ ದಶಕದಲ್ಲಿ ಯಂತ್ರಗಳು, ತಂತ್ರಜ್ಞಾನ ಲಭ್ಯವಿದ್ದರೂ ಕಲಾವಿದರ ಈ ಪ್ರಯೋಗ ಹಲವು ಪ್ರಶ್ನೆಗಳಿಗೆ ಕಾರಣವಾಗುತ್ತದೆ. (ಹಣದ ಕೊರತೆ/ಅಕಾಡೆಮಿ ನಿಬಂಧನೆಗಳು/ವೈಯಕ್ತಿಕ ಅಸಮರ್ಥನೆ)

೬.೧.೩೦. ಪ್ರಶಸ್ತಿ ಪಡೆದ ಮಹನೀಯರು (೧೯೯೯)

'ಪ್ರಶಸ್ತಿ ಪಡೆದ ಮಹನೀಯರು' ಎಂಬ ಶೀರ್ಷಿಕೆಯ ಕೃತಿಯು ಡಾ. ಜಿ. ಆರ್. ತಿಪ್ಪೇಸ್ವಾಮಿ ಅವರಿಂದ ರಚಿತವಾದುದು. ಇದನ್ನು ೧೯೯೯ರಲ್ಲಿ ಈ ಕೃತಿ ಸತ್ಯಶ್ರೀ ಪ್ರಿಂಟರ್ಸ್ ಮುಖಾಂತರ ಮುದ್ರಣ ಕಂಡಿದೆ. ಈ ಮುಖಪುಟದಲ್ಲಿ ಮೂರು ಮುಖ್ಯ ಭಾಗಗಳಲ್ಲಿ ರಾಷ್ಟ್ರೀಯ ಏಕತೆ, ಚಿಹ್ನೆಯುಳ್ಳ ಕೇಸರಿ ಬಿಳಿ ಹಸಿರು ಬಣ್ಣಗಳ ತ್ರಿವರ್ಣ ಸಂಗಮ ಇದರಲ್ಲಿ ಎದ್ದುಗಾಣುತ್ತಿದೆ. ಮೊದಲನೆಯ ಭಾಗದ ಕೇಸರಿ ವರ್ಣದಲ್ಲಿ ೧೯೮೭ರಿಂದ ೧೯೯೭ರವರೆಗೆ ಪ್ರಶಸ್ತಿ ಪಡೆದ ಮಹನೀಯರು ಎಂಬ ಶೀರ್ಷಿಕೆ ಬಿಳಿ ಬಣ್ಣದಲ್ಲಿ ಎದ್ದು ಕಾಣುತ್ತದೆ. ಈ ಮುಖಪುಟದ ಮಧ್ಯ ಭಾಗದಲ್ಲಿ ಪ್ರಕಟವಾಗಿರುವ ಜನಪದ ಕಲಾವಿದರಿಂದ ಚೌಡಿಕೆ ವಾದ್ಯ ನುಡಿಸುತ್ತಿರುವ ಹಾಡುವ ಕೈಯಲ್ಲಿ ಖಡ್ಗ ಹಿಡಿದು ಪುರುವಂತರ ಆರ್ಭಟವನ್ನು ಚಿತ್ರಿಸಿರುವುದು ಪುರುಷ ಪ್ರಧಾನ ಕಲೆಗಳಾದರೆ, ಕುಟ್ಟುವ ಬೀಸುವ ಮೂಲಕ ಜಾನಪದ ಸಿರಿಯನ್ನು ಮೆರೆವ ಮಹಿಳೆಯರು ಧಣಿವರೆಯದ ಮಾತೆಯರು ಕುಟ್ಟುತ್ತಾ ಬೀಸುತ್ತಾ ಹಾಡುವಲ್ಲಿ ಕಾರ್ಯನಿರತ ಗೃಹಿಣಿಯರು ಒಂದೇ ಭಾವದಲ್ಲಿ ತಮ್ಮ ತಮ್ಮ ಕೆಲಸವನ್ನು ಸ್ಫೂರ್ತಿದಾಯಕವಾಗಿ ನಿರ್ವಹಿಸುತ್ತಿದ್ದಾರೆ. ಮತ್ತು ಈ ಚಿತ್ರಗಳು ಚಪ್ಪಟೆ ವರ್ಣ ಲೇಪನದಿಂದ ನಿರ್ಮಿತಗೊಂಡಿದೆ. ಆದರೆ ಒಟ್ಟಾರೆಯಾಗಿ ಇಲ್ಲಿ ನೋಡುಗನಿಗೆ ಕಣ್ಮುಂದೆ ಕಾಣುವುದು ಕಲೆಗಾಗಿ ಜೀವನ ಮುಡುಪಾಗಿಟ್ಟ ಅಂತಹ ಜನಪದ ಕಲಾವಿದರನ್ನು ಸ್ಮರಿಸುವ ಗೌರವಿಸುವಂತಹ ಭಾವ ವ್ಯಕ್ತವಾಗುವುದನ್ನು ಈ ಚಿತ್ರ ಸೂಚಿಸುತ್ತದೆ. ಕೆಳ ಭಾಗದ ಹಸಿರು ವರ್ಣದಲ್ಲಿ ದೊಡ್ಡ ಅಕ್ಷರಗಳಲ್ಲಿ ವಿಳಾಸ ಪ್ರಕಟಗೊಂಡಿದೆ. ಇಲ್ಲಿನ ಅಕ್ಷರಗಳ ಶೈಲಿಯೂ ಬದಲಾಗಿದ್ದು ಮೇಲಿನ ಶೀರ್ಷಿಕೆಗೂ ಕೆಳಗಿನ ಅಕಾಡೆಮಿ ವಿಳಾಸದ ಅಕ್ಷರಗಳ ಮಧ್ಯ ವೈವಿಧ್ಯತೆ ಕಂಡು ಬರುತ್ತದೆ.

೬.೧.೩೧. ಕರಾವಳಿ ಯಕ್ಷಗಾನ (೨೦೦೦)

'ಕರಾವಳಿ ಯಕ್ಷಗಾನ' ಶೀರ್ಷಿಕೆಯೊಂದಿಗೆ ಜಿ.ವಿ.ಅನಂತಮೂರ್ತಿಯವರ ಈ ಕೃತಿಯು ೨೦೦೦ರಲ್ಲಿ ಮುದ್ರಣಗೊಂಡಿದೆ. ಇದರ ಮುಖಪುಟ ಹಸನ್ಮುಖಿಯಾದ ಯಕ್ಷಗಾನ ಕಲಾವಿದನ ಮುಖದರ್ಶನ ಮಾಡಿಸುತ್ತದೆ. ಅದರ ಹಿನ್ನೆಲೆಯು ಕೂಡ ಉಕ್ಕಿ ಹರಿಯುವ ಕರಾವಳಿಯ ಕಡಲಿನ ಹಿನ್ನೆಲೆಯನ್ನು ಸಮುದ್ರದ ರೌದ್ರವತೆಯನ್ನು ಹಸಿರುಗಟ್ಟಿದ ಪಾಚಿಗಳೊಂದಿಗೆ ಅಬ್ಬರಿಸುವುದು ಕಂಡು ಬರುತ್ತದೆ. ಸಮುದ್ರದ ಅಲೆಗಳು ವೇಗವಾಗಿ ಕುಣಿದು ಕುಪ್ಪಳಿಸಿ ದಡ ಸೇರುವುದರ ಸಂಕೇತದೊಂದಿಗೆ ಯಕ್ಷಗಾನ ಕಲಾವಿದರು ತಮ್ಮ ಕಲೆಯ ಮೂಲಕ ಪ್ರೇಕ್ಷಕರನ್ನು ಆಕರ್ಷಿಸುವ ಮೂಲಕ ಜನ ಸಮುದಾಯವನ್ನು ತಲುಪುವ ಆಸೆ ಇಲ್ಲಿದೆ. ಧಣಿವರಿಯದ ಯಕ್ಷ ಕಲಾವಿದನ ಭಾವಪೂರ್ಣ ಹಸನ್ಮುಖಿಯಾದ ಭಾವಚಿತ್ರ ಮುಖಕ್ಕೆ ಬಳಿದ ಆಕರ್ಷಕ ಬಣ್ಣ, ಅಲ್ಲದೆ ಹಣೆ ಮೇಲಿನ ಕಪ್ಪು ಚುಕ್ಕೆ ವಿವಿಧ ಬಣ್ಣಗಳಿಂದ ಹೆಣೆದ, ಅಲಂಕರಿಸಿದ್ದು ತಲೆಯ ಮೂರು/ನಾಲ್ಕು ಪಟ್ಟು ದೊಡ್ಡದಾಗಿರುವ ಕಿರೀಟ ಬಿಗಿಯಾಗಿ ಕಟ್ಟಿದ್ದು, ಒತ್ತಿ ಸಿಕ್ಕಿಸಿದ ವಿಶಾಲ ಹರವುವುಳ್ಳ ಪೇಟದಂತೆ ತಲೆಗೆ ಭೂಷಣವಾದ ಯಕ್ಷಗಾನಕ್ಕೆ ಒಪ್ಪುವ ಶೈಲಿಯ ಕಿರೀಟ ಎಲೆಯ ಆಕೃತಿ ಹೊಂದಿದೆ. ಕಲಾವಿದ ಧರಿಸಿದ ಉದ್ದನೆಯ ನಿಲುವಂಗಿ ಕೆಂಪು ಬಣ್ಣದ್ದಾಗಿದ್ದು 'ಕರಾವಳಿ' ಎಂಬ ಪದ

ಬಿಳಿ ಬಣ್ಣದಿಂದ 'ಯಕ್ಷಗಾನ' ಅಕ್ಷರ ಕೆಂಪು ಬಣ್ಣದಲ್ಲಿ ಕಟ್‌ಬ್ರಷ್ ಸ್ಟ್ರೋಕ್ ಶೈಲಿಯಲ್ಲಿ ಎದ್ದು ಕಾಣುವ ಕೃತಿಯ ಶೀರ್ಷಿಕೆ ಹೊಂದಿದೆ. ಹಿಂಬದಿ ಪುಟದಲ್ಲಿ ಕೆ. ಕೆ. ಹೆಬ್ಬಾರ್ ಅವರ ರೇಖಾಚಿತ್ರ ಬಳಸಿಕೊಂಡಿದ್ದು ಆ ರೇಖಾಚಿತ್ರದ ಮೂಲಕ ಯಕ್ಷನೊಬ್ಬನ ಮಾತಿನ ಸಂವಾದವನ್ನು ಸಾರುತ್ತದೆ. ಆತನ ಕಿರೀಟ ಧರಿಸಿದ ವಸ್ತ್ರವಿನ್ಯಾಸ, ಭುಜ ಮಂಟಪ, ಕಾಲಿನಲ್ಲಿ ಧರಿಸಿದ ಗೆಜ್ಜೆ ಗೊಂಚಲು ಹಾವಭಾವಕ್ಕೆ ತಕ್ಕ ಹೆಜ್ಜೆ ಹಾಕುತ್ತಾ ಕುಣಿಯುವ ವೀರಾವೇಷದ ಹೋರಾಟದಂತೆ ಮೈಕಟ್ಟನ್ನು ಹೊಂದಿದ್ದಾನೆ.

'ಕರ್ನಾಟಕ ಅನೇಕ ಜನಪದ ಕಲೆಗಳ ಆಗರವಾಗಿದೆ. ಇಲ್ಲಿ ನಿತ್ಯ ನಿರಂತರ ಪರಿವರ್ತನೆ ಆಗುತ್ತಿರುವ ಜನಪದ ಕಲಾ ಪ್ರಕಾರಗಳಲ್ಲಿ ತನ್ನದೇ ಆದ ಸ್ಥಾನ ಹೊಂದಿರುವ ಯಕ್ಷಗಾನ ವಿಶಿಷ್ಟವಾದ ಕಲೆಯಾಗಿದೆ. ಇದರಲ್ಲಿ ಮೂಡಲಪಾಯ, ಪಡುವಲಪಾಯ ಎಂಬ ಭೇದಗಳಿವೆ. ವಿಶೇಷವಾಗಿ ಕರಾವಳಿ ಸೀಮೆಯಲ್ಲಿ ಇದಕ್ಕೆ ವಿಶೇಷ ಸ್ಥಾನವಿದ್ದು ಅಲ್ಲಿನ ಜನಪದರಿಗೆ ಮನರಂಜನೆಯ ಕೇಂದ್ರ ಬಿಂದು ಯಕ್ಷಗಾನವೇ ಆಗಿದೆ.'[೨] ಹಿಂಬದಿ ಪುಟದ ಕೆಳಭಾಗದಲ್ಲಿ ಅಕಾಡೆಮಿಯ ವಿಳಾಸ ಹಳದಿ ಬಣ್ಣದಿಂದ ಕೂಡಿದೆ

**೬.೧.೩೨. ಸಾಲುಸಂಪಿಗೆ ನೆರಳು (೨೦೦೦)**

ಅಕಾಡೆಮಿಯ ಮಹತ್ವದ ಗ್ರಂಥವಾದ 'ಸಾಲುಸಂಪಿಗೆ ನೆರಳು' ಕೃತಿಯ ಸಂಪಾದಕರು ಪ್ರೊ. ಕಾಳೇಗೌಡ ನಾಗವಾರ ಹಾಗೂ ಜಿ.ವಿ. ಆನಂದ ಮೂರ್ತಿಯವರು ಇದನ್ನು೨೦೦೦ ವರ್ಷದಲ್ಲಿ ಪ್ರಕಟವಾಗಿದೆ. ಎಳೆಯ ಮಕ್ಕಳಲ್ಲಿ ಜಾನಪದ ಕಥೆಗಳ ಸೊಗಡನ್ನು ಮೂಡಿಸುವ ಪ್ರಯತ್ನ ಇಲ್ಲಿದೆ. ಮುಖಪುಟದ ಅರ್ಧ ಭಾಗದಲ್ಲಿ ವಿಸ್ತಾರವಾಗಿರುವ ಆಕಾಶ ಅದರ ಹೊಂಬಣ್ಣ ಮೋಡಗಳ ನೀರವತೆ ವೃದ್ಧಾಪ್ಯ ಸೂಚಿಸುವ ಜಾನಪದ ಕಥೆಗಳ ವೈಶಾಲ್ಯತೆ ಆಕಾಶದಷ್ಟು ಎಂಬುದನ್ನು ಸೂಚಿಸುತ್ತದೆ. ಸಾಲು ಸಂಪಿಗೆ ನೆರಳು ಎಂಬ ಅಕ್ಷರಗಳು ಸಾಲು ಸಾಲಾಗಿವೆ. ಕಪ್ಪು ಕತ್ತಲೆ ಆವರಿಸಿದಾಗ ಮಕ್ಕಳು ಆಕಾಶ ನೋಡುತ್ತಾ ಮಲಗುತ್ತಾರೆ. ಅಲ್ಲಿ ಚುಕ್ಕಿ ಏಣಿಸುವ ಮೂಲಕ ಚಂದಿರನ ಬೆಳಕನ್ನು ಸವಿಯುವ ಮೂಲಕ ಅವರ ಪ್ರಸನ್ನವಾದ ಭಾವನೆಗಳಿಗೆ ಹಿರಿಯರು ವಿಶೇಷವಾಗಿ ಅಜ್ಜಿಯರು ಹೇಳುವ ನೀತಿ ಕಥೆಗಳು ಎಳೆಯ ಮಕ್ಕಳ ಭವಿಷ್ಯವನ್ನು ರೂಪಿಸ ಬಲ್ಲವು. ಅದಕ್ಕಾಗಿ ಕಿರಿಯ ಮಕ್ಕಳು ಕಥೆ ಕೇಳುವವರೆಗೂ ಮಲಗುವುದಿಲ್ಲ. ಹಾಗಾಗಿಯೇ ಹಿರಿಯರು ದಿನಕ್ಕೊಂದು ಕಥೆಯನ್ನು ಹೇಳಲೇಬೇಕು. ಕಥೆಯ ನಾಯಕ-ನಾಯಕಿ ಎಲ್ಲರೂ ಚಿಕ್ಕ ಮಕ್ಕಳೇ ಆಗಿದ್ದರೆ ಇನ್ನೂ ಸಂಭ್ರಮಿಸುತ್ತಾರೆ. ಅದಕ್ಕಾಗಿ ಇಲ್ಲಿನ ಕಥಾ ನಾಯಕಿ ಬಾಲಕಿಯೊಬ್ಬಳು ನದಿಯ ಇಲ್ಲವೆ ಕೆರೆಯ ದಡಕ್ಕೆ ಬಟ್ಟೆ ತೊಳೆಯಲು ಧಾವಿಸುತ್ತಿದ್ದಾಳೆ. ಅವಳ ಕಂಕುಳಲ್ಲಿರುವ ಬಟ್ಟೆ ತುಂಬಿದ ಬುಟ್ಟಿಯನ್ನು ಭದ್ರವಾಗಿ ಹಿಡಿದಿದ್ದಾಳೆ. ಅವಳು ಧರಿಸಿದ ಹಸಿರು ಬಣ್ಣದ ಲಂಗ ನೀಲಿ ಬಣ್ಣದ ಜಾಕೀಟು ಕೊರಳಲ್ಲಿನ ಮುತ್ತಿನಹಾರ ಹಣೆಗೆ ಇಟ್ಟ ತಿಲಕ, ನೀಟಾಗಿ ತಲೆ ಬಾಚಿದ್ದು, ಹೂ ಮುಡಿದ ತಲೆ ಅವಳ ಕಂಗಳು ಮನಸ್ಸಿನ ಪ್ರಸನ್ನತೆಯನ್ನು ಸಾರುತ್ತದೆ. ಅವಳ ನಡಿಗೆಯ ಹುಮ್ಮಸ್ಸು ಕಾಲಿಗೆ ಧರಿಸಿದ ಕಿರುಗೆಜ್ಜೆಯ ಸಪ್ಪಳದೊಂದಿಗೆ ನದಿ ಕಡೆ ಹೆಜ್ಜೆ ಹಾಕುತ್ತಿರುವುದು/ಇಳಿಯುವುದು ಅಲ್ಲದೆ

೦೨. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು). ದಾವಣಗೆರೆ. ದಿ:೨೦೧೫

ಅಲ್ಲಿ ಅರಳಿದ ಮಕ್ಕಳ ಮನಸ್ಸನ್ನು ಸೂಚಿಸುವ ವಿವಿಧ ಜಾತಿಯ ಹೂಗಳು, ಎಲೆ-ಬಳ್ಳಿಗಳು ನಯನ ಮನೋಹರ ಎನಿಸಿದೆ. ಬಾಲಕಿಯ ಹಿಂದಿನ ಸಂಪಿಗೆ ವೃಕ್ಷ ಅದರೊಳಗಿನ ಬಿಳಿಯ ಹೂಗಳು ಅದಕ್ಕೆ ಹಬ್ಬಿದ ವಿಶಾಲ ಎಲೆಗಳುಳ್ಳ ಬಳ್ಳಿಗಳು ಅದರ ಸನಿಹವೇ ಮರದ ಟೊಂಗೆಯಲ್ಲಿ ಕುಳಿತ ಪಕ್ಷಿ ಸಮೂಹ ಕೂಡ ಕಥೆ ಕೇಳುವ ಕೌತುಕ ಕಂಡು ಬರುತ್ತದೆ. ಅಲ್ಲದೆ ಆಕಾಶದೆತ್ತರಕ್ಕೆ ಚಾಚಿದ ವೃಕ್ಷ ಅದರ ನೆರಳು ಎಲ್ಲವೂ ಕಥೆಯ ಹಂದರವನ್ನು ಪೋಣಿಸುವಂತಹ ಚಿತ್ರಗಳಿಂದ ಮುಖಪುಟ ವಿನ್ಯಾಸಗೊಳಿಸಲಾಗಿದೆ.

ಹಿಂಬದಿಯ ಪುಟದಲ್ಲಿ ಕೂಡ ಉತ್ತಮ ಕಲ್ಪನೆ ಮೂಡಿಸುವ ಚಿತ್ರವಿದ್ದು ಆಕಾಶದ ಎತ್ತರಕ್ಕೆ ನೆಲೆನಿಂತು ತನ್ನ ಗೂಡಿನಲ್ಲಿ ಭದ್ರವಾಗಿ ಕಟ್ಟಿದ ಗೂಡಿನೊಳಗೆ ಇರುವ ಪಕ್ಷಿ ಅದೇ ಆಕಾಶದ ಕಪ್ಪು-ಹಳದಿ ಬಣ್ಣಗಳು ಹಾಗೂ ಬೆಟ್ಟ ನದಿತೀರದ ಚಿತ್ರದೊಂದಿಗೆ ಆಸಕ್ತಿಯಿಂದ ಕಥೆ ಆಲಿಸುವ ಮಗುವಿನ ಸಹಜ ಕುತೂಹಲ ಎಳೆಯ ಮಕ್ಕಳಲ್ಲಿ ಕಂಡು ಬರುತ್ತದೆ. ಅಕಾಡೆಮಿಯ ಲಾಂಛನದೊಂದಿಗೆ ಅಧ್ಯಕ್ಷರಾದ ಪ್ರೊ.ಕಾಳೇಗೌಡ ನಾಗವಾರರ ಬೆನ್ನುಡಿಯು ಅಕಾಡೆಮಿಯ ಸಾಧನಾ ಹೆಜ್ಜೆಗಳನ್ನು ವಿವರಿಸುತ್ತದೆ. ಇಣುಕಿ ಕುತೂಹಲದಿಂದ ನೋಡುವ ಬಾಲಕನ ಮುಗ್ಧತೆಯು ಆತನು ಕಂಬವೊಂದಕ್ಕೆ ಒರಗಿಕೊಂಡು ನಿರೀಕ್ಷಿಸುವ ಆಶಾವಾದಿ ಮನಸ್ಸು ಬಾಲಕನ ಅನೇಕ ಕಥೆ-ವ್ಯಥೆ ವರ್ಣಿಸುವ ಹಾಗೆ ರಕ್ಷಾಪುಟಚಿತ್ರ ಹಾಗೂ ಹಿಂಬದಿಪುಟಗಳು ಅಂದವಾದ ಚಿತ್ರಗಳೊಂದಿಗೆ ಓದುಗನ ಮನಸ್ಸನ್ನು ಸೆರೆ ಹಿಡಿಯುತ್ತವೆ. ಒಟ್ಟಾರೆಯಾಗಿ 'ಕರಾವಳಿ ಯಕ್ಷಗಾನ ಮತ್ತು ಸಾಲುಸಂಪಿಗೆ ನೆರಳು ಈ ಎರಡು ಪುಸ್ತಕದ ಇಡೀ ಕಥೆಯ ಸ್ಪರ್ಶವನ್ನು ದೃಶ್ಯಾತ್ಮಕ ನೆಲೆಯಿಂದ ಸಾಂಕೇತಿಕವಾಗಿ'[೮] ಕಲಾವಿದ ಬಿ. ಎಲ್. ಶ್ರೀನಿವಾಸ್ ಅವರು ಇಲ್ಲಿ ಮರುಸೃಷ್ಟಿಸಿದ್ದಾರೆ ಎಂಬುವುದು ಸ್ಪಷ್ಟಗೊಂಡಿದೆ.

### ೬.೨. ಇಪ್ಪತ್ತೊಂದನೆಯ ಶತಮಾನದ ಮೊದಲನೆಯ ದಶಕದ (ಜಾ ಮತ್ತು ಯ) ಗ್ರಂಥಗಳ ರಕ್ಷಾಪುಟ ಚಿತ್ರಕಲೆ

### ೬.೨.೧. ಕಲ್ಲಚಿನ ಗಾದೆಗಳು (೨೦೦೧)

'ಕಲ್ಲಚ್ಚಿನ ಗಾದೆಗಳು' ಒಂದು ಸಾಮಾನ್ಯ ಕೃತಿಯಾಗಿದ್ದು, ಅಕಾಡೆಮಿಯು ೨೦೦೧ರಲ್ಲಿ ಇದನು ಪ್ರಕಟಿಸಿದೆ. ಈ ಕೃತಿಯ ಮುಖಪುಟದ ಮೇಲೆ ಕೃತಿ ಶೀರ್ಷಿಕೆಯು ಕ್ಯಾಲಿಗ್ರಾಫಿಕ್ ಶೈಲಿಯ ಅಕ್ಷರಗಳಿಂದ ಹಾಗೂ ಕಪ್ಪು ಬಣ್ಣದಿಂದ ಕೂಡಿದ್ದು, ಉಳಿದ ಇಡೀ ಮುಖಪುಟವು ಗುಲಾಬಿ ಬಣ್ಣ ಮತ್ತು ಅದರ ವಿವಿಧ ಛಾಯೆಗಳು ಜಲವರ್ಣ ಮಾಧ್ಯಮದಿಂದ ವಾಷ್ ಮೆಥಡ್ (Wash method) ಅನುಸರಿಸಿ ಕಲಾವಿದ ಜಿ.ವಿ.ಆನಂದಮೂರ್ತಿ ಅವರು ಅಮೂರ್ತ ಮುಖಪುಟ ವಿನ್ಯಾಸಗೊಳಿಸಿದ್ದಾರೆ. ಅಕಾಡೆಮಿ ವತಿಯಿಂದ ಈ ಕೃತಿ ಪ್ರಕಟಿಸಿದರೂ ಅಕಾಡೆಮಿ ಲಾಂಛನ/ಚಿಹ್ನೆಯನ್ನು ಎಲ್ಲಿಯೂ ಮುದ್ರಿಸಿಲ್ಲ. ಕಲ್ಲಿನ ಆಕೃತಿ ಬೆಳೆಯುತ್ತಿರುವ ಶಿಲೆಯನ್ನು ಸೂಚಿಸುವ ಪ್ರಗತಿಯನ್ನು ಚಿಕ್ಕ ಚೌಕಾಕಾರದಲ್ಲಿ ಕಾಣುತ್ತೇವೆ. ಒಟ್ಟಾರೆ ಇಡೀ ಕೃತಿಯ ಮುಖಪುಟದಲ್ಲಿ ಅಂತಹ ವಿಶೇಷವೇನು ಇಲ್ಲ ಇದಕ್ಕೆ ಜಿ.ವಿ.ಆನಂದಮೂರ್ತಿ ಅವರು ಮುಖಪುಟ ವಿನ್ಯಾಸ ರಚಿಸಿದ್ದಾರೆ.

೦೮. ಸಂದರ್ಶನ: ಕೆ. ಕೆ. ಮಕಾಳಿ (ಮುಖಪುಟ ಕಲಾವಿದರು), ಕ.ವಿ.ವಿ., ಹಂಪಿ. ದಿ:೨೦೧೫

೬.೨.೨. ಮನದಾಳದ ಕನಸುಗಳು (೨೦೦೧)

'ಮನದಾಳದ ಕನಸುಗಳು' ಎಂಬ ಶೀರ್ಷಿಕೆಯ ಕೃತಿ ಡಾ.ಕಾಳೇಗೌಡ ನಾಗವಾರ ಮತ್ತು ಡಾ.ಮೀರಾಸಾಬಿಹಳ್ಳಿ ಶಿವಣ್ಣನವರು ಸಂಪಾದಿಸಿರುವ ಈ ಗ್ರಂಥಕ್ಕೆ ಕಲಾವಿದ ಎಂ.ಎಸ್.ಮೂರ್ತಿ ರಕ್ಷಾಪುಟಚಿತ್ರ ರಚಿಸಿದ್ದಾರೆ. ಈ ಮುಖಪುಟದಲ್ಲಿ ನೀಲಿ, ಹಳದಿ ತಿಳಿನೀಲಿ, ಕಪ್ಪು ಮೊದಲಾದ ಬಣ್ಣಗಳ ಸಮಾಗಮವಾಗಿದೆ. ಮುಖಪುಟ ಮಧ್ಯದಲ್ಲಿನ ವೃತ್ತಾಕಾರದಲ್ಲಿ ತನ್ನ ಗೂಡು ನಿರ್ಮಿಸಿಕೊಂಡು. ಅದರೊಳಗೆ ಅವಿತು ಗರಿ ಬಿಚ್ಚಿ ನೃತ್ಯ ಮಾಡುತ್ತಿರುವ ನವಿಲಿಗೂ ಜುಟ್ಟು ಮೂಡಿದೆ. ಅದರ ಶರೀರದಾದ್ಯಾಂತ ಹರಡಿದ ಗರಿಗಳು 'ಮನದಾಳದಲ್ಲಿನ ಕನಸು/ಮನಸ್ಸುಗಳನ್ನು ಜಾಗೃತ ಅವಸ್ಥೆಯ ಮೂಲಕ ಪಂಚೇಂದ್ರಿಯಗಳ ಮಹತ್ವ ಸಾರುತ್ತವೆ. ಶೂನ್ಯದಲ್ಲಿ ನೆಲೆನಿಂತ ಓದುಗರ ಮನಸ್ಸು ಈ ರಕ್ಷಾಪುಟಚಿತ್ರ ನೋಡಿದ ನಂತರ ಅನೇಕ ಕನಸುಗಳನ್ನು ಕಾಣುವುದರ ಭಾವಾರ್ಥಾಕವಾಗಿ ಗರಿ ಬಿಚ್ಚಿ ಕುಣಿಯುವ ನವಿಲಿನಂತೆ ಅವರ ಮನಸ್ಸು ಪ್ರಸನ್ನವಾಗಿ ಅರಳುವುದನ್ನು ಸಂಕೇತಿಸುವ ಅರ್ಥವನ್ನು ಇಲ್ಲಿ ಧ್ವನಿಸುತ್ತಿದೆ.'[೯] ಕೃತಿ ಶೀರ್ಷಿಕೆಯ ಅಕ್ಷರಗಳು ರೋಮನ್ ಉಬ್ಬು ಮಾದರಿ ಹೊಂದಿದ್ದು ರಕ್ಷಾಪುಟಕ್ಕೆ ಸೂಕ್ತವಾಗಿ ಹೊಂದಾಣಿಕೆಯಾಗಿದೆ. ಇಲ್ಲಿನ ವಿನ್ಯಾಸದಲ್ಲಿ ವರ್ಣಸಂಯೋಜನೆ ಹಾಗೂ ಮುಖಪುಟ ವಿನ್ಯಾಸದ ಅಂಗಗಳಲ್ಲಿ ಸಮತೋಲನೆ ಕಾದುಕೊಂಡಿದ್ದು ನೋಡುಗರ ಕಣ್ಣಿಗೆ ಆಹ್ಲಾದಕರ ಆನಂದವನ್ನುಂಟು ಮಾಡಿದೆ.

೬.೨.೩. ಜಾನಪದದ ವಿವಿಧ ಮುಖಗಳು (೨೦೦೧)

ಡಾ. ಶ್ರೀಕಂಠ ಕೊಡಿಗೆ ಬರೆದ 'ಜಾನಪದದ ವಿವಿಧ ಮುಖಗಳು' ಎಂಬ ಶೀರ್ಷಿಕೆ ಹೊಂದಿರುವ ಗ್ರಂಥವು ೨೦೦೧ನೆಯ ಸಾಲಿನಲ್ಲಿ ಪ್ರಕಟವಾಗಿದೆ. ಜಿ.ವಿ. ಆನಂದಮೂರ್ತಿ ಇವರು ಮುಖಪುಟ ವಿನ್ಯಾಸ ಗೊಳಿಸಿದ್ದಾರೆ. ಇದರ ಮುಖಪುಟ ಸಾಧಾರಣವಾಗಿದ್ದು ಮಧ್ಯದಲ್ಲಿ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸಂಕೇತವಿದ್ದು ಎಡಬದಿಗೆ ಶೀರ್ಷಿಕೆ ಮೇಲ್ಮುಖವಾಗಿದೆ.ಇದರ ಅರ್ಥ ಜಾನಪದದ ವಿವಿಧ ಮುಖಗಳು ಅಭ್ಯುದಯದತ್ತ ಸಾಗಬೇಕೆಂದು ಹೇಳಬಹುದು. ಇದರ ಜೊತೆ ಶೀರ್ಷಿಕೆ ಕೆಂಪು ಬಣ್ಣದಿಂದ ಕೂಡಿದೆ. ಮಧ್ಯದಲ್ಲಿರುವ ಹಸಿರು ಬಣ್ಣದ ಮುಖವಾಡ ಹೊಂದಿದ್ದು ಅದರ ತಲೆ ಮೇಲೆ ಇರುವ ಗುಂಗುರು ಕೂದಲು ಬೆಳೆಯುವ ಮರದ ಎಲೆಗಳು ಅತ್ಯಂತ ಆಕರ್ಷಕವಾಗಿದೆ. ಎಡಕ್ಕೆ ಚಂದ್ರ, ಬಲಕ್ಕೆ ಸೂರ್ಯ ಹಣೆ ಮಧ್ಯ ನಾಮಧರಿಸಿದ್ದು ಕತ್ತಿನಲ್ಲಿರುವ ಚಿತ್ರದಲ್ಲಿ ಎರಡು ಮಕ್ಕಳೂ ಎಡ ಬಲ ಬದಿಯಲ್ಲಿ ಅದರ ಪಕ್ಕದಲ್ಲಿ ಹಂಸ, ಹಸು ಮತ್ತು ಆಟವಾಡುವ ಮಕ್ಕಳು ಸ್ಪಷ್ಟವಾಗಿ ಸಂಕೇತಿಸುವ ಚಿತ್ರಕಂಡು ಬರುತ್ತದೆ. ಮುಂದೆ ವಿವಿಧ ಜಾನಪದ ಮುಖವಾಡಗಳನ್ನು ಧರಿಸುವುದನ್ನು ತೋರುತ್ತದೆ. ಉಳಿದಂತೆ ಇಡೀ ಮುಖಪುಟವು ನೋಡುಗರ ಆನಂದಕ್ಕೆ ಯಾವ ಭಂಗ ವುಂಟಾಗದಂತೆ ಮತ್ತು ಇಲ್ಲಿನ ಸ್ಥಳ ಅವಕಾಶವು ಸಾಕಷ್ಟು ಖಾಲಿ ಇದ್ದರೂ ನೋಡುಗರ ಆಸ್ವಾದಕ್ಕೆ ತೊಂದರೆಯಾಗದಂತೆ ಕಲಾವಿದ ಜಾಣ್ಮೆಯಿಂದ ಈ ಮುಖಪುಟ ರಚಿಸಿದ್ದು ಕಂಡುಬರುತ್ತದೆ.

೧೯. ಸಂದರ್ಶನ: ಕೆ. ಕೆ. ಮಕಾಳೆ (ಮುಖಪುಟ ಕಲಾವಿದರು), ಕ.ವಿ.ವಿ., ಹಂಪಿ. ದಿ:೨೦೧೫

### ೬.೨.೪. ಫಿನ್ಲೆಂಡಿನ ಜಾನಪದ ವಿದ್ವಾಂಸರು (೨೦೦೧)

'ಫಿನ್ಲೆಂಡಿನ ಜಾನಪದ ವಿದ್ವಾಂಸರು' ಎಂಬ ಶೀರ್ಷಿಕೆಯ ಈ ಕೃತಿಗೆ ಪ್ರಕಾಶ ಎಂ.ಎಸ್ ಅವರು ಮುಖಪುಟ ರಚಿಸಿದ್ದಾರೆ, ಡಾ. ತೀ.ನಂ.ಶಂಕರನಾರಾಯಣ ಬರೆದಿದ್ದು ಈ ಕೃತಿಯು ಕೂಡ ಸಾಧಾರಣ ಮುಖಪುಟ ಹೊಂದಿದೆ. ಬಲಬದಿಗೆ ಕೆಂಪು ಪಟ್ಟಿ ಅದರ ಮೇಲ್ತುದಿಗೆ ಪ್ರಗತಿ ಸೂಚನೆಯ ಸಂಕೇತವಾಗಿ ಕುಣಿಯುತ್ತಿರುವ ನವಿಲಿನ ಚಿಹ್ನೆ ಇದೆ. ಉಳಿದಂತೆ ಮುಖಪುಟ ಹಸಿರಿನ ಹೊದಿಕೆಯಾಗಿದೆ. ಕೃತಿ ಶೀರ್ಷಿಕೆಯ ಅಕ್ಷರಗಳು ಇಟಾಲಿಕ್ ಮಾದರಿಯಲ್ಲಿ ಕೆಂಪು ಲೇಪನದಿಂದ ಮುಖಪುಟದ ಮದ್ಯಭಾಗದಲ್ಲಿ ಮುದ್ರಿಸಿದ್ದು, ಮುಖಪುಟದ ಎಡ ಭಾಗದ ಸ್ಥಳಾವಕಾಶ ಸಂಪೂರ್ಣವಾಗಿ ಖಾಲಿಯಿದೆ. ನೋಡುಗರ ದೃಷ್ಟಿಯ ಚಲನವು ತಕ್ಷಣಕ್ಕೆ ಬಲಬದಿಗೆ ಚಲಿಸುವಂತಾಗಿದೆ. ಇಂತಹ ವಿಧಾನ ಮುಖಪುಟಗಳಿಗೆ ಅಸಮತೋಲನ ಮುಖಪುಟ ವಿನ್ಯಾಸ ಎಂದು ಸೂಚಿಸಬಹುದಾಗಿದೆ.

### ೬.೨.೫. ಜನಪದ ವೈದ್ಯ (೨೦೦೩)

೨೦೦೩ರಲ್ಲಿ 'ಜನಪದ ವೈದ್ಯ' ಎಂಬ ಶೀರ್ಷಿಕೆಯಲ್ಲಿ ಡಾ.ಟಿ.ಗೋವಿಂದರಾಜು ಸಂಪಾದಿಸಿರುವ ಬಿ.ಡಿ. ಜಗದೀಶ್ ಮುಖಪುಟ ರಚಿಸಿರುವ ಈ ಕೃತಿಯು ಹಸಿರು ಎಲೆ, ಬೇರು, ಗಿಡಗಳು, ಕೈಯಲ್ಲಿರುವ ಆಯುರ್ವೇದದ ಹಾಗೂ ವೈದ್ಯನ ಸಾಂಪ್ರದಾಯಿಕ ಆಸನಗಳು ಹಲವು ವರ್ಣದಿಂದ ಕೂಡಿವೆ. ಹೀಗೆ ಇಡೀ ಮುಖಪುಟ ಹೆಚ್ಚು ವರ್ಣಗಳ ಬಳಕೆಯಿಂದ ಕೂಡಿದುದಾಗಿದೆ. ಬಹುವರ್ಣೀಯ ಸಂಗಮದಿಂದ ಕೂಡಿರುವಂತಹ ಈ ಅಮೂರ್ತ (Abstract Painting) ಚಿತ್ರವು ಸಹಜವಾಗಿಯೇ ಎದ್ದು ಕಾಣುತ್ತಿದೆ. ವಿವಿಧ ಬಣ್ಣಗಳೆಡೆಗೆ ಆಕರ್ಷಿತರಾಗಬಲ್ಲ ಸಹೃದಯ ಓದುಗರ ಮನಸ್ಸನ್ನು ತಕ್ಷಣವೆ ಸೆಳೆಯಬಲ್ಲಂತಹ ಮುಖಪುಟ ಈ ಪುಸ್ತಕದ್ದು ಎನ್ನಬಹುದು.

### ೬.೨.೬. ಜನಪದ ಸಿದ್ಧಾಂತಗಳು – ೨ (೨೦೦೩)

'ಜಾನಪದ ಸಿದ್ಧಾಂತಗಳು ೨' ಶೀರ್ಷಿಕೆವುಳ್ಳ ಡಾ.ರಂಗಾರೆಡ್ಡಿ ಕೋಡಿ ರಾಂಪುರ ಡಾ. ಜಿ. ಆರ್. ತಿಪ್ಪೇಸ್ವಾಮಿ ಸಂಪಾದಿಸಿದ್ದು ಬಿ.ಡಿ. ಜಗದೀಶ ಮುಖಪುಟ ರಚಿಸಿರುತ್ತಾರೆ. ಇಲ್ಲಿನ ಶೀರ್ಷಿಕೆ ಹಳದಿ ವರ್ಣದಿಂದ ಕೂಡಿದ್ದು ಕೆಳಭಾಗದಲ್ಲಿ ಸಂಪಾದಕರ ಹೆಸರುಗಳು ನೀಲಿ ವರ್ಣದಿಂದ ಕೂಡಿವೆ. ಅಲ್ಲದೆ ಇಡೀ ಮುಖಪುಟದಲ್ಲಿ ಹಲವು ವರ್ಣಗಳು ಕಲಾತ್ಮಕವಾಗಿ ಸಮಾಗಮವಾಗಿವೆ. ಚೌಕಾಕಾರದಲ್ಲಿ ಕುದುರೆಯು ಅಲಂಕೃತವಾದದ್ದರ ಜೊತೆ ಮಹಿಳಾ ಮುಖವಾಡ ಹಣೆ ಮೇಲಿನ ಕೆಂಪು ವರ್ಣದ ತಿಲಕ ಅವಳ ತಲೆ ತುರುಬು ವಿವಿಧ ಬಣ್ಣಗಳಿಂದ ಅಲಂಕೃತವಾಗಿದೆ. ಜಾನಪದ ಸಿದ್ಧಾಂತದಲ್ಲಿ ಕೆಂಪು, ಹಳದಿ ನೀಲಿ, ನೇರಳೆ, ಕಪ್ಪು ಮೊದಲಾದ ವರ್ಣ ವೈವಿಧ್ಯತೆ ನರ್ತನ ಮಾಡುತ್ತಿದೆ.

ಜನಪದ ವೈದ್ಯ ಮತ್ತು ಜನಪದ ಸಿದ್ಧಾಂತಗಳು ಈ ಎರಡು ಗ್ರಂಥಗಳ ರಕ್ಷಾಪುಟಚಿತ್ರ ಅವಲೋಕಿಸಿದಾಗ ವರ್ಣಲೇಪನ, ಬಣ್ಣಗಳ ಛಾಯೆ, ಬಣ್ಣಗಳ ಬಳಕೆ,ವರ್ಣ ಸಂಯೋಜನೆ ಮತ್ತು

ಅವುಗಳ ಪ್ರಖರತೆ ಮುಂತಾದ ಅಂಶಗಳಿಂದ ಈ ರಕ್ಷಾಪುಟಚಿತ್ರಗಳಲ್ಲಿ ಏಕರೂಪತೆ ಕಂಡು ಬರುತ್ತದೆ. ಕಾರಣ ಈ ಎರಡು ಗ್ರಂಥಗಳ ರಕ್ಷಾಪುಟ ಚಿತ್ರ ಕಲಾವಿದರು ಒಬ್ಬರೆ. ಜನಪದ ವೈದ್ಯ ಕೃತಿ ಶೀರ್ಷಿಕೆಯ ಅಕ್ಷರ ಕ್ಯಾಲಿಗ್ರಾಫಿಕ್ ಮಾದರಿಯಾಗಿವೆ ಹಾಗೂ ಜಾನಪದ ಸಿದ್ಧಾಂತಗಳು ಎಂಬ ಗ್ರಂಥದ ತಲೆಬರಹ ಅಕ್ಷರ ಶೈಲಿಯು ಅಲಂಕಾರಿಕ ಗೋಥಿಕ್ ಲಕ್ಷಣ ಹೊಂದಿವೆ. ಒಟ್ಟಾರೆ ಇಲ್ಲಿನ ದೃಶ್ಯ ಮುಖಪುಟ ಎಂಬ ಭಾವನೆಗಿಂತ ವರ್ಣರೇಖಾ ಕಲಾಕೃತಿ ಎಂದು ಅನೇಕ ಸಾಂಕೇತಿಕ ಅರ್ಥಗಳನ್ನು ನೀಡುತ್ತಲಿದೆ ಎಂದು ಕಂಡುಬರುತ್ತಿದೆ.

**೬.೨.೭. ಜನಪದ ನಾಯಕತ್ವ (೨೦೦೩)**

'ಜನಪದ ನಾಯಕತ್ವ' ಕೃತಿಯ ಸಂಪಾದಕರು ಡಾ. ಚಳ್ಳಕೆರೆ ಶಿವಶಂಕರ್ ರವರು ಅಕಾಡೆಮಿಯವರು ಇದನ್ನು ಚಂದನ ಪ್ರಿಂಟರ್ಸ್ ಮೂಲಕ ೨೦೦೩ರಲ್ಲಿ ಪ್ರಕಟಿಸಿದ್ದಾರೆ. ಮುಖಪುಟದ ಮಧ್ಯದಲ್ಲಿ ಭಯಾನಕ ಎನಿಸುವ ಮುಖವಾಡಧರಿಸಿದ ವ್ಯಕ್ತಿಯ ನೋಟವು ಕಪ್ಪು, ಕೆಂಪು, ಹಳದಿ ಬಣ್ಣಗಳ ಆಕೃತಿಯಾಗಿದ್ದು ಕಣ್ಣುಗಳು ಹಣೆ ತಿಲಕ ಕೆಂಪು ಬಣ್ಣದಿಂದಿದ್ದು ಮುಖಕ್ಕೆ ಕಪ್ಪು ಬಟ್ಟೆ ಧರಿಸಿ ಮುಸುಕುಧಾರಿಯಾಗಿದ್ದು ಬಾಯಿ ಚಿಕ್ಕದು ಮೂಗಿನ ಎಡ-ಬಲಗಳಲ್ಲಿ ಹತ್ತಿ ಅರಳೆಯ ಕೋರೆಗಳು, ಕೊರಳಿಗೆ ವಿವಿಧ ಮಾಲೆಗಳನ್ನು ಧರಿಸಿ ಕಪ್ಪು ನಿಲುವಂಗಿಯನ್ನು ಮುಖವಾಡಕ್ಕೆ ಹೊಂದಿಕೊಂಡಂತೆ ಧರಿಸಲಾಗಿದೆ. ಕೆಳಗೆ ವಾರ್ಲಿ ಶೈಲಿಯ ಚಿತ್ರಕಲೆಯ ಮಕ್ಕಳು ಕೈ ಹಿಡಿದು ಆಟವಾಡುತ್ತಿರುವಂತೆ ಕಂಡು ಬರುತ್ತದೆ. ಅವೆಲ್ಲವೂ ಕಂದು ಹಿನ್ನೆಲೆಯಿದ್ದು ಬಿಳಿಯ ಗೊಂಬೆಗಳು ಎದ್ದು ಕಾಣುತ್ತವೆ. ಮೇಲ್ಭಾಗದಲ್ಲಿನ ಸೂರ್ಯ,ಚಂದ್ರ ಬಿಳಿವರ್ಣ ಹೊಂದಿದ್ದು ಹಿನ್ನೆಲೆ ಹಳದಿ ಬಣ್ಣದಿಂದ ಆವರಿಸಲ್ಪಟ್ಟಿದೆ. ಕೆಂಪು ಬಣ್ಣದ ನಾಯಕತ್ವ ನೀಲಿ ಮಿಶ್ರಿತ ಕಪ್ಪು ವರ್ಣದಿಂದ ಕೂಡಿದೆ. ಮೇಲ್ನೋಟದ ಬಲಬದಿಗೆ ತಂಬೂರಿ ಕಲಾವಿದರು ಸಮ್ಮೇಳನದ ನಾಯಕತ್ವ ವಹಿಸಿರುತ್ತಾರೆ. ಅದಕ್ಕೆ ತಕ್ಕಂತೆಯೇ ಜನಪದ ತಂಡಗಳ ಗುಂಪುಗಳ ನೇತೃತ್ವ ವಹಿಸಿ ಕಲಾ ಪ್ರದರ್ಶನ ಮಾಡುತ್ತಾರೆ. ಈ ರೀತಿಯಾಗಿ ಒಂದು ತಂಡದ ನಾಯಕನಾಗಿ ಹಲವು ಹತ್ತು ಪ್ರದರ್ಶನ ನೀಡುವ ಮೂಲಕ ಇಡೀ ತಂಡವನ್ನು ಸಂಘಟನೆ ಮಾಡುತ್ತಾ ಜನಪದ ಕಲೆಯನ್ನು ಉಳಿಸಿ ಬೆಳೆಸುವ ಜವಾಬ್ದಾರಿ ಆತನದ್ದಾಗಿರುತ್ತದೆ. ಅದನ್ನು ಸಂಕೇತಿಸಲು ಇಲ್ಲಿನ ಮುಖಪುಟದ ಮುಖವಾಡವು ನಾಯಕನ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತದೆ. ಜನಪದ ಕಲಾವಿದರ ಮುಖಂಡ ಅಥವಾ ನಾಯಕ ಆತನ ನಾಯಕತ್ವದ ಪ್ರಭಾವ ಇವೆಲ್ಲವೂ ಅವರ ಕಲೆಯ ಮೇಲೆ ಪ್ರಭಾವ ಬೀರುತ್ತದೆ.

ಇವುಗಳ ಜೊತೆ ಮತ್ತೊಂದು ಸಣ್ಣ ಚಿತ್ರವು ಕೂಡ ವೈಯಕ್ತಿಕ ಕಲೆಗಳ ಪ್ರದರ್ಶನ ಸಂದರ್ಭಗಳದ್ದಾಗಿದ್ದು ಅಂತಹ ವ್ಯಕ್ತಿ ಸ್ವತಃ ತನ್ನ ತನದಿಂದ ಅಂತಹ ನಾಯಕತ್ವಕ್ಕೆ ಬೆಲೆ ಸಿಗಬೇಕಾಗುತ್ತದೆ. ಇಲ್ಲಿನ ಚಿತ್ರವು ಮೊಹರಂ ಸಂದರ್ಭದಲ್ಲಿ ನಡೆಸುವ ಅನೇಕ ಆಚರಣೆಗಳು ಮನೆ ಮನೆಗೆ ತೆರಳಿ ಬಿಕ್ಷಾಟನೆ ಮಾಡುವ ವ್ಯಕ್ತಿಯ ವೇಷಭೂಷಣಗಳು ವಿಚಿತ್ರವಾಗಿದ್ದು ಗೋಣಿ ಚೀಲ ಉಟ್ಟು ತಲೆಗೆ ಬತ್ತದ ಹುಲ್ಲಿನಿಂದ ಹೆಣೆದ ಕಿರೀಟ ಧರಿಸಿದ್ದು ಮೈ-ಕೈಕಾಲು ಇಡೀ ಶರೀರದ ತುಂಬಾ ಕಪ್ಪು ಬಣ್ಣದ ಪಟ್ಟಿ

ಧರಿಸಿ ಹಾದಿ-ಬೀದಿ ಸಂಚರಿಸುವುದನ್ನು ಈ ಸನ್ನಿವೇಶ ಸಂಕೇತಿಸುತ್ತದೆ. ಇಲ್ಲಿನ ಮುಖಪುಟ ಜನಪದ ವಿಷಯಕ್ಕೆ ಸಂಬಂಧಿಸಿದ ಚಿತ್ರ, ಸಂಕೇತ, ಅಕ್ಷರ ಶೈಲಿ, ವರ್ಣಗಳ ಬಳಕೆ ಇವುಗಳಿಂದ ಅದಕ್ಕೊಂದು ಅರ್ಥ ಸಿರಿವಂತಿಕೆ ನೀಡಿದೆ ಎಂದು ಭಾವಿಸಬಹುದು. ಈ ರಕ್ಷಾಪುಟದಲ್ಲಿ ನಾಲ್ಕು ಭಾಗ / ಸ್ಥಳಾವಕಾಶವನ್ನು ಬಳಸಿಕೊಂಡಿರುವುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ (ಎಡ, ಬಲ, ಕೆಳಗೆ, ಮೇಲೆ) ಈ ಹಿನ್ನೆಲೆಯಲ್ಲಿ ನೋಡಗರ ದೃಷ್ಟಿಪಥ ಎಲ್ಲಕಡೆ ಚಲಿಸುವಂತೆ ರಚನೆಯಾದ ಒಂದು ಮುಖಪುಟವಿನ್ಯಾಸ ಎಂದು ಊಹಿಸಬಹುದು.

**೬.೨.೮. ಮಹಿಳಾ ಜಾನಪದ (೨೦೦೩)**

'ಮಹಿಳಾ ಜಾನಪದ' ಎಂಬ ಗ್ರಂಥವು ಡಾ. ಕೆ. ಆರ್. ಸಂಧ್ಯಾರೆಡ್ಡಿ ಸಂಪಾದಿಸಿದ್ದಾರೆ. ಇಡೀ ಕೃತಿಯು ಏನನ್ನು ಒಳಗೊಂಡಿದೆ ಎಂಬುದನ್ನು ಸೂಚಿಸಲು ಒಬ್ಬ ಮಹಿಳೆಯ ಹಿಮ್ಮುಖ ನೋಟವನ್ನು ಆ ಮೂಲಕ ಅವಳ ವ್ಯಕ್ತಿತ್ವವನ್ನು ಸೂಚಿಸುತ್ತದೆ. ಆಕೆಯ ಕೇಶಾಲಂಕಾರವು ಮಲ್ಲಿಗೆ ಹೂಗಳಿಂದ ಮುಡಿದು ಬಿಗಿದು ಕಟ್ಟಿ ನೀಟಾಗಿ ಬಾಚಿಕೊಂಡ ತಲೆಯ, ತುರುಬಿನ ಕಪ್ಪು ವರ್ಣ ಯಥಾವತ್ತಾಗಿ ಕಂಡು ಬರುತ್ತದೆ. ಆಕೆಯ ಸೀರೆ ಅಂಚುಳ್ಳಿ ಗುಂಪು ಬಣ್ಣ ಹಾಗೂ ನೀಲಿ ಸೀರೆಯುಟ್ಟು ಮಹಿಳಾ ಜಾನಪದವನ್ನು ವೀಕ್ಷಿಸುವ ಆ ಮೂಲಕ ಮಹಿಳೆಯ ವ್ಯಕ್ತಿತ್ವವನ್ನು ಇಲ್ಲಿ ಪ್ರತಿಪಾದಿಸಲಾಗಿದೆ.

**೬.೨.೯. ಜಾನಪದ ಅನ್ವಯಿಕತೆ (೨೦೦೩)**

ಡಾ.ಜಿ.ಆರ್. ತಿಪ್ಪೇಸ್ವಾಮಿ ಮತ್ತು ಡಾ.ರಂಗಾರೆಡ್ಡಿ ಕೋಡಿ ರಾಂಪುರ ಇವರು ಸಂಪಾದಿಸಿದ ಕೃತಿ 'ಜಾನಪದ ಅನ್ವಯಿಕತೆ' ಹೆಸರಿಗೆ ತಕ್ಕಂತೆ ಮುಖಪುಟ ಹೊಂದಿದೆ. ಇದೊಂದು ಸಾಧಾರಣ ನಿಸರ್ಗ ಚಿತ್ರವೆಂದು ಕಂಡುಬಂದರು ದೃಶ್ಯಾತ್ಮಕ ನೆಲೆಯಲ್ಲಿ ವರ್ಣಗಳ ಬಳಕೆ ಅದರ ನೆರಳು ಬೆಳಕು, ಕುಂಚ ಬೀಸುವಿಕೆ, ನಿಸರ್ಗದ ಮೈವಳಿಕೆ ಕಲಾವಿದನ ಕೈಚಳಕ ನಿಸರ್ಗ ಚಿತ್ರದ ಪ್ರಮಾಣ ಮುಂತಾದ ಅಂಶಗಳಿಂದ ಈ ಕೃತಿಯ ಮುಖಪುಟವು ನೋಡುಗರನ್ನು ಸಹಜವಾಗಿ ಆಕರ್ಷಿಸುತ್ತದೆ. ಈ ಮುಖಪುಟದಲ್ಲಿ ನಿಸರ್ಗ ಚಿತ್ರವೊಂದರ ಛಾಯಾಚಿತ್ರವನ್ನು ಮುಖಪುಟದ ತುಂಬೆಲ್ಲ ಎದ್ದು/ಥಟ್ಟನೆ ಕಾಣುವಂತೆ ಸಂಯೋಜಿಸಿರುವುದರಿಂದ ಸಹೃದಯ ಓದುಗರಿಗೆ ಕೃತಿಯ ಸಾರವನ್ನು ಅರ್ಥೈಸಿಕೊಳ್ಳುವದು ತೀರಾ ಸುಲಭವಾಗಿದೆ ಎಂದು ಇಲ್ಲಿ ಅಭಿಪ್ರಾಯಪಡಬಹುದು. ಮಹಿಳಾ ಜಾನಪದ ಮತ್ತು ಜಾನಪದ ಅನ್ವಯಿಕತೆ ಈ ಎರಡು ಕೃತಿಗಳ ರಕ್ಷಾಪುಟವಿನ್ಯಾಸವು ೨೦೦೩ ರಲ್ಲಿ ಕಲಾವಿದ ಬಿ.ಡಿ. ಜಗದೀಶ ರಚಿಸಿರುತ್ತಾರೆ.

**೬.೨.೧೦. ಜನಪದ ತಂತ್ರಜ್ಞಾನ (೨೦೦೩)**

೨೦೦೩ರಲ್ಲಿ ಡಾ. ಚಕ್ಕೆರೆ ಶಿವಶಂಕರ್ ಪ್ರಕಟಿಸಿದ 'ಜನಪದ ತಂತ್ರಜ್ಞಾನ' ಕೃತಿಯು ಮುಖ್ಯವಾಗಿ ನೀಲಿ ವರ್ಣದ ಶೀರ್ಷಿಕೆಯಿಂದ ಕೂಡಿದೆ. ಕೆಳಭಾಗದಲ್ಲಿ ಡಾ.ಚಕ್ಕೆರೆ ಶಿವಶಂಕರ್ ಅವರ ಹೆಸರು ಬಿಳಿ ವರ್ಣದಲ್ಲಿ ಪ್ರಕಟಿಸಲಾಗಿದೆ. ಈ ಮುಖಪುಟ ವಿನ್ಯಾಸದಲ್ಲಿ ಚಕ್ಕಡಿಯ ಗಾಲಿ ಹಾಗೂ ರೆಂಟೆಯ

ಧರಿಸಿ ಹಾದಿ–ಬೀದಿ ಸಂಚರಿಸುವುದನ್ನು ಈ ಸನ್ನಿವೇಶ ಸಂಕೇತಿಸುತ್ತದೆ. ಇಲ್ಲಿನ ಮುಖಪುಟ ಜನಪದ ವಿಷಯಕ್ಕೆ ಸಂಬಂಧಿಸಿದ ಚಿತ್ರ, ಸಂಕೇತ, ಅಕ್ಷರ ಶೈಲಿ, ವರ್ಣಗಳ ಬಳಕೆ ಇವುಗಳಿಂದ ಅದಕ್ಕೊಂದು ಅರ್ಥ ಸಿರಿವಂತಿಕೆ ನೀಡಿದೆ ಎಂದು ಭಾವಿಸಬಹುದು. ಈ ರಕ್ಷಾಪುಟದಲ್ಲಿ ನಾಲ್ಕು ಭಾಗ / ಸ್ಥಳಾವಕಾಶವನ್ನು ಬಳಸಿಕೊಂಡಿರುವುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ (ಎಡ, ಬಲ, ಕೆಳಗೆ, ಮೇಲೆ) ಈ ಹಿನ್ನೆಲೆಯಲ್ಲಿ ನೋಡಗರ ದೃಷ್ಟಿಪಥ ಎಲ್ಲಕಡೆ ಚಲಿಸುವಂತೆ ರಚನೆಯಾದ ಒಂದು ಮುಖಪುಟವಿನ್ಯಾಸ ಎಂದು ಊಹಿಸಬಹುದು.

**೬.೨.೮. ಮಹಿಳಾ ಜಾನಪದ (೨೦೦೩)**

'ಮಹಿಳಾ ಜಾನಪದ' ಎಂಬ ಗ್ರಂಥವು ಡಾ. ಕೆ. ಆರ್. ಸಂಧ್ಯಾರೆಡ್ಡಿ ಸಂಪಾದಿಸಿದ್ದಾರೆ. ಇಡೀ ಕೃತಿಯು ಏನನ್ನು ಒಳಗೊಂಡಿದೆ ಎಂಬುದನ್ನು ಸೂಚಿಸಲು ಒಬ್ಬ ಮಹಿಳೆಯ ಹಿಮ್ಮುಖ ನೋಟವನ್ನು ಆ ಮೂಲಕ ಅವಳ ವ್ಯಕ್ತಿತ್ವವನ್ನು ಸೂಚಿಸುತ್ತದೆ. ಆಕೆಯ ಕೇಶಾಲಂಕಾರವು ಮಲ್ಲಿಗೆ ಹೂಗಳಿಂದ ಮುಡಿದು ಬಿಗಿದು ಕಟ್ಟಿ ನೀಟಾಗಿ ಬಾಚಿಕೊಂಡ ತಲೆಯ, ತುರುಬಿನ ಕಪ್ಪು ವರ್ಣ ಯಥಾವತ್ತಾಗಿ ಕಂಡು ಬರುತ್ತದೆ. ಆಕೆಯ ಸೀರೆ ಅಂಚುಳ್ಳಿ ಗುಂಪು ಬಣ್ಣ ಹಾಗೂ ನೀಲಿ ಸೀರೆಯುಟ್ಟು ಮಹಿಳಾ ಜಾನಪದವನ್ನು ವೀಕ್ಷಿಸುವ ಆ ಮೂಲಕ ಮಹಿಳೆಯ ವ್ಯಕ್ತಿತ್ವವನ್ನು ಇಲ್ಲಿ ಪ್ರತಿಪಾದಿಸಲಾಗಿದೆ.

**೬.೨.೯. ಜಾನಪದ ಅನ್ವಯಿಕತೆ (೨೦೦೩)**

ಡಾ.ಜಿ.ಆರ್. ತಿಪ್ಪೇಸ್ವಾಮಿ ಮತ್ತು ಡಾ.ರಂಗಾರೆಡ್ಡಿ ಕೋಡಿ ರಾಂಪುರ ಇವರು ಸಂಪಾದಿಸಿದ ಕೃತಿ 'ಜಾನಪದ ಅನ್ವಯಿಕತೆ' ಹೆಸರಿಗೆ ತಕ್ಕಂತೆ ಮುಖಪುಟ ಹೊಂದಿದೆ. ಇದೊಂದು ಸಾಧಾರಣ ನಿಸರ್ಗ ಚಿತ್ರವೆಂದು ಕಂಡುಬಂದರು ದೃಶ್ಯಾತ್ಮಕ ನೆಲೆಯಲ್ಲಿ ವರ್ಣಗಳ ಬಳಕೆ ಅದರ ನೆರಳು ಬೆಳಕು, ಕುಂಚ ಬೀಸುವಿಕೆ, ನಿಸರ್ಗದ ಮೈವಳಿಕೆ ಕಲಾವಿದನ ಕೈಚಳಕ ನಿಸರ್ಗ ಚಿತ್ರದ ಪ್ರಮಾಣ ಮುಂತಾದ ಅಂಶಗಳಿಂದ  ಈ ಕೃತಿಯ ಮುಖಪುಟವು ನೋಡುಗರನ್ನು ಸಹಜವಾಗಿ ಆಕರ್ಷಿಸುತ್ತದೆ. ಈ ಮುಖಪುಟದಲ್ಲಿ ನಿಸರ್ಗ ಚಿತ್ರವೊಂದರ ಛಾಯಾಚಿತ್ರವನ್ನು ಮುಖಪುಟದ ತುಂಬೆಲ್ಲ ಎದ್ದು/ಥಟ್ಟನೆ ಕಾಣುವಂತೆ ಸಂಯೋಜಿಸಿರುವುದರಿಂದ ಸಹೃದಯ ಓದುಗರಿಗೆ ಕೃತಿಯ ಸಾರವನ್ನು ಅರ್ಥೈಸಿಕೊಳ್ಳುವದು ತೀರಾ ಸುಲಭವಾಗಿದೆ ಎಂದು ಇಲ್ಲಿ ಅಭಿಪ್ರಾಯಪಡಬಹುದು. ಮಹಿಳಾ ಜಾನಪದ ಮತ್ತು ಜಾನಪದ ಅನ್ವಯಿಕತೆ ಈ ಎರಡು ಕೃತಿಗಳ ರಕ್ಷಾಪುಟವಿನ್ಯಾಸವು ೨೦೦೩ ರಲ್ಲಿ ಕಲಾವಿದ ಬಿ.ಡಿ. ಜಗದೀಶ ರಚಿಸಿರುತ್ತಾರೆ.

**೬.೨.೧೦. ಜನಪದ ತಂತ್ರಜ್ಞಾನ (೨೦೦೩)**

೨೦೦೩ರಲ್ಲಿ ಡಾ. ಚಕ್ಕೆರೆ ಶಿವಶಂಕರ್ ಪ್ರಕಟಿಸಿದ 'ಜನಪದ ತಂತ್ರಜ್ಞಾನ' ಕೃತಿಯು ಮುಖ್ಯವಾಗಿ ನೀಲಿ ವರ್ಣದ ಶೀರ್ಷಿಕೆಯಿಂದ ಕೂಡಿದೆ. ಕೆಳಭಾಗದಲ್ಲಿ ಡಾ.ಚಕ್ಕೆರೆ ಶಿವಶಂಕರ್ ಅವರ ಹೆಸರು ಬಿಳಿ ವರ್ಣದಲ್ಲಿ ಪ್ರಕಟಿಸಲಾಗಿದೆ. ಈ ಮುಖಪುಟ ವಿನ್ಯಾಸದಲ್ಲಿ ಚಕ್ಕಡಿಯ ಗಾಲಿ ಹಾಗೂ ರೆಂಟೆಯ

ಯಥಾವತ್ತಾದ ಬಣ್ಣಗಳು ಇಲ್ಲಿ ಕಂಡು ಬರುತ್ತವೆ. ಬಲಬದಿಯ ಮಧ್ಯದಲ್ಲಿ ಅಕಾಡೆಮಿಯ ಲಾಂಛನ ಕೂಡ ಮುದ್ರಿಸಲ್ಪಟ್ಟಿದೆ. ಎಡಭಾಗಕ್ಕೆ ನೇರವಾದ ಕಪ್ಪುಪಟ್ಟಿ ಅದರ ಪಕ್ಕದಲ್ಲಿ ಜಾನಪದ ತಂತ್ರಜ್ಞಾನ ಪರಿಚಯಿಸುವ ಅಕ್ಷರಗಳಲ್ಲೇ ತಾಂತ್ರಿಕತೆ ಎದ್ದು ಕಾಣುತ್ತದೆ. ಜಾನಪದ ದೈವವನ್ನು ಸೂಚಿಸುವ ದುಂಡನೆಯ ಅಲಂಕೃತ ಮುಖವರ್ಣಿಕೆ ನುಂಗುವಂತೆ ನೋಡುವ ಕಣ್ಣು, ಬಿಳಿಯ ಕೋರೆ ಮೀಸೆ ಎದ್ದು ಕಾಣುವಂತೆ ಬಿಳಿಗೆರೆಗಳಲ್ಲಿ ಮೂಡಿವೆ. ನೇರಳೆ ಬಣ್ಣ ಹಿನ್ನೆಲೆ ಹೊಂದಿರುವ ಮುಖಪುಟ ಜನಪದರ ತಂತ್ರಜ್ಞಾನಕ್ಕೆ ಮೂಲ ಆಕರವಾದ ಉರುಳುವ ಚಕ್ಕಡಿಯ ಗಾಲಿ ತಯಾರಿಸುತ್ತಿದ್ದ ಅವರ ತಾಂತ್ರಿಕ ನೈಪುಣ್ಯ ಭೂಮಿಯ ಉಳುಮೆಯನ್ನು ಗುರುತಿಸಿದ ಮಾನವನ ಮನದಾಳದ ಭೂಮಿಯ ಫಲವಂತಿಕೆಯನ್ನು ಹೆಚ್ಚಿಸುವಲ್ಲಿ ನೆರವಾಗಿದೆ. ಹಿಂಬದಿಯ ಪುಟದ ಮೇಲ್ಭಾಗದಲ್ಲಿ ಚಕ್ಕಡಿಯ ಗಾಲಿ ತೆಳು ವರ್ಣದಲ್ಲಿ ತೋರಿಸಿದ್ದು ಇದು ಪ್ರಗತಿಯ ಸಂಕೇತ ಎನಿಸಿದೆ. ಬೆನ್ನುಡಿ ಸಾಲುಗಳು ಕೃತಿಯ ತಿರುಳನ್ನು ಸೂಚಿಸುತ್ತಿದ್ದು ಕೆಳಗಡೆ ಅಕಾಡೆಮಿಯ ಲಾಂಛನ ಅದರ ಕೆಳಗಿನ ನೀಲಿಗೆರೆ ಅಂಚಿನಲ್ಲಿ ಮುದ್ರಣದ ವಿಳಾಸವನ್ನು ಹೊಂದಿದೆ. ಈ ಗ್ರಂಥದ ರಕ್ಷಾಪುಟ ವಿನ್ಯಾಸವು ಮುರಳಿಧರ್ ರಾಥೋಡ್ ಎಂಬ ಕಲಾವಿದರು ನಿರ್ಮಿಸಿದ್ದಾರೆ.

**೬.೨.೧೧. ಪುರದ ಪುಣ್ಯ (೨೦೦೪)**

೨೦೦೪ರಲ್ಲಿ ಪ್ರೊ. ಹಿ. ಶಿ. ರಾಮಚಂದ್ರೇಗೌಡ ಸಂಪಾದಿಸಿರುವ, 'ಪುರದ ಪುಣ್ಯ' ಎಂಬ ಈ ಕೃತಿಯ ಮುಖಪುಟ ವಿನ್ಯಾಸವು ಕಲಾವಿದ ಗೋಪಾಲ ಗೌಡ ರಚನೆಗೊಳಿಸಿದ್ದಾರೆ. ಶೀರ್ಷಿಕೆ ಅಕ್ಷರ ವಿನ್ಯಾಸವು ವಿಶೇಷತೆಯನ್ನುಒಳಗೊಂಡಿದೆ. ಒಣ ಕಟ್ಟಿಗೆ ಆಟಿಕೆಯಂತೆ ರಚಿಸಿರುವುದು ಕಂಡುಬರುತ್ತದೆ. ಪುರದ ಪುಣ್ಯ ಶೀರ್ಷಿಕೆಯ ಅಕ್ಷರಗಳ ಸಂಯೋಜನೆಯು ಸೃಜನಾತ್ಮಕವಾಗಿ ಮೂಡಿರುವುದು ಇಲ್ಲಿ ಕಾಣಬಹುದು. ಆದರೆ ಸಾಮಾನ್ಯ ವರ್ಗದ ಓದುಗ ಒಂದು ಕ್ಷಣ ದ್ವಂದ್ವಕ್ಕೊಳಗಾಗುವುದುಂಟು. ಶೀರ್ಷಿಕೆಯ ಅಕ್ಷರಗಳ ಹಿನ್ನೆಲೆ ಛಾಯೆ ಎನಿಸುವಂತೆ ಕಲಾವಿದರ ನೆರಳು ಅಲ್ಲಿ ಕಾಣಬರುತ್ತದೆ. ಇವರೆಲ್ಲಾ ರಾಜ್ಯದ ರಾಜಧಾನಿಯಲ್ಲಿರುವ ಆಡಳಿತ ಚುಕ್ಕಾಣಿ ಹಿಡಿದ ಶಾಸಕರ–ಮಂತ್ರಿ ಮಹೋದಯರ ವಿಧಾನಸೌಧ–ಅಧಿಕಾರ ಸೌಧದ ಮೇಲೆ ತೇಲಾಡುತ್ತಿದ್ದಾರೆ. ಅದೇ ರೀತಿ ವಿಧಾನಸೌಧದ ನೆರಳಲ್ಲಿ ಶಿಷ್ಟ ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಿರುವ ನಮ್ಮ ಜನಪದ ಕಲಾವಿದರ ಪರಿಚಯವನ್ನು ಮಾಡಿ ಕೊಡುವ ಚಿತ್ರಗಳನ್ನು ಸೂಕ್ಷ್ಮವಾಗಿ ಗ್ರಹಿಸಬಹುದು. ಗಂಡ–ಹೆಂಡತಿಯ ಹಾಡು ಅಭಿನಯ ಮಾಡುವುದು, ಗುಂಪುಗಳಲ್ಲಿ ಹಾಡಿ ಕುಣಿಯುವ ತಂಡಗಳು, ಕೊಡಗಿನ ವೀರ ಮಕ್ಕಳ ನೃತ್ಯಗಳು ಹೀಗೆ ಒಂದೇ ಎರಡೇ ಹಲವಾರು ಚಿತ್ರಗಳು ಪುರದ ಪುಣ್ಯವೆಂದೇ ಭಾವಿಸುವ ಸಂಸ್ಕೃತಿಯ ಒಂದು ಭಾಗವಾಗಿ ಬಳಕೆಯಾಗುವ ಜಾನಪದ ಕಲೆಗಳು–ಕಲಾವಿದರು ಶಿಷ್ಟ ಉತ್ಸವಗಳಲ್ಲಿ ಮೆರವಣಿಗೆಗಳಲ್ಲಿ ಕೇಂದ್ರ ಬಿಂದುವಾಗಿ ಕಂಡು ಬರುತ್ತವೆ.

**೬.೨.೧೨. ಜಾನಪದ ಗ್ರಹಿಕೆ ಪರಿಕಲ್ಪನೆ (೨೦೦೪)**

'ಜಾನಪದ ಗ್ರಹಿಕೆ ಪರಿಕಲ್ಪನೆ' ಎಂಬ ಶೀರ್ಷಿಕೆಯಲ್ಲಿ ಪ್ರೊ. ಹಿ.ಶಿ. ರಾಮಚಂದ್ರೇಗೌಡ ಬರೆದ ಮತ್ತು ಕಲಾವಿದ ಗೋಪಾಲ ಗೌಡ ಮುಖಪುಟ ವಿನ್ಯಾಸ ರಚಸಿರುವ ಕೃತಿ ೨೦೦೪ರಲ್ಲಿ ಪ್ರಕಟವಾಗಿದೆ.

ಮುಖಪುಟದಲ್ಲಿ ಶೀರ್ಷಿಕೆಯ ಹಿಂಬದಿ/ಹಿನ್ನೆಲೆ ಅರ್ಧದಷ್ಟು ಹೆಚ್ಚಿನ ಪುಟವು ವ್ಯಾಪಿಸಿರುವ ಕೃತಿಯು ಕಲಾವಿದರು ಧರಿಸುವ ಮುಖವಾಡವನ್ನು ಹಳದಿ ಪಟ್ಟಿಗಳಿಂದ ರಚಿಸಲಾಗಿದೆ. ಮೊಹರಂ ಹಬ್ಬದ ಸಂದರ್ಭದಲ್ಲಿ ಹುಲಿವೇಷ ಧರಿಸುವ ಕಲಾವಿದರು, ಭಕ್ತರು ಇಡೀ ಶರೀರಕ್ಕೆ ಹುಲಿವೇಷದಂತೆ ಬಣ್ಣವನ್ನು ಲೇಪಿಸಿಕೊಂಡು ಹಲಗೆ ವಾದ್ಯಗಳೊಂದಿಗೆ /ಗತ್ತಿನೊಂದಿಗೆ ಕುಣಿಯುವುದು ವಿಶೇಷವಾಗಿದೆ.

ಕರ್ನಾಟಕದ ಬಹುತೇಕ ಸ್ಥಳಗಳಲ್ಲಿ ಮೊಹರಂ ಹಬ್ಬದ ಸಂದರ್ಭದಲ್ಲಿ ಈ ಹುಲಿವೇಷ ಕುಣಿತವು ಒಂದು ಕಲೆಯಾಗಿರುವುದು ಈ ಹಿನ್ನೆಲೆಯಲ್ಲಿ ಮುಖಪುಟ ವಿನ್ಯಾಸಕ್ಕೆ ಹುಲಿವೇಷ ಕುಣಿತವನ್ನು ಬಳಸಿಕೊಂಡಿರುವುದು ಅದರ ಜೊತೆಜೊತೆಗೆ ಪೂಜಾ ಕುಣಿತವೂ ವಿಶೇಷ ಕುಣಿತವಾಗಿರುವುದನ್ನು ಗಮನಿಸಿ ಇಂತಹ ಜಾನಪದ ಕಲೆಗಳನ್ನು ಇಲ್ಲಿನ ಮುಖಪುಟವಿನ್ಯಾಸಕ್ಕೆ ಯೋಗ್ಯವಾಗಿ ಉಪಯೋಗಿಸಿ ಕೊಂಡು ಈ ಮೂಲಕ ಜಾನಪದ ಕಲೆಗಳನ್ನು ಶ್ರೀಮಂತಗೊಳಿಸುತ್ತಿರುವುದು ಇಲ್ಲಿ ವಿಶೇಷವಾಗಿದೆ. ಇದರೊಂದಿಗೆ ಜನಪದ ಕಲಾಮೇಳಗಳಾದ ತಂಬೂರಿ ಮೇಳ, ಚೌಡಿಕೆ ಮೇಳ, ಹಲಗೆ ಮೇಳ, ಮೊದಲಾದ ಕಲಾ ಮೇಳಗಳನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಗ್ರಹಿಸಿ ಅವುಗಳು ಸಂಬಂಧಿಸದ ಗ್ರಂಥಗಳ ರಕ್ಷಾಪುಟ ವಿನ್ಯಾಸದಲ್ಲಿ ಈ ಮೇಲಿನ ಜಾನಪದ ಸಂಸ್ಕೃತಿ, ಜನಪದ ಕಲೆ ಮುಂತಾದ ಕಲೆಯ ಸಾರವನ್ನು ಬಿಂಬಿಸಬೇಕು ಎನ್ನುವ ಉದ್ದೇಶ ಇಲ್ಲಿ ಕಂಡುಬರುತ್ತದೆ.

**೬.೨.೧೩. ಜಾನಪದ ಸಮಾಚಾರ (೨೦೦೫)**

೨೦೦೫ರಲ್ಲಿ ಪ್ರಕಟವಾದ 'ಜಾನಪದ ಸಮಾಚಾರ' ಶೀರ್ಷಿಕೆಯಲ್ಲಿ ಪ್ರಧಾನ ಸಂಪಾದಕರಾದ ಕೆರೆಮನೆ ಶಂಭು ಹೆಗ್ಡೆಯವರು ಜಾನಪದ ಕಲೆಗಳ ಕುರಿತ ಪರಿಪೂರ್ಣ ನೋಟವನ್ನು ಬೀರಿದ್ದಾರೆ .ಮುಖಪುಟವು ಹಸಿರು ಬಣ್ಣದಿಂದ ಕೂಡಿದ್ದು ಅದು ಜನಪದ ಕಲೆಗಳ ಸಮೃದ್ಧಿಯ ಸಂಕೇತವೂ ಆಗಿದೆ. ಜಾನಪದ ಕಲೆಗಳಿಗೆ ಕೊನೆಯೇ ಇಲ್ಲ. ಅವು ಯಾವುದೇ ಜಾತಿ, ಮತ, ಪಂಗಡ ಎಲ್ಲೆಯನ್ನು ಮೀರಿದ್ದು ಹಲವು ಪರಿವರ್ತನೆಗೆ ಒಳಗಾಗಿವೆ. ಈ ಮುಖಪುಟ ವಿನ್ಯಾಸದ ಎಡಭಾಗದಲ್ಲಿ ಲಂಬವಾಗಿ ರಚನೆಗೊಂಡಿರುವ ಪಟ್ಟಿಯಲ್ಲಿ ಪುನರಾವರ್ತನೆ ಆಗಿರುವ ಚೌಕಟ್ಟುಗಳು ಜಾನಪದ ಕಲೆಗಳ ಗರಡಿ ಮನೆ ಎನಿಸುವಂತಿದೆ. ಅದರ ಎಡಭಾಗಕ್ಕೆ ಯಕ್ಷಗಾನ ಕಲಾವಿದ ಕೈಯಲ್ಲಿ ಗದೆ ಹಿಡಿದು ನಿಂತಿರುವುದು ಕಂಡು ಬರುತ್ತದೆ. ಅವನ ಮುಖವರ್ಣಿಕೆ ವೇಷಭೂಷಣಗಳು ಕೆಂಪು ಕಿರೀಟ ವಿವಿಧ ಅಲಂಕಾರಕ್ಕೆ ಹಿಡಿದ ಕನ್ನಡಿಯಾಗಿದೆ.

ಇತ್ತೀಚಿನ ಹೊಸ ಪ್ರಯೋಗವಾದ ಹೆಣ್ಣುಮಕ್ಕಳೇ ನುಡಿಸುವ ಹಲಗೆ ಮೇಳಗಳು ಆಧುನಿಕ ಬದಲಾವಣೆಗೆ ಸಾಕ್ಷಿಯಾಗಿವೆ. ಕರ್ನಾಟಕ ರಾಜ್ಯದಲ್ಲಿ ಕೆಲವೆಡೆ ಮಹಿಳೆಯರು ಡೊಳ್ಳು ನುಡಿಸುವುದರಿಂದ ಹಿಡಿದು ವಿವಿಧ ತಂಡಗಳಲ್ಲಿ ಜನಪದ ಕಲೆಗಳನ್ನು ಪೋಷಿಸಿಕೊಂಡು ಬಂದಿದ್ದು ಅದರ ಕುರುಹು ಎಂಬಂತೆ ಈ ಮುಖಪುಟದಲ್ಲಿ ಕಾಣುವ ಮಹಿಳೆಯೊಬ್ಬಳು ಹಲಗೆ ನುಡಿಸುತ್ತಿರುವುದು ಹೊಸತೇನಲ್ಲ. ಸ್ವಲ್ಪ ಮೇಲೆ ನೋಡಿದರೆ ಹರಿಕಥಾ  ಮೇಳದ ವ್ಯಕ್ತಿಯೊಬ್ಬ ತನ್ನ ವೇಷಭೂಷಣದೊಂದಿಗೆ ಹರಿ ಕಥನ

ನಡೆಸಿಕೊಡುವುದು ಕಂಡು ಬರುತ್ತದೆ. ಅದಕ್ಕೆ ಸಾತ್ ನೀಡುವ ಪ್ರತಿಸ್ಪರ್ಧಿಯಂತೆ ಹಿಮ್ಮೇಳಗಳು ಹಾಗೂ ಬೇರೆ ಬೇರೆ ಕಲಾತಂಡಗಳು ತಮ್ಮ ಪ್ರತಿಭೆ ಸಾಮರ್ಥ್ಯವನ್ನು ಹೊರಹಾಕುತ್ತವೆ. ಮಲ್ಲಗಂಬ ಏರುವಂತಹ ಚಿತ್ರವು ಕಲಾವಿದರ ಸಾಹಸ ಕೃತ್ಯಗಳಲ್ಲಿ ಒಂದಾಗಿದೆ. ಒಬ್ಬರನ್ನೊಬ್ಬರು ಅಭಿಮುಖವಾಗಿ ಹಿಮ್ಮುಖ, ಪಾರ್ಶ್ವಮುಖವಾಗಿ ಅವಲಂಬಿತರಾಗಿದ್ದು ಅವರ ಭುಜದ ಮೇಲೆ ಏರಿನಿಂತು ತಾಳ ಹಾಕುವ ಕಲಾವಿದರ ಚಮತ್ಕಾರ, ತಂತ್ರಗಾರಿಕೆ ಎಲ್ಲವೂ ಜಾನಪದ ಸಮಾಚಾರ ಕೃತಿಯಲ್ಲಿ ಅಡಗಿರುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ಜನಪದ ಕಲೆಗಳ ಉಗಮ ವಿಕಾಸ ಬೆಳವಣಿಗೆ ಹಿನ್ನೆಲೆಯಲ್ಲಿ ಇಡೀ ಕೃತಿ ತನ್ನೊಡಲೊಳಗಿನ ಕಲೆಗಳ ಕೌತುಕವನ್ನು ಇಮ್ಮಡಿಸುತ್ತಿದೆ. ಇದರ ಹಿಂಪುಟ ಕೂಡ ಅಷ್ಟೇ ಮುಖ್ಯವಾಗಿದ್ದು ಹಸಿರು ಹಿನ್ನೆಲೆಯಲ್ಲಿ ಪ್ರಕಟವಾಗಿದೆ. ಇತ್ತೀಚೆಗೆ ಇಂತಹ ಜನಪದ ಕಲೆಗಳನ್ನು ಪ್ರದರ್ಶನ ಯೋಗ್ಯವಾದ ರೀತಿಯಲ್ಲಿ ಅವುಗಳನ್ನು ವೀಡಿಯೋ ದಾಖಲೆ ಮಾಡುವ ವಿವಿಧ ಮಟ್ಟದಲ್ಲಿ ಸ್ಪರ್ಧೆ ಏರ್ಪಡಿಸುವ ಅವುಗಳ ಕುರಿತಾಗಿ ಅನೇಕ ಸಮಾರಂಭ–ವಿದ್ವಾಂಸರ ಚರ್ಚೆಗಳು ವ್ಯಾಪಕವಾಗುತ್ತಿರುವುದನ್ನು ಕೂಡ ಹಿಂಬದಿ ಪುಟದಲ್ಲಿ ಚಿತ್ರಿಸಲಾಗಿದೆ. ಜನಪದ ಕಲೆಗಳಲ್ಲಿ ಅತಿ ತಾಜಾತನ ಉಳಿಸಿಕೊಳ್ಳುತ್ತಿರುವ ಬುಡಕಟ್ಟು ಕಲೆ ಕೃತಿಗಳ ಪರಿಚಯವನ್ನು ಕಪ್ಪು ಬಿಳುಪು ಚಿತ್ರದ ಮೂಲಕ ಸಾಬೀತು ಪಡಿಸಲಾಗುತ್ತದೆ. ಹೀಗೆ ಲಾವಣ್ಯ ಮುದ್ರಣ ಬೆಂಗಳೂರು ಸಮರ್ಥವಾಗಿ ತನ್ನ ಜಬಾಬ್ದಾರಿಗಳನ್ನು ಇಲ್ಲಿ ಪೂರೈಸಿದ್ದಾರೆ.

**೬.೨.೧೪. ಜಾನಪದ ಸಮಾಚಾರ (೨೦೦೬)**

೨೦೦೬ರಲ್ಲಿ ಪ್ರಕಟಗೊಂಡ 'ಜಾನಪದ ಸಮಾಚಾರ' ಕೃತಿ ಶೀರ್ಷಿಕೆಯ ಮುಖಪುಟದಲ್ಲಿ ಅಕ್ಷರ ವಿನ್ಯಾಸ ವಿಶೇಷವಾಗಿದೆ. ಕಾಮನ ಬಿಲ್ಲಿನ ಬಣ್ಣದ ಹಿನ್ನೆಲೆ ಅದರೊಳಗೆ ಅನೇಕ ಚಿಹ್ನೆಗಳು ಇವೆ. ಯಕ್ಷಗಾನ ಬಯಲಾಟದ ಕಲಾವಿದರು, ಕಲಾಪೋಷಕರು ವೇಷಭೂಷಣ ಧರಿಸಿದ್ದುದು ಇಲ್ಲಿ ಕಂಡುಬರುತ್ತದೆ. ಮುಖಪುಟದ ಕೆಳಭಾಗದಲ್ಲಿ ಕೆಂಪು ನಿಲುವಂಗಿ ಹಣೆಗೆ ತಿಲಕವಿಟ್ಟು ತಲೆಗೆ ಹಳದಿ ಪೇಟ ಕಟ್ಟಿದ್ದು ಕಪ್ಪು ಪಂಚೆ ಧರಿಸಿ ಕಾಲಿಗೆ ಗೆಜ್ಜೆ ಕಟ್ಟಿ ಕುಣಿದಾಡುವ ಕಲಾವಿದರು ಜಾನಪದ ಕಲೆಯನ್ನು ಉತ್ಸಾಹದಿಂದ ಮೆರೆಸುವುದನ್ನು ಈ ಮುಖಪುಟ ವಿನ್ಯಾಸದಲ್ಲಿ ಕಾಣಬಹುದು. ಕಲಾ ತಂಡಗಳ ಹಿಂದೆ ಊರಿನ ಪ್ರಮುಖರು ತಮ್ಮ ಭಕ್ತ ಬಾಂಧವರ ಹೆಗಲೇರಿ ಪಾಲಿಕೆಗಳು ವಿಜೃಂಭಿಸುತ್ತಿರುವ ದೃಶ್ಯ ನೋಡಬಹುದು. ಅದೇ ರೀತಿ ಹಿಂಬದಿ ಪುಟದಲ್ಲಿ ಕಾಣುವ, ಅಕಾಡೆಮಿಯಿಂದ ೨೦೦೫ರಲ್ಲಿ ಪ್ರಶಸ್ತಿಗೆ ಭಾಜನರಾದ ಕಲಾವಿದರನ್ನು ಅವರ ಕಲಾ ತಂಡವು, ಪ್ರಶಸ್ತಿ ಪುರಸ್ಕೃತರಾದ ಜನಪದ ಕಲಾವಿದರ ಗುಂಪು ಮತ್ತು ಭಾವಚಿತ್ರವು ಎಲ್ಲರಿಗೂ ಸಮಾನ ವೇದಿಕೆ ಆಗಿದೆ ಎಂದು ಇಲ್ಲಿ ಅಭಿಪ್ರಾಯಪಡಬಹುದು

**೬.೨.೧೫. ಹೊನ್ನ ಬಿತ್ತೇವು ಹೊಲಕೆಲ್ಲ (೨೦೦೬)**

೨೦೦೬ರಲ್ಲಿ 'ಹೊನ್ನ ಬಿತ್ತೇವು ಹೊಲಕೆಲ್ಲ' ಕೃತಿಯು ಸತ್ಯಶ್ರೀ ಪ್ರಿಂಟರ್ಸ್ ಪ್ರಕಟಿಸಿದೆ. ಕೃತಿಯ ಮುಖಪುಟದಲ್ಲಿ ನೇರನೋಟ ಮತ್ತು ವಾರೆನೋಟ ಬೀರುವಂತೆ ಕಲಾವಿದ ತಂತ್ರರೂಪಿಸಿದ್ದಾರೆ.ನೇರವಾಗಿ ಕಾಣುವ ಮುಖಪುಟದ ಬಹುಪಾಲು ಮುಖಪುಟದಲ್ಲಿ ಮೂರು ಭಾಗಗಳಲ್ಲಿ ಪ್ರಕಟಗೊಂಡಿದೆ. ಮೊದಲಿಗೆ

ಕಪ್ಪು ಆನಂತರ ಸಾಧಾರಣ ಬಿಳಿಪು ಮತ್ತೆ ಕಪ್ಪು ವರ್ಣ ವಿನ್ಯಾಸದಿಂದ ತಯಾರಿಸಿದ್ದಾರೆ. 'ಹೊನ್ನ ಬಿತ್ತೇವು ಹೊಲಕೆಲ್ಲ' ಎಂಬ ಶೀರ್ಷಿಕೆ ಕೆಂಪು ವರ್ಣದಿಂದಲೂ ಎರಡನೇ ಹಂತದಲ್ಲಿ ಕರ್ನಾಟಕ ಜಾನಪದ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ ಎನ್ನುವುದು ಮಧ್ಯಭಾಗದಲ್ಲಿ ಕಪ್ಪು ಮಿಶ್ರಿತ ವರ್ಣದಲ್ಲಿದ್ದರೆ ಅದರ ಎದುರು ಕೃಷಿ ಚಟುವಟಿಕೆಯಲ್ಲಿ ನಿರತಳಾದ ಮಹಿಳೆಯ ಚಿತ್ರವಿದೆ. ಬುಟ್ಟಿ ಹಿಡಿದು ಗೊಬ್ಬರ ಬಿತ್ತುವ ಚಿತ್ರ ಭವಿಷ್ಯದಲ್ಲಿ ಬಂಗಾರದಂತಹ ಬೆಳೆ ಬೆಳೆಯಲು ಬೀಜ ಉತ್ತಮವಾಗಿ ಹುಟ್ಟಲು ಅದರ ಆರೈಕೆ ರಕ್ಷಣೆ ಮುಖ್ಯವಾಗಿ ಬೇಕು. ಗೊಬ್ಬರವು ಎಲ್ಲಾ ಅವಶ್ಯಕತೆಯನ್ನು ಪೂರೈಸುತ್ತದೆ ಹಾಗಾಗಿ ಗೊಬ್ಬರ ಫಲವತ್ತತೆ ಹೆಚ್ಚಿಸುವಂತದ್ದು ಬದುಕು ಬಂಗಾರವಾಗಿಸುವುದು. ಕೆಳಗಿನ ಭಾಗದಲ್ಲಿ ವರ್ಣ ರೇಖೆಗಳ ಮೂಲಕ ಜೋಳದ ರಾಶಿ ಕಟ್ಟಿ ಪೂಜಿಸುವ ಮಹಿಳೆ ಕೃಷಿ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಾಳೆ. ಉಳಿದಂತೆ ವ್ಯವಸಾಯ ಮಾಡುವ, ನಾಟಿ ಮಾಡುವ, ಗಾಳಿ ಬರುವುದನ್ನು ನೋಡಿ ತೂರುವ ಎಲ್ಲಾ ಚಿತ್ರಗಳು ಕೃಷಿ ಚಟುವಟಿಕೆಯನ್ನು ಸೂಚಿಸುತ್ತವೆ.

ಬಲಬದಿಯ ಅಲಂಕಾರಕ್ಕೂ ಕೊರತೆ ಇಲ್ಲದೆ ಕಲಾವಿದ ಜಾಣ್ಮೆ ತೋರಿದೆ. (ಅಕ್ಕಪಕ್ಕದ ವಿನ್ಯಾಸದಲ್ಲಿ ಅಡ್ಡವಾದ ಅಕ್ಷರಗಳಿಂದ ಮಾಡಿದ ಶೀರ್ಷಿಕೆ ವಾರೆ ನೋಟವಾಗಿದೆ. ಅದು ಕಪ್ಪು ಹಿನ್ನೆಲೆಯಲ್ಲಿ ಎದ್ದು ಕಾಣುವ ಕೆಂಪು ಬಣ್ಣದಲ್ಲಿ ಬರೆಯಲ್ಪಟ್ಟಿವೆ. ಕೆಳಗೆ ಅಕಾಡೆಮಿಯ ಲಾಂಛನ ಹಳದಿ ಬಣ್ಣದಿಂದ ಕೂಡಿದೆ). ರೈತ ಸಂಸ್ಕೃತಿಯಲ್ಲಿ ಸುಗ್ಗಿಗೆ ವಿಶೇಷ ಮಹತ್ವವಿದೆ. ಸುಗ್ಗಿ ಬಂತೆಂದರೆ ರೈತರ ಮುಖದಲ್ಲಿ ಮಂದಹಾಸವಿರುತ್ತದೆ. ರೈತರ ಬದುಕು ಬಂಗಾರವಾಗಿಸುವುದೇ ಉತ್ತಮ ಫಸಲು. ಅದರ ಹಿಂದೆ ರೈತನು ಭೂಮಿ ಉಳುಮೆ ಮಾಡುವುದು, ನಾಟಿ ಮಾಡುವುದು ಮೊದಲಾದ ಚಿತ್ರಗಳು ಕೃಷಿನಿರತ ಚಟುವಟಿಕೆಗಳು ರೈತನಲ್ಲಿ ಸಂತೋಷ ಉಲ್ಲಾಸವನ್ನುಂಟು ಮಾಡಿ ಜನಪದ ಸಾಹಿತ್ಯದ ನೆಲೆಯನ್ನು ಸದಾ ಜಿನುಗಿಸುತ್ತದೆ. ಈ ರೇಖಾಚಿತ್ರಗಳು ಹಾಗೂ ಇಲ್ಲಿನ ರೇಖೆಗಳು ಲಾಲಿತ್ಯ, ಚಲನಶೀಲತೆ ಮತ್ತು ಚೈತನ್ಯಪೂರ್ಣ ಹೊಂದಿವೆ.

**೬.೨.೧೬. ಕ್ಷೇತ್ರ ಕಾರ್ಯದ ನೆನಪುಗಳು (೨೦೦೭)**

ಡಾ. ಎಲ್.ಆರ್. ಹೆಗಡೆಯವರ 'ಕ್ಷೇತ್ರ ಕಾರ್ಯದ ನೆನಪುಗಳು' ಎಂಬ ಕೃತಿಯನ್ನು ೨೦೦೭ರಲ್ಲಿ ಲಾವಣ್ಯ ಮುದ್ರಣದಿಂದ ಪ್ರಕಟಿಸಲಾಗಿದೆ. ಶೀರ್ಷಿಕೆ ಬಿಳಿ ವರ್ಣದಿಂದ ಸುಂದರ ಅಕ್ಷರಶೈಲಿ ವಿನ್ಯಾಸದಿಂದ ಕೂಡಿದೆ.ಹಿನ್ನೆಲೆಯಾಗಿರುವ ಮಂದವರ್ಣ ಚಿತ್ರಗಳಲ್ಲಿ ಡೊಳ್ಳು ಕಲಾವಿದರು ತಮ್ಮ ಶಕ್ತ್ಯಾನುಸಾರ ನುಡಿಸುವ ಡೊಳ್ಳಿನ ಕುಣಿತವು ಜನಪದರ ಗುಡಿ-ಗುಂಡಾರಗಳಲ್ಲಿ ಪೂಜ್ಯನೀಯವಾಗಿ ಅರಳುವ ಕಲೆಯಾಗಿದೆ ಎಂದು ಸೂಚಿಸುತ್ತದೆ. ಸ್ವಲ್ಪ ಮೇಲ್ಭಾಗದಲ್ಲಿರುವ ವಿವಿಧ ಕಲಾವಿದರು ತಮ್ಮ ಕಲೆ ಪ್ರದರ್ಶನ ಮಾಡುವಂತಹ ರೇಖಾ ಚಿತ್ರಗಳು ಹಿಂಭಾಗದಲ್ಲಿರುವ ಜನಪದರ ದೇವಿಗುಡಿ ಪಕ್ಕದಲ್ಲೇ ಇರುವ ಅರೆ ಬರೆ ಕತ್ತಲಿನಲ್ಲಿ ಕಾಣುವ ತೆಂಗಿನಮರ ವಿಶಾಲ ಬಯಲು ಎಲ್ಲವೂ ಕಪ್ಪು ಛಾಯೆಯಿಂದ ಪ್ರಕಟಿಸಿದೆ. ಈ ವಿಧಾನಕ್ಕೆ ಸಿಲುಯೆಟ್ (ಹಿಂಬದಿ ಬೆಳಕಿನಲ್ಲಿ ಸಂಯೋಜಿಸಿದ ಚಿತ್ರ) ತಂತ್ರಗಾರಿಕೆ ಎನ್ನುತ್ತಾರೆ. ಇಲ್ಲಿ ನಿಸರ್ಗದ ಬೆಳಕನ್ನು ಹಿನ್ನೆಲೆಯಾಗಿ ಉಪಯೋಗಿಸಿ ಚಿತ್ರವು/ವಸ್ತುವು/ಛಾಯಚಿತ್ರವು ಕಪ್ಪಾಗಿ ಮೂಡುವಂತೆ/ ಕಪ್ಪಾಗುವಂತೆ ಮಾಡಲಾಗುತ್ತದೆ.

### ೬.೨.೧೭. ಬದುಕು-ಬರಹ (೨೦೦೭)

ಗವೀಶ್ ಹಿರೇಮಠ ಸಂಪಾದಿಸಿದ ಡಾ.ಬಿ.ಎಸ್.ಗದ್ದಗೀಮಠ ಅವರ 'ಬದುಕು-ಬರಹ' ಶೀರ್ಷಿಕೆ ಕೃತಿಯು ಪ್ರಭು ಗ್ರಾಫಿಕ್ ಇವರಿಂದ ೨೦೦೭ರಲ್ಲಿ ಮುದ್ರಣಗೊಂಡಿದೆ. ಹಳದಿ ಬಣ್ಣದಿಂದ ಕೂಡಿದ ಅಕ್ಷರಗಳ ಶೈಲಿ ಹಾಗೂ ಇಡೀ ಮುಖಪುಟ ತುಂಬೆಲ್ಲಾ ವ್ಯಾಪಿಸಿರುವ ಡಾ.ಬಿ.ಎಸ್.ಗದ್ದಿಗೀಮಠ ಅವರ ಭಾವಚಿತ್ರ ವರ್ಣ ವೈವಿಧ್ಯತೆಯಿಂದ ಕೂಡಿದೆ. ಬಲಬದಿಗೆ ಅದೇ ಭಾವಚಿತ್ರ ಯಥಾವತ್ತಾಗಿ ಮೂಡಿ ಬಂದಿದೆ. ಇದರ ವಿಶೇಷತೆಯನ್ನು ಸಾರುವ ಭಾವಚಿತ್ರದಲ್ಲಿ ಅವರ ವ್ಯಕ್ತಿತ್ವ ಅಡಗಿದೆ. ಅವರ ಚೂಟಿಯಾದ ಕಣ್ಣುಗಳು ಶಿಸ್ತಾಗಿ ಧರಿಸಿರುವ ಕೋಟು, ಟಾಯ್ ಆಕರ್ಷಕವಾದ ಮುಖಚರ್ಯೆ, ಸದಾ ಜ್ಞಾನಾಕಾಂಕ್ಷಿಯಾಗಿ ಅವರ ಮನದಾಳವನ್ನು ನಿರೀಕ್ಷಿಸುವಂತಿದೆ. ಜಾನಪದಕ್ಕಾಗಿ ತಮ್ಮ ಬದುಕನ್ನು ಮುಡಿಪಾಗಿಟ್ಟ ಡಾ. ಬಿ.ಎಸ್.ಗದ್ದಗೀಮಠ ಅವರ ಬದುಕಿನ ಅನೇಕ ಘಟನೆಗಳನ್ನು ಈ ಗ್ರಂಥ ಸೂಚಿಸುತ್ತದೆ.

### ೬.೨.೧೮. ಜಾನಪದ ತಲೆಮಾರು ೨೦೦೭

೨೦೦೭ರಲ್ಲಿ ಡಾ. ಹಂಪನಹಳ್ಳಿ ತಿಮ್ಮೇಗೌಡ ಬರೆದ 'ಜಾನಪದ ತಲೆಮಾರು' ಕೃತಿಗೆ ಮುರಳೀಧರ ರಾಥೋಡ್‌ರವರು ರಕ್ಷಾಪುಟ ವಿನ್ಯಾಸ ಕಲಾತ್ಮಕವಾಗಿ ರಚಿಸಿದ್ದಾರೆ. ಒಂದರ ಮೇಲೊಂದು ಅಡಕಲುಗಡಿಗೆ ಜೋಡಿಸಿಟ್ಟಿದ್ದು ಅದರ ಮೇಲೆ ಜನಪದರ ಪೂಜ್ಯನೀಯವಾದ ತೆಂಗಿನಕಾಯಿ, ವೀಳ್ಯದೆಲೆಗಳನ್ನು ಕುಂಬದ ಮೇಲಿಟ್ಟಿರುವ ಹೂವು ಎಲ್ಲವೂ ಕೆಂಪು ವರ್ಣದಿಂದ ವಿವಿಧ ಅಲಂಕಾರಗಳಿಂದ ಹಳದಿ ಹಿನ್ನೆಲೆಯಿಂದ ರೂಪಗೊಂಡಿದ್ದು ಜನಪದ ತಲೆಮಾರುಗಳಿಂದ ಸಾಗಿ ಬಂದಿರುವುದನ್ನು ಅದನ್ನು ಪೂಜ್ಯತೆಯಿಂದ ನಾವು ಸ್ವೀಕರಿಸುವುದನ್ನು ಸೂಚಿಸುತ್ತದೆ. ಇಡೀ ರಕಾಪುಟ ಕಪ್ಪು ಹಿನ್ನೆಲೆಯಿದ್ದು ಮೇಲ್ಭಾಗದಲ್ಲಿ ವೃತ್ತಾಕಾರದ ಚಂದ್ರನಂತೆ ಮೂಡಿ ಬಂದಿರುವ ಶೀರ್ಷಿಕೆ ನಮಗೆ ಸೂರ್ಯ ಚಂದ್ರರಷ್ಟೆ ಸತ್ಯವೆಂದು ಸಾರಲಾಗಿದೆ. ಕೆಳಭಾಗದಲ್ಲಿ ತಿಳಿ ಹಸಿರು ಆಯತಾಕಾರದಲ್ಲಿ ಲೇಖಕರ ಹೆಸರು ಪ್ರಕಟವಾಗಿದೆ. ಎಡ ಬಲ ಭಾಗಕ್ಕೆ ಮತ್ತು ಮೇಲಿನಿಂದ ಕೆಳಕ್ಕೆ ಇಳಿಬಿಟ್ಟಿರುವ ಬಿಳಿ ಬಣ್ಣದ ಚುಕ್ಕೆಗಳಿಂದ ಪಕ್ಷಿಗಳ ಸರಮಾಲೆ ಮಾಡಿರುವುದು ಹಾಗೂ ಬುಡಕಟ್ಟು ಚಿತ್ರಕಲೆ, ರಂಗೋಲಿ ಕಲೆಗೂ ಅನೇಕ ತಲೆಮಾರುಗಳ ಸಂಬಂಧ ಗಾಢವಾಗಿರುವುದನ್ನು ಇಲ್ಲಿ ಗುರ್ತಿಸಿದ್ದಾರೆ/ಗ್ರಹಿಸಿಕೊಳ್ಳಬಹುದು.

ಹಿಂಬದಿಯ ಪುಟವು ಕೂಡ ಕಪ್ಪು ಹಸಿರು ಆಕಾಶ ನೀಲಿಬಣ್ಣದ ಹಿನ್ನೆಲೆಯಿದ್ದು ಮೇಲ್ಭಾಗದಲ್ಲಿ ಸ್ವಸ್ತಿಕ್ ಚಿಹ್ನೆ ಅಲ್ಲದೆ ಜೈನ ಧರ್ಮದ ಮೋಕ್ಷಗಾಮಿನಿಸುವ ಎರಡು ಚಿಹ್ನೆಗಳು ಸ್ವಸ್ತಿಕ್ ಎಡ ಮತ್ತು ಬಲ ಅದು ಜನಪದರ ಹೊಂದಾಣಿಕೆಯನ್ನು ಸೂಚಿಸುತ್ತದೆ. ಹಿಂಬದಿಪುಟ ಮಧ್ಯದಲ್ಲಿ ಅತೀ ಕಡಿಮೆ ವಾಕ್ಯಗಳ ಸಾಲು ಅಚ್ಚುಕಟ್ಟುತನದಿಂದ ಹೊಂದಾಣಿಕೆಯಾಗಿದೆ. ಕೆಳಗಡೆ ಅಕಾಡೆಮಿ ವಿಳಾಸವಿದೆ. ಅದರ ಕೆಳಗೆ ಪಕ್ಷಿ ಸಂಕುಲದ ಓಟವನ್ನು ಸಂಕೇತಿಸುವ ರೇಖಾ ಚಿತ್ರಕಲೆ ಅರಳಿದೆ. ಹೀಗೆ ಕಲಾವಿದ ಬರುಬರುತ್ತಾ ಜನಪದ ತಲೆಮಾರುಗಳಿಂದ ಸಾಗಿ ಬಂದ ಅನೇಕ ಕಲೆಗಳನ್ನು ಮೈಗೂಡಿಸಿಕೊಂಡು ಮುಂದಿನ ತಲೆಮಾರುಗಳಿಗೆ ವರ್ಗಾಯಿಸುವುದನ್ನು ಅರ್ಥವತ್ತಾಗಿ ಈ ಗ್ರಂಥದ ರಕ್ಷಾಪುಟದಲ್ಲಿ ಚಿತ್ರಿಸಲಾಗಿದೆ.

೬.೨.೧೯. ಹೊನ್ನ ಹೊತ್ತಿಗೆ (೨೦೦೭)

೨೦೦೭ರಲ್ಲಿ ಶ್ರೀಯುತ ಮತಿಘಟ್ಟ ಕೃಷ್ಣಮೂರ್ತಿಯವರು ಬರೆದ 'ಹೊನ್ನ ಹೊತ್ತಿಗೆ' ಕೃತಿಯು ಲಾವಣ್ಯ ಮುದ್ರಣದಿಂದ ಪ್ರಕಟಗೊಂಡಿದೆ. ಮುಖಪುಟದಲ್ಲಿ ರಚನೆಗೊಂಡ ಕೋಲಾಟದ ವ್ಯಕ್ತಿಯ ವರ್ಣ ರೇಖಾಚಿತ್ರ/ವಿವರಣಾತ್ಮಕ ಚಿತ್ರಗಳಾಗಿವೆ. ಬಿಗಿಯಾಗಿ ಬಟ್ಟೆ ಬಿಗಿದುಕೊಂಡು ತಲೆಗೆ ಸುತ್ತಿದ ಕೆಂಪು ರುಮಾಲು ಕುಣಿತದ ಹೆಜ್ಜೆ ಇವೆಲ್ಲವೂ ಆಕರ್ಷಕವಾಗಿವೆ. ಹಿನ್ನೆಲೆಯಾಗಿಯೂ ಚಿಕ್ಕ ಚಿಕ್ಕ ಚಿತ್ರಗಳು ಇದೇ ಕೋಲಾಟದ ಕಲಾವಿದರ ತಂಡ ಗುಂಪುಗಳನ್ನು ಪ್ರತಿನಿಧಿಸುತ್ತವೆ.ಅವರ ಹಾಡಿನ ಮೌಲ್ಯವು ಹೊನ್ನಿಗಿಂತ ಶ್ರೇಷ್ಠವಾಗಿದೆ. ಸೂರ್ಯ ಚಂದ್ರನಷ್ಟೇ ಶಾಶ್ವತವಾದ ಹೊನ್ನ ಹೊತ್ತಿಗೆ ಅಂದರೆ ಬಂಗಾರದಂತಹ ಪುಸ್ತಕ (ಕೃತಿ) ಇದಾಗಿದೆ ಎಂದು ಸೂಚಿಸುತ್ತದೆ. ಮೇಲ್ಭಾಗದಲ್ಲಿ ಕಪ್ಪು ಹಿನ್ನೆಲೆಯಲ್ಲಿ ಲೇಖಕರ ಹೆಸರು ಬಿಳಿವರ್ಣದಲ್ಲಿದೆ. ಅದೇ ರೀತಿ ಕೆಳಗೆ ಚಿಕ್ಕ ಅಕ್ಷರಗಳಲ್ಲಿ ಅಕಾಡೆಮಿ ವಿಳಾಸ ಮತ್ತು ಲಾಂಛನ ಪ್ರಕಟವಾಗಿದೆ. ಹೊನ್ನ ಹೊತ್ತಿಗೆ ಶೀರ್ಷಿಕೆಯ ಅಕ್ಷರಗಳು ಕ್ಯಾಲಿಗ್ರಾಫಿಕ್ ಶೈಲಿಯಲ್ಲಿದ್ದು ಅವುಗಳು ಬಂಗಾರದ ಬಣ್ಣವನ್ನು ಹೊಂದಿದೆ. ಒಟ್ಟಾರೆ ಈ ಮುಖಪುಟವು ಅನೇಕ ಅಂಶಗಳನ್ನು ತನ್ನ ಒಡಲಾಳದಲ್ಲಿ ಗರ್ಭೀಕರಿಸಿಕೊಂಡ ಬೃಹತ್ ಗ್ರಂಥ ಎಂಬ ಭಾವ ಮೂಡಿಸುತ್ತದೆ.

೬.೨.೨೦. ಸುಡುಗಾಡು ಸಿದ್ಧರು (೨೦೦೭)

'ಸುಡುಗಾಡು ಸಿದ್ಧರು' ಕೃತಿಯನ್ನು ಗವೀಶ್ ಹಿರೇಮಠ ಅವರು ರಚಿಸಿದ್ದಾರೆ. ೨೦೦೭ರಲ್ಲಿ ಪ್ರಭು ಗ್ರಾಫಿಕ್ಸ್ ನವರು ಮುದ್ರಿಸಿದ್ದು. ಶೀರ್ಷಿಕೆ ಅಕ್ಷರ ಶೈಲಿ ಗೋಥಿಕ್ ಮಾದರಿಯ ಸರಳಗೈ ಬರಹವಿದ್ದು ಆ ಅಕ್ಷರಗಳು ಹಳದಿ ಮತ್ತು ಕಾವಿ ಬಣ್ಣಗಳನ್ನು ಹೊಂದಿದೆ. ಉಳಿದಂತೆ ದೊಡ್ಡ ಕಂಬಳಿ ಹಾಸಿದಂತಿರುವ ಕಪ್ಪು ಹಿನ್ನೆಲೆಯೊಂದಿಗೆ ಸುಡುಗಾಡು ಸಿದ್ಧರ ನೋಟವು ವಿಶ್ವ ದರ್ಶನವನ್ನು ಮೂಡಿಸುವಂತಿದೆ. ಸುಡುಗಾಡು ಸಿದ್ಧರು ಪ್ರದರ್ಶಿಸುವ ಕಲೆಯನ್ನು ಇಲ್ಲಿ ಲೇಖಕರು ವಿವರಿಸಿದ್ದಾರೆ. ಅವರ ವೇಶಭೂಷಣಗಳು ಮುಖದ ಅಲಂಕಾರ, ಕೊರಳಲ್ಲಿ ಧರಿಸುವ ವಿವಿಧ ರುದ್ರಾಕ್ಷಿ ಮಾಲೆ ಎಲ್ಲವೂ ಯಥಾವತ್ತಾಗಿ ಮೂಡಿ ಬಂದಿವೆ ಮತ್ತು ಹಿಂಬದಿಪುಟವು ಕೂಡ ಅಷ್ಟೇ ಕಲಾತ್ಮಕವಾಗಿ ಮೂಡಿದ್ದು ಹಿರಿಯ ಜಾನಪದ ವಿದ್ವಾಂಸರಿಂದ ಕೃತಿಯ ಪ್ರಶಂಸೆಯನ್ನು, ಅಕಾಡೆಮಿಯ ಲಾಂಛನ ಎಡಭಾಗ ಹಾಗೂ ಬಲಭಾಗದ ಮೇಲೆ ಕೆಳಗೆ ಅದೇ ಸುಡುಗಾಡು ಸಿದ್ಧರ ಛಾಯಾಚಿತ್ರಗಳನ್ನು ಯಥಾವತ್ತಾಗಿ ಪ್ರಕಟಿಸಲಾಗಿದೆ. ಒಟ್ಟಾರೆ ಕೃತಿಯ ಅಂತರಂಗದ ದರ್ಶನ ಈ ಮುಖಪುಟವಿನ್ಯಾಸದಲ್ಲಿ ಚಿತ್ರ ಕಲಾವಿದನಿಂದ ಮೂಡಿಬಂದಿದೆ.

೬.೨.೨೧. ಆಸರ (೨೦೦೭)

೨೦೦೭ರಲ್ಲಿ ಪ್ರಕಟಗೊಂಡ 'ಆಸರ' ಕೃತಿಯ ಸಂಪಾದಕರು ಶ್ರೀಮತಿ ಶಾಂತಿ ನಾಯಕ ರವರು ಇದಕ್ಕೆ ರಕ್ಷಾಪುಟವಿನ್ಯಾಸ ರಚಿಸಿದವರು ಶ್ರೀ ಉದಯ ನಾಯಕ್ ಇಡೀ ಮುಖಪುಟದ ಹಿನ್ನೆಲೆ ಯಾವುದೋ ಗ್ರಾನೈಟ್ ಕಲ್ಲಿನ ಮೈವಳಿಕೆಯ ಬಣ್ಣ ಹೊಂದಿದ್ದು ಆಸರ ಹಾಗೂ ಸಂಪಾದಕರ ಹೆಸರು ಹಳದಿ ಬಣ್ಣಗಳಿಂದ ಕೂಡಿವೆ. ಕೆಳಗಡೆ ಅಕಾಡೆಮಿಯ ವಿಳಾಸ ಹಾಗೂ ಲಾಂಛನಗಳು ಬಿಳಿಯ ಹಿನ್ನೆಲೆಯಲ್ಲಿ

ಹಸಿರು ಹಾಗೂ ಕಾಫಿ ಬಣ್ಣಗಳಿಂದ ಪ್ರಕಟವಾಗಿವೆ. ಮಧ್ಯಭಾಗದಲ್ಲಿರುವ ಚಿತ್ರವು ತೋಟದ ಕೆಲಸದಲ್ಲಿ ನಿರತನಾದ ಕಾರ್ಮಿಕ ಬಾಯಾರಿಕೆಯಿಂದ ನೀರನ್ನು ಆಸೆಪಟ್ಟು ಕುಡಿಯುತ್ತಿರುವುದು ಆತನ ಜೀವನಕ್ಕೆ ಆಧಾರ ಆಗಿರುತ್ತದೆ. ಅದೇ ಚಿತ್ರವು ಹಿಂಬದಿ ಪುಟದಲ್ಲಿ ಮೂರು ವಿಭಿನ್ನ ಪ್ರಕಾರಗಳಲ್ಲಿ ಪ್ರಕಟವಾಗಿದೆ. ಮುಖಪುಟದಲ್ಲಿ ಎರಡೂ ಕೈಗಳಿಂದ ದಣಿವಾರಿಸಿಕೊಳ್ಳಲು ನೀರು ಕುಡಿಯುತ್ತಿದ್ದಾನೆ. ಸುತ್ತಲು ಕಂಗೊಳಿಸುವ ಹಸಿರಿನಲ್ಲಿ ಉಸಿರು ಪಡೆದುಕೊಳ್ಳಲು ನೀರು ಆಸರೆ–ಆಧಾರ ಜೀವಜಲ ಎಲ್ಲವೂ ಆಗಿದೆ. ಹಿಂಬದಿಯ ಪುಟದಲ್ಲಿ ಮೂರು ಬೇರೆ ಬೇರೆ ಚಿತ್ರ ಪ್ರಕಟವಾಗಿದ್ದರೂ ಅಲ್ಪ ಸ್ವಲ್ಪ ಬದಲಾವಣೆಯನ್ನು ಮುಖಪುಟ ಕಲಾವಿದ ಪ್ರದರ್ಶಿಸಿದ್ದಾನೆ. ಮೇಲಿನ ಚಿತ್ರದಲ್ಲಿ ಒಂದೇ ಕೈಯಲ್ಲಿ ತಂಬಿಗೆ ನೀರು ಕುಡಿಯಲು ಹವಣಿಸುತ್ತಿದ್ದಾನೆ, ಎರಡನೇ ಚಿತ್ರದಲ್ಲಿ ಅದೇ ಭಾವ ವ್ಯಕ್ತವಾಗುತ್ತಿದೆ. ೩ನೇ ಚಿತ್ರದಲ್ಲಿ ತನ್ನ ಕೈಯನ್ನು ಅತಿಯಾಗಿ ಬಾಗಿಸಿ ಬಾಯಿಗೆ ಹತ್ತಿರವೇ ತಂಬಿಗೆ ಹಿಡಿದುಕೊಂಡು ನೀರಿನ ಆಸರೆಗಾಗಿ ಹಪಹಪಿಸುತ್ತಾನೆ. ಉಳಿದಂತೆ ಮಾರ್ಬಲ್ ಕಲ್ಲಿನ ಮೈವಳಿಕೆ ಬಣ್ಣದ ಹಿನ್ನೆಲೆಯನ್ನು ಹೊಂದಿದೆ. ಇದೊಂದು ಸಾಧರಣ ಮುಖಪುಟ ವಿನ್ಯಾಸ ಎನ್ನಬಹುದು.

### ೬.೨.೨೨. ಬೆಲ್ಲದಾರತಿಯ ಬೆಳಗೇನು (೨೦೦೮)

೨೦೦೮ರಲ್ಲಿ ಡಾ. ಎಸ್. ಕೆ. ಕರೀಂಖಾನ್ ಸಂಗ್ರಹಿಸಿದ ಜಾನಪದಗೀತೆಗಳ ಸಂಕಲನ 'ಬೆಲ್ಲದಾರತಿಯ ಬೆಳಗೇನು' ಎಂಬ ಕೃತಿಯು ಡಾ. ಬಿ. ಎಸ್. ತಲ್ವಾಡಿಯವರಿಂದ ಪರಿಷ್ಕರಣದೊಂದಿಗೆ ರಶ್ಮಿ ಟೈಪೋಸೆಟ್‌ನಲ್ಲಿ ಮುದ್ರಿಸಲಾಗಿದೆ. ಶೀರ್ಷಿಕೆ ಹಾಗೂ ಸಂಗ್ರಹಕಾರರ ಹೆಸರು ಮತ್ತು ಅಕಾಡೆಮಿ ವಿಳಾಸಗಳು ಬಿಳಿಬಣ್ಣದಿಂದ ಕೂಡಿವೆ. ಕೋಲಾಟದಲ್ಲಿ ನಿರತವಾದ ತಂಡದಲ್ಲಿ ಪುರುಷ ಕಲಾವಿದರು ಬಿಳಿ ಉಡುಪು ಹಾಗೂ ಪಂಚೆ ಧರಿಸಿ ಸೊಂಟದಪಟ್ಟಿ ಮತ್ತು ತಲೆ ಪೇಟ ಕೆಂಪು ಬಣ್ಣದಲ್ಲಿವೆ. ಮಹಿಳಾ ಕಲಾವಿದರು ಹಸಿರು ಕುಪ್ಪಸ ಧರಿಸಿ ಕೆಂಪು ಸೀರೆ ಉಟ್ಟಿದ್ದಾರೆ. ಕೈಯಲ್ಲಿ ಕೆಂಪು ಬಣ್ಣದ ಕೋಲನ್ನು ಇಬ್ಬರೂ ಹಾಗೂ ಇಡೀ ತಂಡದವರು ಹಿಡಿದಿರುತ್ತಾರೆ. ಮುಖಪುಟದ ಎಡಭಾಗದಲ್ಲಿ ಜನಪದ ಮಹಿಳೆಯೇ ಒಳಬೀಸುವ ಕಲ್ಲಿನ ಮುಂದೆ ಕುಳಿತು ಹಾಡುತ್ತಾ ಕಲ್ಲು ತಿರುಗಿಸುತ್ತಿದ್ದು ಅವಳು ಲೀಲಾಜಾಲವಾಗಿ ಹಾಡು ಮುಂದುವರೆಸಿದ್ದಾಳೆ. ಈ ಚಿತ್ರವು ಚಪ್ಪಟೆ ಲೇಪನ ವರ್ಣಗಳಿಂದ ಕೂಡಿದೆ. ಹಿನ್ನೆಲೆಯಾಗಿರುವ ಚೌಕಾಕಾರದ ಚಿತ್ರವು ದೇವಿಗುಡಿಯ ಬಾಗಿಲು ಸಂಕೇತಿಸುತ್ತದೆ. ಒಟ್ಟಿನಲ್ಲಿ ಜನಪದ ಕಲಾವಿದರ ಬದುಕು–ಬರಹವನ್ನು ಒಳಗೊಂಡ ಬೆಲ್ಲದಾರತಿಯ ಬೆಳಗೇನು ಕೃತಿಯು ಜನಪದ ಸಾಹಿತ್ಯದ ಜೀವಾಳವಾಗಿದೆ.

### ೬.೨.೨೩. ಶಿರಿಯಾರ ಮಂಜುನಾಯ್ಕ (೨೦೦೮)

೨೦೦೮ರಲ್ಲಿ 'ಶಿರಿಯಾರ ಮಂಜುನಾಯ್ಕ' ಶೀರ್ಷಿಕೆಯ ಕೃತಿಯನ್ನು ಬಿ.ಎಲ್. ಪರಡ್ಡಿ ರಚಿಸಿದ್ದು ರಶ್ಮಿ ಟೈಪೋಸೆಟ್‌ನಿಂದ ಪ್ರಕಟವಾಗಿದೆ. ಮುಖಪುಟದ ತುಂಬಾ ಎದ್ದು ಕಾಣುವಂತಹ ವೇಷಭೂಷಣಧಾರಿ ಯಕ್ಷಗಾನ ಕಲೆಯ ಕೋಗಿಲೆಯಾದ ಶಿರಿಯಾರ ಮಂಜುನಾಯ್ಕ ಒಬ್ಬ ವ್ಯಕ್ತಿಯಲ್ಲ ಅವರಲ್ಲೊಂದು ಅದ್ಭುತ ಯಕ್ಷಗಾನ ಕಲೆ ಅಡಗಿದೆ ಎಂಬುದನ್ನು ಈ ಚಿತ್ರವು ಸಾರುತ್ತದೆ. ಹಿಂಬದಿಯ ಪುಟವು ಕೂಡ

ಅದೇ ಚಿತ್ರದ ಸಣ್ಣ ನೋಟವು ಹಿನ್ನೆಲೆಯಾಗಿದ್ದು ಇಡೀ ಕೃತಿಯ, ಕಲಾವಿದನು ನಡೆದು ಬಂದ ಹೆಜ್ಜೆಯನ್ನು ಗುರುತಿಸಿದ್ದಾನೆ. ಯಕ್ಷಗಾನಕ್ಕೆ ಅನೇಕ ಬಣ್ಣಗಳು ಉಡುಪು ವೇಷಭೂಷಣಗಳು ಅಗತ್ಯವಿದ್ದು ಅವೆಲ್ಲಾ ಅನಿವಾರ್ಯವೆಂಬುದನ್ನು ಎಡ-ಬಲದಲ್ಲಿ ಸಾಂಕೇತಿಕವಾಗಿ ಬಳಸಲಾಗಿದ್ದು ಯಕ್ಷಗಾನ ಕಲಾವಿದ ಬೆಳೆಯುತ್ತಿದ್ದಾನೆಂದು ಲಂಬವಾಗಿ ಸೂಚಿಸಲಾಗಿದೆ. ಕೃತಿ ಶೀರ್ಷಿಕೆಯು ಮೇಲಕ್ಕೆ ಅಡ್ಡಲಾಗಿ ಬರೆಯಲಾಗಿದ್ದು ನೋಡುಗನಿಗೆ ವಿಶೇಷ ಅನುಭವ ನೀಡುವಂತಿದೆ ಉಳಿದಂತೆ ಎಲ್ಲಾ ಅಂಶಗಳಿಂದ ಸಾಮಾನ್ಯವಾಗಿವೆ.

**೬.೨.೨೪. ನಮ್ಮ ಮುಸ್ಲಿಂ ಹಿನ್ನೆಲೆಯ ಜನಪದ ಕತೆಗಳು (೨೦೦೮)**

೨೦೦೮ರಲ್ಲಿ ಪ್ರಕಟಿತ ಮತ್ತೊಂದು ಕೃತಿ 'ನಮ್ಮ ಮುಸ್ಲಿಂ ಹಿನ್ನೆಲೆಯ ಜನಪದ ಕತೆಗಳು' ಸಂಪಾದಕರು ಡಾ.ಎಂ.ಎಸ್.ಶೇಖರ್ ಅವರು ಜಿ.ವಿ.ಆನಂದಮೂರ್ತಿರವರು ಈ ಗ್ರಂಥದ ಮುಖಪುಟವಿನ್ಯಾಸ ರಚಿಸಿದ್ದಾರೆ. ಶೀರ್ಷಿಕೆ ಮತ್ತು ಲೇಖಕರ ಹೆಸರುಗಳು ನೀಲಿ ಮತ್ತು ಬಿಳಿ ಅಂಚು ಬಣ್ಣದಿಂದ ಕೂಡಿವೆ. ಅಡ್ಡದೊಂದು ಬಿಳಿಗೆರೆ ಹಾಗೂ ಎಡಭಾಗಕ್ಕೆ ಲಂಬವಾಗಿರುವ ಗಾಢ ಹಸಿರುಪಟ್ಟಿ ಹಾಗೂ ಬಲ ಬದಿಗೆ ಜನಪದ ಕಲಾವಿದರ ರೇಖಾ ಚಿತ್ರಗಳು ಜೊತೆಯಾಗಿ ಮರಿಗಳೊಂದಿಗೆ ಹಾರುವ ಪಾರಿವಾಳ ಮೊದಲಾದ ಪಕ್ಷಿಗಳು ಆಕಾಶದಲ್ಲಿ ಸ್ವತಂತ್ರವಾಗಿ ಹಾಡುವುದನ್ನು ಹೋಲಿಸಲಾಗಿದೆ. ಹಸಿರು ಬಣ್ಣ ಸಮೃದ್ಧತೆಯನ್ನು ಸೂಚಿಸಿದೆ. ಈ ಮುಖಪುಟ ವಿನ್ಯಾಸದಲ್ಲಿ ಸಮತೋಲನದ ಕೊರತೆ ಕಾಣುತ್ತಿದೆ.

**೬.೨.೨೫. ಕೃಷಿ ಜಾನಪದ ಮತ್ತು ಮಹಿಳೆ (೨೦೧೦)**

೨೦೧೦ರಲ್ಲಿ ಪ್ರಕಟವಾದ 'ಕೃಷಿ ಜಾನಪದ ಮತ್ತು ಮಹಿಳೆ' ಎಂಬ ಗ್ರಂಥವು ಡಾ.ಸುಮಂಗಲಾ ಅತ್ತಿಗೇರಿ ಅವರ ಕೃತಿಯಾಗಿದೆ. ಶೀರ್ಷಿಕೆ ಅಕ್ಷರಗಳು ಅಲಂಕಾರಿಕ ಅಕ್ಷರಗಳ ಶೈಲಿ ಹೊಂದಿವೆ ಮತ್ತು ಕೆಂಪು ವರ್ಣ ಹಾಗೂ ಬಿಳಿವರ್ಣದ ಅಂಚುರೇಖೆಗಳಿಂದ ಕೂಡಿದೆ. ಕೆಳಭಾಗದಲ್ಲಿ ಕಾಫಿ ಬಣ್ಣದ ಹಿನ್ನೆಲೆಯಲ್ಲಿ ಅಕಾಡೆಮಿಯ ವಿಳಾಸ ಅಷ್ಟೇನು ಎದ್ದು ಕಾಣದೆ ಮಸುಕು ಮಸುಕಾಗಿದೆ/ಮಬ್ಬುತನದಿಂದ ಕೂಡಿದೆ. ಮೇಲ್ಭಾಗವು ಹಳದಿ ಮಿಶ್ರಿತ ಹಿನ್ನೆಲೆ ವರ್ಣದಿಂದ ಕೂಡಿದ್ದು ಅದರ ಕೆಳಗೆ ನಾಟಿ ಮಾಡುತ್ತಿರುವ ಮಹಿಳೆಯ ಉತ್ಸಾಹ ಅವಳ ಒಂಟಿತನವನ್ನು ಶ್ರಮವನ್ನು ಮರೆಸುವಂತಿದೆ. ನೀಲಿ ಸೀರೆ ಮತ್ತು ಕಡು ನೀಲಿ ಕುಪ್ಪಸ ಧರಿಸಿದ ಮಹಿಳೆ ಕೈಯಲ್ಲಿ ಹಸಿರು ಭತ್ತದ ಸಸಿ ನಾಟಿ ಮಾಡುತ್ತಿದ್ದಾಳೆ. ಹಿಮ್ಮುಖವಾಗಿ ನಾಟಿ ಮಾಡುತ್ತಾ ಸಾಗುತ್ತಿದ್ದ ಹಸಿರು ಪೈರು ಕಂಗೊಳಿಸುತ್ತದೆ. ಕಾಲಲ್ಲಿರುವ ಕೆಸರು ಗದ್ದೆಯಲ್ಲಿ ಬಾಗಿ ನಾಟಿ ಮಾಡುವ ಅವಳ ಶ್ರದ್ಧೆ ಮೆಚ್ಚತಕ್ಕದ್ದಾಗಿದೆ. ಈ ಚಿತ್ರವು ಚಪ್ಪಟೆ ಲೇಪನ ಹೊಂದಿದ್ದುದಾಗಿದ್ದು ರೇಖೆಗಳು ಸೊಗಸಾಗಿ ಮೂಡಿಬಂದಿಲ್ಲ. ವ್ಯಂಗ್ಯಚಿತ್ರ ಶೈಲಿ ಚಿತ್ರವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಮಾನವ ಶರೀರ ಅಂಗರಚನಾ ಶಾಸ್ತ್ರ ನಿಯಮ ಅಥವಾ ಪದ್ಧತಿ ಈ ರೇಖಾಚಿತ್ರದಲ್ಲಿಲ್ಲ ಎಂದು ಸ್ಪಷ್ಟವಾಗಿ ಕಾಣುವಂತಹ ಅಂಶವಾಗಿದೆ.

ಹಿಂಬದಿಯ ಪುಟದ ಮೇಲ್ಭಾಗದಲ್ಲಿ ಕಲಾವಿದನೊಬ್ಬ ಮೃದಂಗವನ್ನು ನುಡಿಸುತ್ತಿದ್ದಾನೆ. ಕೆಳಭಾಗದಲ್ಲಿ ಫಸಲನ್ನು ಕೊಯ್ಯುತ್ತಿದಿರುವ ರೈತನ ವಾಸ್ತವ ನೋಟವನ್ನು ಕಾಣಬಹುದಾಗಿದೆ. ಅವನೆದುರಿಗೆ

ಗದ್ದೆ ಕೆಲಸ ಮಾಡುತ್ತಿರುವ ರೈತನು ನೀಲಿ ಉಡುಪು ಧರಿಸಿ ತಲೆಗೆ ಪೇಟ ಕಟ್ಟಿದ್ದಾನೆ. ಅವನ ಶ್ವೇತ ವರ್ಣದ ಎತ್ತುಗಳು ನಿರಾಯಾಸವಾಗಿ ಉಳುಮೆಯಲ್ಲಿ ನಿರತವಾಗಿವೆ. ಇಡೀ ರಕ್ಷಾಪುಟವು ಹಳದಿ ಮಿಶ್ರಿತ ವರ್ಣದಲ್ಲಿದೆ. ಈ ಕೃತಿಯು ಸತ್ಯಶ್ರೀ ಪ್ರಿಂಟರ್ಸ್ ಇವರು ಮುದ್ರಿಸಿರುತ್ತಾರೆ.

**೬.೨.೨೬. ಜಾನಪದ ಕಲೆ : ಅವಲೋಕನ (೨೦೧೦)**

೨೦೧೦ರಲ್ಲಿ ಡಾ. ಅಂಬಳಿಕೆ ಹಿರಿಯಣ್ಣ ಮತ್ತು ಡಾ. ಶಾಲಿನಿ ರಘುನಾಥ ಸಂಪಾದಿಸಿರುವ 'ಜಾನಪದ ಕಲೆ: ಅವಲೋಕನ' ಎಂಬ ಕೃತಿ ಪ್ರಕಟವಾಗಿದ್ದು ಶೀರ್ಷಿಕೆ ಅಕ್ಷರಗಳು ಕ್ಯಾಲಿಗ್ರಾಫಿಕ್ (ಪೆನ್/ಕಟ್ಪ್ ಬ್ರಷ್ ನಿಂದ ಬರೆದ ಲೇಟರ್ಸ್) ಮಾದರಿಯದಾಗಿವೆ ಮತ್ತು ಬಿಳಿ ಬಣ್ಣದಿಂದ ಸಂಪಾದಕರ ಹೆಸರು ಮತ್ತು ಅಕಾಡೆಮಿ ವಿಳಾಸ ಹಾಗೂ ಸಂಕೇತ ಹಳದಿ ವರ್ಣದಿಂದ ಕೂಡಿದೆ. ಮಧ್ಯ ಭಾಗದಲ್ಲಿ ಜನಪದ ಕಲೆಯಾದ ಡೊಳ್ಳು ಕುಣಿತದ ಕಲಾವಿದರ ತಂಡದ ಚಿತ್ರ ಮೂಡಿ ಬಂದಿದೆ. ಅವರು ಡೊಳ್ಳು ಬಾರಿಸುವ ಮೂಲಕ ಆಕರ್ಷಿಸುವ ವಿಶೇಷ ಕುಣಿತ ಮೈನವಿರೇಳಿಸುವ ನೃತ್ಯ–ಸಾಹಸ ಭರಿತ ಪ್ರದರ್ಶನವನ್ನು ಕಾಣಬಹುದು. ಎಡಭಾಗದಲ್ಲಿ ಕೀಲು ಕುದುರೆಗಳ ಪ್ರದರ್ಶನವು ಕೇವಲ ಮುಖಮಾತ್ರವೆ ಕಾಣುವುದು. ಅದು ಶ್ವೇತ ವರ್ಣದ ಕುದುರೆಗಳಿಂದಾಗಿದೆ. ಇಡೀ ಮುಖಪುಟ ಕಪ್ಪು ಹಿನ್ನೆಲೆಯಲ್ಲಿ ಮೂಡಿ ಬಂದಿದೆ. ಹಿನ್ನೆಲೆಯ ಹಿಂಬದಿ ಪುಟದ ಮೇಲ್ಭಾಗದಲ್ಲಿ ಕೋಲಾಟದ ಮಹಿಳಾ ತಂಡದ ಉತ್ಸಾಹ ಹಾಡಿನ ಸ್ಫೂರ್ತಿ ಎಲ್ಲವೂ ಆಕರ್ಷಣೀಯವಾಗಿದೆ. ಹಸಿರು ಸೀರೆ ಕುಪ್ಪಸ ಧರಿಸಿ ಶಿಸ್ತಿನ ಸಿಪಾಯಿಗಳಾಗಿ ದಣಿವಿಲ್ಲದೆ ಹಾಡುವ ಕುಣಿಯುವ ಕೋಲಾಟಕ್ಕೆ ಜೀವಂತಿಕೆ ತುಂಬುವ ಇಲ್ಲಿನ ಯುವಕ ಯುವತಿಯರು ಜನಪದ ಕಲೆಯ ಆಧಾರ ಸ್ತಂಭವಾಗಿದ್ದಾರೆ ಎಂಬುವುದು ಈ ರಕ್ಷಾಪುಟವಿನ್ಯಾಸವು ತಿಳಿಸುತ್ತಲಿದೆ.

**೬.೨.೨೭. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ (೨೦೧೧)**

೨೦೧೧ರಲ್ಲಿ 'ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ' ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವು ಸುನಂದ.ಎಂ ಅವರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ. ಮೇಲ್ಭಾಗದಲ್ಲಿ ಶೀರ್ಷಿಕೆ ಕ್ಯಾಲಿಗ್ರಾಫಿಕ್ ಅಕ್ಷರ ಶೈಲಿ ಮತ್ತು ಹಳದಿ ಬಣ್ಣದಿಂದ ಕೂಡಿದ್ದು ಎಡ ಮತ್ತು ಬಲಕ್ಕೆ ವೃತ್ತಾಕಾರದಲ್ಲಿರುವಂತಹವು ಭ್ರೂಣದ ಕಲ್ಪನೆ ಮೂಡಿಸುತ್ತವೆ. ಎಡ ಮತ್ತು ಬಲಕ್ಕೆ ಪ್ರಗತಿಯ ಚಲನೆಯ ಚಿಹ್ನೆಗಳನ್ನು ಬಳಸಿಕೊಳ್ಳಲಾಗಿದೆ. ಮುಖಪುಟದ ಮಧ್ಯಭಾಗದಲ್ಲಿ ದಟ್ಟವರ್ಣದ/ದಟ್ಟಛಾಯೆಯಿಂದ ರಚನೆಗೊಂಡ ಕೈಯಿಂದ ಭ್ರೂಣ ಹಿಚುಕುತ್ತಿದ್ದಂತೆ ಕಲ್ಪನೆ ಮೂಡಿಸುತ್ತಿದೆ. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ ಅರ್ಥವನ್ನು ಇನ್ನೂ ಬೇರೆ ಸಂಕೇತಗಳ ಮೂಲಕ ಎಂ.ಎಸ್.ಗ್ರಾಫಿಕ್ಸ್ ನವರು ಮಾಡಬಹುದಿತ್ತು. ಈ ಮುಖಪುಟವು ಅಷ್ಟೊಂದು ಸೂಕ್ತವಾಗಿಲ್ಲವೆಂದೇ ತಿಳಿಯಬಹುದು.

**೬.೨..೨೮. ಹತ್ತು ಮಂದ್ಯಾಗ ಹಾಡೇನ (೨೦೧೧)**

೨೦೧೧ರಲ್ಲಿ ಪ್ರಕಟವಾದ ಕೃತಿ 'ಹತ್ತು ಮಂದ್ಯಾಗ ಹಾಡೇನ' ಕೃತಿಯ ಶೀರ್ಷಿಕೆಯಲ್ಲಿ ವರ್ಣ ವೈವಿಧ್ಯತೆ ಎದ್ದು ಕಾಣುತ್ತದೆ. ಶೀರ್ಷಿಕೆಯ ಅಕ್ಷರ ಶೈಲಿ ವಿಶೇಷವಾಗಿ ಅಂಕುಡೊಂಕುವಾಗಿದು ನೋಡುಗರನ್ನು

ತನ್ನತ್ತ ಸೆಳೆಯುವಂತಿದೆ. ಅದರ ಕೆಳಗಿನ ಕೆಂಪುಗೆರೆ ಶೀರ್ಷಿಕೆಯತ್ತ ಓದುಗನನ್ನು ಕರಾರುವಕ್ಕಾಗಿ ಆಕರ್ಷಿಸುತ್ತದೆ. ಮಧ್ಯದಲ್ಲಿ ತಂಬೂರಿ ಕಲಾವಿದ ಹಣೆಗೆ ನಾಮ ಹಾಗೂ ತಲೆಗೆ ಬಿಳಿ ರುಮಾಲು ಧರಿಸಿ ಕೆಂಪು ಬಣ್ಣದ ತಂಬೂರಿ ನುಡಿಸುತ್ತಿದ್ದಾನೆ. ಹಿನ್ನೆಲೆ ಗಾಯಕರಂತೂ ಕಿಕ್ಕಿರಿದ ಪ್ರೇಕ್ಷಕರಂತೆ ಹಾಡುತ್ತಿದ್ದಾರೆ. ಹಿಮ್ಮೇಳನದ ಬಲವೇ ಆತನಿಗೆ ಪ್ರೋತ್ಸಾಹಕರಾಗಿದ್ದು, ಇಡೀ ಆರು ಜನ ಮಹಿಳೆಯರ ತಂಡ ನಾಯಕನಿಗೆ ಪ್ರೋತ್ಸಾಹ ನೀಡುವವರೇ ಆಗಿದ್ದಾರೆ. ಇದೇ ಚಿತ್ರವು ಹಿಂಬದಿಯ ಪುಟದಲ್ಲಿ ಎಡಭಾಗದಲ್ಲಿ ಸಣ್ಣದಾಗಿ ಪ್ರಕಟವಾಗಿದೆ. ಕೆಂಪು ಬಣ್ಣದ ಸಣ್ಣ ಅಡ್ಡಗೆರೆ ಬಿಟ್ಟರೆ ಇಡೀ ಹಿಂಬದಿಯ ಪುಟ ಖಾಲಿ ಇದ್ದು ಆಕಾಶದ ನೀಲಿಯನ್ನು ಹೊಂದಿದೆ. ಕೆಳಗಡೆ ಅಕಾಡೆಮಿಯ ವಿಳಾಸ ಹಳದಿ, ಬಿಳಿವರ್ಣಗಳಿಂದ ಕೂಡಿದೆ.ಆಕಾಶದ ಎತ್ತರಕ್ಕೆ ಬೆಳೆದು ನಿಂತ ಜಾನಪದ ಕಲೆಗಳ ಮಹತ್ವವನ್ನು ಸಂಕೇತಿಸುವಂತಿದೆ. ಈ ಕೃತಿಯ ಮುಖಪುಟವಿನ್ಯಾಸ ಕಲಾವಿದ ಚಂದ್ರಕಾಂತ ಅವರು ರಚಿಸಿದ್ದಾರೆ. ಇಲ್ಲಿನ ವರ್ಣ ಸಂಯೋಜನೆ ಅದರ ಛಾಯೆ ಎಲ್ಲವು ಆಧುನಿಕ/ಸಮಕಾಲೀನ ಕಲಾ ಪದ್ಧತಿಯಿಂದ ಒಳ್ಳಗೊಂಡಿವೆ ಎಂದು ತಿಳಿಯಬಹುದು.

**೬.೨.೨೯. ಜಾಗತೀಕರಣ ಮತ್ತು ಜಾನಪದ (೨೦೧೧)**

೨೦೧೧ರಲ್ಲಿ ಡಾ.ಜಿ.ಆರ್.ತಿಪ್ಪೇಸ್ವಾಮಿ ಬರೆದ 'ಜಾಗತೀಕರಣ ಮತ್ತು ಜಾನಪದ' ಎಂಬ ಶೀರ್ಷಿಕೆಯ ಕೃತಿಗೆ ಕೃಷ್ಣ ರಾಯಚೂರು ಅವರಿಂದ ಮುಖಪುಟ ವಿನ್ಯಾಸಗೊಳಿಸಿ ಪ್ರಕಟಿಸಲಾಗಿದೆ. ಇಡೀ ಮುಖಪುಟವು ಒಂದೇ ರೀತಿಯ ಕಾಫಿ ಬಣ್ಣದಿಂದ ಕೂಡಿದೆ. ಕೆಳಗಡೆ ಹೆಚ್ಚು ಕಪ್ಪು ಬಣ್ಣವು ಅಡ್ಡಪಟ್ಟಿಯಾಗಿಯೂ ಲಂಬವಾಗಿಯೂ ವ್ಯಾಪಿಸಿದೆ, ನೀಲಿ ಹಳದಿ ಹಿನ್ನೆಲೆಯೊಂದಿಗೆ ಪ್ರಕಟವಾಗಿರುವ ಈ ಕೃತಿಗೆ ಜಾಗತೀಕರಣವನ್ನು ಮನೋಬಲದಿಂದ ಬಿಂಬಿಸಬೇಕಾಗಿದೆ. ಮೇಲ್ಭಾಗದಲ್ಲಿ ಅಕಾಡೆಮಿ ಲಾಂಛವಿದೆ. ಹಾರುವ ಚಿಟ್ಟೆಯಂತೆ ಕಂಗೊಳಿಸುತ್ತಿದೆ. ಮನೆಯ ಮುಖದ್ವಾರಕ್ಕೆ ಹಾಗೂ ಕೆಳಭಾಗದಲ್ಲಿ ಮಾಡಿದ ಕೆತ್ತನೆ ಮನಮೋಹಕವಾಗಿದೆ.

**೬.೨.೩೦. ಅಂಚೆ ಜಾನಪದ (೨೦೧೨)**

೨೦೧೨ರಲ್ಲಿ ಜಾನಪದ ಅಕಾಡೆಮಿಯಿಂದ ಪ್ರಕಟವಾದ ಎಂ.ಆರ್.ಪ್ರಭಾಕರ ಸಂಪಾದಿಸಿರುವ ಕೃತಿ 'ಅಂಚೆ ಜಾನಪದ' ಶೀರ್ಷಿಕೆಯಲ್ಲಿ ಪ್ರಕಟವಾಗಿದೆ. ಶೀರ್ಷಿಕೆಯ ಜೊತೆಗಿರುವ ಹಾರುವ ಪಕ್ಷಿ ಹಿಂದಿನ ಕಾಲದಲ್ಲಿ ಅಂಚೆ ರವಾನಿಸುತ್ತಿದ್ದ ಸಾಕಿದ ಪಾರಿವಾಳ ಅಥವಾ ಅಂಚೆ ಒಯ್ಯುವ ಪಕ್ಷಿ ತೆಳು ವರ್ಣದಿಂದ ಕೂಡಿದೆ. ಇಡೀ ಮುಖಪುಟ ಒಂದು ಅಂಚೆ ಚೀಟಿಯನ್ನು ಹೋಲುತ್ತದೆ. ಶೀರ್ಷಿಕೆ ಹಾಗೂ ಅಕಾಡೆಮಿ ವಿಳಾಸ ಕಪ್ಪು ವರ್ಣದಲ್ಲಿ ಮೂಡಿ ಬಂದಿದೆ. ಮಧ್ಯದಲ್ಲಿರುವ ಅಂಚೆ ಚೀಟಿಗಳು ವಿವಿಧ ಬಣ್ಣಗಳಿಂದ ಕೂಡಿವೆ. ಲೇಖಕರೆ ಈ ಮುಖಪುಟ ವಿನ್ಯಾಸಗೊಳಿಸಿದ್ದಾರೆಂಬುವುದು ಇಲ್ಲಿ ಗಮನಿಸಬೇಕಾದ ಅಂಶ.

**೬.೨.೩೧. ಜಾನಪದ ತಜ್ಞ ಮತಿಘಟ್ಟ ಕೃಷ್ಣಮೂರ್ತಿ (೨೦೧೨)**

೨೦೧೨ ಸಾಲಿನಲ್ಲಿ ಪ್ರಕಟವಾದ 'ಜಾನಪದ ತಜ್ಞ ಮತಿಘಟ್ಟ ಕೃಷ್ಣಮೂರ್ತಿ' ಎನ್ನುವ ಕೃತಿ ರಮಾದೇವಿ ಎಂ.ಎ. ಅವರು ಬರೆದುದು, ಮೋಹನ್ ಗ್ರಾಫಿಕ್ಸ್ ಇವರಿಂದ ಮುದ್ರಿಸಲಾಗಿದೆ. ವ್ಯಕ್ತಿ

ಚಿತ್ರಣವನ್ನು ತಿಳಿಸಿಕೊಡುವ ಪ್ರಯತ್ನವಾಗಿ ಇಲ್ಲಿ ಜಾನಪದ ಭೀಷ್ಮರಾದ ಮತಿಘಟ್ಟ ಕೃಷ್ಣಮೂರ್ತಿಯವರ ವ್ಯಕ್ತಿತ್ವಕ್ಕೆ ತಕ್ಕ ಮುಖಭಾವ ಅವರ ಮಂದಸ್ಮಿತ ಮುಗುಳ್ನಗೆಯ ನೋಟ ಅವರ ವಯೋಜ್ಞಾನಕ್ಕೆ ತಕ್ಕಂತೆ ಇದೆ. ಮುಖಪುಟವು ಹಸಿರು ಬಣ್ಣದಿಂದ ಕೂಡಿದ್ದು ವಿದ್ವಾಂಸರ ಭಾವಚಿತ್ರ ವರ್ಣಛಾಯ ಚಿತ್ರ ದಿಂದ ಕೂಡಿದೆ. ಆ ಭಾವಚಿತ್ರಕ್ಕೆ ಫೋಟೊ ಫ್ರೇಂ ತರಹ ಅಂಚುರೇಖೆ ಬರೆದಿದ್ದು ಸುಂದರವಾಗಿ ಮೂಡಿಬಂದಿದೆ. ಅವರ ಇಳಿವಯಸ್ಸಿಗೆ ಬಿಳಿ ತಲೆಗೂದಲು ಮೀಸೆ ಖಾದಿಜುಬ್ಬ ಇತ್ಯಾದಿ ಬಿಳಿಬಣ್ಣದಿಂದ ಕೂಡಿದೆ. ಕೆಳಗಡೆ ಅಕಾಡೆಮಿ ವಿಳಾಸ ಹಳದಿ ಬಣ್ಣದಿಂದ ಮತ್ತು ಲಾಂಛನ ಕೆಂಪು ವರ್ಣಗಳಿಂದ ಕೂಡಿವೆ. ದಣಿವರಿಯದ ಒಬ್ಬ ವಿದ್ವಾಂಸ ಕೃಷ್ಣಮೂರ್ತಿ ಎಂದು ಒಪ್ಪುವಂತೆ ಅವರ ಗಾಂಭೀರ್ಯ ಮುಖಭಾವ ವ್ಯಕ್ತವಾಗುತ್ತದೆ.

**೬.೨.೩೨. ಲೋಕ ಜಾನಪದ (೨೦೧೪)**

೨೦೧೪ರಲ್ಲಿ ಪ್ರಕಟಗೊಂಡ ಪಿ.ಚ್ಚಳ್ಳಿ ಶ್ರೀನಿವಾಸ್ ಸಂಪಾದಿಸಿದ ತ್ರೈಮಾಸಿಕ ಪತ್ರಿಕೆ 'ಲೋಕ ಜಾನಪದ' ಶೀರ್ಷಿಕೆಯಲ್ಲಿ ಪ್ರಕಟವಾಗುತ್ತಿದೆ. ಮುಖಪುಟದಲ್ಲಿ ತ್ರಿಶೂಲ ಧಾರಿಯಾಗಿ ನರ್ತಿಸುತ್ತಿರುವ ಆದಿಶಕ್ತಿ ರೂಪದ ಸ್ತ್ರೀ ವಿಗ್ರಹದ ಪ್ರತಿಮೆ ಉಬ್ಬು ಶಿಲ್ಪದಂತೆ ಕಂಡು ಬರುತ್ತದೆ. ಹಿನ್ನೆಲೆಯಲ್ಲಿ ವಿವಿಧ ಬಣ್ಣಗಳು ಸಮಾಗಮವಾಗಿವೆ. ಮೇಲ್ಭಾಗದ ಎಡಕ್ಕೆ ಅಕಾಡೆಮಿ ಸಿಂಬಲ್ ನೀಲಿ ವರ್ಣದಲ್ಲಿ ಬಲಕ್ಕೆ ಶೀರ್ಷಿಕೆ ಅಲಂಕಾರಿಕೆ ಅಕ್ಷರಗಳಿಂದ ಹಾಗೂ ಹಳದಿ ವರ್ಣದಲ್ಲಿ ಪ್ರಕಟವಾಗಿದೆ. ಕೆಳಭಾಗದಲ್ಲಿ ನವಿಲುಗರಿಯಂತೆ ದೀಪಗಳ ಸಾಲು ಅಲಂಕಾರಗೊಂಡಿರುವುದು, ಹಿಂಬದಿಯ ಪುಟದಲ್ಲಿ ಕಲಾವಿದರು ತಮ್ಮ ತಮ್ಮ ಪಾತ್ರಗಳಿಗೆ ತಕ್ಕಂತೆ ಬಣ್ಣಗಳ ವಿನ್ಯಾಸದೊಂದಿಗೆ ತಾವೇ ತಮ್ಮ ಮುಖವರ್ಣಿಕೆ ತಯಾರಿಸಿ ಕೊಳ್ಳುವ ಬಣ್ಣಗಳ ಲೇಪನದೊಂದಿಗೆ ಆಯಾ ಪಾತ್ರಗಳಿಗೆ ಕಳೆ ತುಂಬುತ್ತಿರುವ ದೃಶ್ಯ ಹಿಂಬದಿಯ ಪುಟ ಎರಡು ಭಾಗಗಳಲ್ಲಿದೆ. ಮೇಲ್ಗಡೆಯ ಕಲಾವಿದ ಬಲಗೈ ಬೆರಳುಗಳ ಸಹಾಯದಿಂದ ಅಲಂಕರಿಸಿಕೊಳ್ಳುತ್ತಿದ್ದಾನೆ. ಕೆಳಗಡೆಯ ಚಿತ್ರದಲ್ಲಿ ಎಡಗೈ ಬೆರಳುಗಳಿಂದ ಬಲಗೈಯಲ್ಲಿ ಕನ್ನಡಿ ನೋಡಿ ಅಲಂಕರಿಸಿಕೊಳ್ಳುತ್ತಿದ್ದಾನೆ. ಲೋಕಜಾನಪದವು ದೈವಿಶಕ್ತಿಯ ಪ್ರೇರಣೆಯಿಂದ ಕಲಾವಿದರಿಗೆ ಬಲ ತುಂಬುವುದನ್ನು ಇಲ್ಲಿ ಚಿತ್ರಿಸಲಾಗಿದೆ. ಒಟ್ಟಾರೆ ಈ ಮುಖಪುಟವು ಸುಂದರವಾಗಿ ಮೂಡಿಬಂದಿದೆ.

**೬.೨.೩೩. ಜನಪದ ಕಲಾವಿದರು (೨೦೧೦)**

ಬೆಳ್ಳಿ ಮಾಲಿಕೆಯಡಿಯಲ್ಲಿ ಪ್ರಕಟವಾದ ಜಿಲ್ಲಾ ಮಟ್ಟದ ಜನಪದ ಕಲಾವಿದರನ್ನು ಪರಿಚಯಿಸುವ ಕೃತಿಗಳ ಸರಣಿಯನ್ನು ಇಲ್ಲಿ ವೀಕ್ಷಿಸಬಹುದಾಗಿದೆ. ೨೦೦೮ರಲ್ಲಿ 'ದಾವಣಗೆರೆ ಜಿಲ್ಲೆಯ ಜನಪದ ಕಲಾವಿದರು', ೨೦೧೦ರಲ್ಲಿ 'ಗದಗ ಜಿಲ್ಲೆಯ ಜನಪದ ಕಲಾವಿದರು', ೨೦೧೦ರಲ್ಲಿ 'ಮೈಸೂರು ಜಿಲ್ಲೆಯ ಜನಪದ ಕಲಾವಿದರು', ೨೦೧೦ರಲ್ಲಿ 'ಹಾಸನ ಜಿಲ್ಲೆಯ ಜನಪದ ಕಲಾವಿದರು', ೨೦೧೨ರಲ್ಲಿ 'ಧಾರವಾಡ ಜಿಲ್ಲೆಯ ಜನಪಟ ಕಲಾವಿದರು', ಒಟ್ಟು ಐದು ಜಿಲ್ಲೆಗಳ ಜನಪದ ಕಲಾವಿದರನ್ನು ಪರಿಚಯಿಸುವಲ್ಲಿ ಕ್ರಮವಾಗಿ ಡಾ. ಚಿಕ್ಕಣ್ಣ ಯಣ್ಣೆಕಟ್ಟೆ, ಪ್ರೊ. ಸಿದ್ದಣ್ಣ ಎಸ್. ಜಕವಾಳ, ಮಹೇಶ ಎಂ, ಡಾ. ಹಂಪನಹಳ್ಳಿ

ತಿಮ್ಮೇಗೌಡ, ಡಾ. ಶಾಲಿನಿ ರಘುನಾಥ, ಮೊದಲಾದ ಲೇಖಕರ ಸಂಪಾದಕರ ಪ್ರಯತ್ನಗಳು ಆಯಾ ಜಿಲ್ಲಾ ಕಲಾವಿದರನ್ನು ಪರಿಚಯಿಸುವ ಪ್ರಯತ್ನ ಇಲ್ಲಿದೆ.

ಇಲ್ಲಿನ ಮುಖಪುಟಗಳಲ್ಲಿ ಏಕರೂಪತೆಯಿದ್ದು ಅಲ್ಪ ಸ್ವಲ್ಪ ಬದಲಾವಣೆ ಕಂಡು ಬರುತ್ತದೆ. ಡೊಳ್ಳು ಕುಣಿತ, ಕೋಲು ಕುಣಿತ, ಯಕ್ಷಗಾನ ಕುಣಿತ ಕಲಾವಿದರ ಚಿತ್ರವು ತುಂಬ ಉತ್ತಮವಾದ ರೇಖಾಚಿತ್ರಗಳಾಗಿವೆ. ಧಾರವಾಡ ಜಿಲ್ಲೆಯ ಪುಸ್ತಕದ ಮುಖಪುಟದಲ್ಲಿನ ಚಿತ್ರಗಳನ್ನು ಹೊರತು ಪಡಿಸಿದರೆ ಉಳಿದ ನಾಲ್ಕು ಗ್ರಂಥದ ಮುಖಪುಟದಲ್ಲಿನ ಸನ್ನಿವೇಶ, ರೇಖಾಚಿತ್ರ, ಸಂಯೋಜನೆ, ಸ್ಥಳ ಅವಕಾಶ ಎಲ್ಲವು ಒಂದೇ ತರದ/ಮಾದರಿಯದಾಗಿವೆ. ಜಿಲ್ಲೆ ಹೆಸರು ಸಣ್ಣದಾಗಿಯೂ ಜನಪದ ಕಲಾವಿದರು ಎಂಬ ಶೀರ್ಷಿಕೆ ದೊಡ್ಡದಾಗಿಯೂ ಪ್ರಕಟವಾಗಿದ್ದು ಬಿಳಿಯ, ಹಳದಿ ವರ್ಣಗಳಲ್ಲಿ ಮಿಂಚುತ್ತಿದೆ. ಶೀರ್ಷಿಕೆಯ ಅಕ್ಷರ ಶೈಲಿ ಸಹ ಏಕರೂಪದ್ದಾಗಿದೆ. ಹಿಂಬದಿಯ ಪುಟಗಳಲ್ಲಿ ಬೆನ್ನುಡಿ (ಬ್ಲರಬ್)ಬರಹವನ್ನು ಕೆರೆಮನೆ ಶಂಭು ಹೆಗಡೆ ಅಕಾಡೆಮಿ ರಿಜಿಸ್ಟ್ರಾರ್ ಬರಹಗಳು ಬಿಳಿ-ಹಳದಿ ವರ್ಣಗಳಲ್ಲಿ ಪ್ರಕಟಗೊಂಡಿವೆ. ಉಳಿದಂತೆ ಚಿತ್ರಗಳು ಗ್ರಾಫಿಕ್ಸ್ ಶೈಲಿಯಲ್ಲಿ ಮೂಡಿ ಬಂದಿವೆ. ಬೆನ್ನುಡಿ ಒಂದೇ ಕಡೆ ವಾಕ್ಯ ಸರಣಿಯಲ್ಲಿ ಬಹಳ ಸರಳವಾಗಿ, ಮಾಧ್ಯಮ ಗಾತ್ರದಲ್ಲಿ ಪ್ರಕಟವಾಗಿವೆ. ಒಟ್ಟಿನಲ್ಲಿ ಮುಖಪುಟ ಕಲಾವಿದರು ವರ್ಣ ವೈವಿಧ್ಯತೆಯಿಂದ ಆಕರ್ಷಕವಾಗಿ ಮುದ್ರಿಸಲು ನೆರವಾಗಿದ್ದಾರೆ.

ಒಟ್ಟಾರೆ ಇಲ್ಲಿನ ವಿಶ್ಲೇಷಣೆಗೆ ಒಳಪಡಿಸಿಕೊಂಡ ಪ್ರಾತಿನಿಧಿಕ ಗ್ರಂಥಗಳ ಮುಖಪುಟವಿನ್ಯಾಸದಿಂದ ಬೆಳಕಿಗೆ ಬಂದ ಅಂಶಗಳು. ಎಪ್ಪತ್ತರ ದಶಕದಲ್ಲಿ ರಕ್ಷಾಪುಟವಿನ್ಯಾಸ ಪದ್ಧತಿಯಲ್ಲಿ ಬದಲಾವಣೆಗಳನ್ನು ಕಾಣಬಹುದು. ಸಂಯೋಜನಾ ವೈಖರಿ,ಶೀರ್ಷಿಕೆ ಅಕ್ಷರಗಳಲ್ಲಿ ಹೂಸತನ, ವರ್ಣಲೇಪನ ವಿಧಾನ, ಹೊಸತನಕ್ಕೆ ತೆರೆದುಕೊಳ್ಳುವ ತವಕ ಸ್ವಲ್ಪ ಪ್ರಮಾಣದಲ್ಲಿ ಆಧುನಿಕತೆ ಕಡೆಗೆ ಹೆಜ್ಜೆ ಮೂಡಲಾರಂಭಿಸಿರುವುದು ಗುರ್ತಿಸಿಕೊಳ್ಳಲಾಗಿದೆ. ಹಾಗೂ ಈ ಅಧ್ಯಾಯದಲ್ಲಿ ಚಿತ್ರಕಲೆಯ ಪ್ರಕಾರಗಳಾದ ರೇಖಾಚಿತ್ರ, ನಿಸರ್ಗಚಿತ್ರ, ನೈಜಚಿತ್ರಕಲೆ, ನವ್ಯ ಮತ್ತು ಅಮೂರ್ತಕಲೆ, ಭಾವಚಿತ್ರ, ಛಾಯಾಚಿತ್ರ, ಚಿನ್ಹೆ ಮತ್ತು ಸಂಕೇತಗಳು ರಕ್ಷಾಪುಟ ಚಿತ್ರಕಲೆಯಲ್ಲಿ ಬಳಸಿಕೊಳ್ಳಲಾಗಿದೆ.

ಮೂವತ್ತೈದು ಗ್ರಂಥಗಳಿಗೆ ಕಲಾವಿದರಿಂದ ಮುಖಪುಟ ವಿನ್ಯಾಸ ಮಾಡಿಸಿರುವುದು ಕಾಣುತ್ತಿವೆ. ಉಳಿದ ಗ್ರಂಥಗಳ ಮುಖಪುಟವಿನ್ಯಾಸ ಮಾಡಿದ ಕಲಾವಿದರ ಹೆಸರು ಅಥವಾ ಬಳಸಿಕೊಳ್ಳಲಾದ ಚಿತ್ರ ಯಾವ ಕಲಾವಿದರದು? ಎಂಬುವುದು ಪುಸ್ತಕದಲ್ಲಿ ಎಲ್ಲಿಯೂ ನಮೂದಿಸಿಲ್ಲ. ಇಲ್ಲಿಯೂ ಸಹ ಶಿಲ್ಪಕಲಾ ಅಧ್ಯಾಯದಲ್ಲಿನಂತೆ ಕಲಾವಿದರ ಕೆಲಸಕಾರ್ಯ ಗ್ರಂಥ ಮುದ್ರಣದಂಥ ಕೆಲಸಕಾರ್ಯಗಳಲ್ಲಿ ಗಂಭೀರವಾಗಿ ಪರಿಗಣಿಸದೆ (೩೯/೭೪= ೫೨%) ನಿರ್ಲಕ್ಷಿಸಲಾಗಿದ್ದು ಬೆಳಕಿಗೆ ಬಂದ ಅಂಶ.

❑❑❑

ಎಪ್ಪತ್ತರ ದಶಕದ ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟಗಳು




೧೯೭೧




೧೯೭೯

ಎಂಬತ್ತರ ದಶಕದ ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟಗಳು




೧೯೮೩




೧೯೮೩

ತೊಂಬತ್ತರ ದಶಕದ ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟಗಳು




೧೯೯೩




೧೯೯೪




೧೯೯೪




೧೯೯೪




೧೯೯೪




೧೯೯೪




೧೯೯೫




೧೯೯೫

ಏಕಮಾದರಿಯ ರಕ್ಷಾಪುಟಗಳು




೧೯೯೩




೧೯೯೫




೧೯೯೬

## ಜಾಂಬವತಿ ಕಲ್ಯಾಣ





೧೯೯೩

## ಕಥನ ಕವನಗಳು





೧೯೯೫

## ದೇವುಡು

(ದೇವುಡು ನರಸಿಂಹ ಶಾಸ್ತ್ರಿ)



ಡಾ. ಕುಮಾರ ಚಲ್ಯ



೧೯೯೭

ಸರ್ ಜೇಮ್ಸ್

ಜಾರ್ಜ್ ಫ್ರೇಜರ್



ಡಾ. ವಾಮನ ನಂದಾವರ



೧೯೯೭




೧೯೯೮




೧೯೯೮




೧೯೯೯




೨೦೦೦

ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ರಕ್ಷಾಪುಟಗಳು




೨೦೦೦



೨೦೦೦




೨೦೦೧



೨೦೦೧



೨೦೦೮




೨೦೧೦




೨೦೧೦




೨೦೧೦

ಸರಣಿ ಮಾಲಿಕೆಯ ರಕ್ಷಾಪುಟಗಳು




೨೦೦೮




೨೦೧೦




೨೦೧೦




೨೦೧೦




೨೦೧೨




೨೦೧೧



೨೦೧೧




೨೦೧೧




೨೦೧೨

ಅಧ್ಯಾಯ : ಏಳು

# ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

- ಸ್ವಾತಂತ್ರ್ಯೋತ್ತರ ಕನ್ನಡ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ
- ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಅಧ್ಯಾಯ : ಏಳು

# ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ನೃತ್ಯ ಮತ್ತು ಸಂಗೀತ ಗ್ರಂಥಗಳು ಹತ್ತು ಹಲವು ಚಿತ್ರಕಲೆಯ ವಿವಿಧ ಪ್ರಕಾರಗಳನ್ನು ತನ್ನ ಮುಖಪುಟಕ್ಕೆ ಬಳಸಿಕೊಂಡಿದೆ. ಈ ಗ್ರಂಥಗಳ ಮುಖಪುಟದಲ್ಲಿ ಚಿತ್ರಕಲೆ ಬಳಸಿಕೊಂಡ ಉದ್ದೇಶ, ಅರ್ಥ, ಮಹತ್ವ ಮತ್ತು ಅದರ ಪರಿಣಾಮಗಳು ಹಾಗೂ ಅದೊಂದು ಕಲೆ ಹಿನ್ನೆಲೆಯಲ್ಲಿ ಆಯ್ಕೆ ಮಾಡಿಕೊಂಡು ಕಲಾ ಶೈಲಿ ವರ್ಣಗಾರಿಕೆ, ಸಂಯೋಜನೆ, ಕಲಾತ್ಮಕ ಮೌಲ್ಯ ಮತ್ತು ವಿನ್ಯಾಸದ ಮೂಲತತ್ವವನ್ನು ತಾಂತ್ರಿಕವಾಗಿ ಅದರ ಸಾಧಕ-ಬಾಧಕ ಇತ್ಯಾದಿ ಅಂಶಗಳನ್ನು ವಿಮರ್ಶೆಗೆ ಒಳಪಡಿಸಿಕೊಂಡು ಇಲ್ಲಿ ನೋಡಲಾಗುವುದು.

### ೭.೧ ಸ್ವಾತಂತ್ರ್ಯೋತ್ತರ ಕನ್ನಡ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

### ೭.೧.೧. ದಶರೂಪಕ (೧೯೫೮)

ಈ ಗ್ರಂಥದ ಮುಖಪುಟ ವರ್ಣಗಳು ಹಳದಿ, ಕಪ್ಪು, ಬಿಳಿ, ಕಂದು ಬಣ್ಣಗಳನ್ನು ಬಳಸಿ ಸೊಗಸಾಗಿ ಮುದ್ರಿಸಿದ್ದಾರೆ. ಶೀರ್ಷಿಕೆ, ಚಿತ್ರದ ಸುತ್ತ ಬಳ್ಳಿ, ಹೂವು, ಎಲೆಗಳ ಚಿತ್ರಣ ಮೂಡಿಸಿದ್ದಾರೆ. ದಶರೂಪಕ ಎಂದು ಅಕ್ಷರಗಳನ್ನು ದೊಡ್ಡದಾಗಿ ನಮೂದಿಸಲಾಗಿದೆ. ಇದರ ಕೆಳಗೆ ದೊಡ್ಡದಾಗಿ ಒಂದು ಕಣ್ಣಿನ ಚಿತ್ರವಿದ್ದು, ಅದರ ಕೆಳಭಾಗದಲ್ಲಿ ನೃತ್ಯ ಮಾಡುತ್ತಿರುವ ಏಳು ಪಾತ್ರಗಳ ನಿರ್ವಹಣೆಯ ಪುರುಷ-ಸ್ತ್ರೀಯರ ಚಿತ್ರಣವಿದೆ. 'ಇಲ್ಲಿ ಕಲಾವಿದ ರಚಿಸಿರುವ ನೃತ್ಯ ಮಾಡುತ್ತಿರುವ ರೇಖಾ ಚಿತ್ರಗಳಲ್ಲಿ ಅಂಗರಚನಾ ಶಾಸ್ತ್ರದ ನಿಯಮ ಎದ್ದು ಕಾಣುವಂತಿದೆ. ಮತ್ತು ಮುಖಗಳಲ್ಲಿ ಭಾವನೆಗಳು ಸ್ಪಷ್ಟವಾಗಿ ಗೋಚರಿಸುತ್ತಲಿವೆ. ರೇಖೆಗಳಲ್ಲಿ ಲಯ ಬದ್ಧತೆ ಇದ್ದು, ನೋಡುಗನ ಕಣ್ಣಿನ ಚಲನೆಯು ಈ ರಕ್ಷಾಪುಟ ವಿನ್ಯಾಸದಲ್ಲಿ ಒಂದು

ಬದಿಯಿಂದ ಇನ್ನೊಂದು ಬದಿಗೆ ಚಲಿಸುತ್ತಲಿದೆ. ಸೂಕ್ಷ್ಮವಾಗಿ ಗ್ರಹಿಸಿದಾಗ ಎಡಬದಿಯ ನೃತ್ಯ ಜೋಡಿಯ ಚಿತ್ರಗಳೆ ಬಲಭಾಗಕ್ಕೆ ಪ್ರತಿಬಿಬಿಸಲಾಗಿದೆ.'[೧] ಒಟ್ಟಿನಲ್ಲಿ ಅಳತೆ, ಆಕಾರ, ಬಣ್ಣ ಇವುಗಳೊಂದಿಗೆ ಈ ರಕ್ಷಾಪುಟ ಚಿತ್ರಕ್ಕೆ ಶಕ್ತಿಯುತವಾದ ಜೀವಕಳೆಯನ್ನು ಕಲಾವಿದ ನೀಡಿದ್ದಾನೆ. ಆದರೂ ಈ ಗ್ರಂಥದ ಮುಖಪುಟ ವಿನ್ಯಾಸದಲ್ಲಿ ಸ್ವಲ್ಪ ಬದಲಾವಣೆ ಇರಬೇಕಿತ್ತು. ಹೆಸರಿಗೂ ಮತ್ತು ಚಿತ್ರಕ್ಕೂ ಒಂದಕ್ಕೊಂದು ಸಂಬಂಧ ಇಲ್ಲದಂತೆ ಮುಖಪುಟ ಮುದ್ರಿಸಲಾಗಿದೆ. ಗ್ರಂಥದ ಶೀರ್ಷಿಕೆ 'ದಶರೂಪಕ' ಎಂದಿದ್ದು, ಇಲ್ಲಿ ಹತ್ತು ಪಾತ್ರಗಳ ಚಿತ್ರಣ ವಿರಬೇಕಿತ್ತು. ಒಂದು ಕಣ್ಣಿನ ಚಿತ್ರಣ ಸಂಬಂಧವಿಲ್ಲದಂತಿದೆ. ಈ ಗ್ರಂಥದ ಮುಖಪುಟದಲ್ಲಿ ಶೀರ್ಷಿಕೆಯ ಅರ್ಥವಂತಿಕೆ ಕಾಯ್ದುಕೊಳ್ಳಬೇಕಿತ್ತು.

### ೭.೨ ಅರವತ್ತರ ದಶಕದಲ್ಲಿನ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

#### ೭.೨.೧. ಕರ್ಣಾಟಕ ಸಂಗೀತ ರತ್ನಗಳು (೧೯೬೦)

ಇದರ ಮುಖಪುಟ ವರ್ಣಗಳು ತೆಳು ನೀಲಿ, ಕಪ್ಪು, ಬಿಳಿ ಬಣ್ಣಗಳಿಂದ ಕೂಡಿದೆ. ಮೇಲ್ಭಾಗದ ಬಲಭಾಗಕ್ಕೆ ಗ್ರಂಥದ ಹೆಸರು, ಎಡಭಾಗಕ್ಕೆ ಕಾವ್ಯಾಲಯದ ಚಿಹ್ನೆ, ಮಧ್ಯಭಾಗದ ಎಡಕ್ಕೆ ದೊಡ್ಡದಾದ ಸ್ತ್ರೀ ವೀಣೆಯನ್ನು ಕುಳಿತು ನುಡಿಸುತ್ತಿರುವ ಚಿತ್ರವಿದೆ. ಇಲ್ಲಿನ 'ರೇಖಾಚಿತ್ರದಲ್ಲಿ ಸಾಮರಸ್ಯವನ್ನು ಸ್ಪಷ್ಟವಾಗಿ ಹಾಗೂ ಅಂಗರಚನಾ ಭಂಗಿ ಮತ್ತು ಮುಖಭಾವ ತುಂಬಾ ಫಲಪ್ರದವಾಗಿ ನೆಮ್ಮದಿಯ ಭಾವವನ್ನುಂಟು ಮಾಡುತ್ತಲಿದೆ. ಕುಳಿತು ವೀಣೆಯನ್ನು ನುಡಿಸುತ್ತಿರುವ ಚಿತ್ರವು ಉದ್ದ ಮತ್ತು ಅಗಲ ವೀಣೆಯ ಅಳತೆ, ತೂಕ ಇವುಗಳೆಲ್ಲವೂ ಪ್ರಮಾಣ ಬದ್ಧವಾಗಿದೆ ಎಂದು ಈ ರಚನೆಯಿಂದ ತಿಳಿಯಬಹುದು.'[೨] ಬಲಭಾಗದಲ್ಲಿ ಲೇಖಕರ ಹೆಸರನ್ನು ಮುದ್ರಿಸಲಾಗಿದೆ. ಕೆಳಭಾಗದ ಬಲಬದಿಯಲ್ಲಿ ಸಂಗೀತ ಸಾಧಕನ ಪುರುಷ ಪಾತ್ರಧಾರಿಯ ಚಿತ್ರಣವಿದೆ.ಎಡಕ್ಕೆ ಮುದ್ರಣದ ಚಿತ್ರವಿದೆ. ಈ ಗ್ರಂಥದಲ್ಲಿನ ಮುಖಪುಟ ವಿನ್ಯಾಸ ತುಂಬಾ ಸೊಗಸಾಗಿ ಮೂಡಿಬಂದಿದೆ. ಪುಸ್ತಕದ ಒಳಗಿರುವ ವಿಷಯ ಸಂಗೀತ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ ಮಹಾನ್ ಸಂಗೀತ ರತ್ನಗಳು ಎಂಬ ಬಿರುದು ಪಡೆದ ವ್ಯಕ್ತಿಗಳ ಚಿತ್ರಣವನ್ನು ಅರ್ಥೈಸಲು ಮುಖಪುಟದಲ್ಲಿ ಸುಂದರವಾಗಿ ಒಂದಕ್ಕೊಂದು ಅರ್ಥ ಕಲ್ಪಿಸುವಂತೆ ಮುದ್ರಿಸಲಾಗಿದೆ.

#### ೭.೨.೨. ಕನಕದಾಸ ಕೀರ್ತನ ಕರಾವಳಿ (೧೯೬೨)

ಈ ಮುಖಪುಟವು ಕೇಸರಿ, ತೆಳುನೀಲಿ, ನೀಲಿ ಕಪ್ಪು ವರ್ಣಗಳಿಂದ ಕೂಡಿದೆ. ಮೇಲ್ಭಾಗದಲ್ಲಿ ಪುಸ್ತಕದ ಶೀರ್ಷಿಕೆಯನ್ನು ಮಧ್ಯ ಪ್ರಮಾಣದ ಅಕ್ಷರದಲ್ಲಿ ನಮೂದಿಸಿದೆ. ಶೀರ್ಷಿಕೆಯ ಒಳಭಾಗದ ಮಧ್ಯದಲ್ಲಿ ಬರುವಂತೆ ವೀಣೆಯ ಕೆಳಭಾಗದಲ್ಲಿ ಪ್ರಕಾಶಕರ ಹೆಸರನ್ನು ಮುದ್ರಿಸಲಾಗಿದೆ. ಈ ಮುಖಪುಟವು ತುಂಬಾ ಸರಳವಾಗಿದೆ. ಸ್ಥಳವನ್ನು ಇನ್ನು ಉಪಯೋಗಿಸಿಕೊಳ್ಳಬಹುದಿತ್ತು. ಕನಕದಾಸರ ಚಿತ್ರವನ್ನು ಮುದ್ರಿಸಬಹುದಿತ್ತು. ಆದರೂ ಈ ಮುಖಪುಟಚಿತ್ರ 'ಸಮತೋಲನವಾದ ನಿಯಮ'[೩]ವನ್ನು ಹೊಂದಿದೆ.

---

೦೧. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩-೧೪

೦೨. ಸಂದರ್ಶನ: ಕೆ. ಕೆ. ಮಕಾಳಿ (ಮುಖಪುಟ ಕಲಾವಿದರು), ಕ.ವಿ.ವಿ., ಹಂಪಿ. ದಿ:೨೦೧೫

೦೩. Prof. S. K. Luthra : Applied Art Handbook, P-22

ಮುಖಪುಟ ಮಧ್ಯದ ಎಡ, ಬಲ ಭಾಗದಲ್ಲಿ ಎಲ್ಲವು ಎದ್ದು ಕಾಣುವಂತಿದೆ. ವಿಷಯದ ಮುಖ್ಯಾಂಶವನ್ನು ಮಧ್ಯಭಾಗದಲ್ಲಿ ಸ್ಪಷ್ಟವಾಗಿ ಸಾಮಾನ್ಯ ಆಕರ್ಷಣೆಯೊಂದಿಗೆ ನೋಡುಗರನ್ನು ತನ್ನಡೆಗೆ ಸೆಳೆಯುತ್ತಲಿದೆ. ಕನಕದಾಸರು ತಾವು ರಚಿಸಿ, ಹಾಡಿ ಹೊಗಳಿದ ಸಾಲುಗಳೇ ಕೀರ್ತನೆಗಳಾಗಿವೆ. ಆ ಕೀರ್ತನೆಗಳು ಈ ಗ್ರಂಥದಲ್ಲಿ ಸೊಗಸಾಗಿ ಲೇಖಕರು ನಮೂದಿಸಿದ್ದಾರೆ.

**೭.೨.೩ ಗಾನಶಾಸ್ತ್ರ ಪ್ರಕಾಶಿಕೆ (೧೯೬೩)**

ಈ ಗ್ರಂಥದ ಮುಖಪುಟದಲ್ಲಿ ಬೂದು, ಕಪ್ಪು ವರ್ಣವನ್ನೂ ಬಳಸಲಾಗಿದೆ. ೧೩೪ ಪುಟಗಳುಳ್ಳ ಈ ಸಂಪುಟವನ್ನು ವಿದ್ವಾನ್ ಕೊಳತ್ತೂರು ರಾಮಕೃಷ್ಣ ಶಾಸ್ತ್ರಿಯವರು ರಚಿಸಿದ್ದಾರೆ. ಮುಖಪುಟದ ಮೇಲ್ಭಾಗದಲ್ಲಿ ಚಿಕ್ಕದಾಗಿ (A Theory reference book on South Indian Music) ಎಂದು ಬರೆಯಲಾಗಿದೆ. ಇದರ ಕೆಳಗೆ ಗ್ರಂಥದ ಶೀರ್ಷಿಕೆಯನ್ನು ಮಧ್ಯಮ ಪ್ರಮಾಣದ ಅಕ್ಷರಗಳಲ್ಲಿ ಬರೆಯಲಾಗಿದೆ. ಈ ರಕ್ಷಾಪುಟದಲ್ಲಿ ಅಕ್ಷರಗಳ ಪ್ರಭಾವವೆ ಹೆಚ್ಚು ಎಂದು ಹೇಳಬಹುದು ಇದು ಸಹ ಸಮತೋಲನ ಹೊಂದಿದ ವಿನ್ಯಾಸವಾಗಿದೆ. ಮುಖಪುಟದ ಸುತ್ತಲು ಅಂಚು (ಬಾರ್ಡರ್) ರಚಿಸಿರುವುದರಿಂದ ನೋಡುಗರ ದೃಷ್ಟಿ ಈ ಚೌಕಟ್ಟಿನ ಒಳಗೆ ಚಲಿಸುತ್ತಲಿದೆ ಎಂದು ಅಭಿಪ್ರಾಯಪಡಬಹುದು. ಮುಖಪುಟದ ಮಧ್ಯಭಾಗದಲ್ಲಿ ಶ್ರೀ ಕೃಷ್ಣನು ನಿಂತಿರುವ ಚಿತ್ರಣವನ್ನು ಚಿಕ್ಕದಾಗಿ ಹಾಕಲಾಗಿದೆ. ಇದರ ಕೆಳಗೆ ಲೇಖಕರ ಹೆಸರು, ಅದರ ಕೆಳಗೆ ಪ್ರಕಾಶಕರ ವಿಳಾಸ ಮುದ್ರಿಸಲಾಗಿದೆ. ಈ ಮುಖಪುಟ ಸರಳವಾಗಿದ್ದು ಇದನ್ನು ಇನ್ನೂ ವೈಭವೀಕರಿಸಬಹುದಿತ್ತು. ಈ ಗ್ರಂಥದಲ್ಲಿರುವ ವಿಶೇಷತೆಯೆಂದರೆ ದಕ್ಷಿಣ ಭಾರತದ ಸಂಗೀತಕ್ಕೆ ಹೆಚ್ಚು ಒತ್ತು ನೀಡಿರುವ ಗ್ರಂಥವಾಗಿದೆ. ಇದರಲ್ಲಿ ಗಾಯನ ಕಲೆಗೆ ಹೆಚ್ಚು ಮನ್ನಣೆ ನೀಡಲಾಗಿದೆ.

**೭.೨.೪. ಶ್ರೀ ಪುರಂದರದಾಸರ ನವರತ್ನ ಮಾಲೆ (೧೯೬೪)**

ಈ ಮುಖಪುಟದ ಮೇಲ್ಭಾಗದಲ್ಲಿ ಗ್ರಂಥದ ಶೀರ್ಷಿಕೆಯನ್ನು ಮಧ್ಯಭಾಗದಲ್ಲಿ ಪುರಂದರ ದಾಸರು ತನ್ನ ನೆಚ್ಚಿನ ದೈವವಾದ ಪುರಂದರವಿಠಲನಿಗೆ ನಮಸ್ಕರಿಸುತ್ತಿರುವ ಚಿತ್ರಣ ಸೊಗಸಾಗಿದೆ. ಈ ರಕ್ಷಾಪುಟ ವಿನ್ಯಾಸದಲ್ಲಿ ಒಂದು ದೃಷ್ಟಾಂತ ಮತ್ತು ಅಕ್ಷರಗಳನ್ನು ಉಪಯೋಗಿಸಿ ರವಾನಿಸಬೇಕಾದ ಸಂದೇಶವನ್ನು ಓದುಗರರಿಗೆ ಬಹಳ ಸರಳತೆಯಿಂದ ರವಾನಿಸಿದ್ದಾರೆ ರೇಖಾಚಿತ್ರಗಾರನ ಹೆಸರು ಗ್ರಂಥದಲ್ಲಿ ನಮೂದಿಸಿಲ್ಲ. ಇದು 'ಸಮತೋಲನೆ'[೪]ಯಿಂದ ಕೂಡಿದ ವಿನ್ಯಾಸವೆಂದು ಹೇಳಬಹುದು. ಇದರ ಕೆಳಗೆ ಮುದ್ರಣ ಪ್ರಕಾಶಕರ ವಿಳಾಸವನ್ನು ನಮೂದಿಸಲಾಗಿದೆ. ಪುರಂದರಗಡ (ಮಹಾರಾಷ್ಟ್ರ) ಜನ್ಮಸ್ಥಳವಿರಬಹುದು. ಅಂಕಿತನಾಮ ಪುರಂದರವಿಠಲ ಇವರ ಲಭ್ಯ ಕೀರ್ತನೆಗಳ ಸಂಖ್ಯೆ : ೯೦೦. ದಾಸ ಶ್ರೇಷ್ಠರಲ್ಲೆ ಮೊದಲಿಗರು. ಬಿರುದು- ಕರ್ನಾಟಕದ ಸಂಗೀತ ಪಿತಾಮಹ. ಇವರು ನಿರ್ವಹಿಸುತ್ತಿರುವ ವೃತ್ತಿ -ಚಿನ್ನದ ವ್ಯಾಪಾರ ಮಾಡುತ್ತಿದ್ದರು. ತನ್ನ ಹೆಂಡತಿಯ ಚಿನ್ನದ ಮೂಗುತಿಯ ಕಥೆಯಿಂದ ಸಾಕ್ಷಾತ್ ವಿಠಲನ ಕೃಪೆಗೆ ಪಾತ್ರನಾಗಿ ತನ್ನ ಜಿಪುಣತನ, ಶ್ರೀಮಂತಿಕೆಯನ್ನು ಬಿಟ್ಟು ಎಲ್ಲವನ್ನೂ ದಾನ ಮಾಡಿ ತಾಳ-ತಂಬೂರಿ ಹಿಡಿದು ಹಲವು

೦೪. Prof. S. K. Luthra : Applied Art Handbook, P-22

ಸರಳ ಕೀರ್ತನೆಗಳನ್ನು ರಚಿಸಿದರು. ಇವು ಜನ ಸಾಮಾನ್ಯರ ಬಾಯಲ್ಲಿ ಬಾಯಿಪಾಠವಾದವು. ಇವರಿಗೆ ನವಕೋಟಿ ನಾರಾಯಣ ಎಂಬ ಬಿರುದು ಸಹ ಇತ್ತು.ಇವರ ಹಲವು ಕೀರ್ತನೆಗಳನ್ನು ಆಯ್ದು ಈ ಗ್ರಂಥದಲ್ಲಿ ಮುದ್ರಿಸಲಾಗಿದೆ.

### ೭.೨.೫. ಮಕ್ಕಳಿಗೆ ನೃತ್ಯಕಲೆ (೧೯೬೪)

ಈ ಮುಖಪುಟದಲ್ಲಿ ನೀಲಿ, ಕಪ್ಪು, ಕೆಂಪು, ಬಿಳಿ ವರ್ಣಗಳನ್ನು ಬಳಸಿ ಮುದ್ರಿಸಲಾಗಿದೆ. ಮುಖಪುಟದ ಮೇಲ್ಭಾಗದ ಎಡಕ್ಕೆ ಚಿಕ್ಕ ಅಕ್ಷರಗಳಲ್ಲಿ ಚಿಕ್ಕ ಮಕ್ಕಳಿಗೆ ೪೫ ಛಾಯಾ ಚಿತ್ರಗಳಿಂದೊಡಗೂಡಿದ ನಾಟ್ಯ ಪರಿಚಯ ಎಂದು, ಬಲಕ್ಕೆ ಪುಸ್ತಕ ಪ್ರಕಾಶನ ಚಿಹ್ನೆ ಇದರ ಕೆಳಗೆ ಮಧ್ಯಮ ಕ್ರಮಾಂಕದಲ್ಲಿ ಶೀರ್ಷಿಕೆಯನ್ನು ಬರೆಯಲಾಗಿದೆ. ಮಧ್ಯ ಭಾಗದಲ್ಲಿ ಭರತನಾಟ್ಯ ಮಾಡುತ್ತಿರುವ ಸ್ತ್ರೀಯ ಚಿತ್ರವನ್ನು ಬಿಳಿಯ ಬಣ್ಣದಲ್ಲಿ ಸೂಕ್ಷ್ಮ ನೆರಳಿನ ಆಕೃತಿಯಲ್ಲಿ ರಚಿಸಲಾಗಿದೆ. ಕೆಳಭಾಗದಲ್ಲಿ ಲೇಖಕರ ಹೆಸರು ಇದರ ಕೆಳಗೆ ಮುದ್ರಕರ ವಿಳಾಸ ನಮೂದಿಸಲಾಗಿದೆ. ಮುಖಪುಟದ ಮೇಲ್ಭಾಗ, ಎಡ, ಬಲಗಳಲ್ಲಿ ಒಟ್ಟು ನಾಲ್ಕು ಚಿಕ್ಕ ನೃತ್ಯಕಲೆಯ ಚಿತ್ರಣಗಳನ್ನು ಮುದ್ರಿಸಲಾಗಿದೆ. ಇದರ ಮುಖಪುಟ ವಿನ್ಯಾಸ ಸ್ಪಷ್ಟವಾಗಿಲ್ಲ. 'ಮಧ್ಯ ಇರುವ ಚಿತ್ರಣವನ್ನು ಸ್ಪಷ್ಟವಾಗಿ ವರ್ಣರಂಜಿತವಾಗಿ ಚಿತ್ರಿಸಬಹುದಿತ್ತು. ಶೀರ್ಷಿಕೆಯನ್ನು ಸರಿಯಾದ ಜಾಗದಲ್ಲಿ ಮುದ್ರಿಸಿಲ್ಲ. ಲೇಖಕರ, ಮುದ್ರಕರ ಹೆಸರನ್ನು ಸರಿಯಾದ ಕ್ರಮದಲ್ಲಿ ಜೋಡಿಸಿಲ್ಲ.'[೦೫] ಇದರ ಮುಖಪುಟವನ್ನು ತುಂಬಾ ಆಕರ್ಷಕವಾಗಿ ಮುದ್ರಿಸಬಹುದಿತ್ತು. ಈ ಪುಸ್ತಕದಲ್ಲಿ ಸಣ್ಣಮಕ್ಕಳಿಗೆ ೪೫ ರೀತಿಯ ವಿವಿಧ ನಾಟ್ಯ ಚಿತ್ರಗಳನ್ನು ಚಿತ್ರಸಮೇತ ನೀಡಲಾಗಿದೆ. ಭಾವ ಭಂಗಿಗಳ ಚಿತ್ರಣಗಳು ಮನೋಜ್ಞವಾಗಿವೆ. ಆದರೆ ಇಲ್ಲಿನ ರಕ್ಷಾಪುಟ ಚಿತ್ರದಲ್ಲಿನ ರಚನೆಯಲ್ಲಿ ಭಿನ್ನಭಾವವಾದ ಪ್ರಭಾವವು ಕಾಣುತ್ತದೆ. ಒಂದು ಮುಖಪಟ ವಿನ್ಯಾಸದಲ್ಲಿ ಅಥವಾ ಕೃತಿಯಲ್ಲಿ ವೈವಿಧ್ಯತೆಯನ್ನು ತೋರಿಸಲು ಈ ಭಿನ್ನಭಾವದ ಅವಶ್ಯಕತೆ ತುಂಬಾ ಇರುತ್ತದೆ. ಅದನ್ನು ಓದುಗ/ನೋಡುಗರು ಇಲ್ಲಿನ ಮುಖಪುಟದಲ್ಲಿ ಗ್ರಹಿಸಬಹುದು.

### ೭.೨.೬. ಕರ್ನಾಟಕ ಸಂಗೀತ ದರ್ಪಣ (೧೯೬೫)

ಈ ಪುಸ್ತಕದ ಮುಖಪುಟದಲ್ಲಿ ಕಡುಕಪ್ಪು ನೀಲಿ, ನೇರಳೆ ಬಣ್ಣ, ಬಿಳಿಯ ವರ್ಣಗಳಿಂದ ಮುದ್ರಿಸಲಾಗಿದೆ. ಮೇಲ್ಭಾಗದಲ್ಲಿ ಅಚ್ಚುಕಟ್ಟಾಗಿ ಆಂಗ್ಲಭಾಷೆಯ ಗೋಥಿಕ್‌ಶೈಲಿ ಅಕ್ಷರಗಳ ಸಮನಾಗಿ ಶೀರ್ಷಿಕೆ ಮೂಡಿ ಬಂದಿದೆ. ಕರ್ನಾಟಕ ಸಂಗೀತ ದರ್ಪಣ –ದರ್ಪಣ ಎಂದರೆ 'ಕನ್ನಡಿ'ಈ ಕನ್ನಡಿಯಲ್ಲಿಯೇ ಚಿತ್ರಗಳನ್ನು ಚಿತ್ರಿಸುವ ಪ್ರಯತ್ನ ಮಾಡಲಾಗಿದೆ. ಮಧ್ಯಭಾಗದ ಎಡಕ್ಕೆ ವೀಣೆಯನ್ನು ನಿಲ್ಲಿಸಿರುವ ಚಿತ್ರ ಮಧ್ಯದಲ್ಲಿ ಜಗುಲಿಯ ಮೇಲಿರುವ ಪದಾಗಳ ಚಿತ್ರಣ ಕೆಳಗೆ ಋಷಿಮುನಿಯ ಆಶ್ರಮದಲ್ಲಿರಬೇಕಾದ ವಸ್ತುಗಳನ್ನು ಚಿತ್ರಿಸಲಾಗಿದೆ. ಪುಸ್ತಕದ ಚಿಕ್ಕ ಮೇಜು ಅದರ ಮೇಲೆ ತೆರೆದ ಪುಸ್ತಕ, ಮುಂಭಾಗದಲ್ಲಿ ಪ್ರಾಣಿಯ ಚರ್ಮವನ್ನು ಹಾಸಲಾಗಿದೆ.ಪಕ್ಕಕ್ಕೆ ಪುಸ್ತಕಗಳನ್ನು ಒಂದರ ಮೇಲೊಂದು ಇಟ್ಟಿರುವ ಅದರ

---

೦೫. ಸಂದರ್ಶನ: ಮಲ್ಲಿಕಾರ್ಜುನ ಜಾದವ್ (ನಿವೃತ್ತ ಅನ್ವಯಿಕಲಾ ಉಪನ್ಯಾಸಕರು), ದಾವಣಗೆರೆ. ದಿ:೨೦೧೫

ಮೇಲೆ ರುದ್ರಾಕ್ಷಿ ಮಾಲೆ ಪಕ್ಕದಲ್ಲಿ ತಾಳಗಳು, ಬಲಕ್ಕೆ ತಟ್ಟೆಯಲ್ಲಿ ಹಣ್ಣುಗಳನ್ನು ಇಟ್ಟಿರುವ ಹಾಗೆ ಮುದ್ರಣ ಮಾಡಲಾಗಿದೆ. ಈ ಮುಖಪುಟ ಆವರಣದಲ್ಲಿ ಜೋಡಿಸಲಾದ ಪ್ರತಿಯೊಂದು ವಸ್ತುಗಳು / ಅಂಶಗಳು ತನ್ನದೆ ಆದ ಅಸ್ತಿತ್ವವನ್ನು ಹೊಂದಿದೆ. ಇಲ್ಲವಾದಲ್ಲಿ ಈ ಮುಖಪುಟ ವಿನ್ಯಾಸವು ನೋಡುಗರನ್ನು ಗೊಂದಲಕ್ಕೀಡು ಮಾಡಬಹುದಿತ್ತು. ಆದರೆ ಅಂಥಹ ಯಾವುದೇ ಗೊಂದಲ ಈ ರಚನೆಯಲ್ಲಿಲ್ಲವೆಂದೆ ಹೇಳಬಹುದು. ಮುಖಪುಟದ ಕೆಳಭಾಗದಲ್ಲಿ ಮುದ್ರಣದ ವಿಳಾಸವನ್ನು ಹಾಕಲಾಗಿದೆ. ಚಿತ್ರದ ಮಧ್ಯದಲ್ಲಿ ಬದಲಾವಣೆಗಳಿರಬೇಕಿತ್ತು. ಚಿತ್ರದಲ್ಲಿ ಸಂಗೀತದ ವಾದ್ಯಗಳನ್ನೇ ಚಿತ್ರಿಸಬಹುದಿತ್ತು. ಈ ಗ್ರಂಥದಲ್ಲಿ ಕರ್ನಾಟಕ ಸಂಗೀತದ ಪರಿಚಯ ಮಾಡಿಕೊಡಲಾಗಿದೆ. ಈ ಕೃತಿಯು ಸುದರ್ಶನಂ ಅಂಡ್ ಕಂಪನಿ ಬೆಂಗಳೂರು ಇವರಿಂದ ಮುದ್ರಣಗೊಂಡಿದೆ.

**೭.೨.೭.ಸಂಗೀತ ರತ್ನಾಕರ (೧೯೬೮)**

ಈ ಗ್ರಂಥದ ಮುಖಪುಟವು ಹಳದಿ, ಕಪ್ಪು, ನೇರಳೆ ವರ್ಣಗಳಿಂದ ಕೂಡಿದೆ. ಮುಖಪುಟದ ಮೇಲ್ಭಾಗದಲ್ಲಿ ಗ್ರಂಥದ ಹೆಸರನ್ನೂ ಸರಳ ಶೈಲಿಯಲ್ಲಿ ಮಧ್ಯಮ ಅಕ್ಷರದಲ್ಲಿ 'ಸಂಗೀತ ರತ್ನಾಕರ' ಎಂದು ಮುದ್ರಿಸಲಾಗಿದೆ. ಇದರ ಕೆಳಗೆ ಚಿಕ್ಕ ಅಕ್ಷರಗಳಲ್ಲಿ 'ನಿಃಶಂಕ ಹೃದಯ'ವೆಂಬ ಕನ್ನಡ ವ್ಯಾಖ್ಯಾನಸಮೇತ ಸಂಪುಟ–೧ ಭಾಗ–೧, ಎಂದು ಇದರ ಕೆಳಗೆ ಸ್ವರಗತಾಧ್ಯಾಯ (ಪ್ರಕರಣಗಳು ೧–೩) ಎಂದು ಬರೆಯಲಾಗಿದೆ. ಮುಖಪುಟದ ಮಧ್ಯಭಾಗದಲ್ಲಿ ಲೇಖಕರ ಹೆಸರು ಅವರ ವಿದ್ಯಾಭ್ಯಾಸ ವೃತ್ತಿಗೆ ಸಂಬಂಧಿಸಿದ ಮಾಹಿತಿ ನೀಡಲಾಗಿದೆ. ಇದರ ಕೆಳಗೆ ಮೈಸೂರು ವಿಶ್ವವಿದ್ಯಾನಿಲಯದ ಚಿಹ್ನೆಯನ್ನು ಮುದ್ರಿಸಲಾಗಿದೆ.ಇದರ ಕೆಳಗೆ ಪ್ರಕಾಶಕರ ವಿಳಾಸ, ವರ್ಷವನ್ನು ನಮೂದಿಸಲಾಗಿದೆ. ಇದು ಅಕ್ಷರಗಳನ್ನೇ ಕೇಂದ್ರವಾಗಿರಿಸಿಕೊಂಡು ರಚಿಸಿದ ಮುಖಪುಟವಾಗಿದೆ. ಅಕ್ಷರ ಉಪಯೋಗಿಸಿದ ಮತ್ತು ಅವುಗಳ ಅಳತೆ ಇತ್ಯಾದಿ ಅಂಶಗಳೆ ತೋರಿಸಿ ಎಷ್ಟು ಸಾಧ್ಯವಿದೆಯೊ ಅಷ್ಟನ್ನು ತೋರಿಸಲು ಈ ಮುಖಪುಟ ವಿನ್ಯಾಸದಲ್ಲಿ ಪ್ರಯತ್ನ ಮಾಡಿದ್ದಾರೆ. (ಆದರೆ ಮುಖಪುಟ ನೋಡುಗರನ್ನು ಸೆಳೆಯುವುದಲ್ಲದೇ ಗೊಂದಲವನ್ನುವುಂಟು ಮಾಡುತ್ತಿದೆ. ಇದು ಅಮೂರ್ತ ಚಿತ್ರಣದ ಮುಖಪುಟವಾಗಿದೆ.ಇಲ್ಲಿ 'ಸಂಗೀತ ರತ್ನಾಕರ' ವ್ಯಕ್ತಿ ಯಾರು ಎಂಬುದನ್ನು ಚಿತ್ರದಲ್ಲಿ ಮುದ್ರಿಸಬಹುದಿತ್ತು.) ಈ ಮುಖಪುಟವು ಅರವತ್ತರ ದಶಕದಲ್ಲಿನ ಮುದ್ರಣ ವ್ಯವಸ್ಥೆ ಮತ್ತು ಮುಖಪುಟದ ಅರಿವು ತಿಳಿಸುತ್ತದೆ.

**೭.೨.೮. ನಾಟ್ಯ ಕವಿರಾಜ (೧೯೬೯)**

ಈ ಪುಸ್ತಕದ ಮುಖಪುಟವು ಬಿಳಿ, ಕಪ್ಪು, ಹಳದಿ, ನೀಲಿ, ಬೂದು ಬಣ್ಣಗಳಿಂದ ಕೂಡಿದೆ. ಇಲ್ಲಿಯೂ ಸಹ ಅಕ್ಷರಗಳಿಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ಆಂಗ್ಲಭಾಷೆಯ ರೋಮನ್ ಅಕ್ಷರ ಶೈಲಿಗೆ ಸರಿಸಮಾನವಾಗಿ ಹೊಂದುವ ರೀತಿಯಲ್ಲಿಯೆ ಕಾಣುವಂತೆ ಕನ್ನಡ ಭಾಷೆಯ ಅಕ್ಷರಗಳ ಒಕ್ಕೂಟದಿಂದ (ಯುನಿಟಿ) ಜೋಡಿಸಿ ಹೊಂದಿಸಿದಾಗ ರಕ್ಷಾಪುಟಚಿತ್ರ ಎಷ್ಟು ಸಾಧ್ಯವೋ ಅಷ್ಟು ಸುಂದರವಾಗಿ ಕಾಣುತ್ತಿದೆ. ಈ ಗ್ರಂಥ ಮುದ್ರಕರುಗಳಾಗಲಿ / ವಿನ್ಯಾಸಕಾರರ ಹೆಸರು ಎಲ್ಲಿಯೂ ನಮೂದಿಸಿಲ್ಲ. ಮೇಲ್ಭಾಗದಲ್ಲಿ

ನಟರಾಜನ ಚಿಕ್ಕ ಚಿತ್ರವನ್ನು ಹಾಕಲಾಗಿದೆ. ಇದರ ಕೆಳಗೆ ಗ್ರಂಥದ ಶೀರ್ಷಿಕೆ 'ನಾಟ್ಯ ಕವಿರಾಜ' ಎಂದು ಬರೆಯಲಾಗಿದೆ. ಮಧ್ಯದಲ್ಲಿ ಲೇಖಕರ ಹೆಸರನ್ನು ನಮೂದಿಸಿದೆ. ಇದರ ಕೆಳಗೆ ಚಿಕ್ಕ ನಕ್ಷತ್ರವನ್ನು ಇಟ್ಟು ಕೆಳಗೆ ಸುವರ್ಣ ಮಹೋತ್ಸವ ದಿನ ೨೭, ೨೮-೯-೧೯೬೯ ಪುಸ್ತಕ ಮುದ್ರಣ ವರ್ಷವನ್ನು ಮುದ್ರಿಸಲಾಗಿದೆ. ನಟರಾಜನ ಚಿತ್ರವು ಇನ್ನು ದೊಡ್ಡದಾಗಿ ಈ ಮುಖಪುಟದಲ್ಲಿ ಚಿತ್ರಿಸಬಹುದಿತ್ತು. ಅದರು ಮುಖಪುಟವು ಸರಳತೆ ಮತ್ತು ಸಮತೋಲನತೆ ಹೊಂದಿದೆ ಎಂದು ಅಭಿಪ್ರಾಯಪಡಬಹುದು.

**೭.೨.೯. ಸಂಗೀತ ದರ್ಪಣ (೧೯೬೯)**

ಈ ಮುಖಪುಟದಲ್ಲಿ ಹಸಿರು, ನೀಲಿ, ಕಂದು, ಕಪ್ಪು ವರ್ಣಗಳನ್ನು ಬಳಸಿ ಮುದ್ರಿಸಲಾಗಿದೆ. ಮುಖಪುಟ ಎಡಭಾಗದಲ್ಲಿ ನಿಂತಿರುವ ವೀಣೆಯ ಚಿತ್ರಣವನ್ನು ಬಿಡಿಸಲಾಗಿದೆ. ಬಲಭಾಗದ ಮೇಲೆ ಲೇಖಕರ ಹೆಸರನ್ನು ಕಾಣುವಂತೆ ವಿ.ರಾಮರತ್ನಂ ಎಂದು, ಇದರ ಕೆಳಗೆ ಮಧ್ಯ ಭಾಗಕ್ಕೆ 'ಸಂಗೀತ ದರ್ಪಣ' ಎಂದು ಗ್ರಂಥದ ಶೀರ್ಷಿಕೆಯನ್ನು ಗೋಥಿಕ್ ರೀತಿಯ ದಪ್ಪವಾಗಿ ರೇಖೆಗಳು ಕೋನವಾಗಿ ಸ್ಪಷ್ಟವಾಗಿ ವಿಶೇಷ ಶೈಲಿಯ ಲಿಪಿಯಲ್ಲಿ ಬರೆಯಲಾಗಿದೆ. ಇಲ್ಲಿಯ ವರ್ಣಸಂಯೋಜನೆ ತುಂಬ ಸ್ಪಷ್ಟತೆಹೊಂದಿದೆ. ಎರಡು ವರ್ಣಗಳನ್ನು ಅಥವಾ ಛಾಯೆಗಳನ್ನು ತೋರಿಸಲು ಒಂದು ಮುಖಪುಟ ವಿನ್ಯಾಸದಲ್ಲಿ ಈ ರೀತಿ 'ಒಗ್ಗಟ್ಟು ಮತ್ತು ಭಿನ್ನಭಾ'[೬]ವದ ದೃಶ್ಯ ವರ್ಣಗಳ ಸಹಾಯದಿಂದ ತೋರಿಸುವುದು ಅನಿವಾರ್ಯವಾಗಿರುತ್ತದೆ. ಕಾರಣ ನೋಡುಗರ ದೃಷ್ಟಿಯಿಂದ ಈ ವಿಧಾನ ತುಂಬ ಉತ್ತಮವಾಗಿದೆ ಎಂದು ತಿಳಿದು ಬರುತ್ತದೆ. ಇದರ ಕೆಳಗೆ ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯದ ಹೆಸರು ಹಾಗೂ ವಿದ್ಯಾನಿಲಯದ ಚಿಹ್ನೆಯನ್ನು ನೀಡಲಾಗಿದೆ. ಈ ಮುಖಪುಟ ನೋಡುಗರನ್ನು ಆಕರ್ಷಿಸುತ್ತದೆ. ಸಂಗೀತ ಗ್ರಂಥವೆಂದು ಸಾರಿ ಹೇಳುತ್ತದೆ ಹಾಗೂ ಪುಸ್ತಕದ ಒಳಗೆ ಯಾವ ಸಾರಾಂಶವಿದೆ ಎಂದು ಕಥಾ ಹಂದರದ ಬಗ್ಗೆ ಕುತೂಹಲ ಮೂಡಿಸುವಂತಹ ಮುಖಪುಟವಾಗಿದೆ.

**೭.೨.೧೦. ಗಮಕ ಕಲೆ (೧೯೬೯)**

ಇದು ಹಸಿರು, ಕೆಂಪು, ನೀಲಿ ವರ್ಣದಿಂದ ಮುದ್ರಿಸಿದ ಮುಖಪುಟವಾಗಿದೆ. ಮುಖಪುಟದ ಸುತ್ತಲು ಕೆಂಪು ಬಣ್ಣದ ಚಿತ್ತಾರದ ಪಟ್ಟಿಯನ್ನು ಚಿತ್ರಿಸಲಾಗಿದೆ. ಇದರ ಒಳಗೆ ಶೀರ್ಷಿಕೆಯನ್ನು ಮೇಲ್ಭಾಗದಲ್ಲಿ ನಮೂದಿಸಿದೆ. ಕೆಳಗೆ ಲೇಖಕರ ಹೆಸರು ಮಾಹಿತಿ, ಮಧ್ಯದಲ್ಲಿ ಪ್ರಕಾಶನದ ಚಿಹ್ನೆ.ಇದರ ಕೆಳಗೆ ಪ್ರಕಾಶಕರ ವಿಳಾಸ ಚಿಕ್ಕ ಚಿಕ್ಕ ಅಕ್ಷರಗಳಲ್ಲಿ ಮುದ್ರಿಸಲಾಗಿದೆ. ಈ ಮುಖಪುಟದ ಅಕ್ಷರ ವಿನ್ಯಾಸ ತುಂಬಾ ಚಿಕ್ಕದಾಗಿದ್ದು, ೧೯೬೩ ಗಾನಶಾಸ್ತ್ರ ಪ್ರಕಾಶಿಕ, ೧೯೬೮ ಸಂಗೀತ ರತ್ನಾಕರ,೧೯೬೯ ನಾಟ್ಯಕವಿರಾಜ ಮುಖಪುಟಕ್ಕೆ ಸರಿಹೊಂದುವಂತೆ ರಚನೆಯಾಗಿದೆ. ಇಲ್ಲಿಯೂ ಸಹ ಅಕ್ಷರಗಳ ಬಳಕೆ ಹೆಚ್ಚಿನ ಪ್ರಮಾಣದಲ್ಲಿ ಇದ್ದು ನೋಡುಗರ ನೋಟವು ಈ ಚಿತ್ತಾರದ ಪಟ್ಟಿಯಲ್ಲಿಯೇ/ಚೌಕಟ್ಟಿನ ಒಳಗಡೆಯೇ ಚಲಿಸುವಂತಿದ್ದರೂ ಓದುಗರನ್ನು ಆಕರ್ಷಿಸುವಂತಿಲ್ಲ. ಶೀರ್ಷಿಕೆಯ ಅಕ್ಷರವಿನ್ಯಾಸ ಸ್ಪಷ್ಟವಾಗಿ ದೊಡ್ಡದಾಗಿ ಕಾಣುವಂತಿರಬೇಕಿತ್ತು.

---

೦೬ Prof. S. K. Luthra : Applied Art Handbook, P-20-21

ಈ ಕೃತಿ ಮುಖಪುಟಕ್ಕೆ ಗಮಕ ಕಲೆಗೆ ಸಂಬಂಧಿಸಿದ ಯಾವುದಾದರೂ ಚಿತ್ರವನ್ನು ಮುದ್ರಿಸಿದ್ದರೆ ಅದಕ್ಕೆ ಒಂದು ಹೆಚ್ಚಿನ ಮೆರುಗು ಬರತ್ತಿತ್ತು.

**೭.೩. ಎಪ್ಪತ್ತರ ದಶಕದಲ್ಲಿನ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

**೭.೩.೧. ಸಂಗೀತ ಶಾಸ್ತ್ರ ಪರಿಚಯ (೧೯೭೧)**

ಈ ಗ್ರಂಥದ ಮುಖಪುಟದಲ್ಲಿ ಹಸಿರು, ನೀಲಿ, ಕಪ್ಪು, ಬಿಳುಪು, ವರ್ಣಗಳನ್ನು ಬಳಸಿ ಮುದ್ರಿಸಲಾಗಿದೆ. ಮೇಲ್ಭಾಗದ ಎಡಕ್ಕೆ ಕರ್ನಾಟಕ ವಿಶ್ವವಿದ್ಯಾನಿಲಯದ ಚಿಹ್ನೆ ಪಕ್ಕಕ್ಕೆ ವಿಶ್ವವಿದ್ಯಾನಿಲಯದ ಹೆಸರು, ಇದರ ಕೆಳಗೆ ಪುಸ್ತಕದ ಶೀರ್ಷಿಕೆಯನ್ನು ಸ್ಪಷ್ಟವಾಗಿ ದೊಡ್ಡದಾಗಿ ಬರೆಯಲಾಗಿದೆ. ಇದರ ಕೆಳಭಾಗದಲ್ಲಿ ನೀಲಿ ಬಣ್ಣದ ವೃತ್ತದಲ್ಲಿ ಸಂಗೀತ ವಾದ್ಯಗಳ ಚಿತ್ರಗಳನ್ನು ಸುಂದರವಾಗಿ ಕಾಣುವಂತೆ ಚಿತ್ರಿಸಲಾಗಿದೆ.

ಈ ಮುಖಪುಟದಲ್ಲಿ ಎಷ್ಟು ಸ್ಪಷ್ಟತೆಯ ಅಂಶಗಳು ತೋರಿಸಲು ಸಾಧ್ಯವಿದೆಯೋ ಅಷ್ಟನ್ನು ಇಲ್ಲಿನ ಮುಖಪುಟದಲ್ಲಿ ರೂಪಿಸಲಾಗಿದೆ.ಶೀರ್ಷಿಕೆ ಅಕ್ಷರ ಶೈಲಿ ಹಾಗೂ ವಾದ್ಯಗಳ ಚಿತ್ರಕ್ಕೂ ಸಮಾನ ಮಹತ್ವ ನೀಡಲಾಗಿದೆ. ನೋಡುಗರಿಗೆ ಈ ಎರಡು ಅಂಶಗಳು ತಕ್ಷಣಕ್ಕೆ (ಥಟ್‌ಅಂತ) ಕಾಣುವಂತೆ ಹಾಗೂ ವರ್ಣಗಳಿಂದ ಸಮತೋಲನೆ ಕಾದುಕೊಂಡಿರುವುದು ಈ ಮುಖಪುಟದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಲಿದೆ. ಈ ಗ್ರಂಥದ ಮುಖಪುಟವು ಓದುಗರನ್ನು ತಕ್ಷಣ ಆಕರ್ಷಿಸುವಂತೆ ಮುದ್ರಿಸಲಾಗಿದೆ ಎಂಬುವುದನ್ನು ಮುಖಪುಟವೇ ಹೇಳುತ್ತದೆ. ಈ ಗ್ರಂಥದಲ್ಲಿ ಸಂಗೀತದ ಪರಿಚಯ, ಸಂಗೀತಕ್ಕೆ ಸಂಬಂಧಿಸಿದ ವಾದ್ಯಗಳ ಬಗ್ಗೆ ಮಾಹಿತಿಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

**೭.೩.೨. ಭರತಾರ್ಥ ದರ್ಶನ (೧೯೭೩)**

ಈ ಮುಖಪುಟವು ಕೆಂಪು, ನೀಲಿ, ಹಸಿರು ಬಣ್ಣಗಳಿಂದ ಕೂಡಿದೆ.ಮೇಲ್ಭಾಗದ ಎಡಕ್ಕೆ ಗ್ರಂಥದ ಶೀರ್ಷಿಕೆಯನ್ನು ಉದ್ದ ಮತ್ತು ಅಡ್ಡಲಾಗಿ ಕಾಣುವಂತೆ ವಿಶೇಷವಾಗಿ ಬರೆಯಲಾಗಿದೆ. ಬಲಭಾಗಕ್ಕೆ ಭರತನಾಟ್ಯ ಮಾಡುತ್ತಿರುವ ಪಾತ್ರಧಾರಿಯ ಚಿತ್ರಣವನ್ನು ಚಿತ್ರಿಸಲಾಗಿದೆ. ಮಧ್ಯದ ಎಡಭಾಗಕ್ಕೆ (ಭರತನಾಟ್ಯ ವಿಚಾರ–ಸಂಗ್ರಹ) ಎಂದು ಸಣ್ಣದಾಗಿ ಬರೆಯಲಾಗಿದೆ.ಇದರ ಕೆಳಗೆ ಸಣ್ಣ ಕೆಂಪುವರ್ಣದ ನಕ್ಷತ್ರ ಇದರ ಕೆಳಗೆ ಲೇಖಕರ ಹೆಸರನ್ನು ನಮೂದಿಸಲಾಗಿದೆ. ಮುಖಪುಟದ ಕೆಳಗೆ ಭರತನಾಟ್ಯದ ವಿವಿಧ ಭಂಗಿಗಳ ಪಾತ್ರಧಾರಿಗಳ ಏಳು ಶೈಲಿಯನ್ನು ಚಿತ್ರದ ಮೂಲಕ ಬರೆಯಲಾಗಿದೆ. ಈ ಮುಖಪುಟ ವಿನ್ಯಾಸದಲ್ಲಿ ವಿನ್ಯಾಸಕಾರ ಶೀರ್ಷಿಕೆಯನ್ನು ಮಾತ್ರ ವಿಶೇಷವಾಗಿ ಉದ್ದ ಅಡ್ಡವಾಗಿ ಬರೆದುದನ್ನು ಬಿಟ್ಟರೆ, ಶೀರ್ಷಿಕೆಗೂ ಚಿತ್ರಣಕ್ಕೂ ಯಾವುದೇ ಸಂಬಂಧಗಳು ಇಲ್ಲದಂತೆ ಮುದ್ರಿಸಿದ್ದಾರೆ. ಸ್ಥಳವನ್ನು ಸರಿಯಾಗಿ ಬಳಸಿಕೊಂಡಿಲ್ಲ. ಈ ಮುಖಪುಟವು ಓದುಗರನ್ನು ಸೆಳೆಯುವಂತಿಲ್ಲ ಅಷ್ಟೂ ಆಕರ್ಷಕವಾಗಿಲ್ಲ. ಸರಿಯಾದ ಸಮತೋಲನ ಕಾಯ್ದುಕೊಂಡಿಲ್ಲ ಎಂಬುದು ಸ್ಪಷ್ಟವಾಗಿ ಮುಖಪುಟದಲ್ಲಿ ಕಾಣುತ್ತದೆ.

### ೭.೩.೩ ಹರಿದಾಸ ಕೀರ್ತನ ತರಂಗಿಣಿ (೧೯೭೩)

ಈ ಮುಖಪುಟ ವಿನ್ಯಾಸ ಕಲೆಯಲ್ಲಿ ಕೆಂಪು ನೀಲಿ, ಕಪ್ಪು, ಹಸಿರು ವರ್ಣಗಳಿಂದ ಕೂಡಿದ ಕಲೆಯಿದೆ. ಮೇಲ್ಭಾಗದಿಂದ ಮಧ್ಯಭಾಗದವರೆಗೂ ದಾಸ ಶ್ರೇಷ್ಠರಲ್ಲಿ ಒಬ್ಬರಾದ ಪುರಂದರ ದಾಸರು ತಾಳ, ವೀಣೆಯನ್ನು ಹಿಡಿದು ಕೀರ್ತನೆಗಳನ್ನು ಹಾಡುತ್ತಿರುವ ದೃಶ್ಯದ ಚಿತ್ರಣವನ್ನು ಸೂಕ್ಷ್ಮ ರೇಖೆಯ ಶೈಲಿಯನ್ನು ನೆರಳಿನ ಬಿಂಬದಂತೆ ಚಿತ್ರಿಸಿದ್ದಾರೆ. ಇದರ ಚಿತ್ರಣದ ಮೇಲಕ್ಕೆ ದೊಡ್ಡದಾದ ವೀಣೆಯ ಚಿತ್ರವನ್ನು ಕೆಂಪು ಬಣ್ಣದಲ್ಲಿ ರಚಿಸಲಾಗಿದೆ. ಈ ಚಿತ್ರದ ಕೆಳಕ್ಕೆ ಗ್ರಂಥದ ಶೀರ್ಷಿಕೆಯನ್ನು ಸ್ಪಷ್ಟವಾಗಿ ಕಾಣುವಂತೆ ಕೆಂಪು ವರ್ಣದಲ್ಲಿ ಬರೆಯಲಾಗಿದೆ. ಶೀರ್ಷಿಕೆಯ ಕೆಳಗೆ ಶ್ರೀ ಹನುಮದ್ವಿಲಾಸ ಎಂದು ಬರೆದು ಅದರ ಕೆಳಗೆ ಪುಸ್ತಕ ಬೆಲೆಯನ್ನು ಚಿಕ್ಕದಾಗಿ ಹಾಕಿದ್ದಾರೆ. ಈ ಮುಖಪುಟ ಆಕರ್ಷಕವಾಗಿದೆ.ಇಲ್ಲಿ ವಿನ್ಯಾಸಕಾರನ ಜಾಣ್ಮೆ ಮೆಚ್ಚಲೇಬೇಕು. ಅವನ ಸೂಕ್ಷ್ಮ ಕಲೆಯನ್ನು ಈ ಮುಖಪುಟದಲ್ಲಿ ಕಾಣಬಹುದು. ಓದುಗರು ಈ ಮುಖಪುಟವನ್ನು ನೋಡಿದ ಕೂಡಲೇ ಕೊಂಡು ಓದಬೇಕೆಂಬ ಹಂಬಲ ಬರುವುದುಂಟು ಈ ಗ್ರಂಥದ ಒಳಗೆ ದಾಸಶೇಷ್ಠರ ಕೀರ್ತನೆಗಳು ಅಡಗಿವೆ. ಈ ಗ್ರಂಥವು ನಾಲ್ಕು ಬಾರಿ ಮರು ಮುದ್ರಣಗೊಂಡಿದೆ.

### ೭.೩.೪. ಹಿಂದೂಸ್ತಾನಿ ರಾಗಕೋಶ (೧೯೭೪)

ಈ ಮುಖಪುಟವು ಅಕ್ಷರಗಳಿಂದ ಕೂಡಿದೆ. ಇದರಲ್ಲಿ ಯಾವುದೇ ಚಿತ್ರ, ಚಿಹ್ನೆ, ಗುರುತುಗಳನ್ನು ಚಿತ್ರಿಸಿಲ್ಲ. ಬದಲಿಗೆ ಅಕ್ಷರ ಶೈಲಿಯನ್ನೇ ಬಳಸಿ ಮುಖಪುಟ ವಿನ್ಯಾಸಗೊಳಿಸಲಾಗಿದೆ. ಈ ಮುಖಪುಟದಲ್ಲಿ ಹಸಿರು, ಕಪ್ಪು ವರ್ಣವನ್ನು ಬಳಸಿ ಮುದ್ರಿಸಲಾಗಿದೆ. ಮೇಲೆ ಮಧ್ಯದಲ್ಲಿ ಶೀರ್ಷಿಕೆಯನ್ನು ಮುಖಪುಟದ ಮಧ್ಯದಲ್ಲಿ ಲೇಖಕರ ಹೆಸರು, ಕೆಳಗೆ ಮುದ್ರಕರ ವಿಳಾಸವನ್ನು ಬರೆಯಲಾಗಿದೆ. ಇಲ್ಲಿ ಅಕ್ಷರ ಶೈಲಿ ಚಿಕ್ಕದಾಗಿಯೂ, ಕೆಲವೊಂದು ಅಸ್ಪಷ್ಟವಾಗಿ ನೋಡುಗರಿಗೆ ಕಾಣುವಂತಿಲ್ಲ. ಓದುಗರನ್ನು ತನ್ನ ಕಡೆ ಸೆಳೆಯುವಲ್ಲಿ ಈ ಮುಖಪುಟ ವಿಫಲವಾಗಿದೆ. ಹಿಂದೂಸ್ತಾನಿ ಸಂಗೀತಕ್ಕೆ ಸೇವೆ ಸಲ್ಲಿಸಿದ ಸಾಧಕರ ಯಾವುದಾದರೊಂದು ಚಿತ್ರವನ್ನು ಹಾಕಬಹುದಿತ್ತು. ಇದು ಹಿಂದೂಸ್ತಾನಿ ರಾಗ ಸಂಗೀತಕ್ಕೆ ಸಂಬಂಧಿಸಿದ ಗ್ರಂಥವಾಗಿದ್ದು, ಮುಖಪುಟ ವಿನ್ಯಾಸವು ವರ್ಣಮಯವಾಗಿ. ರಾಗಆಲಾಪನ ಭಾವನೆ ಮೂಡುವಂತೆ ರಚಿಸಬಹುದಿತ್ತು. ಆದ್ದರಿಂದ ಇದು ಓದುಗರ, ಜನಸಾಮಾನ್ಯರ ಜ್ಞಾಪಕದಲ್ಲಿ ಉಳಿಯುವಂತಿಲ್ಲ.

### ೭.೩.೫. ಕರ್ನಾಟಕ ನೃತ್ಯ ಶೈಲಿ (೧೯೭೬)

ಈ ಮುಖಪುಟವು ತುಂಬಾ ಸರಳವಾಗಿ ಮೂಡಿ ಬಂದಿದೆ. ತಿಳಿಹಸಿರು, ನೀಲಿ, ವರ್ಣವನ್ನು ಬಳಸಿ ಚಿತ್ರಿಸಲಾಗಿದೆ. ಮುಖಪುಟದ ಎಡಭಾಗದಲ್ಲಿ ಓರ್ವ ಸಂಗೀತಪ್ರಿಯ ವ್ಯಕ್ತಿ ವೀಣೆಯನ್ನು ಹೊತ್ತು ಸಾಗುತ್ತಿರುವ ಚಿತ್ರಣ ಸೊಗಸಾಗಿದೆ. ಪಕ್ಕದಲ್ಲಿ ಅಂದರೆ ಬಲಭಾಗದ ಮಧ್ಯದಲ್ಲಿ ಗ್ರಂಥದ ಶೀರ್ಷಿಕೆಯನ್ನು ಕ್ರಮವಾಗಿ ಬರೆಯಲಾಗಿದೆ. ಕೆಳಗೆ ಲೇಖಕರಾದ ರಘುಸುತ ಎಂದು ಚಿಕ್ಕ ಅಕ್ಷರದಲ್ಲಿ ಬರೆಯಲಾಗಿದೆ. ಈ ಮುಖಪುಟವು ಇಲ್ಲಿರುವ ಚಿತ್ರಣಕ್ಕೂ, ಶೀರ್ಷಿಕೆಗೂ ಒಂದಕ್ಕೊಂದು ಸಂಬಂಧವಿಲ್ಲದಂತೆ ವಿನ್ಯಾಸಕಾರರು

ಚಿತ್ರಿಸಿದ್ದಾರೆ. ಗ್ರಂಥದ ಶೀರ್ಷಿಕೆ 'ಕರ್ನಾಟಕ ನೃತ್ಯ ಶೈಲಿ' ಎಂದಿದ್ದು ಯಾವುದಾದರೂ ನೃತ್ಯ ಪ್ರಕಾರದ ಚಿತ್ರಣವನ್ನು ಹಾಕಿದ್ದರೆ ಅದಕ್ಕೆ ಅರ್ಥವಿರುತ್ತಿತ್ತು. ಇಲ್ಲಿ ಅದಕ್ಕೆ ಬದಲಾಗಿ ಓರ್ವ ವ್ಯಕ್ತಿ ವೀಣೆಯನ್ನು ಹೊತ್ತು ಹಿಂದಕ್ಕೆ ಹೋಗುತ್ತಿರುವ ದೃಶ್ಯ ಸಂಬಂಧ ಕಲ್ಪಿಸುವಂತಿಲ್ಲ. ಒಟ್ಟಾರೆ ಮುಖಪುಟ ಖಾಲಿಖಾಲಿಯಾಗಿದ್ದು ದ್ವಿವರ್ಣಗಳಲ್ಲಿ ಚಪ್ಪಟೆ ಲೇಪನಹೊಂದಿದೆ. ಇದೊಂದು ಅಪೂರ್ಣ ವಿನ್ಯಾಸವೆಂದು ಭಾವಿಸಬಹುದು.

**೭.೩.೬ ವಿಜಯದಾಸರ ಹಾಡುಗಳು (೧೯೭೭)**

ಇಲ್ಲಿನ ಮುಖಪುಟದಲ್ಲಿ ಹಳದಿ, ಕಪ್ಪು, ಬಿಳುಪು ಬಣ್ಣಗಳನ್ನು ಬಳಸಿ ಚಿತ್ರ ರಚಿಸಲಾಗಿದೆ. ಈ ಮುಖಪುಟದ ಮೇಲ್ಭಾಗದಲ್ಲಿ ಗ್ರಂಥದ ಶೀರ್ಷಿಕೆ ಇದರ ಕೆಳಗೆ ಗೋಪಾಲಕನಾದ ಶ್ರೀ ಕೃಷ್ಣ ಗೋವಿನ ಮುಂದೆ ನಿಂತು ಕೊಳಲನ್ನು ನುಡಿಸುತ್ತಿರುವ ದೃಶ್ಯ ಸೊಗಸಾಗಿದೆ.ಇದರ ಕೆಳಗೆ ವೀಣೆ, ತಾಳ, ಪುಸ್ತಕ, ಗೆಜ್ಜೆ, ಹೂಪಾತ್ರೆಯಲ್ಲಿ ಅರಳಿರುವ ಹೂಗಳು, ಉರಿಯುತ್ತಿರುವ ದೀಪದ ಚಿತ್ರಣ ಕಂಡು ಬರುತ್ತದೆ. ಮುಖಪುಟದ ಮಧ್ಯದಲ್ಲಿರುವ ರೇಖಾಚಿತ್ರವು ಗ್ರಂಥದ ಅಳತೆಗೆ ಪ್ರಮಾಣಬದ್ಧವಾಗಿಯೆ ರೂಪಿಸಲಾಗಿದೆ. ಮುಖಪುಟ ವಿನ್ಯಾಸದಲ್ಲಿ ಚಿತ್ರವು ಎಲ್ಲಿ ಇರಿಸಿದ್ದರೆ ಚೆನ್ನಾಗಿ ಕಾಣುತ್ತದೆ ಎಂಬುವುದನ್ನು ಇಲ್ಲಿ ಕಲಾವಿದ ಯೋಚಿಸಿಯೆ ರಚಿಸಿದಂತೆ ಭಾಸವಾಗುತ್ತದೆ. ನೋಡುಗರನ್ನು ಆಕರ್ಷಿಸುವಂತಿದೆ ಆದರೆ ಈ ಮುಖಪುಟವನ್ನು ಇನ್ನೂ ಅಚ್ಚುಕಟ್ಟಾಗಿ ಆಕರ್ಷಿಸುವಂತೆ ಚಿತ್ರಿಸಬಹುದಿತ್ತು. ದಾಸಶ್ರೇಷ್ಠರಲ್ಲಿ ಒಬ್ಬರಾದ ವಿಜಯದಾಸರ ಕೀರ್ತನೆಗಳು ಈ ಗ್ರಂಥದಲ್ಲಿ ಅಡಕವಾಗಿವೆ.

**೭.೩.೭. ದೈವಭಕ್ತಿ ಗೀತಾಂಜಲಿ (೧೯೭೮)**

ಈ ಗ್ರಂಥದ ಮುಖಪುಟವು ನೀಲಿ, ಕಪ್ಪು, ಕೇಸರಿ, ವರ್ಣ ಬಳಸಿ ಮುದ್ರಿಸಲಾಗಿದೆ. ಮುಖಪುಟದ ಮೇಲ್ಭಾಗದಲ್ಲಿ ಎಡಕ್ಕೆ ಶಿವನ ಚಿತ್ರವನ್ನು ವೃತ್ತದಲ್ಲಿ ಚಿತ್ರಿಸಲಾಗಿದೆ.ಬಲಕ್ಕೆ ಗ್ರಂಥದ ಶೀರ್ಷಿಕೆಯನ್ನು ಎಡಕ್ಕೆ ಶ್ರೀ ಕೃಷ್ಣನು ಕೊಳಲು ನುಡಿಸುತ್ತಿರುವ ರೇಖಾ ಚಿತ್ರಣ, ಬಲಕ್ಕೆ ಲೇಖಕರ ಹೆಸರು ಇದರ ಕೆಳಗೆ ಪ್ರಕಾಶಕರ ವಿಳಾಸವನ್ನು ಮುದ್ರಿಸಲಾಗಿದೆ. ಇಲ್ಲಿ ಶಿವ ಮತ್ತು ಶ್ರೀ ಕೃಷ್ಣನ ಚಿತ್ರವನ್ನು ರಚಿಸಲಾಗಿದೆ. ಶೀರ್ಷಿಕೆಗೂ ಚಿತ್ರಣಕ್ಕೂ ಸಂಬಂಧವಿದೆ. ಆದರೆ ಇಲ್ಲಿನ ದೋಷವೇನೆಂದರೆ ಇದೊಂದು 'ಅಸಮತೋಲನ'[೭] ಹೊಂದಿದ ಮುಖಪುಟವಿನ್ಯಾಸವಾಗಿದೆ. ಗ್ರಂಥದ ಎಡಭಾಗಕ್ಕೆ ಚಿತ್ರಗಳನ್ನು ಉಪಯೋಗಿಸಿರುವುದರಿಂದ ನೋಡುಗರ ದೃಷ್ಟಿ ಆ ಭಾಗಕ್ಕೆ ಹೆಚ್ಚು ಆಕರ್ಷಣೆಗೊಂಡು ಚಲಿಸುವಂತೆಯಿದೆ.ಈ ಮುಖಪುಟದ ಮೈವಳಿಕೆ ಬಿಳಿವರ್ಣಗಳಲ್ಲಿ ಚಿಕ್ಕಚಿಕ್ಕ ದುಂಡಾಕಾರದ ಹೂವಿನತರ ಹೋಲುವ ಚಿತ್ರಗಳಿಂದಕೂಡಿದ್ದು, ಗಡಸು (ರಫ್) ಮೈವಳಿಕೆ ತರಹ ರೂಪಿಸಲಾಗಿದೆ. ಮುಖಪುಟವನ್ನು ಇನ್ನೂ ಆಕರ್ಷಕವಾಗಿ ಮುದ್ರಿಸಬಹುದಿತ್ತು. ಬೇರೆ ವಿವಿಧ ಬಣ್ಣಗಳನ್ನು ಬಳಸಬಹುದಿತ್ತು. ಸ್ಥಳವನ್ನು ಸರಿಯಾಗಿ ಬಳಸಿಕೊಂಡಿಲ್ಲ. ವಿನ್ಯಾಸಗಾರರು ಸ್ವಲ್ಪ ಯೋಚಿಸಿ ಇನ್ನೂ ಅಚ್ಚುಕಟ್ಟಾಗಿ ಮೂಡಿಸಬಹುದಿತ್ತು.

೦೭. Prof. S. K. Luthra : Applied Art Handbook, P-23

## ೭.೪. ಎಂಬತ್ತರ ದಶಕದಲ್ಲಿನ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

### ೭.೪.೧. ಪುಂಡರೀಕ ಮಾಲಾ (೧೯೮೬)

ಈ ಮುಖಪುಟದಲ್ಲಿ ಕೇಸರಿ, ಹಳದಿ, ನೀಲಿ ವರ್ಣಗಳನ್ನು ಬಳಸಿ ಮುದ್ರಿಸಲಾಗಿದೆ. ಮೇಲ್ಭಾಗದಲ್ಲಿ ಗ್ರಂಥದ ಶೀರ್ಷಿಕೆಯನ್ನು ಕ್ಯಾಲಿಗ್ರಾಫಿ ಅಕ್ಷರ ಶೈಲಿಯಲ್ಲಿ ಬರೆಯಲಾಗಿದೆ. ಇದರ ಕೆಳಗೆ ವೃತ್ತಾಕಾರದಲ್ಲಿ ದೈವನಾದ ವಿಠಲನನ್ನು ಚಿತ್ರಿಸಲಾಗಿದೆ. ಕೆಳಗೆ ಕಮಲದ ಹೂವಿನ ಚಿತ್ರಣವಿದೆ. ಮುಖಪುಟದ ಕೆಳಗೆ ಲೇಖಕರ ಹೆಸರನ್ನು ನೀಡಲಾಗಿದೆ. ಇಲ್ಲಿ ಆಕಾರ, ಬಣ್ಣ, ಮೈವಳಿಕೆ ,ಸ್ಥಳ ಮುಂತಾದ ಅಂಶಗಳು ಈ ಮುಖಪುಟರಚನೆಯಲ್ಲಿ ಅವುಯಾವವು ತನ್ನ ಅಧೀನತೆಯಲ್ಲಿಟ್ಟುಕೊಂಡಿಲ್ಲ. ಒಂದು ತಂಡದ ನಿರ್ವಹಣೆಗೆ ನಾಯಕ ಎಷ್ಟು ಅವಶ್ಯಕವೊ ಹಾಗೆಯೇ ಮುಖಪುಟ ವಿನ್ಯಾಸದಲ್ಲಿಯೂ ಯಾವುದಾದರೂ ಒಂದು ಅಂಗವು ನಾಯಕತ್ವ ವಹಿಸಿಕೊಳ್ಳಬೇಕು ಅದು ಅಕ್ಷರಶೈಲಿ, ವರ್ಣ, ಚಿತ್ರ ಯಾವುದಾದರೂ ಆಗಬಹುದು. ಈ ಹಿನ್ನೆಲೆಯಲ್ಲಿ ಈ ಗ್ರಂಥದ ಮುಖಪುಟದಲ್ಲಿ ಅಧೀನತೆಯ ಕೊರತೆ ಎದ್ದು ಕಾಣುವಂತಿದೆ. ಈ ಮುಖಪುಟವು ಓದುಗರನ್ನು ಆಕರ್ಷಿಸುವಂತಿಲ್ಲ. ಸರಿಯಾದ ವರ್ಣಗಳನ್ನು ಬಳಸಿಲ್ಲ. ಶೀರ್ಷಿಕೆಯನ್ನೂ ದೊಡ್ಡ ಅಕ್ಷರಗಳಲ್ಲಿ ನಮೂದಿಸಬಹುದಿತ್ತು. ವಿಠಲನ ಚಿತ್ರಣವನ್ನು ದೊಡ್ಡದಾಗಿ ಸ್ಪಷ್ಟವಾಗಿ ಚಿತ್ರಿಸಬಹುದಿತ್ತು. ವಿಠಲನಿಗೆ ಪ್ರಿಯವಾದ ಕಮಲದ ಹೂವನ್ನು ಬಿಳಿಯ ವರ್ಣದಲ್ಲಿ ಮುದ್ರಿಸಬಹುದಿತ್ತು. ಈ ಗ್ರಂಥವು ಪಂಡರಪುರದ ವಿಠಲನಿಗೆ ಸಂಬಂಧಿಸಿದ ಕಾವ್ಯ ಸಂಕಲನದಿಂದ ಕೂಡಿದೆ. ಮುಖಪುಟ ಮಾತ್ರ ಆಕರ್ಷಕವಾಗಿಲ್ಲ.

### ೭.೪.೨. ತತ್ತ್ವತೀರ್ಥ (೧೯೮೯)

ಈ ಗ್ರಂಥ ಸುಮಾರು ಎಂಟು ಬಾರಿ ಮರು ಮುದ್ರಣಗೊಂಡು ಪ್ರಖ್ಯಾತ ಗ್ರಂಥವಾಗಿದೆ. ಇದರ ಮುಖಪುಟದಲ್ಲಿ ಕಪ್ಪು, ತಿಳಿಬಿಳಿ, ನೀಲಿ, ನೇರಳೆ, ಗುಲಾಬಿ ವರ್ಣಗಳನ್ನು ಬಳಸಿ ಮುದ್ರಿಸಲಾಗಿದೆ. ಮೇಲ್ಭಾಗದಲ್ಲಿ 'ತತ್ತ್ವತೀರ್ಥ' ಎಂದು ಗ್ರಂಥದ ಶೀರ್ಷಿಕೆಯನ್ನು ಸ್ಪಷ್ಟವಾಗಿ ದಪ್ಪ ಅಕ್ಷರಗಳಲ್ಲಿ ಓದುಗರನ್ನೂ ಸೆಳೆಯುವಂತೆ ಕ್ಯಾಲಿಗ್ರಾಫಿ ಶೈಲಿಯಲ್ಲಿ ಕಪ್ಪು ವರ್ಣದಿಂದ ಬರೆಯಲಾಗಿದೆ. ಶೀರ್ಷಿಕೆಯ ಕೆಳಗೆ ಲೇಖಕರಾದ ವಿ.ಅಶ್ವತ್ಥನಾರಾಯಣರವರ ಹೆಸರು ಸಹ ಕ್ಯಾಲಿಗ್ರಾಫಿ ಶೈಲಿಯಲ್ಲಿ ನಮೂದಿಸಲಾಗಿದೆ. ಲೇಖಕರ ಹೆಸರಿನ ಕೆಳಗೆ ಚೌಕಾಕಾರದಲ್ಲಿ ಮಾನವನ ಮುಖದ ಚಿತ್ರವನ್ನು ನಕ್ಷತ್ರದಲ್ಲಿ ಬರುವಂತೆ, ಕೆಳಗೆ ಕೈ ಮುಗಿದು ಧ್ಯಾನಾಸಕ್ತರಾಗಿ ಕುಳಿತ ಕಪ್ಪುವರ್ಣದಲ್ಲಿ ಓರ್ವ ವ್ಯಕ್ತಿಯ ಚಿತ್ರಣವನ್ನು ಆಕರ್ಷಿಸುವಂತೆ ಚಿತ್ರಿಸಲಾಗಿದೆ. ಕಪ್ಪು ವರ್ಣಗಳಲ್ಲಿ ದಪ್ಪ ಮತ್ತು ತೆಳುವಾಗಿ (Thick & Thin) ಕ್ಯಾಲಿಗ್ರಾಫಿಕ್ ಅಕ್ಷರಲಿಪಿಯನ್ನು ಉಪಯೋಗಿಸಿದ್ದಾರೆ. ಈ ಮುಖಪುಟ ರಚನೆಯ ವರ್ಣಗಳು ಒಂದಕ್ಕೊಂದು ವಿರೋಧ (Contrast) ವಾಗಿವೆ. ಮುಖಪುಟ ವಿನ್ಯಾಸ ರಚನೆಯಲ್ಲಿ ವೈವಿಧ್ಯತೆಯನ್ನು ತೋರಿಸಲು ಈ ರೀತಿಯ ಭಿನ್ನಭಾವದ ಅವಶ್ಯಕತೆ ತುಂಬಾ ಇರುತ್ತದೆ. ಇಲ್ಲಿ ಕಲಾವಿದ ಚಾಚುತಪ್ಪದೆ ಅದನ್ನು ಪಾಲಿಸಿದ್ದಾರೆ. ಅದಕ್ಕಾಗಿಯೆ ಈ ಮುಖಪುಟದಲ್ಲಿ ನೋಡುಗರ 'ಕಣ್ಣಿನ ಚಲನೆಯು'[೦೮] ಎಲ್ಲಭಾಗಕ್ಕೆ ಅಥವಾ ನಾಲ್ಕು ದಿಕ್ಕಿನಕಡೆ ಸಮಾನವಾಗಿ

೦೮. Prof. G M. Rege : Adveritising Art And Ideas, P-164

ಚಲಿಸುವಂತೆ ರೂಪಿಸಲಾಗಿದೆ. ಈ ಗ್ರಂಥವು ಮನುಷ್ಯನ ಆಲೋಚನೆಗಳು, ತತ್ವಗಳ ಮೇಲೆ ಬೆಳಕು ಚೆಲ್ಲುವ ಗ್ರಂಥವಾಗಿದೆ. ಈ ಮುಖಪುಟವು ಸಾಹಿತ್ಯ ಆಸಕ್ತರನ್ನು ಸೆಳೆಯುವಂತಿದೆ.

**೭.೫. ತೊಂಬತ್ತರ ದಶಕದಲ್ಲಿನ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

**೭.೫.೧ ಸಂಗೀತ ವಾದ್ಯಗಳು (೧೯೯೧)**

ಈ ಮುಖಪುಟದಲ್ಲಿ ಬೂದು, ನೀಲಿ, ಹಸಿರು, ಕಪ್ಪು, ಬಿಳುಪು, ಕೇಸರಿ ಬಣ್ಣಗಳನ್ನು ಉಪಯೋಗಿಸಿ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಅಡ್ಡಗೆರೆ ಪಟ್ಟಿಗಳ ಸಾಲಿನಲ್ಲಿ ಗ್ರಂಥದ ಶೀರ್ಷಿಕೆಯನ್ನು ಅದರ ಕೆಳಗೆ ಲೇಖಕ ಡಾ॥ ಬಿ.ಸಿ.ದೇವ ಎಂದು ಬರೆಯಲಾಗಿದೆ. ಇದರ ಕೆಳಗೆ ಸಂಗೀತ ವಾದ್ಯಗಳಾದ ತಬಲ, ವೀಣೆ, ಪಿಟೀಲು, ಮೃದಂಗ, ಕಹಳೆ, ಇತರೆ ಚಿತ್ರಗಳನ್ನು ವಿಶೇಷವಾಗಿ ಸಾಂಕೇತಿಕ ಶೈಲಿಯಲ್ಲಿ ಚಿತ್ರವನ್ನು ಹಲವು ಬಣ್ಣಗಳಿಂದ ಆಕರ್ಷಿತವಾಗಿ ಬಿಡಿಸಲಾಗಿದೆ. ಆದರೆ ಈ ಮುಖಪುಟದಲ್ಲಿಯ ಶೀರ್ಷಿಕೆ ಅಕ್ಷರ ವರ್ಣ ಮತ್ತು ಚಿತ್ರಗಳಿಗೆ ಬಳಕೆಯಾದ ಬಣ್ಣಗಳು ಸೂಕ್ಷ್ಮವಾಗಿ ನೋಡಿದಾಗ ಮೇಲ್ಭಾಗದ ಶೇಕಡ ೪೦ ರಷ್ಟು ಖಾಲಿ ಹಾಗೂ ಮಂದವಾಗಿರುವ (ಡಲ್) ವರ್ಣಗಳ ಬಳಕೆ ಮಾಡಿರುವುದರಿಂದ ಇಲ್ಲಿನ ವರ್ಣ ಸಂಯೋಜನೆಯಲ್ಲಿ ವಿಫಲತೆ ಎದ್ದು ಕಾಣುತ್ತದೆ. ಆದರೆ ಸಂಗೀತ ವಾದ್ಯಗಳಿಗೆ ಚಪ್ಪಟೆ ಪದ್ಧತಿಯಿಂದ ಕೂಡಿದ ವರ್ಣ ಲೇಪನ ಮತ್ತು ವರ್ಣ ಸಂಯೋಜನೆಯಿಂದ ಇಲ್ಲಿಯ ಆವರಣದಲ್ಲಿ ಜೋಡಿಸಲಾದ ಪ್ರತಿಯೊಂದು ವಸ್ತುಗಳು ತನ್ನದೇ ಆದ ಅಸ್ಥಿತ್ವವನ್ನು ಹೊಂದಿವೆ. ಚಿತ್ರಕ್ಕೆ ರೂಪಿಸಿದ ವರ್ಣ ಸಂಯೋಜನೆ ನೋಡುಗರನ್ನು ತನ್ನಡೆಗೆ ತಕ್ಷಣಕ್ಕೆ ಆಕರ್ಷಿಸುವಂತಿದೆ. ಆದರೆ ಈ ಮಾತು ಶೀರ್ಷಿಕೆಗೆ ಅನ್ವಯಿಸುವಂತಿಲ್ಲ ಎಂಬುವುದನ್ನು ಎಚ್ಚರಿಕೆಯಿಂದ ಗ್ರಹಿಸಬೇಕು. ಶೀರ್ಷಿಕೆ ಹೆಸರನ್ನು ಇನ್ನೂ ದಪ್ಪ ಅಕ್ಷರಗಳಲ್ಲಿ ಸೆಳೆಯುವಂತೆ ಬರೆಯಬಹುದಿತ್ತು. ಸ್ಥಳ ಅವಕಾಶ ಬೇಕಾದಷ್ಟಿತ್ತು. ವಿನ್ಯಾಸಗಾರರು ತಮ್ಮ ಕೈಚಳಕವನ್ನು ಇನ್ನು ಸ್ವಲ್ಪ ಚುರುಕುಗೊಳಿಸಿದ್ದಾದರೆ. ಗ್ರಂಥಕ್ಕೆ ಒಂದು ಮೆರಗು ಬರುತ್ತಿತ್ತು. ಈ ಗ್ರಂಥ ಸುಮಾರು ಮೂರು ಬಾರಿ ಮರು ಮುದ್ರಣ ಕಂಡಿದೆ. ಒಳಗಡೆ ಸಂಗೀತ ವಾದ್ಯಗಳ ಪರಿಚಯ ನೀಡಲಾಗಿದೆ ಒಳಗಡೆಯ ವಿಷಯಕ್ಕೂ ಚಿತ್ರಕ್ಕೂ ಉತ್ತಮವಾದ ಸಂಬಂಧವಿದೆ ಎಂದು ಇಲ್ಲಿ ಅಭಿಪ್ರಾಯಪಡಬಹುದು.

**೭.೫.೨. ಶ್ರೀ ತ್ಯಾಗರಾಜ ಕೃತಿ ಮಂಜರಿ (೧೯೯೨)**

ಇದರ ಮುಖಪುಟದಲ್ಲಿ ಹಸಿರು, ಹಳದಿ, ಕಪ್ಪು, ಬಿಳುಪು ವರ್ಣಗಳನ್ನು ಬಳಸಿ ಚಿತ್ರಿಸಲಾಗಿದೆ. ಮುಖಪುಟದ ಮೇಲ್ಭಾಗದ ಮಧ್ಯದಲ್ಲಿ ಶೀರ್ಷಿಕೆಯಾದ ಶ್ರೀ ತ್ಯಾಗರಾಜ ಕೃತಿ ಮಂಜರಿ (ಸಂಪುಟ ಒಂದು) ಎಂದು, ಇದರ ಕೆಳಗೆ ಹಳದಿ ಪಟ್ಟಿಯ ಒಳಗೆ ತ್ಯಾಗರಾಜರು ವೀಣೆ, ತಾಳ ನುಡಿಸುತ್ತ ಕೀರ್ತನೆ ಹಾಡುತ್ತಿರುವ ದೃಶ್ಯಣ ಇದರ ಮೇಲ್ಭಾಗದಲ್ಲಿ ರಾಮ, ಲಕ್ಷ್ಮಣ, ಸೀತೆಯ ಚಿತ್ರಣವನ್ನು ಮನೋಜ್ಞವಾಗಿ ವಿನ್ಯಾಸಗಾರರು ಮೂಡಿಸಿದ್ದಾರೆ ರೇಖಾಚಿತ್ರದಿಂದ ಕೂಡಿದ ಈ ರಚನೆಯೂ ಮುಖದಲ್ಲಿ ಭಕ್ತಿ ಭಾವ ಹೊಂದಿದೆ. ತ್ಯಾಗರಾಜರ ಚಿತ್ರವು ಕಪ್ಪು ಬಿಳುಪು ವರ್ಣಗಳೊಂದಿಗೆ ಉತ್ತಮವಾಗಿ ಬೆಳಕು ನೆರಳು ಮತ್ತು ಗಾಢವಾಗಿ ಲೇಪಿಸಿದ ವರ್ಣ ರಚನೆ ಎಲ್ಲವೂ ಸೊಗಸಾಗಿ ಮೂಡಿಬಂದಿದೆ. ಇಲ್ಲಿಯ ರೇಖೆಯು

ವಿನ್ಯಾಸಗಾರನ ಭಾವನೆಗಳಿಗೆ ಅಥವಾ ಚಿಂತನೆಗಳಿಗೆ ತುಂಬಾ ಸಹಕಾರಿಯಾಗಿವೆ. ಮೃದುವಾದ ರೇಖೆ ಮತ್ತು ಗಡಸು ರೇಖೆ ಅಥವಾ ದೃಢವಾದ ರೇಖೆ ಎಲ್ಲವೂ ವಿನ್ಯಾಸಕಾರ ಬಳಸಿಕೊಂಡು ಓದುಗರ ಮನಸ್ಸಿನಲ್ಲಿ ದೃಷ್ಟಾಂತವು ಉಳಿಯುವಂತೆ ನಿರ್ಮಾಣ ಮಾಡಿದ್ದಾರೆ. ತ್ಯಾಗರಾಜರು ವೀಣೆ ನುಡಿಸುತ್ತಿರುವ ಚಿತ್ರವಂತು ನೋಡುಗರ ಗಮನ ಸೆಳೆಯುವಂತಿದೆ. ಈ ಚಿತ್ರದ ಕೆಳಭಾಗದಲ್ಲಿ ಲೇಖಕರ ಹೆಸರನ್ನು ಬರೆಯಲಾಗಿದೆ.ಈ ಗ್ರಂಥದ ಮುಖಪುಟ, ವರ್ಣ, ಚಿತ್ರಣ, ಆಕರ್ಷಕವಾಗಿದ್ದು, ಗ್ರಂಥದಲ್ಲಿ ತ್ಯಾಗರಾಜರ ಕೀರ್ತನೆಗಳ ಬಗ್ಗೆ ಮಾಹಿತಿಯಿದೆ.

**೭.೫.೩. ವೀಣಾ ವೆಂಕಟ ಗಿರಿಯಪ್ಪ (೧೯೯೩)**

ಈ ಮುಖಪುಟವು ಕಪ್ಪು, ಬಿಳುಪು, ಬೂದು ಬಣ್ಣಗಳಿಂದ ಆಕರ್ಷಕವಾಗಿ ಮೂಡಿ ಬಂದಿದೆ. ಮೇಲ್ಭಾಗದ ಎಡಕ್ಕೆ ನಾದ ದೃಶ್ಯ ಕಲಾವಿದ ಮಾಲಿಕೆ–೨ ಎಂದು ಚಿಕ್ಕದಾಗಿ ಬರೆಯಲಾಗಿದೆ. ಬಲಕ್ಕೆ ವೀಣಾ ವೆಂಕಟ ಗಿರಿಯಪ್ಪನವರ ಚಿತ್ರವನ್ನು ಸ್ಪಷ್ಟವಾಗಿ ಮುದ್ರಿಸಲಾಗಿದೆ. ಈ ಭಾವಚಿತ್ರವು ಕಪ್ಪು ಬಿಳುಪು ಛಾಯಾಚಿತ್ರವಾಗಿದೆ. ಕಲೆ ಹಿನ್ನೆಲೆಯಲ್ಲಿನ ಭಾವಚಿತ್ರ ಗ್ರಹಿಸುವುದಾದರೆ ಗಾಢವಾದ ಕಪ್ಪು ವರ್ಣ ಬೇಕೆಂದು ಹೇಳಬಹುದು. ಈ ಛಾಯಾಚಿತ್ರ ಹೆಚ್ಚಿನ ಪ್ರಮಾಣದಲ್ಲಿ ಬೆಳಕು ಉಪಯೋಗಿಸಿ ಛಾಯಾಚಿತ್ರಗಾರ ಚಿತ್ರವನ್ನು ಸೆರೆ ಹಿಡಿದಿದ್ದಾರೆ. ಈ ಕಾರಣದಿಂದ ಅವರ ಮುಖದಲ್ಲಿ ಯಾವುದೇ ಉಬ್ಬು, ತಗ್ಗು (ಮಸಲ್ಸ್) ಸ್ಪಷ್ಟವಾಗಿ ಕಾಣುತ್ತಿಲ್ಲ. ಇದೊಂದು ಪಾಸಪೋರ್ಟ್ ಚಿತ್ರದಂತೆ ಗೋಚರಿಸುತ್ತಲಿದೆ. ಮಧ್ಯಭಾಗದಲ್ಲಿ ಕೃತಿಯ ಶೀರ್ಷಿಕೆಯನ್ನು ಕಪ್ಪು–ಬಿಳುಪು ವರ್ಣದಲ್ಲಿ ಮಧ್ಯಮ ಕ್ರಮಾಂಕದ ಅಕ್ಷರದಲ್ಲಿ ಬರೆಯಲಾಗಿದೆ. ಕೆಳಗೆ ಪ್ರಕಾಶಕರ ವಿಳಾಸವನ್ನು ನೀಡಲಾಗಿದೆ. ಈ ಮುಖಪುಟದಲ್ಲಿ ಶೀರ್ಷಿಕೆಯನ್ನು ಇನ್ನೂ ದಪ್ಪ ಅಕ್ಷರಗಳಲ್ಲಿ ಗಮನ ಸೆಳೆಯುವಂತೆ ನಮೂದಿಸಬಹುದಿತ್ತು.

**೭.೫.೪. ಸ್ವರ ಜತಿ (೧೯೯೩)**

ಈ ಮುಖಪುಟದಲ್ಲಿ ಗುಲಾಬಿ, ಕೆಂಪು, ಹಸಿರು, ವರ್ಣಗಳನ್ನು ಬಳಸಿಕೊಂಡು ರಚಿಸಲಾಗಿದೆ. ಮೇಲ್ಭಾಗದಲ್ಲಿ ಸಂಗೀತ ತರಂಗಿಣಿ–೩ ಎಂದು ಹಸಿರು ಬಣ್ಣದಲ್ಲಿ ಇದರ ಕೆಳಗೆ ಕೃತಿಯ ಶೀರ್ಷಿಕೆಯನ್ನು ಈ + ರೀತಿ ಲಕ್ಷಣವಾದ ಶೈಲಿಯಲ್ಲಿ ಬರೆಯಲಾಗಿದೆ. ಆದರೆ ಈ ಶೀರ್ಷಿಕೆಯನ್ನು ಇನ್ನೂ ದೊಡ್ಡದಾಗಿ ಆಕರ್ಷಕವಾಗಿ ಮೂಡಿಸಬಹುದಿತ್ತು. ಇದರ ಕೆಳಗೆ ಮಧ್ಯದಲ್ಲಿ ಲೇಖಕರ ಹೆಸರನ್ನು ಬರೆಯಲಾಗಿದೆ. ಮುಖಪುಟದ ಕೆಳಗೆ ಪ್ರಕಾಶಕರ ವಿಳಾಸವನ್ನು ನೀಡಲಾಗಿದೆ. ಈ ಮುಖಪುಟವು ಓದುಗರನ್ನು ಸೆಳೆಯುವಂತಿಲ್ಲ, ಆಕರ್ಷಕವಾಗಿಲ್ಲ. ಉತ್ತಮ ವರ್ಣ, ಅಕ್ಷರ ಶೈಲಿಯನ್ನು ಇನ್ನೂ ಬದಲಾಯಿಸಬಹುದಿತ್ತು. ಇದೊಂದು ಸಾಧಾರಣವಾದ ಮುಖಪುಟವಾಗಿದೆ. ಒಂದು ಮುಖಪುಟದ ವಿನ್ಯಾಸದಲ್ಲಿ ಟೈಪೋಗ್ರಾಫಿ ಅಕ್ಷರಗಳು ಆ ಮುಖಪಟ ವಿನ್ಯಾಸಕ್ಕೆ ಅಳತೆ ಆಕಾರಗಳಿಂದ ಸರಿ ಹೊಂದುವಂತೆ ಅಥವಾ ಮೆಚ್ಚುಗೆಯಾಗುವಂತೆ ಇರಬೇಕು ಅಂದರೆ ಅದರಲ್ಲಿ ಬರೆದಿರುವ ಲೇಖಕರ ಹೆಸರು, ಶೀರ್ಷಿಕೆ ಸ್ಪಷ್ಟವಾಗಿ ನೋಡುಗರಿಗೆ ಕಾಣಬೇಕು. ಅವು ಯಾವುವು ಈ ಗ್ರಂಥದ ಮುಖಪುಟದಲ್ಲಿ ಕಾಣುತ್ತಿಲ್ಲ. ಅಲ್ಲದೇ ಈ

ರಚನೆಯಲ್ಲಿನ ಮತ್ತೊಂದು ಕೊರತೆ / ದೋಷವೆಂದರೆ ಹಿನ್ನೆಲೆಯಾಗಿ ಉಪಯೋಗಿಸಿದ ವರ್ಣವನ್ನೇ (ಕರ್ನಾಟಕ ಸಂಗೀತ ತರಂಗಿಣಿ–೩ ಹೊರತುಪಡಿಸಿ) ಉಳಿದ ಅಕ್ಷರಗಳಿಗೆ ಅಂದರೆ ಸಂಪಾದಕರ, ಹಾಗೂ ಅಕಾಡೆಮಿಯ ಹೆಸರುಗಳಿಗೆ ಒಂದೇ ಜಾತಿಯ ವರ್ಣವನ್ನು ಬಳಸಿರುವುದರಿಂದ ನೋಡುಗರ ಕಣ್ಣಿಗೆ ನಿರಾಸದಾಯಕ ಭಾವ ಮೂಡಿಸುತ್ತಿದೆ.

**೭.೫.೫. ಗಾನಯೋಗಿ ಪಂಚಾಕ್ಷರಿ ಗವಾಯಿ (೧೯೯೩)**

ಇದರ ಮುಖಪುಟವು ಬಾದಾಮಿ, ಬೂದು, ಕಪ್ಪು ವರ್ಣದಲ್ಲಿ ಹೆಚ್ಚು ಆಕರ್ಷಕವಾಗಿ ಮುದ್ರಿಸಲಾಗಿದೆ. ಮೇಲ್ಭಾಗದಲ್ಲಿ ಚಿಕ್ಕ ಅಕ್ಷರಗಳಲ್ಲಿ ನಾದ, ನೃತ್ಯ ಕಲಾವಿದ ಮಾಲಿಕೆ–೧ ಎಂದು ಬರೆಯಲಾಗಿದೆ.ಕೆಳಗೆ ಶೀರ್ಷಿಕೆಯಾದ ಗಾನಯೋಗಿ ಪಂಚಾಕ್ಷರಿ ಗವಾಯಿ ಎಂದು ಮಧ್ಯಮ ಅಕ್ಷರ ಶೈಲಿಯಲ್ಲಿ ಬರೆಯಲಾಗಿದೆ. ಇದರ ಕೆಳಗೆ ಹುಟ್ಟು ಕುರುಡುರಾದ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಚಿತ್ರಣವನ್ನು ಕಪ್ಪು ಶಾಯಿ ಲೇಖನಿಯನ್ನು ಬಳಸಿ ಸದೃಢವಾದ ರೇಖೆಗಳಿಂದ ಹಾಗೂ ಅಚ್ಚುಕಟ್ಟಾದ ನೆರಳು ಬೆಳಕಿನಿಂದ ಮುಖದಲ್ಲಿನ ಭಾವನೆಗಳು ಒಂದು ಭಾವ ಚಿತ್ರಕ್ಕೆ ಇರಬೇಕಾದಂತೆ ಹಾಗೂ ಅದರ ಅಳತೆ ಪ್ರಮಾಣ, ಲಕ್ಷಣಗಳು ಓದುಗರನ್ನು ಸಹಜವಾಗಿಯೆ ತನ್ನ ಕಡೆ ಆಕರ್ಷಿಸುವಂತೆ ಮೂಡಿಬಂದಿದೆ. ಇಲ್ಲಿ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ವ್ಯಕ್ತಿತ್ವ ಗುಣ ಸ್ವಭಾವವು ಕಲಾವಿದ ರೇಖಾಚಿತ್ರದ ಮೂಲಕ ನಿರೂಪಿಸಲು ಪ್ರಯತ್ನಿಸಿದ್ದಾರೆ. ಕಣ್ಣು ಮುಚ್ಚಿರುವುದಕ್ಕೂ ಮತ್ತು (ಕುರುಡುತನಕ್ಕೂ ಇರುವ) ಅಂಧತ್ವ ಇರುವುದಕ್ಕೂ ವ್ಯತ್ಯಾಸವನ್ನು ಅತ್ಯಂತ ನಾಜುಕಾಗಿ ಹಾಗೂ ಮನೋಜ್ಞವಾಗಿ ಕಣ್ಮನ ಸೆಳೆಯುವಂತೆ ಇಲ್ಲಿನ ಚಿತ್ರ ರಚಿಸಿದ್ದಾರೆ. ಇದರ ಕೆಳಗೆ ಪ್ರಕಾಶಕರ ವಿಳಾಸವನ್ನು ಮುದ್ರಿಸಲಾಗಿದೆ. ಈ ಮುಖಪುಟ ಆಕರ್ಷಕವಾಗಿ ಮೂಡಿ ಬಂದಿರಲು ಪ್ರಮುಖ ಕಾರಣ ಗವಾಯಿಗಳ ಚಿತ್ರ ನೋಡುಗರನ್ನು ಬೇಗನೆ ಸೆಳೆಯುತ್ತದೆ. ಈ ಕೃತಿಯಲ್ಲಿ ಗವಾಯಿಗಳ ಜೀವನ ಶೈಲಿ, ಸಾಧಕ–ಸಾರ್ಥಕ ಬದುಕಿನ ಹಲವು ಮಜಲುಗಳನ್ನು ಲೇಖಕರು ಅದ್ಭುತ ಪದಗಳಲ್ಲಿ ರಚಿಸಿದ್ದಾರೆ.

**೭.೫.೬. ಸಂಗ್ರಹ ಚೂಡಾಮಣಿ (೧೯೯೩)**

ಇದರ ಮುಖಪುಟದಲ್ಲಿ ಬಾದಾಮಿ ಬೂದು, ಕೆಂಪು, ಕಪ್ಪು ವರ್ಣಗಳನ್ನು ಉಪಯೋಗಿಸಲಾಗಿದೆ. ಮುಖಪುಟದ ಸುತ್ತಲೂ ಸಂಗೀತ ವಾದ್ಯಗಳ ಚಿಕ್ಕ ಚಿತ್ರಗಳನ್ನು ಬಿಡಿಸಲಾಗಿದೆ. ಒಳಗೆ ಆಯಾತಾಕಾರದ ಚೌಕದಲ್ಲಿ ಮೇಲ್ಗಡೆ ಗ್ರಂಥದ ಶೀರ್ಷಿಕೆಯನ್ನು ಮಧ್ಯದಲ್ಲಿ ಲೇಖಕರ ಹೆಸರು, ಕೆಳಗೆ ಪ್ರಕಾಶಕರ ವಿಳಾಸ ಮುದ್ರಿಸಲಾಗಿದೆ. ಇಲ್ಲಿ ಮುಖಪುಟದ ಚಿತ್ರಣ ಹಾಗೂ ಶೀರ್ಷಿಕೆ ಲೇಖಕರ ಹೆಸರಿನ ಹಿಂಭಾಗದಲ್ಲಿ ನೆರಳಿನ ರೂಪದಲ್ಲಿ ಶೀರ್ಷಿಕೆ 'ಸಂಗ್ರಹ ಚೂಡಾಮಣಿ' ಎಂದು ಮುಖಪುಟದ ತುಂಬಾ ವಾಟರ್ ಮಾರ್ಕ್ ವಿಧಾನದಿಂದ ಬರೆಯಲಾಗಿದೆ. ಇದು ಆಕರ್ಷಿಸುವಂತಿಲ್ಲ, ಇದೊಂದು ಸಹಜ ಮುಖಪುಟ ಎನ್ನಬಹುದು. 'ತೊಂಬತ್ತರ ದಶಕದಲ್ಲಿ ಲಭ್ಯವಿರುವ ತಂತ್ರಜ್ಞಾನ ಇಲ್ಲಿನ ಪ್ರಕಾಶಕರು, ಮುದ್ರಕರು ಬಳಸಿಕೊಂಡಿಲ್ಲ ಎಂದೆ ಹೇಳಬಹುದು. ಕೇವಲ ಅಕ್ಷರ ಮತ್ತು ಸಂಗೀತದ ಸಂಕೇತಗಳನ್ನು ಬಳಸಿಕೊಳ್ಳಲಾಗಿದೆ.

ಇಲ್ಲಿನ ವಿನ್ಯಾಸವು ಅದು ಸಹ ಓದುಗರ ಗಮನ ಸೆಳೆಯುವಂತಿಲ್ಲ.[೦೯] (ಇದರಲ್ಲಿ ಶ್ರೀ ಗೋವಿಂದಾಚಾರ್ಯರ ಅವರ ಆಯ್ದ ಲಕ್ಷಣ ಗೀತೆಗಳ ಸಂಗ್ರಹವಾಗಿದೆ ಅನುವಾದ ಪದ್ಮ ಗುರುದತ್ ಅವರು ಮಾಡಿದ್ದಾರೆ.)

**೭.೫.೭. ಮೈಸೂರು ಸದಾಶಿವರಾಯರು (೧೯೯೪)**

ಈ ಮುಖಪುಟದಲ್ಲಿ ಕೆಂಪು, ಬೂದು, ಕಪ್ಪು, ಹಳದಿ ಬಣ್ಣಗಳನ್ನು ಬಳಸಲಾಗಿದೆ. ಮೇಲ್ಭಾಗದಲ್ಲಿ ಚಿಕ್ಕ ಅಕ್ಷರಗಳಲ್ಲಿ ಶೀರ್ಷಿಕೆಯನ್ನು ಕೆಳಗೆ ಲೇಖಕರ ಹೆಸರನ್ನು ಬರೆದಿದೆ. ಮಧ್ಯ ಆಯಾತಾಕಾರದ ಚೌಕದಲ್ಲಿ ವಿದ್ವಾನ್ ಮೈಸೂರು ಸದಾಶಿವರಾಯರ ಚಿತ್ರವನ್ನು ಬರೆದು ಅಚ್ಚು ಹಾಕಲಾಗಿದೆ. ಕೆಳಗೆ ಪ್ರಕಾಶಕರ ವಿಳಾಸವನ್ನು ಕೊಡಲಾಗಿದೆ. ಇಲ್ಲಿ ಶೀರ್ಷಿಕೆಯನ್ನು ದೊಡ್ಡ ಅಕ್ಷರಗಳಲ್ಲಿ ಹಾಕಬೇಕಿತ್ತು. ಸದಾಶಿವರಾಯರ ಚಿತ್ರಣವನ್ನು ಹೆಚ್ಚು ಆಕರ್ಷಣೀಯವಾಗಿ ಕಾಣುವಂತೆ ಮುದ್ರಿಸಬೇಕಿತ್ತು.

**೭.೫.೮. ನಾಟ್ಯಸರಸ್ವತಿ ಜಟ್ಟಿ ತಾಯಮ್ಮ (೧೯೯೪)**

ಇಲ್ಲಿನ ಮುಖಪುಟವು ಹಳದಿ, ನೀಲಿ, ಕಪ್ಪು, ಬಿಳುಪು ವರ್ಣದಲ್ಲಿ ಮೂಡಿಬಂದಿದೆ. ಮುಖಪುಟದ ಮೇಲ್ಭಾಗದಲ್ಲಿ ಚಿಕ್ಕದಾಗಿ ಶೀರ್ಷಿಕೆ ಕೆಳಗೆ ನೀಲಿ ಪಟ್ಟಿಯಲ್ಲಿ ಸಣ್ಣ ಅಕ್ಷರಗಳಲ್ಲಿ ಲೇಖಕರ ಹೆಸರು, ಮಧ್ಯ ಚೌಕಾಕೃತಿಯಲ್ಲಿ ನಾಟ್ಯ ಸರಸ್ವತಿಯಾದ ಜಟ್ಟಿ ತಾಯಮ್ಮನ ಕಪ್ಪು-ಬಿಳುಪು ವರ್ಣದ ಚಿತ್ರಣ ಕೊಡಲಾಗಿದೆ. ಇಲ್ಲಿ ತಾಯಮ್ಮನ ಮೂಗುತಿ, ಕಿವಿಯ ಓಲೆ, ಕೊರಳ ದಪ್ಪ ಸರಗಳಿಂದ ಆಕರ್ಷಕವಾಗಿ ಮುಖ ಕಾಣುತ್ತಿದೆ. ಇಲ್ಲಿ ಜಟ್ಟಿ ತಾಯಮ್ಮಳ ಜೀವನ ಚರಿತ್ರೆ ಮೂಡಿ ಬಂದಿದೆ. ಶೀರ್ಷಿಕೆಯು ದೊಡ್ಡ ಅಕ್ಷರಗಳಲ್ಲಿ ಇರಬೇಕಿತ್ತು.

**೭.೫.೯. ಕಥಾ ಕೀರ್ತನ ಕಲೆ (೧೯೯೪)**

ಈ ಮುಖಪುಟವು ತುಂಬಾ ಸರಳ ಮಾದರಿಯಾಗಿದ್ದು, ನೀಲಿ, ಬಾದಾಮಿ, ಕೆಂಪು, ಕಪ್ಪು-ಬಿಳುಪು ವರ್ಣಗಳಿಂದ ಕೂಡಿದೆ. ಮೇಲ್ಭಾಗದಿಂದ ಸ್ವಲ್ಪ ಕೆಳಗೆ ಗ್ರಂಥದ ಶೀರ್ಷಿಕೆಯನ್ನು ಇದರ ಕೆಳಗೆ ಒಲೆ ಉರಿಯುವ ದೃಶ್ಯ, ಅದರಲ್ಲಿ ಬೆಂಕಿಯಿಂದ ಮೇಲೆದ್ದು ದೀಪದ ಮಾದರಿಯ ದೀವಿಗೆ ತುದಿಗೆ ಓಂ ಕಾರದ ಚಿಹ್ನೆ ಕೆಳಗೆ ಸಂಗೀತ ವಾದ್ಯಗಳಾದ ತಬಲ, ಮೃದಂಗ, ವೀಣೆ, ಪೀಟಿಲಿನ ಚಿತ್ರಗಳು ಮುದ್ರಿತವಾಗಿವೆ. ಕೆಳಗೆ ಪ್ರಕಾಶಕರ ವಿಳಾಸವನ್ನು ನೀಡಲಾಗಿದೆ. ಇದರಲ್ಲಿ ಸ್ಥಳ ಉಪಯೋಗ ಸರಿಯಾಗಿ ಆಗಿಲ್ಲ. ಸಮತೋಲನ ಕಾಯ್ದು ಕೊಂಡಿಲ್ಲ. ಓದುಗರನ್ನು ಆಕರ್ಷಿಸುವಂತಿಲ್ಲ.

**೭.೫.೧೦. ಕರ್ನಾಟಕ ನೃತ್ಯ ರಂಗ ನೃತ್ಯ ಶಿಲ್ಪಗಳು (೧೯೯೪)**

ಇದರ ಮುಖಪುಟವು ಕಪ್ಪು, ಪಚ್ಚೆ ಹಸಿರು, ಬಿಳುಪು, ಗುಲಾಬಿ ಬಣ್ಣಗಳಿಂದ ಕೂಡಿದೆ. ಗ್ರಂಥದ ಹೆಸರನ್ನು ಎಡಗಡೆ ಅಡ್ಡಲಾಗಿ, ಚಿಕ್ಕದಾಗಿ ಲೇಖಕರ ಹೆಸರು, ಪ್ರಕಾಶಕರ ವಿಳಾಸವಿದೆ. ಇದರ ಪಕ್ಕದಲ್ಲಿ ದೊಡ್ಡದಾಗಿ ನೃತ್ಯ ಪ್ರಕಾರದ 'ಹೊಯ್ಸಳರ'[೧೦] ಕಾಲದ ಕೆತ್ತನೆಯ ಶಿಲ್ಪದ ಚಿತ್ರವಿದೆ. ಚಿತ್ರಣವನ್ನು ನೇರವಾಗಿ

೦೯. ಸಂದರ್ಶನ: ಕೆ. ಕೆ. ಮಕಾಳಿ (ಮುಖಪುಟ ಕಲಾವಿದರು), ಕ.ವಿ.ವಿ., ಹಂಪಿ. ದಿ:೨೦೧೫

೧೦. ಡಾ. ಅಂಬಳಿಕೆ ಹಿರಿಯಣ್ಣ: ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ೯೫೧-೯೫೨

ಮುದ್ರಿಸಿ ಶೀರ್ಷಿಕೆ ಅಡ್ಡಲಾಗಿ ಮುದ್ರಿಸಲಾಗಿದೆ. ಮುಖಪುಟದಲ್ಲಿ ಅಪರೂಪಕ್ಕೇಂಬಂತೆ ಈ ರೀತಿ ಮುಖಪುಟ ವಿನ್ಯಾಸ ಆಕರ್ಷಕವಾಗಿ ಕಾಣುವಂತೆ ಇಲ್ಲಿ ರಚಿಸಲಾಗಿದೆ. ಮುಖಪುಟದಲ್ಲಿ ಸರಿಸುಮಾರು ೮೦% ರಷ್ಟು ಭಾಗ ಶಿಲ್ಪದ ಛಾಯಾಚಿತ್ರ ಬಳಸಿಕೊಂಡಿದ್ದು, ಶೀರ್ಷಿಕೆಗೆ ಆಯ್ಕೆ ಮಾಡಿಕೊಂಡ ಬಣ್ಣಗಳು ಮುಖಪುಟದ ಅಂದವನ್ನು ಹೆಚ್ಚಿಸುವಂತೆ ಹಾಗೂ ನೋಡುಗರನ್ನು ಆಕರ್ಷಿಸುವಂತೆ ಈ ಮುಖಪುಟವಿನ್ಯಾಸದ ನೋಟವೇ ಅರ್ಥೈಸುತ್ತದೆ.

### ೭.೫.೧೧. ವೇಣುಗೋಪಾಲ ದಾಸರು (೧೯೯೪)

ಈ ಮುಖಪುಟವು ನೀಲಿ, ಕಪ್ಪು, ಬಿಳುಪು, ಹಳದಿ ಬಣ್ಣಗಳಿಂದ ಕೂಡಿದೆ. ಇದರ ಮುಖಪುಟವು ಸುತ್ತಲು ನೀಲಿ ಬಣ್ಣದ ಪಟ್ಟಿ ಹೊಂದಿದ್ದು ಮೇಲೆ ಪಟ್ಟಿಯೊಳಗೆ ಹಳದಿ ಬಣ್ಣದಲ್ಲಿ ಸಣ್ಣ ಅಕ್ಷರದಲ್ಲಿ ಶೀರ್ಷಿಕೆ, ಕೆಳಗೆ ಮುದ್ರಕರ ವಿಳಾಸವಿದೆ. ಮಧ್ಯ ಆಯತ ಚೌಕಾಕಾರದಲ್ಲಿ ವೇಣುಗೋಪಾಲ ದಾಸರು ಕುಳಿತಿರುವ ಕಪ್ಪು ಬಿಳುಪು ಛಾಯಾಚಿತ್ರವು ಆಕರ್ಷಕವಾಗಿದೆ. ಆದರೆ ಇಲ್ಲಿ ಶೀರ್ಷಿಕೆ ಎದ್ದು ಕಾಣುವಂತಿಲ್ಲ. ತುಂಬಾ ಚಿಕ್ಕ ಅಕ್ಷರದಲ್ಲಿದೆ. ಇದನ್ನು ದಪ್ಪ ಅಕ್ಷರಗಳಲ್ಲಿ ಆಕರ್ಷಕವಾಗಿ ಮೂಡಿಸ ಬಹುದಿತ್ತು.

### ೭.೫.೧೨. ಡಾ. ಕೆ. ವೆಂಕಟಲಕ್ಷ್ಮಮ್ಮ (೧೯೯೫)

ಈ ಮುಖಪುಟದಲ್ಲಿ ನೀಲಿ, ಕೆಂಪು, ಗುಲಾಬಿ, ಕಪ್ಪು, ಬಿಳಿ ವರ್ಣಗಳನ್ನು ಸೇರಿಸಿ ಮುದ್ರಿಸಲಾಗಿದೆ. ಈ ಮುಖಪುಟದ ಮೇಲ್ಭಾಗದಲ್ಲಿ ಚಿಕ್ಕ ಅಕ್ಷರದಲ್ಲಿ ಪದ್ಮಭೂಷಣ ಡಾ.॥ ಕೆ.ವೆಂಕಟಲಕ್ಷ್ಮಮ್ಮ ಎಂದು ಶೀರ್ಷಿಕೆಯನ್ನು ಬರೆಯಲಾಗಿದೆ. ಕೆಳಗೆ ಪಟ್ಟಿಯಲ್ಲಿ ವೆಂಕಟಲಕ್ಷ್ಮಮ್ಮನ ಭಾವಚಿತ್ರವನ್ನು ಆಕರ್ಷಿತವಾಗಿ ಮುದ್ರಿಸಿದ್ದಾರೆ. ಇದರ ಕೆಳಗೆ ಲೇಖಕರ ಹೆಸರು, ಪ್ರಕಟಕರ ವಿಳಾಸವನ್ನು, ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿಯ ಚಿಹ್ನೆಯನ್ನು ಚಿಕ್ಕದಾಗಿ ಕೊಡಲಾಗಿದೆ. ಇದರ ಮುಖಪುಟದ ಭಾವಚಿತ್ರ ಆಕರ್ಷಿಸುವಂತಿದ್ದು, ಶೀರ್ಷಿಕೆಯ ಅಕ್ಷರ ಮಾತ್ರ ಸೆಳೆಯುವಂತಿಲ್ಲ. ಈ ಗ್ರಂಥದಲ್ಲಿ ವೆಂಕಟಲಕ್ಷ್ಮಮ್ಮನ ಜೀವನ ಚರಿತ್ರೆಯನ್ನು ವಿವರಿಸಲಾಗಿದೆ. ಇಲ್ಲಿ ೧೯೯೦ರ ದಶಕದಲ್ಲಿ ಪ್ರಕಟಣೆಗೊಂಡ ಮೈಸೂರು ಸದಾಶಿವರಾಯರು, ನಾಟ್ಯ ಸರಸ್ವತಿ ಜಟ್ಟಿ ತಾಯಮ್ಮ, ವೇಣುಗೋಪಾಲ ದಾಸರು, ಡಾ. ಕೆ. ವೆಂಕಟಲಕ್ಷ್ಮಮ್ಮ ಈ ಎಲ್ಲಾ ಕೃತಿಗಳು ಶ್ರೀರಂಗ ಪ್ರಿಂಟಿಂಗ್ ಪ್ರೆಸ್‌ನಲ್ಲಿ (೧೯೯೪-೯೫) ಮುದ್ರಣಗೊಂಡಿದ್ದು, ಆಯಾ ವಿಷಯಕ್ಕೆ ಸಂಬಂಧಿಸಿದ ವ್ಯಕ್ತಿಯ ಭಾವಚಿತ್ರಗಳನ್ನು ಮುಖಪುಟದಲ್ಲಿ ಶೇ% ೬೦ ರಷ್ಟು ಸ್ಥಳಾವಕಾಶದಲ್ಲಿ ಮುದ್ರಿಸಿದ್ದಾರೆ. ಈ ಗ್ರಂಥಗಳ ಶೀರ್ಷಿಕೆ ಅಕ್ಷರ ಶೈಲಿಯೂ ಒಂದೆ ತರದಾಗಿವೆ. ಅವುಗಳ ಅಳತೆ ಮತ್ತು ವರ್ಣಗಳಲ್ಲಿ ತುಸು ಭಿನ್ನತೆ ತೋರ್ಪಡಿಸಿದ್ದಾರೆ. ಈ ಅವಧಿಯಲ್ಲಿನ ನೃತ್ಯ ಮತ್ತು ಸಂಗೀತ ಗ್ರಂಥಗಳ ಮುಖಪುಟದಲ್ಲಿ ಯಾವುದೇತರದ ಕಲಾತ್ಮಕತೆ, ಸೃಜನಶೀಲತೆ, ಕರಕುಶಲತೆ ಮತ್ತು ಆಕರ್ಷಣೀಯತೆ ಇವು ಯಾವುವು ಇಲ್ಲವೆಂದೇ ಭಾವಸಿಕೊಳ್ಳಬಹುದು. ಬಹುಶಃ ಈ ಅವಧಿಯ ಕಾಲಘಟ್ಟದಲ್ಲಿ ನೃತ್ಯ ಮತ್ತು ಸಂಗೀತ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳು ಪ್ರಕಟಗೊಳ್ಳುತ್ತಿರುವುದೇ ದೊಡ್ಡ ಸಮಾಧಾನ, ಸಂತೋಷದ ಸಂಗತಿ ಎಂದು ಆ ಲೇಖಕರು, ಪ್ರಕಾಶಕರು, ಮುದ್ರಕರು ಭಾವಿಸಿರಬಹುದು. ಹೀಗಾಗಿ ಅವುಗಳ ಮುಖಪುಟ ಕಡೆಗೆ ಅಷ್ಟೊಂದು ಗಮನ ಹರಿಸಲಿಲ್ಲ ಎನ್ನುವುದೆ ಇವುಗಳಿಂದ ಸ್ಪಷ್ಟವಾಗಿದೆ.

## ೭.೫.೧೩. ಸುಗಮ ಸಂಗೀತ (೧೯೯೭)

ಇದರ ಮುಖಪುಟದಲ್ಲಿ ಕಪ್ಪು, ಬಿಳಿ, ಹಸಿರು, ಬಾದಾಮಿ ಬಣ್ಣಗಳನ್ನು ಬಳಸಿ ಮುದ್ರಿಸಲಾಗಿದೆ. ಎಡಭಾಗದಲ್ಲಿ ಮೇಲಿಂದ ಕೆಳಗೆ ಸೂಕ್ಷ್ಮ ಬರಿ ಹಸಿರು ಬಣ್ಣದಲ್ಲಿ ನಿಂತಿರುವ ವೀಣೆಯನ್ನು ಬಿಡಿಸಲಾಗಿದೆ. ಸುಗಮ ಸಂಗೀತಕ್ಕೆ ಬೇಕಾದ ಅಗತ್ಯ ಸಂಗೀತ ವಾದಕವಾಗಿದೆ. ಬಲಕ್ಕೆ ಮೇಲಿಂದ ಕೆಳಕ್ಕೆ ಕಪ್ಪು ಬಣ್ಣದ ಪಟ್ಟಿಯಲ್ಲಿ ಮೇಲೆ ಗ್ರಂಥದ ಶೀರ್ಷಿಕೆಯಾದ ಸುಗಮ ಸಂಗೀತ. ಒಂದು ಸಿಂಹಾವಲೋಕನ ಎಂದು ಬಿಳಿಯ ಬಣ್ಣದಲ್ಲಿ ಚಿಕ್ಕದಾಗಿ ಬರೆದಿದೆ. 'ಈ ಮುಖಪುಟ ವಿನ್ಯಾಸದಲ್ಲಿ ಎಷ್ಟು ಸ್ಪಷ್ಟತೆಯ ಅವಶ್ಯಕತೆಯಿದೆಯೋ ಅಷ್ಟು ತೋರಿಸಲು ವಿನ್ಯಾಸಕಾರ ಪ್ರಯತ್ನ ಮಾಡಿದ್ದಾರೆ. ಸ್ಪಷ್ಟತೆಯು ಮುಖಪುಟ ರಚನೆಯಲ್ಲಿ ಅತೀ ಮುಖ್ಯ ಅಂಶವಾಗಿದೆ ಮತ್ತು ಈ(ಸ್ಪಷ್ಟತೆಯ) ವಿಧಾನ ಸರಿಯಾಗಿ ಮುಖಪುಟದಲ್ಲಿ ನಿರ್ವಹಣೆಯಾದರೆ ಒಳ್ಳೆಯ ಪರಿಣಾಮವು ತೋರುತ್ತದೆ. ಇಲ್ಲಿ ಬಣ್ಣಗಳನ್ನು (ವಸ್ತುವಿನ ವಿಷಯದ) ವಿರೋಧವಾಗಿ ರೂಪಿಸಿದ್ದಾರೆ. ಆದರೂ ವರ್ಣ ಸಂಯೋಜನೆ ಸ್ಪಷ್ಟತೆಯಿಂದ ಕೂಡಿದೆ. ನೋಡುಗರಿಗೆ ಇದೊಂದು ಸಮಾಧಾನಕರ ಅನುಭವ ನೀಡುತ್ತದೆ.'[೧೧] ಕೆಳಗೆ ಮಧ್ಯದಲ್ಲಿ ಲೇಖಕರ ಹೆಸರು ಇದರ ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ ಮತ್ತು ಚಿಹ್ನೆಯನ್ನು ಮುದ್ರಿಸಲಾಗಿದೆ. ಇದರ ಶೀರ್ಷಿಕೆಯನ್ನು ದೊಡ್ಡ ಅಕ್ಷರಗಳಲ್ಲಿ ಸೆಳೆಯುವಂತೆ ಬರೆಯಬೇಕಿತ್ತು.

## ೭.೫.೧೪. ಮೈಸೂರು ಅನಂತ ಸ್ವಾಮಿ (೧೯೯೮)

ಈ ಮುಖಪುಟದಲ್ಲಿ ಗಿಳಿ ಹಸಿರು, ಕಪ್ಪು, ಬಿಳಿ ವರ್ಣಗಳನ್ನು ಬಳಸಿ ಸರಳವಾಗಿ ಮುದ್ರಿಸಲಾಗಿದೆ. ಮೇಲ್ಭಾಗದ ಮಧ್ಯಕ್ಕೆ ಸಣ್ಣ ಅಕ್ಷರಗಳಲ್ಲಿ ಕೃತಿಯ ಶೀರ್ಷಿಕೆಯನ್ನು ಇದರ ಕೆಳಗೆ ಚೌಕಾಕಾರದಲ್ಲಿ ಕಪ್ಪು ಬಿಳುಪಿನ ಅನಂತಸ್ವಾಮಿಯ ಭಾವಚಿತ್ರವನ್ನು ಮುದ್ರಿಸಲಾಗಿದೆ. ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ ಹಾಗೂ ಚಿಹ್ನೆಯನ್ನು ನೀಡಲಾಗಿದೆ. ಈ ಮುಖಪುಟ ಸರಳವಾಗಿದ್ದು, ಶೀರ್ಷಿಕೆಯು ಜನಮನ ಸೆಳೆಯಲು ಇನ್ನೂ ಸ್ವಲ್ಪ ದಪ್ಪ ಅಕ್ಷರ ಶೈಲಿಯಲ್ಲಿ ಮುದ್ರಿಸಬೇಕಿತ್ತು ಆದರೂ ಇದು ಸಮತೋಲನೆ ಹೊಂದಿದ ಮುಖಪುಟ ವಿನ್ಯಾಸ ಎನ್ನಬಹುದು. ಇಲ್ಲಿ ಅನಂತಸ್ವಾಮಿಯ ಬದುಕಿನ ಚರಿತ್ರೆ ದಾಖಲಿಸಿದ್ದಾರೆ.

## ೭.೫.೧೫. ಗಮಕ ದಿಗ್ಗಜಗಳು (೧೯೯೮)

ಇದರ ಮುಖಪುಟವನ್ನು ಕೆಂಪು, ಹಳದಿ, ಕಪ್ಪು, ಬಿಳುಪಿನ ಬಣ್ಣಗಳನ್ನು ಬಳಸಿ ಸರಳ ಮುಖಪುಟ ರಚಿಸಿದ್ದಾರೆ. ಸುತ್ತಲೂ ಕೆಂಪು ಪಟ್ಟಿಯನ್ನು ರಚಿಸಿದ್ದಾರೆ. ಮೇಲ್ಭಾಗದಲ್ಲಿ ಹಳದಿಯ ಬಣ್ಣದಲ್ಲಿ ಗ್ರಂಥದ ಶೀರ್ಷಿಕೆಯನ್ನು ಚಿಕ್ಕ ಅಕ್ಷರ ಶೈಲಿಯಲ್ಲಿ ಬರೆಯಲಾಗಿದೆ. ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು ಹಾಗೂ ಚಿಹ್ನೆಯನ್ನು ಬಿಳಿ ಬಣ್ಣದಲ್ಲಿ ಬರೆಯಲಾಗಿದೆ. ಮಧ್ಯದಲ್ಲಿ ಬಿಳಿಯ ಪಟ್ಟಿಯಲ್ಲಿ ಕಪ್ಪು ಬಿಳುಪಿನ, ಚಿತ್ರದಲ್ಲಿ ಸಂಗೀತವಾದಕಿ ಕುಳಿತು ವೀಣೆಯನ್ನು ನುಡಿಸುತ್ತಿರುವ ಚಿತ್ರಣ ಅಮೋಘವಾಗಿ ಮುದ್ರಿಸಲಾಗಿದೆ. ಇಲ್ಲಿ ಶೀರ್ಷಿಕೆಯನ್ನು ಮಾತ್ರ ಸಣ್ಣ ಅಕ್ಷರದಲ್ಲಿ ಬರೆದಿದ್ದು, ಬಿಟ್ಟರೆ ಇದು ಜನರ ಆಕರ್ಷಣೆಗೆ ಒಳಗಾಗುತ್ತಿತ್ತು. ಇದರಲ್ಲಿ ಗಮಕ ಕಲೆ ಸೇವೆ ಸಲ್ಲಿಸಿದ ದಿಗ್ಗಜರ ಪರಿಚಯವಿದೆ.

---

೧೧. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩-೧೪

### ೭.೫.೧೬. ಕೀರ್ತನ ದಿಗ್ಗಜಗಳು (೧೯೯೮)

ಈ ಗ್ರಂಥದ ಮುಖಪುಟ ರಚನೆಗೆ ಹಸಿರು, ಕಪ್ಪು, ಬಿಳಿ ವರ್ಣಗಳನ್ನು ಬಳಸಲಾಗಿದೆ. ಮೇಲ್ಭಾಗದಲ್ಲಿ ಚಿಕ್ಕದಾಗಿ ಶೀರ್ಷಿಕೆಯನ್ನು ಮಧ್ಯದಲ್ಲಿ ಬಿಳಿಯ ಪಟ್ಟಿಯಲ್ಲಿ 'ಪುರಂದರ ದಾಸರು' ವೀಣೆ, ತಾಳ ಹಿಡಿದು ಹಾಡುತ್ತಿರುವ ಚಿತ್ರ ಸೊಗಸಾಗಿದೆ. ಕೆಳಗೆ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿ, ಬೆಂಗಳೂರು ಇವರ ಚಿಹ್ನೆ ವಿಳಾಸ ನಮೂದಿಸಲಾಗಿದೆ. ಈ ಗ್ರಂಥವು ಕೀರ್ತನ ದಿಗ್ಗಜರುಗಳಾದ ಪುರಂದರದಾಸರು, ಕನಕದಾಸರು, ಹರಿದಾಸರು, ವಿಜಯದಾಸರು ರಚಿಸಿದ ಅಮೋಘ ಕೀರ್ತನೆಗಳು ಈ ಕೃತಿಯಲ್ಲಿ ಮೂಡಿ ಬಂದಿವೆ. ಆದರೆ ಇದಕ್ಕೆ ಸಂಬಂಧಪಟ್ಟಂತೆ ಪುರಂದರದಾಸರ ಚಿತ್ರಣವನ್ನು ಮೂಡಿಸಿದ್ದಾರೆ. ಇದನ್ನು ಇನ್ನೂ ಆಕರ್ಷಕವಾಗಿ ಮೂಡಿಸಬಹುದಿತ್ತು. ಶೀರ್ಷಿಕೆಯನ್ನು ತುಂಬಾ ಚಿಕ್ಕದಾಗಿ ಬರೆಯಲಾಗಿದೆ. ಆದ್ದರಿಂದ ಈ ಮುಖಪುಟವು ಸಾಹಿತ್ಯಾಸಕ್ತರ, ಓದುಗರ, ಜನಾಕರ್ಷಣೆಯನ್ನು ಸೆಳೆಯುವಲ್ಲಿ ವಿಫಲವಾದಂತಿದೆ. ಇದನ್ನು ಮುದ್ರಕರು ಗಮನಿಸಬೇಕಿತ್ತು.

ಗಮಕ ದಿಗ್ಗಜಗಳು, ಕೀರ್ತನ ದಿಗ್ಗಜಗಳು: ಕಪ್ಪು ಬಿಳುಪಿನ ರೇಖಾ ವಿನ್ಯಾಸವು ಮತ್ತು ಇದಕ್ಕೆ ಉಪಯೋಗಿಸಿರುವ ತಿಳಿಯಾದ ಕಪ್ಪು ಬಣ್ಣ, ಸೂಕ್ಷ್ಮಛಾಯೆ ಹಾಗೂ ರೇಖಾಚಿತ್ರದಲ್ಲಿನ ರೇಖೆಗಳ ಲಯಬದ್ಧತೆ ಚಲನಶೀಲತೆಯಿಂದ ಕೂಡಿವೆ. ಈ ಎರಡು ಗ್ರಂಥಗಳ ಮುಖಪುಟ ಕಲಾವಿದರು ಯಾರು? ಎಂಬುದು ತಿಳಿದಿಲ್ಲ ಅಥವಾ ಮುಖಪುಟದಲ್ಲಿ ಉಪಯೋಗಿಸಿದ ರೇಖಾಚಿತ್ರಗಳ ಕಲಾವಿದರ ಹೆಸರು, ಗ್ರಂಥದ ಒಳಗಡೆ ಎಲ್ಲಿಯೂ ನಮೂದಿಸಿಲ್ಲ. ಚಿತ್ರಕಲಾವಿದರುಗಳನ್ನು ನೃತ್ಯ ಸಂಗೀತ ಕಲಾವಲಯ ಕೃತಜ್ಞಪೂರ್ವಕವಾಗಿ ಸ್ಮರಿಸುವ ಸೌಜನ್ಯವೂ ಈ ಅವಧಿಯಲ್ಲಿ ನಡೆದಿಲ್ಲವೆಂದು ತಿಳಿದು ಬರುತ್ತದೆ (ಶಿಲ್ಪಕಲಾ, ಜಾನಪದ ಮತ್ತು ಯಕ್ಷಗಾನ ಅಧ್ಯಾಯದಲ್ಲಿ ಈ ಅಂಶವು ಕಾಣಬಹುದು).

### ೭.೫.೧೭. ಬಾಳಪ್ಪ ಹುಕ್ಕೇರಿ (೧೯೯೮)

ಈ ಮುಖಪುಟದಲ್ಲಿ ಹಸಿರು, ಕಪ್ಪು-ಬಿಳುಪು ವರ್ಣಗಳನ್ನು ಬಳಸಿ ಸರಳವಾಗಿ ಮುದ್ರಿಸಲಾಗಿದೆ. ಮೇಲ್ಭಾಗದ ಮಧ್ಯಕ್ಕೆ ಮಧ್ಯಮ ಕ್ರಮಾಂಕದ ಶೀರ್ಷಿಕೆಯನ್ನು ಮಧ್ಯೆ ಚೌಕಾಕಾರದಲ್ಲಿ ಬಾಳಪ್ಪ ಹುಕ್ಕೇರಿಯ ಭಾವಚಿತ್ರವನ್ನು ಕಪ್ಪು-ಬಿಳಿಯ ವರ್ಣದಲ್ಲಿ ನೈಜ ಭಾವಚಿತ್ರವನ್ನು ಮುದ್ರಿಸಿದೆ. ಇದರ ಕೆಳಗೆ ಆಯತಾಕಾರದ ಚೌಕದಲ್ಲಿ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿಯ ವಿಳಾಸ ಚಿಹ್ನೆಯನ್ನು ಸೊಗಸಾಗಿ ನಮೂದಿಸಲಾಗಿದೆ. ಈ ಮುಖಪುಟವು ಸರಳವಾಗಿ ನೈಜವಾಗಿ ಆಕರ್ಷಿಸುವಂತೆ ಮೂಡಿಬಂದಿದೆ.

### ೭.೫.೧೮. ಬೆಳದಿಂಗಳ ಹಕ್ಕಿ ಪಿ. ಕಾಳಿಂಗರಾವ್ (೧೯೯೯)

ಇದರ ಮುಖಪುಟದಲ್ಲಿ ನೀಲಿ, ನೇರಳೆ, ಕೆಂಪು, ಕಪ್ಪು-ಬಿಳಿ ವರ್ಣಗಳಿಂದ ಕೂಡಿದ ಮುಖಪುಟ ಅತ್ಯಂತ ಸುಂದರವಾಗಿ ಮೂಡಿಬಂದಿದೆ. ಮೇಲ್ಭಾಗದಲ್ಲಿ ಬಿಳಿ ಕೆಂಪು ಮಿಶ್ರಣದ ಶೀರ್ಷಿಕೆಯು ಎದ್ದು ಕಾಣುವಂತೆ ಓದುಗರನ್ನು ಸೆಳೆಯುವಂತೆ ಬರೆದಿದ್ದಾರೆ. ಕೆಳಗಡೆ ಎಡಕ್ಕೆ ಪಿ. ಕಾಳಿಂಗರಾವ್‌ರವರ ಕಪ್ಪು ಬಿಳುಪಿನ ಭಾವಚಿತ್ರವು ತುಂಬಾ ಸುಂದರವಾಗಿ ಮುದ್ರಿಸಲಾಗಿದೆ. ಭಾವಚಿತ್ರದ ಬಲಕ್ಕೆ ಬೆಳದಿಂಗಳಿನ

ಚಂದ್ರ ಅದರ ಕೆಳಗೆ ಹಾರಿ ಹೋಗುತ್ತಿರುವ ಎರಡು ಪಕ್ಷಿಗಳು ನೋಡಲು ಅಮೋಘವಾಗಿ ಕಾಣುವಂತೆ ಚಿತ್ರಿಸಿದ್ದಾರೆ. ಇದರ ಕೆಳಗೆ ಲೇಖಕರ ಹೆಸರನ್ನು ಕೆಂಪು ವರ್ಣದಲ್ಲಿ ಸ್ವಲ್ಪ ಕಾಣದಂತೆ ಬರೆಯಲಾಗಿದೆ. ಮುಖಪುಟದ ಕೆಳಗೆ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿಯ ವಿಳಾಸ ಮತ್ತು ಚಿಹ್ನೆಯನ್ನು ಕಪ್ಪು-ಕೆಂಪು ವರ್ಣದಲ್ಲಿ ಮುದ್ರಿಸಿದ್ದಾರೆ. ಈ ಗ್ರಂಥದ ಮುಖಪುಟವನ್ನು ವಿನ್ಯಾಸಗಾರರು ಅತ್ಯಂತ ಅರ್ಥಗರ್ಭಿತವಾಗಿ ಮೂಡಿಸಿದ್ದಾರೆ. ಶೀರ್ಷಿಕೆಗೂ, ಚಿತ್ರಣಕ್ಕೂ ಸಂಬಂಧ ಕಲ್ಪಿಸುವ ಭಾವನೆ ಈ ಮುಖಪುಟದಲ್ಲಿ ಮೂಡಿ ಬಂದಿದೆ.

**೭.೫.೧೯. ಕೀರ್ತನ ಕೇಸರಿ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು (೧೯೯೯)**

ಈ ಮುಖಪುಟವನ್ನು ಕೆಂಪು, ಕೇಸರಿ, ಹಳದಿ, ಬಿಳಿಯ ವರ್ಣದಲ್ಲಿ ಮುದ್ರಿಸಿದ್ದಾರೆ. ಮೇಲ್ಭಾಗದಲ್ಲಿ ಶೀರ್ಷಿಕೆಯ ಹೆಸರನ್ನು ಬರೆಯಲಾಗಿದೆ. ಕೆಳಗೆ ಲೇಖಕರ ಹೆಸರನ್ನು ಅತಿ ಚಿಕ್ಕದಾಗಿ ಬರೆದಿದ್ದಾರೆ. ಇದರ ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ ನೀಡಿದ್ದಾರೆ. ಮಧ್ಯಭಾಗದಲ್ಲಿ ದೊಡ್ಡದಾದ ಚೌಕದಲ್ಲಿ ಶಿವಮೂರ್ತಿ ಶಾಸ್ತ್ರಿಯವರ ಭಾವಚಿತ್ರವನ್ನು ಕೆಂಪು-ಬಿಳುಪು, ಕೇಸರಿ ವರ್ಣದಲ್ಲಿ ಮುದ್ರಿಸಿದ್ದಾರೆ. ಈ ಮುಖಪುಟದ ಭಾವಚಿತ್ರ ಓದುಗರನ್ನು ಸೆಳೆಯುತ್ತದೆ. ಆದರೆ ಇಲ್ಲಿ ವರ್ಣಗಳ ಆಯ್ಕೆ ಸರಿಯಾಗಿ ಮಾಡಿಕೊಂಡು ಮುದ್ರಿಸಿದ್ದರೆ ಈ ಮುಖಪುಟ ಇನ್ನೂ ಹೆಚ್ಚು ಆಕರ್ಷಕವಾಗಿ ಮೂಡಿ ಬರುತ್ತಿತು. ಒಟ್ಟಾರೆ ಮುಖಪುಟವು ಮಂದ(ಡಲ್) ವರ್ಣಗಳಿಂದ ಕೂಡಿದ್ದು ಯಾವುದೆ ಆಕರ್ಷಣಿಯ ಗುಣಹೊಂದಿರುವುದಿಲ್ಲ.

**೭.೫.೨೦. ಅಷ್ಟದಿಕ್ಪಾಲಕ ಮತ್ತು ನವಗ್ರಹ ಕೃತಿ ಮಾಲಿಕಾ (೧೯೯೯)**

ಈ ಮುಖಪುಟದಲ್ಲಿ ನೀಲಿ, ಕೆಂಪು, ಹಳದಿ, ಬಿಳಿಯ ಬಣ್ಣಗಳನ್ನು ಬಳಸಿ ಮುಖಪುಟ ರಚಿಸಲಾಗಿದೆ. ಮೇಲ್ಭಾಗದಲ್ಲಿ ಕೆಂಪು ಬಿಳಿ ವರ್ಣದಲ್ಲಿ ಮಧ್ಯಮ ಅಕ್ಷರದಲ್ಲಿ ಕೃತಿಯ ಹೆಸರನ್ನು ಬರೆಯಲಾಗಿದೆ. ಅಷ್ಟ ದಿಕ್ಪಾಲಕ ದೇವರಲ್ಲಿ ಇಲ್ಲಿ ಕೇವಲ ಐದು ದೇವರ ಚಿತ್ರಣವನ್ನು ಹಳದಿ, ಕೆಂಪು ಬಿಳಿ ವರ್ಣದಲ್ಲಿ ಚಿತ್ರ ಬಿಡಿಸಿ ಮುದ್ರಿಸಲಾಗಿದೆ. ಮಧ್ಯದ ಕೊನೆಗೆ ಲೇಖಕರ ಹೆಸರನ್ನು ಚಿಕ್ಕದಾಗಿ ಮುಖಪುಟದ ಕೆಳಗೆ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿಯ ವಿಳಾಸವನ್ನು ನೀಡಲಾಗಿದೆ. ಇಲ್ಲಿ ಅಷ್ಟದಿಕ್ಪಾಲಕರ ಚಿತ್ರವನ್ನು ನವಗ್ರಹದ ಚಿತ್ರಣ ನೀಡಿದ್ದರೆ ಚೆನ್ನಾಗಿರುತ್ತಿತ್ತು. ಆದರೂ ಇದು ಆಕರ್ಷಕವಾಗಿದೆ.

'ಬಾಳಪ್ಪ ಹುಕ್ಕೇರಿ', 'ಬೆಳದಿಂಗಳ ಹಕ್ಕಿ ಪಿ. ಕಾಳಿಂಗರಾವ್', 'ಕೀರ್ತನ ಕೇಸರಿ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು', 'ಅಷ್ಟದಿಕ್ಪಾಲಕ ಮತ್ತು ನವಗ್ರಹ ಕೃತಿ ಮಾಲಿಕಾ' ಈ ನಾಲ್ಕು ಗ್ರಂಥಗಳ ಮುಖಪುಟವು ಶ್ರೀರಂಗ ಪ್ರಿಂಟರ್ಸ್‌ನಲ್ಲಿ (೧೯೯೯ರಲ್ಲಿ) ಮುದ್ರಣಗೊಂಡಿವೆ. ಕೇವಲ ಗ್ರಂಥಕ್ಕೊಂದು ರಕ್ಷಾಪುಟದ ಅವಶ್ಯಕತೆಯಿದೆ ಎಂಬ ಹಿನ್ನೆಲೆಯಲ್ಲಿ ರೂಪಗೊಂಡಿರುವಂತೆ ಗೋಚರಿಸುತ್ತದೆ. ಈ ರೀತಿ ಮುಖಪುಟ ರಚನೆಯಿಂದ ಓದುಗರಿಗೆ ಶೀರ್ಷಿಕೆಯೊಂದಿಗೆ ಅವರ ಭಾವಚಿತ್ರ ತೋರಿಸುವ ಮೂಲಕ ಒಳಗಡೆಯ ವಿಷಯವನ್ನು ಸಂವಹನಿಸಲು ಪ್ರಯತ್ನಿಸಿದ್ದಾರೆ. 'ಓದುಗರು ಪುಸ್ತಕ ಓದುವುದಕ್ಕಿಂತ ಮುಂಚೆ

ಗಮನಿಸುವುದು. ಆ ಪುಸ್ತಕದ ಮುಖಪುಟ ಅದನ್ನು ವಿನ್ಯಾಸಗೊಳಿಸುವುದು. ಒಂದು ರೀತಿಯ ಸವಾಲು ಮತ್ತು ಒಂದು ರೀತಿಯ ಉತ್ಸಾಹ ಇವೆರೆಡು ಮುಖಪುಟ ವಿನ್ಯಾಸಕ್ಕೆ ಸಿಗುವ ಫಲಿತಾಂಶದ ಮೇಲೆ ಅವಲಂಬಿತವಾಗಿರುತ್ತದೆ. ಒಂದು ವೇಳೆ ನೀವು ಮುದ್ರಕರು / ಪ್ರಕಾಶಕರು ಲೇಖಕರಾಗಿದ್ದು ಸಣ್ಣಪುಟ್ಟ ಅಂಶಗಳನ್ನು ನೆನಪಿನಲ್ಲಿ ಇಟ್ಟುಕೊಂಡು ಮುಖಪುಟವಿನ್ಯಾಸವನ್ನು ಸಿದ್ದಗೊಳಿಸಬೇಕು ಮತ್ತು ವಿನ್ಯಾಸ ಪೂರ್ವಭಾವಿಯಾಗಿ ಕೆಲವೊಂದು ಅಂಶಗಳು ನಿಮಗೆ ಗೊತ್ತಿಲ್ಲದೆ ಇರಬಹುದು. ಅಂತಹ ಸಂದರ್ಭದಲ್ಲಿ ವೃತ್ತಿಪರ ಮುಖಪುಟ ಕಲಾವಿದರ ಸಹಾಯ ಪಡೆಯುವುದು ಒಳಿತು. ಆದರೆ ಇಲ್ಲಿನ ಈ ನಾಲ್ಕು ಮುಖಪುಟಕ್ಕೆ ಮುದ್ರಕರು ಇಂತಹ ಯಾವುದೇ ವಿಷಯದಕಡೆ ಗಮನಿಸಲಿಲ್ಲ'[೧೨] ಎಂದು ತಿಳಿದು ಬರುತ್ತದೆ.

**೭.೫.೨೧. ಕರ್ನಾಟಕ ಕಲಾವಿದರು ಕಥಾ ಕೀರ್ತನೆ (೨೦೦೦)**

ಈ ಮುಖಪುಟವು ಆಕರ್ಷಕವಾಗಿದೆ. ಇಲ್ಲಿ ಕೇಸರಿ, ಹಳದಿ, ಹಸಿರು, ಕಪ್ಪು, ಬಿಳಿ ಬಣ್ಣಗಳನ್ನು ಬಳಸಲಾಗಿದೆ. ಇಲ್ಲಿ ಮೇಲ್ಭಾಗದಿಂದ ಕಲ್ಲಿನ ಮಂಟಪ ಶೈಲಿಯ ಚಿತ್ರವನ್ನು ಸೊಗಸಾಗಿ ಮೂಡಿಸಲಾಗಿದೆ. ಮಂಟಪದ ಮೇಲ್ಭಾಗದಲ್ಲಿ ಆರು ಪಕ್ಷಿಗಳ ಸಾಲನ್ನು ಬಿಡಿಸಲಾಗಿದು ಮತ್ತು ಎರಡು ಕಂಬಗಳನ್ನು ಬಿಡಿಸಲಾಗಿದೆ. ಮಂಟಪದ ಒಂದು ಜಗುಲಿಯ ಸಾಲಿನಲ್ಲಿ ಕಮಲದ ಆರು ಹೂಗಳ ಚಿತ್ರ ಮೂಡಿವೆ. ಇವುಗಳ ಇನ್ನೊಂದು ಜಗುಲಿಯ ಸಾಲಿನಲ್ಲಿ ಸಂಗೀತ ವಾದ್ಯಗಳಾದ ಮೃದಂಗ ವೀಣೆ, ಪುಸ್ತಕ, ತಾಳ, ಗೆಜ್ಜೆ ತಬಲಗಳ ಚಿತ್ರ ಕಾಣಬಹುದು. ಮಂಟಪದ ಒಳಭಾಗದ ಮೇಲ್ಗಡೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಎಂದು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಬರೆಯಲಾಗಿದೆ. ಇದರ ಕೆಳಗೆ ಒಂಟಿಕಾಲಿನಲ್ಲಿ ನಿಂತು ನೃತ್ಯ ಮಾಡುತ್ತಾ ವೀಣೆ ನುಡಿಸುತ್ತಿರುವ ಸ್ತ್ರೀಯ ಭಾವ ಭಂಗಿಯ ಚಿತ್ರಣ ನೋಡಗರ ಮನಸೂರೆಗೊಳ್ಳುತ್ತದೆ. ಮಂಟಪದ ಕೆಳಭಾಗದಲ್ಲಿ ಶೀರ್ಷಿಕೆಯನ್ನು ಎದ್ದು ಕಾಣುವಂತೆ ಬರೆಯಲಾಗಿದೆ. ಇದರ ಕೆಳಗೆ ಮುದ್ರಕರ ವಿಳಾಸವನ್ನು ನಮೂದಿಸಿದ್ದಾರೆ.

**೭.೬. ಇಪ್ಪತ್ತೊಂದನೆಯ ಶತಮಾನದ ಮೊದಲನೆಯ ದಶಕದ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

**೭.೬.೧. ಕರ್ನಾಟಕ ಕಲಾವಿದರು ಸುಗಮ ಸಂಗೀತ (೨೦೦೧)**

ಈ ಮುಖಪುಟವು ಸಹ ಮೇಲೆ ತಿಳಿಸಿದ ಮಂಪಟ ಶೈಲಿಯಲ್ಲಿದೆ.ಆದರೆ ಇಲ್ಲಿ ವರ್ಣಗಳ ಬದಲಾವಣೆಯಾಗಿದೆ.ಹಿಪ್ಪು ನೇರಳೆ, ನೀಲಿ, ಹಳದಿ, ಕೆಂಪು, ಕೇಸರಿ, ಕಪ್ಪು, ಬಿಳಿಯ ವರ್ಣ ಬಳಸಿ ಮುಖಪುಟ ರಚಿಸಲಾಗಿದೆ.ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಎಂದು ಮಂಟಪದ ಒಳಗಡೆ ಮತ್ತು ಕೆಳಗೆ ಎರಡು ಬಾರಿ ಮುದ್ರಣವಾಗಿದೆ. ಮಂಟಪದ ಕೆಳಗೆ ಶೀರ್ಷಿಕೆಯನ್ನು ಸ್ಪಷ್ಟವಾಗಿ ಮೂಡಿಸಲಾಗಿದೆ. ಗ್ರಂಥದ ಒಳಗಡೆ ಕರ್ನಾಟಕದಲ್ಲಿ ಕಲಾವಿದರು ಸುಗಮ ಸಂಗೀತ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದ ವಿವರಗಳಿವೆ.

೧೨. ಸಂದರ್ಶನ: ಪ. ಸ. ಕುಮಾರ್ (ಮುಖಪುಟ ಕಲಾವಿದರು), ಬೆಂಗಳೂರು ದಿ:೨೦೧೩-೧೪

### ೭.೬.೨. ಕರ್ನಾಟಕ ಕಲಾವಿದರು ಗಮಕ (೨೦೦೧)

ಈ ಮುಖಪುಟದಲ್ಲಿ ಸಹ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಚಿಹ್ನೆಯನ್ನು ದೊಡ್ಡದಾಗಿ ಮುದ್ರಿಸಲಾಗಿದೆ. ಮಂಟಪ ಶೈಲಿಯ ಚಿಹ್ನೆಯ ಕೆಳಗೆ ಶೀರ್ಷಿಕೆಯ ಸ್ಪಷ್ಟ ಹೆಸರು ನಮೂದಾಗಿದೆ. ಆದರೆ ಒಂದೊಂದು ಗ್ರಂಥಕ್ಕೂ ವರ್ಣಗಳ ಬದಲಾವಣೆ ಕಾಣಬಹುದು. ಇಲ್ಲಿ ಕಡು ನೀಲಿ, ಆಕಾಶ ನೀಲಿ, ಹಳದಿ, ಕಪ್ಪುಬಿಳಿ ವರ್ಣಗಳನ್ನು ಕಾಣಬಹುದು. ಈ ಗ್ರಂಥದಲ್ಲಿ ಕರ್ನಾಟಕದ ಕಲಾವಿದರು ಗಮಕ ಕಲೆಗೆ ಸಲ್ಲಿಸಿದ ಸೇವೆ, ಕಲೆಯನ್ನು ಗಮನಿಸಬಹುದು.

### ೭.೬.೩. ಕರ್ನಾಟಕ ಕಲಾವಿದರ ನೃತ್ಯ (೨೦೦೧)

ಈ ಮುಖಪುಟದಲ್ಲಿಯೂ ಸಹ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಚಿಹ್ನೆಯಾದ ಮಂಟಪದ ಒಳಗೆ ವೀಣೆ ನುಡಿಸುತ್ತಿರುವ ಸ್ತ್ರೀಯ ಚಿತ್ರಣವಿದೆ. ಇಲ್ಲಿ ವರ್ಣಗಳ ಬದಲಾವಣೆ ಕಾಣಬಹುದು. ಹಸಿರು, ಕೆಂಪು, ಹಳದಿ, ಕಂದು, ಕಪ್ಪು, ಬಿಳಿಯ ವರ್ಣಗಳು ಪ್ರಧಾನವಾಗಿವೆ. ಈ ಗ್ರಂಥದ ಮುಖಪುಟವು ಸಹ ಸ್ಪಷ್ಟತೆಯಿಂದ ಕೂಡಿದೆ. ಇಲ್ಲಿ ನೃತ್ಯ ಕಲಾವಿದರು ಕರ್ನಾಟಕ ರಾಜ್ಯಕ್ಕೆ ನೀಡಿದ ಕೊಡುಗೆಗಳನ್ನು ಗಮನಿಸಬಹುದು.

### ೭.೬.೪. ಕರ್ನಾಟಕ ಕಲಾವಿದರು ಹಿಂದೂಸ್ತಾನಿ ಸಂಗೀತ (೨೦೦೧)

ಈ ಮುಖಪುಟವು ಸಹ ಅತ್ಯಂತ ಆಕರ್ಷಕವಾಗಿ ಮೂಡಿ ಬಂದಿದೆ. ಇಲ್ಲಿ ಹಳದಿ, ನೀಲಿ, ಕೆಂಪು, ಕಪ್ಪು ವರ್ಣಗಳನ್ನು ಗಮನಿಸಬಹುದು.ಈ ಗ್ರಂಥದ ಶೀರ್ಷಿಕೆ ಅತ್ಯಂತ ಸ್ಪಷ್ಟ, ಉತ್ತಮ ಶೈಲಿ, ಅಕ್ಷರಗಳ ಗಾತ್ರ ಚೆನ್ನಾಗಿ ಬರೆಯಲಾಗಿದೆ. ಈ ಗ್ರಂಥದಲ್ಲಿ ಹಿಂದೂಸ್ತಾನಿ ಸಂಗೀತಕ್ಕೆ ಕರ್ನಾಟಕದ ಕಲಾವಿದರು ಸೇವೆ ಮಾಡಿದ ಪರಿಯನ್ನು ಎಳೆಎಳೆಯಾಗಿ ರಚಿಸಲಾಗಿದೆ. ಹಿಂದೂಸ್ತಾನಿ ಗಾಯನದಲ್ಲಿ ಭಾರತರತ್ನ ಪಡೆದ ಹಾವೇರಿ ಜಿಲ್ಲೆಯ ಹಾನಗಲ್ ತಾಲ್ಲೂಕಿನ ಗಂಗೂಬಾಯಿಯವರು ಓರ್ವ ಸ್ತ್ರೀಯಾಗಿದ್ದರು. ಅವರ ಸಂಗೀತ ದಾರಿ ಬಲು ಕಠಿಣವಾಗಿದ್ದರು. ಅದನ್ನು ಬಾಲ್ಯದಿಂದಲೇ ಮೈಗೂಡಿಸಿಕೊಂಡು ಸಾಧಿಸಿ ತೋರಿಸಿದ ಪರಿಯನ್ನು ಈ ಗ್ರಂಥದಲ್ಲಿ ತಿಳಿಯಬಹುದು. ಅದೇ ರೀತಿ ಕರ್ನಾಟಕದ ಇನ್ನೋರ್ವ ದಿಗ್ಗಜ ಭಾರತರತ್ನ ಪ್ರಶಸ್ತಿ ಪಡೆದ ಭೀಮಸೇನ್ ಜೋಷಿಯವರೂ ಸಹ ಸುಗಮ ಸಂಗೀತ ಕ್ಷೇತ್ರದಲ್ಲಿ ಅಪಾರ ಗಾಯನ ಕಲೆಯನ್ನು ಮೈಗೂಡಿಸಿಕೊಂಡು ಭಾರತ ದೇಶವೇ ಸುಗಮ ಸಂಗೀತದ ಪರಿಯನ್ನು ಆಲಿಸುವಂತೆ ಮಾಡಿದ್ದಾರೆ. ಇವರು ಕೆಲವು ಸಿನಿಮಾಗಳಿಗೂ ಸಹ ಗಾಯನವನ್ನು ಹಿಂದೂಸ್ಥಾನಿ ಸಂಗೀತ ಶೈಲಿಯಲ್ಲಿಯೇ ಹಾಡಿ ಮನೆ ಮಾತಾದರು. ಇನ್ನು ಹಲವು ಕಲಾವಿದರ ಸೇವೆ, ಹಿಂದೂಸ್ಥಾನಿ ಸಂಗೀತದ ಮಜಲುಗಳನ್ನು ಈ ಗ್ರಂಥ ಒಳಗೊಂಡಿದೆ.

'ಐಕ್ಯತೆ/ಸಮಾನತೆ'[೧೩] (uniformity) ಹೊಂದಿದ ಮುಖಪುಟ : ಕರ್ನಾಟಕ ಕಲಾವಿದರು ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಗೊಂಡ ಗ್ರಂಥಗಳಾಗಿವೆ. ಇಲ್ಲಿನ ಐದು ಗ್ರಂಥಗಳ ಮುಖಪುಟ ವಿನ್ಯಾಸವು

೧೩. Prof. G.M.Rege : Adveritising Art And Ideas, P-161

ಒಂದೇತರನಾಗಿ ರಚಿಸಿದ್ದಾರೆ. ಮುಖಪುಟದಲ್ಲಿ ಬಳಸಲಾದ ಮಂಟಪ ನೃತ್ಯಭಂಗಿ ಎಲ್ಲವೂ ಐದು ಮುಖಪುಟಗಳಲ್ಲಿ ಒಂದೆಯಾಗಿದೆ. ಕೇವಲ ಮುನ್ನೆಲೆ ಮತ್ತು ಹಿನ್ನೆಲೆ ವರ್ಣಗಳ ಮೂಲಕ ಇವುಗಳಲ್ಲಿ ವೈವಿಧ್ಯತೆ ತೋರಿಸಲು ಪ್ರಯತ್ನಿಸಿದ್ದಾರೆ. ಇಲ್ಲಿ ಚಿತ್ರವೇ ಪ್ರಧಾನವಾದುದ್ದರಿಂದ ಇನ್ನಿತರ ಆಯಾಮಗಳನ್ನು ತೆಗೆದು ಹಾಕಿದುದ್ದರಿಂದ ಬಣ್ಣವಷ್ಟೇ ಪ್ರಧಾನವಾಗಿ ಇಟ್ಟುಕೊಂಡು ಮುಖಪುಟಕ್ಕೆ ಪ್ರಾಮುಖ್ಯತೆಯನ್ನು ತೋರಿಸಲು ವಿನ್ಯಾಸಕಾರರು ಇಲ್ಲಿ ಪ್ರಯತ್ನವನ್ನು ಮಾಡಿರಬಹುದು. ಬಣ್ಣಗಳನ್ನು ಬೇರೆ ಬೇರೆ ರೀತಿಯಲ್ಲಿ ಹಾಗೂ ಅವುಗಳ ಛಾಯಾಗಳು ಪ್ರಖರತೆಯಲ್ಲಿ ಬದಲಾಗುವಂತೆ ಸೂಕ್ಷ್ಮವಾಗಿ ವರ್ಣಗಳನ್ನು ಬೆರೆಸಿ ಮುಖಪುಟ ರೂಪಿಸಿರುವುದು ಗಮನಿಸಿರಬಹುದು.

ಒಟ್ಟಾರೆ ಇಂತಹ ಮುಖಪುಟಗಳಿಗೆ ಐಕ್ಯತೆ ಹೊಂದಿದ ಮುಖಪುಟವೆಂದು ಹೆಸರಿಸಬಹುದು. ಈ ರೀತಿಯ ಮುಖಪುಟ ಬರಲು ಪ್ರಮುಖ ಕಾರಣವೆಂದರೆ ಅವುಗಳ ರಚನೆಯು ಒಬ್ಬರೆ ಕಲಾವಿದರು / ಒಂದೇ ಮುದ್ರಣದಲ್ಲಿ / ಪ್ರಕಾಶಕರು ಒಬ್ಬರೆಯಾಗಿರುವುದು / ಒಂದು ವರ್ಷದ ಅವಧಿಯಲ್ಲಿ ಪ್ರಕಟಗೊಂಡಿರುವುದು. ಇವುಗಳಲ್ಲಿ ಯಾವುದಾದರೂ ಒಂದು ಅಥವಾ ಎಲ್ಲವೂ ಅನುಸರಿಸಿರುತ್ತಾರೆ. ಇಲ್ಲಿಯೂ ಸಹ ಮುದ್ರಕರು ಒಬ್ಬರೇ ಹಾಗೂ ಮುದ್ರಣಗೊಂಡ ವರ್ಷವೂ ಒಂದೇ ಆಗಿದ್ದರಿಂದ ಇವುಗಳಿಗೆ ಐಕ್ಯತೆ ಹೊಂದಿದ ಮುಖಪುಟವೆಂದು ಹೆಸರಿಸಬಹುದು. ಕಾರಣ ಓದಗರು/ನೋಡುಗರು ಇಂಥ ಮಾದರಿಯ ವಿನ್ಯಾಸಗಳ ಗ್ರಂಥಗಳನ್ನು ನೋಡಿದ ಕ್ಷಣ ಇದು ಯಾರ ಬರಹ?, ಯಾರು ಪ್ರಕಾಶಕರು?, ಯಾವ ವರ್ಷ ಮದ್ರಣಗೊಂಡಿದೆ?, ಮತ್ತು ಎಲ್ಲಿ ? ಇತ್ಯಾದಿ ಅಂಶಗಳು ಸುಲಭವಾಗಿ ಗುರುತಿಸುತ್ತಾರೆ

**೭.೬.೫. ರಾಗ ಆಲಾಪನ ಪದ್ಧತಿ ತಾನ ಮತ್ತು ಪಲ್ಲವಿ (೨೦೦೩)**

ಈ ಗ್ರಂಥದ ಮುಖಪುಟದಲ್ಲಿ ನೀಲಿ, ಹಸಿರು, ಹಳದಿ, ಕಪ್ಪು, ಬಿಳಿ, ಕೆಂಪು ವರ್ಣಗಳನ್ನು ಇಲ್ಲಿ ಕಾಣಬಹುದು. ಮೇಲ್ಭಾಗದಲ್ಲಿ ಕೃತಿಯ ಶೀರ್ಷಿಕೆಯನ್ನು ಹಳದಿ ವರ್ಣದಲ್ಲಿ ಮಧ್ಯಮ ಅಕ್ಷರದಲ್ಲಿ ಬರೆಯಲಾಗಿದೆ. ಕೆಳಗೆ ಲೇಖಕರ ಹೆಸರು, ಇದರ ಕೆಳಗೆ ಉದಯಿಸುತ್ತಿರುವ ಸೂರ್ಯನ ಚಿತ್ರಣವನ್ನು ಕಾಣಬಹುದು. ಮುಖಪುಟದ ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ನೃತ್ಯದ ಚಿಹ್ನೆಯನ್ನು ವಿಳಾಸವನ್ನು ಮುದ್ರಿಸಿದ್ದಾರೆ. ಈ ಮುಖಪುಟವು ಹೆಚ್ಚು ಆಕರ್ಷಕವಾಗಿಲ್ಲ. ಶೀರ್ಷಿಕೆಯನ್ನು, ಸ್ಪಷ್ಟ ದೊಡ್ಡ ಅಕ್ಷರಗಳಲ್ಲಿ ಮೂಡಿಸಬಹುದಿತ್ತು. ಈ ಗ್ರಂಥದಲ್ಲಿ ಗಾಯನ ಶೈಲಿ ಆಲಾಪನೆ (ಕೇಳುವುದು) ಪಲ್ಲವಿ ಹಾಡನ್ನು ಆರಂಭಿಸುವ ಪರಿಯನ್ನು ವಿವರವಾಗಿ ತಿಳಿಸಲಾಗಿದೆ.

**೭.೬.೬. ಹಿನ್ನೋಟ (೨೦೦೪)**

ಈ ಮುಖಪಟದ ವರ್ಣದಲ್ಲಿ ಕಪ್ಪು, ಬಿಳಿ, ಕಂದು, ಬೂದಿ ಬಣ್ಣಗಳಿಂದ ಸೊಗಸಾಗಿ ಮೂಡಿ ಬಂದಿರುವ ಅಮೂರ್ತ ಮುಖಪುಟವಾಗಿದೆ. ಮೇಲ್ಭಾಗದಿಂದ ಕೆಳಕ್ಕೆ ಎಡಭಾಗದಲ್ಲಿ ವೀಣೆಯನ್ನು ಅತಿ ಸೂಕ್ಷ್ಮವಾಗಿ ಉಬ್ಬು ಶೈಲಿಯ ವಿಧಾನದಲ್ಲಿ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ 'ಹಿನ್ನೋಟ' ಎಂಬ

ಶೀರ್ಷಿಕೆಯನ್ನು ಸಹಜ ಗಮನ ಸೆಳೆಯುವಂತೆ ಬರೆಯಲಾಗಿದೆ. ಕೆಳಗೆ ಲೇಖಕರ ಹೆಸರನ್ನು ಸಣ್ಣದಾಗಿ ಬರೆದಿದೆ. ಮಧ್ಯದಲ್ಲಿ ಖಾಲಿ ಸ್ಥಳ ಬಿಡಲಾಗಿದೆ. ಕೆಳಗೆ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿಯ ಚಿಹ್ನೆ, ವಿಳಾಸವನ್ನು ಕಪ್ಪು ಬಣ್ಣಗಳಿಂದ ರಚಿಸಲ್ಪಟಿದೆ.

**೭.೬.೭. ಕಲಾಚೇತನ (೨೦೦೪)**

ಈ ಮುಖಪುಟವು ಸರಳತೆಯಿಂದ ಕೂಡಿದೆ. ಇಲ್ಲಿ ಕೆಂಪು, ಹಳದಿ, ಕಪ್ಪು, ಬಿಳುಪಿನ ವರ್ಣಗಳನ್ನು ಕಾಣಬಹುದು. ಮುಖಪುಟದ ಮೇಲ್ಭಾಗದ ಎಡಕ್ಕೆ ಪುಸ್ತಕಗಳ ಸಾಲನ್ನು ನೋಡಬಹುದು. ಬಲಕ್ಕೆ ಮೇಲ್ಭಾಗದಿಂದ ಮಧ್ಯದವರೆಗೂ ಗೆರೆ ಎಳೆದ ಭಾಗಗಳಲ್ಲಿ ಆರು ಕೈಗಳ ಚಿತ್ರಣ ಕಾಣಬಹುದು. ಈ ಕೈಗಳಲ್ಲಿ ನೃತ್ಯದ ಭಂಗಿಗಳನ್ನು ಕಾಣಬಹುದು. ಹಾಗೂ ಇಲ್ಲಿ ಭರತನಾಟ್ಯ ಪ್ರಕಾರಗಳನ್ನು ಕೈಗಳಿಂದ ತೋರಿಸಲಾಗಿದೆ. ಈ ಚಿತ್ರದ ಕೆಳಗೆ ಶೀರ್ಷಿಕೆಯಾದ 'ಕಲಾಚೇತನ' ಎಂಬ ಹೆಸರನ್ನು ಹಳದಿ ವರ್ಣದಲ್ಲಿ ಗೋಥಿಕ ಶೈಲಿಯ ಮಧ್ಯಮ ಅಕ್ಷರದಲ್ಲಿ ಕಾಣತ್ತೇವೆ. ಇದರ ಕೆಳಗೆ ಅಡ್ಡಲಾಗಿ ವೀಣೆಯ ಚಿತ್ರವನ್ನು ಬಿಡಿಸಲಾಗಿದೆ. ವೀಣೆಯ ಕೆಳಕ್ಕೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ ಹಾಗೂ ಚಿಹ್ನೆಯನ್ನೂ ನೋಡಬಹುದು. 'ರಾಗ ಆಲಾಪನ ಪದ್ಧತಿ ತಾನ ಮತ್ತು ಪಲ್ಲವಿ', 'ಹಿನ್ನೋಟ', 'ಕಲಾಚೇತನ' ಈ ಮೂರು ಗ್ರಂಥಗಳ ಮುಖಪುಟದ ರಚನೆಯು ಸರ್ವ ಸಾಧಾರಣವಾಗಿ ರೂಪಿತಗೊಂಡಿದೆ. ಯಾವುದೇ ಆಕರ್ಷಣೆ, ಕಲಾತ್ಮಕತೆ ಮತ್ತು ಬಣ್ಣಗಳಲ್ಲಿ ಶುಭ್ರತೆ, ಪ್ರಖರತೆ ಈ ಯಾವವು ನೋಡುಗರಿಗೆ ಇಲ್ಲಿ ಎಲ್ಲಿಯೂ ಕಾಣುವಂತಿಲ್ಲ. ಮಂದ ವರ್ಣಗಳಿಂದ ಕೂಡಿರುವುದರಿಂದ ಇಂತಹ ಮುಖಪುಟ ವಿನ್ಯಾಸವು ಓದುಗರ / ನೋಡುಗರ ಕಣ್ಣಿಗೆ ಅತೃಪ್ತ ವಿನ್ಯಾಸವಾಗಿ ಕಾಣುತ್ತವೆ. ಮುಖಪುಟ ಚಿತ್ರಗಳಲ್ಲಿ ಮುಖ್ಯವಾಗಿ ಬಣ್ಣ, ಆಕಾರ, ಚಲನೆ ಹಾಗೂ ಬೆಳಕು, ನೆರಳುಗಳು ವಿವರವಾಗಿ ಹಾಗೂ ಸಮಂಜಸವಾಗಿ ಬಳಸಿದ್ದರೆ ಮಾತ್ರ ಅಂತಹ ಮುಖಪುಟವು ಅರ್ಥಪೂರ್ಣವಾಗಿ ಓದುಗರ ವರ್ಗಕ್ಕೆ ತಲುಪುತ್ತದೆ. ಕಲಾಚೇತನ ಗ್ರಂಥದ ಮುಖಪುಟವೊಂದು ಹೊರತುಪಡಿಸಿದರೆ ಉಳಿದ ಎರಡು ಮುಖಪುಟ ನೋಡುಗರಿಗೆ ನೀರಸ ಭಾವನೆ ಮೂಡಿಸುವಂತಿದೆ.

**೭.೬.೮. ವಾದ್ಯಾಲಾಪ (೨೦೦೭)**

ಇದರ ಮುಖಪುಟವು ಆಕರ್ಷಕವಾಗಿ ಗಮನ ಸೆಳೆಯುವಂತಿದೆ. ಇಲ್ಲಿ ಕೆಂಪು, ಹಳದಿ, ನೀಲಿ ಕಪ್ಪು, ಬಿಳುಪಿನ ವರ್ಣಗಳು ಕಂಡುಬರುತ್ತವೆ. ಮುಖಪುಟದ ಮೇಲ್ಭಾಗದ ಎಡಕ್ಕೆ ಚಿಕ್ಕದಾಗಿ ಸುವರ್ಣ ಕರ್ನಾಟಕದ ಚಿಹ್ನೆ, ಬಲಕ್ಕೆ ಕೃತಿಯ ಶೀರ್ಷಿಕೆಯನ್ನು ಇದರಡಿಯಲ್ಲಿ ಭಾರತೀಯ ವಾದ್ಯಗಳ ಹಿನ್ನೆಲೆ, ಸ್ವರೂಪ ವೈಶಿಷ್ಟ್ಯ ಎಂದು ಬರೆಯಲಾಗಿದೆ. ಇದರ ಕೆಳಭಾಗದಲ್ಲಿ ಸಂಪಾದಕರ ಹೆಸರನ್ನು ನೀಡಲಾಗಿದೆ. ಸರಿಯಾದ ಮಧ್ಯದಲ್ಲಿ ಓರ್ವ ಸ್ತ್ರೀಯು ಸಂಗೀತ ವಾದ್ಯಗಳಲ್ಲೊಂದಾದ ಮೃದಂಗವನ್ನು ನುಡಿಸುತ್ತಿರುವ ಭಾವ ಭಂಗಿಯನ್ನು ನೀಲಿವರ್ಣದಲ್ಲಿ ಚಪ್ಪಟೆ ಲೇಪನ ಮಾಡಿರುವುದು ಮತ್ತು ಮೈವಳಿಕೆ ಗಡಸುತನದಿಂದ ಕೂಡಿದೆ. ಇಲ್ಲಿ ಬೆಳಕು ನೆರಳು ಕಟ್‌ಲೈಟ್ ಪದ್ಧತಿಯಲ್ಲಿ ಬಳಸಿರುವುದನ್ನು ನೋಡಬಹುದು. ಇದರ

ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ-ಚಿಹ್ನೆ ಕಂಡು ಬರುತ್ತದೆ. ಇಲ್ಲಿ ಮೃದಂಗ ನುಡಿಸುತ್ತಿರುವ ಸ್ತ್ರೀಯ ಚಿತ್ರಣವನ್ನು ಇನ್ನೂ ಸ್ಪಷ್ಟವಾಗಿ ಕಾಣುವಂತೆ ಮುದ್ರಿಸಬಹುದಿತ್ತು. ಈ ಗ್ರಂಥವು ಭಾರತೀಯ ವಾದ್ಯಗಳ ಪರಿಚಯ ಅವುಗಳ ವೈಶಿಷ್ಟವನ್ನು ತಿಳಿಯಲು ಬೆಳಕು ಚೆಲ್ಲುತ್ತದೆ.

### ೭.೬.೯. ಹಿಂದೂಸ್ತಾನಿ ಸಂಗೀತದ ಜ್ಞಾನಕೋಶ (೨೦೦೮)

ಈ ಮುಖಪುಟವು ಸರಳ ಮಾದರಿಯಲ್ಲಿ ಆಕರ್ಷಕವಾಗಿ ಮೂಡಿಬಂದಿದೆ. ಇಲ್ಲಿ ಕೆಂಪು, ಹಳದಿ, ಬಿಳಿ, ಕಪ್ಪು ವರ್ಣಗಳನ್ನು ಗಮನಿಸಬಹುದು.ಮೇಲ್ಭಾಗದ ಎಡಕ್ಕೆ ಚಿಕ್ಕದಾಗಿ ಸುವರ್ಣ ಕರ್ನಾಟಕದ ಪ್ರಕಟಣೆ ಎಂದು ಬಲಕ್ಕೆ ಇದರ ಚಿಹ್ನೆಯಿದ್ದು, ಕೆಳಗೆ ಗ್ರಂಥದ ಶೀರ್ಷಿಕೆಯನ್ನು ಮಧ್ಯಮ ಗಾತ್ರದ ಅಕ್ಷರದಲ್ಲಿ ಕಾಣಬಹುದು. ಇದರ ಕೆಳಗೆ ಲೇಖಕರ ಹೆಸರು ಬರೆಯಲಾಗಿದೆ. ಮಧ್ಯದಲ್ಲಿ ವೀಣೆಯ ಚಿತ್ರ ಈ ಮುಖಪುಟದ ಕೇಂದ್ರ ಆಕರ್ಷಣೆಯಾಗಿದೆ. ಕೆಳಗೆ ಎಡಕ್ಕೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ, ಚಿಹ್ನೆ ಇದ್ದು, ಬಲದ ತುದಿಗೆ ಎರಡು ತಬಲಗಳ ಚಿತ್ರಣ ತುಂಬಾ ಸರಳವಾಗಿ ಮೂಡಿ ಬಂದಿದೆ. ಈ ಮುಖಪುಟವು ಹೆಚ್ಚು ಕೆಂಪು ವರ್ಣದಿಂದ ಕೂಡಿದ್ದು, ಈ ಗ್ರಂಥ ಹಿಂದೂಸ್ತಾನಿ ಸಂಗೀತದ ಬಗ್ಗೆ ಬೆಳಕು ಚೆಲ್ಲುವ ಗ್ರಂಥವಾಗಿದೆ. ಈ ಮುಖಪುಟವು ಓದುಗರನ್ನು ಸರಳವಾಗಿ ಆಕರ್ಷಿಸುವಂತಿದೆ.

### ೭.೬.೧೦. ನಾದ ಲಹರಿ (೨೦೦೮)

ಇಲ್ಲಿ ಕಪ್ಪು, ಬಿಳಿ, ನೇರಳೆ ನೀಲಿ, ಹಳದಿ ಬಣ್ಣಗಳು ಕಾಣುತ್ತವೆ. ಈ ಮುಖಪುಟದ ಎಡಕ್ಕೆ ಚಿಹ್ನೆ ಬಲಕ್ಕೆ ಸುವರ್ಣ ಕರ್ನಾಟಕದ ಪ್ರಕಟಣೆ ಎಂದಿದೆ. ಕೆಳಗೆ ಎದ್ದು ಕಾಣುವ ಅಕ್ಷರದಲ್ಲಿ ಶೀರ್ಷಿಕೆಯನ್ನು ಗಮನಿಸಬಹುದು. ಇದರ ಕೆಳಗೆ ಸಂಪಾದಕರ ಹೆಸರನ್ನು ಕೊಡಲಾಗಿದೆ. ಮಧ್ಯದಿಂದ ಕೆಳಕ್ಕೆ ಸೂಕ್ಷ್ಮ ಕಲೆಯಲ್ಲಿ ಭೂಮಿಯ ಮೇಲೆ ಬೆಳಕು ಚೆಲ್ಲುತ್ತಿರುವ ಅಥವಾ ಪ್ರಕಾಶಮಾನವಾದ ಸೂರ್ಯನ ಬೆಳಕನ್ನು ಕಾಣಬಹುದು. ಕೆಳಗಡೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ ಚಿಹ್ನೆಯ ಚಿತ್ರಣ ನೋಡಬಹುದು. ಈ ಗ್ರಂಥದ ಸಂಗೀತದ ಸಪ್ತಸ್ವರಗಳ ಮಾಹಿತಿ ಮತ್ತು ಸಂಗೀತದ ಮಜಲುಗಳನ್ನು ತಿಳಿಸುತ್ತದೆ. ಇದರ ಮುಖಪುಟವು ಸರಳವಾಗಿ ಆಕರ್ಷಿಸಬಲ್ಲದ್ದಾಗಿದೆ.

### ೭.೬.೧೧. ನೃತ್ಯಕ್ಕೆ ಕನ್ನಡ ಕೃತಿಗಳು (೨೦೦೮)

ಈ ಮುಖಪುಟದಲ್ಲಿ ಹೆಚ್ಚು ಕಪ್ಪು, ಹಳದಿ, ಬಿಳಿ, ಕೆಂಪು, ಕೇಸರಿ ವರ್ಣಗಳನ್ನು ಗುರುತಿಸಬಹುದು. ಮೇಲ್ಭಾಗದ ಮಧ್ಯ ಭಾಗದಲ್ಲಿ ಸುವರ್ಣ ಕರ್ನಾಟಕ ಪ್ರಕಟಣೆ ಹಾಗೂ ಕೃತಿಯ ಶೀರ್ಷಿಕೆಯನ್ನು ಸ್ಪಷ್ಟವಾಗಿ ನೀಡಲಾಗಿದೆ. ಮಧ್ಯದಲ್ಲಿ ಎರಡು ಬದಿಗಳಲ್ಲಿ ಜೋಡಿ ಕೈಗಳ ಚಿತ್ರ ಅದರಲ್ಲಿ ನೃತ್ಯ ಪ್ರಕಾರಗಳನ್ನು ತೋರಿಸಲಾಗಿದೆ. ಮಧ್ಯದ ಚೌಕದಲ್ಲಿ ಜೋಡಿ ಕೈಗಳ ನೃತ್ಯ ಮುದ್ರ ಶೈಲಿಯ ಚಿತ್ರ ಸೊಗಸಾಗಿದೆ. ಇದರ ಕೆಳಗೆ ಲೇಖಕರ ಹೆಸರು, ಹೆಸರಿನ ಕೆಳಗೆ ಆಕರ್ಷಕವಾದ ಕೊಳಲಿನ ಚಿತ್ರಣ ಕಾಣಬಹುದು. ಮುಖಪುಟದ ಕೆಳಗೆ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿಯ ವಿಳಾಸ ಹಾಗೂ ಚಿಹ್ನೆಯನ್ನು ಮುದ್ರಿಸಲಾಗಿದೆ.

೨೦೦೮ ರಲ್ಲಿ ಮುದ್ರಣಗೊಂಡ ಈ ಕೃತಿಯು ಜನ ಮನ್ನಣೆಯಿಂದ ಎರಡು ಬಾರಿ ಮುದ್ರಣ ಕಂಡಿದೆ. ಈ ಗ್ರಂಥದಲ್ಲಿ ಭಾರತ ದೇಶದ ಹಲವು ರಾಜ್ಯಗಳ ನೃತ್ಯ ಶೈಲಿಯನ್ನು ಕನ್ನಡದಲ್ಲಿ ವಿವರಿಸಲಾಗಿದೆ. ಈ ಮುಖಪುಟದಲ್ಲಿ ಶೀರ್ಷಿಕೆಯನ್ನು ಜೋಡಿ ಕೈಗಳ ಚಿತ್ರ ಶೈಲಿಯನ್ನು ಇನ್ನೂ ದೊಡ್ಡದಾಗಿ ಓದುಗರ ಗಮನ ಸೆಳೆಯುವಂತೆ ಮುದ್ರಿಸಬಹುದಿತ್ತು. ಇದು ಸಮತೋಲನ ಹೊಂದಿದ ಮುಖಪುಟವೆಂದು ಹೇಳಬಹುದು.

**೭.೬.೧೨. ಕಥಕ್ ಪ್ರವೇಶಿಕಾ (೨೦೦೮)**

ಇದರ ಮುಖಪುಟವು ಶೀರ್ಷಿಕೆಯ ಜನರನ್ನು ಸೆಳೆಯುವಂತೆ ಮಾಡುವ ವಿಷಯವಿತ್ತು. ಇಲ್ಲಿ ಹಳದಿ, ಹಸಿರು, ಕೆಂಪು, ನೀಲಿ, ಕಂದು ಬಣ್ಣಗಳನ್ನು ಗಮನಿಸಬಹುದು.ಮೇಲೆ ಎಡಕ್ಕೆ ಸುವರ್ಣ ಕರ್ನಾಟಕದ ಚಿಹ್ನೆ, ಪ್ರಕಟಣೆಯನ್ನು ಕಾಣಿಸಿದೆ.ಮೇಲೆ ಮಧ್ಯದಲ್ಲಿ ಮಧ್ಯಮ ಅಕ್ಷರ ಶೈಲಿಯಲ್ಲಿ ಕೃತಿಯ ಶೀರ್ಷಿಕೆಯನ್ನು ಕೆಂಪು ವರ್ಣದಲ್ಲಿ ಬರೆಯಲಾಗಿದೆ. ಕೆಳಗೆ ಲೇಖಕರ ಹೆಸರನ್ನು ಸೂಚಿಸಲಾಗಿದೆ. ಮಧ್ಯದಲ್ಲಿ ಕಥಕ್ ನೃತ್ಯದ ಒಂದು ಶೈಲಿಯ ಭಂಗಿಯ ಚಿತ್ರಣ ಪುರುಷ ನರ್ತಿಸುತ್ತಿರುವ ಚಿತ್ರ ಸೊಗಸಾಗಿದೆ. ಕೆಳಗಡೆ ಕರ್ನಾಟಕ ಸಂಗೀತ ಮತ್ತು ನೃತ್ಯ ಅಕಾಡೆಮಿಯ ವಿಳಾಸ, ಚಿಹ್ನೆಯನ್ನು ಮುದ್ರಿಸಿದೆ. ಈ ಮುಖಪುಟದಲ್ಲಿ ಶೀರ್ಷಿಕೆಯನ್ನು ಸ್ಪಷ್ಟವಾಗಿ, ದೊಡ್ಡದಾಗಿ ಬರೆಯಬೇಕಿತ್ತು. ಮಧ್ಯದಲ್ಲಿರುವ ಚಿತ್ರವನ್ನು ಎದ್ದುಕಾಣುವಂತೆ ಮುದ್ರಿಸಬೇಕಿತ್ತು. ಈ ಗ್ರಂಥವು ಕೇರಳ ರಾಜ್ಯದ ಪ್ರಸಿದ್ಧ ನೃತ್ಯವಾದ 'ಕಥಕ್' ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ. ಕೇರಳದ ಈ ನೃತ್ಯ ಶೈಲಿ ಭಾರತದಲ್ಲಿಯೇ ಪ್ರಸಿದ್ಧವಾಗಿದೆ. ಈ ಮುಖಪುಟದ ಒಟ್ಟಾರೆ ವರ್ಣಗಳು ಮಂದವಾಗಿ ಮುದ್ರಿಸಲಾಗಿದೆ. ಈ ಮುಖಪುಟದ ನೃತ್ಯ ಚಿತ್ರದ ವರ್ಣ ಮತ್ತು ಹಿನ್ನೆಲೆ ವರ್ಣ ಎರಡರಲ್ಲಿ ಭಿನ್ನತೆ ತೋರಿಸುವುಲ್ಲಿ ವಿನ್ಯಾಸಕಾರ ಗಮನಿಸಲ್ಲಿಲ್ಲ ಎಂದು ಅಭಿಪ್ರಾಯಪಡಬಹುದು.

**೭.೬.೧೩. ಕರ್ನಾಟಕ ಸಂಗೀತ ಕಲಾವಿದರು (೨೦೦೮)**

ಈ ಮುಖಪುಟವು ಪಚ್ಚೆ ಹಸಿರು, ಕೆಂಪು, ಹಳದಿ, ಕಪ್ಪು, ಬಿಳಿ ಬಣ್ಣಗಳಿಂದ ಪ್ರಕೃತಿಯ ನೈಜತೆಯನ್ನು ಮೂಡಿಸುವಲ್ಲಿ ಮನಸೂರೆಗೊಳ್ಳುವಂತಿದೆ. ಮೇಲ್ಭಾಗದಲ್ಲಿ ಕರ್ನಾಟಕ ಸಂಗೀತ ಕಲಾವಿದರು ಭಾಗ–೧, (ಗಾಯಕರು, ಸಂಗೀತ ತಜ್ಞರು, ವಿಮರ್ಶಕರು) ಎಂದು ಶೀರ್ಷಿಕೆಯನ್ನು ಮುದ್ರಿಸಲಾಗಿದ್ದು, ಇದರ ಕೆಳಗೆ ಬಲಕ್ಕೆ ಆಂಗ್ಲ ಅಕ್ಷರಗಳಲ್ಲಿ Artists of Karnataka Music (Part-1) ಎಂದು ಬರೆಯಲಾಗಿದ್ದು, ಮಧ್ಯದಲ್ಲಿ ಸಮುದ್ರದ ಚಿತ್ರಣ, ಸಂಜೆಯ ಸೂರ್ಯಾಸ್ತ ಸಮಯದಲ್ಲಿ ಸಮುದ್ರದ ನೀರಿನ ಬಣ್ಣ ವಿವಿಧತೆಯಿಂದ ಕೂಡಿರುತ್ತದೆ. ಅದರ ಒಂದು ಛಾಯಾಚಿತ್ರವನ್ನು ಇಲ್ಲಿ ಮುದ್ರಿಸಲಾಗಿದ್ದು. ಇದು ನೋಡುಗರನ್ನು ಮನಸೂರೆಗೊಳ್ಳುತ್ತದೆ. ಇದರ ಕೆಳಗಡೆ ಎಡಕ್ಕೆ ಚಿಕ್ಕದಾಗಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ, ಚಿಹ್ನೆಯನ್ನು ಕೊಟ್ಟಿರುತ್ತಾರೆ. ಬಲಕ್ಕೆ ಸಂಪಾದಕರ ಹೆಸರನ್ನು ಕನ್ನಡ ಮತ್ತು ಆಂಗ್ಲ ಭಾಷೆಗಳೆರೆಡರಲ್ಲೂ ಮುದ್ರಿಸಿದ್ದಾರೆ. ಈ ಮುಖಪುಟದಲ್ಲಿ ಗ್ರಂಥದ ಶೀರ್ಷಿಕೆಯನ್ನು ಸ್ಪಷ್ಟ ದೊಡ್ಡ ಅಕ್ಷರದಲ್ಲಿ ಮೂಡಿಸಿದ್ದರೆ

ಮುಖಪುಟಕ್ಕೆ ಒಂದು ಆಕರ್ಷಣೆ ಬರುತ್ತಿತ್ತು. ಮುಖಪಟುದಲ್ಲಿ ಶೀರ್ಷಿಕೆಯ ಹಿಂಭಾಗ ನೆರಳಿನಂತೆ ಸಪ್ತಸ್ವರದ ಚಿಹ್ನೆಗಳನ್ನು ಮುದ್ರಿಸಲಾಗಿದೆ. ಇದರಲ್ಲಿ ಸೂರ್ಯಾಸ್ತ ಸಮಯದಲ್ಲಿ ಕಾಣುವ ಸಮುದ್ರದ ಚಿತ್ರಣ ಮಾತ್ರ ನೋಡುಗರನ್ನು ಆಕರ್ಷಿಸುವಂತಿದೆ. ನೋಡುಗರಿಗೆ ಈ ಮುಖಪುಟದಲ್ಲಿ ಗ್ರಂಥದ ಶೀರ್ಷಿಕೆಯು ಸ್ಪಷ್ಟವಾಗಿ ಕಾಣುವಂತಿಲ್ಲ.

**೭.೬.೧೪. ನೃತ್ಯ ದರ್ಪಣ (೨೦೦೮)**

ಈ ಮುಖಪುಟ ಶೈಲಿಯು ಸರಳ ವಿನ್ಯಾಸದ ಮಾದರಿಯಲ್ಲಿ ಆಕರ್ಷಿಸುವಂತಿದೆ. ಇಲ್ಲಿ ಗಿಳಿ ಹಸಿರು, ನೀಲಿ, ಕಪ್ಪು, ಕೆಂಪು, ಬಿಳಿ ವರ್ಣಗಳನ್ನು ಬಳಸಲಾಗಿದೆ. ಮುಖಪುಟದ ಮೇಲ್ಭಾಗದಲ್ಲಿ ಎಡಕ್ಕೆ ಸುವರ್ಣ ಕರ್ನಾಟಕದ ಚಿಹ್ನೆ ಬಲಕ್ಕೆ ಪ್ರಕಟಣೆ ಕೆಳಗೆ ಶೀರ್ಷಿಕೆಯಾದ ನೃತ್ಯ ದರ್ಪಣ ಎಂದು ಸ್ಪಷ್ಟವಾಗಿ ಬರೆಯಲಾಗಿದ್ದು, ಇದರ ಕೆಳಭಾಗದಲ್ಲಿ ಸಂಪಾದಕರ ಹೆಸರನ್ನು ಕೊಡಲಾಗಿದೆ. ಮಧ್ಯದ ಬಲಕ್ಕೆ ಷಟ್‌ಕೋನ ಮಾದರಿಯ ಚೌಕದಲ್ಲಿ ನೃತ್ಯಕ್ಕೆ ಸಂಬಂಧಿಸಿದ ಬೇಲೂರು ಶೀಲಾಬಾಲಿಕೆಯ ನೃತ್ಯದ ಭಂಗಿಯ ಚಿತ್ರಣ ಆಕರ್ಷಿಸುವಂತಿದೆ. ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ ಹಾಗೂ ಚಿಹ್ನೆಯನ್ನು ಕೊಡಲಾಗಿದೆ. ಇಲ್ಲಿ ಶೀರ್ಷಿಕೆಗೂ ಚಿತ್ರಕ್ಕೂ ಅರ್ಥ ಕಲ್ಪಿಸುವಂತೆ ಮುಖಪುಟ ಮೂಡಿಬಂದಿದೆ. ಇಲ್ಲಿ ನೃತ್ಯ ಶೈಲಿಯ ಶಿಲಾಬಾಲಿಕೆಯ ಚಿತ್ರಣವನ್ನು ಸಂಪೂರ್ಣ ಇನ್ನೂ ಸ್ವಲ್ಪ ದೊಡ್ಡದಾಗಿ ಬಿಡಿಸಿದ್ದರೆ, ಹೆಚ್ಚು ಮೆರಗು ಬರುತ್ತಿತ್ತು. ಒಟ್ಟಾರೆ ಈ ಮುಖಪುಟದಲ್ಲಿ ನೋಡುಗನ ದೃಷ್ಟಿ ಬಲಭಾಗಕ್ಕೆ ಹೆಚ್ಚು ಚಲಿಸುವಂತೆ ರಚಿಸಲಾಗಿದೆ. ಇದು 'ಅಸಮತೋಲನ'[೧೪] ವಿನ್ಯಾಸದಿಂದ ಕೂಡಿದೆ ಎಂದು ಗ್ರಹಿಸಕೊಳ್ಳಬಹುದು.

**೭.೬.೧೫ ಬೆಳ್ಳಿಗೆರೆ (೨೦೦೮)**

ಈ ಮುಖಪುಟದಲ್ಲಿ ಕಪ್ಪು, ಬಿಳಿ, ಕೆಂಪು, ಬೂದು ವರ್ಣಗಳನ್ನು ಕಾಣಬಹುದು.ಈ ಕೃತಿಯ ಮುಖಪುಟವನ್ನು ಅಡ್ಡಲಾಗಿ ರಚಿಸಲಾಗಿದೆ. ಮೇಲೆ ಬಿಳಿಯ ಗೆರೆಯ ಸಾಲಿನ ಮಧ್ಯೆ ಕೆಂಪು ವರ್ಣದಲ್ಲಿ ಶೀರ್ಷಿಕೆಯಾದ 'ಬೆಳ್ಳಿಗೆರೆ' ಎಂದು ದಪ್ಪ ಅಕ್ಷರದಲ್ಲಿ ಬರೆಯಲಾಗಿದೆ. ಇದರ ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ ಹಾಗೂ ಚಿಹ್ನೆ ಕೊಡಲಾಗಿದೆ. ಕೆಳಗೆ ಸಾಧಕರ ಮುಖದ ಛಾಯಾಚಿತ್ರಗಳನ್ನು ಮುದ್ರಿಸಲಾಗಿದೆ. ಮುಖಪುಟದ ಎಡಕ್ಕೆ ಒಂಬತ್ತು ಜನರ ಹೆಸರನ್ನು ಮುದ್ರಿಸಲಾಗಿದೆ. ಒಂದನೆಯದಾಗಿ ೧. ಶ್ರೀಮತಿ ಕೋಮಲ ವರದನ್ (೧೯೭೮-೧೯೮೧), ೨) ಡಾ|| ಗಂಗೂಬಾಯಿ ಹಾನಗಲ್ (೧೯೮೧-೧೯೮೪), ೩) ಡಾ|| ವಿ. ದೊರೆಸ್ವಾಮಿ ಅಯ್ಯಂಗಾರ್ (೧೯೮೪-೧೯೮೭), ೪) ಶ್ರೀಮತಿ ಮಾಯಾರಾವ್ (೧೯೮೭-೧೯೯೦), ೫) ಪಂ|| ಆರ್.ವಿ. ಶೇಷಾದ್ರಿ ಗವಾಯಿ (೧೯೯೧-೧೯೯೫), ೬) ಶ್ರೀಮತಿ ಯು.ಕೆ. ಚಂದ್ರಭಾಗಾದೇವಿ (೧೯೯೫-೧೯೯೭), ೭) ಶ್ರೀಮತಿ ಶ್ಯಾಮಲಾ ಜಿ. ಭಾವೆ (೧೯೯೭-೨೦೦೧), ೮) ಶ್ರೀಮತಿ ಎಚ್. ಆರ್. ಲೀಲಾವತಿ (೨೦೦೧-೨೦೦೪), ೯) ಪಂ|| ರಾಜಶೇಖರ್ ಮನ್ಸೂರ್ (೨೦೦೫-೨೦೦೮) ಎಂದು ಒಂಭತ್ತು ಜನ ಸಂಗೀತ, ನೃತ್ಯಕ್ಕೆ ಸೇವೆ ಸಲ್ಲಿಸಿದ

೧೪. Prof. G.M.Rege : Adveritising Art And Ideas, P-161

ಸಾಧಕ ಬಾಧಕಗಳನ್ನು ವಿವರವಾಗಿ ಈ ಗ್ರಂಥದಲ್ಲಿ ತಿಳಿಸಲಾಗಿದೆ. ಈ ಮುಖಪುಟವು ಕಪ್ಪು ಬಿಳಿ ವರ್ಣಗಳಿಂದ ಸರಳವಾಗಿ ಆಕರ್ಷಿಸುವಂತಿದೆ.

**೭.೬.೧೬. ಮುತ್ತುಸ್ವಾಮಿ ದೀಕ್ಷಿತರ ಸಾಹಿತ್ಯ ಮಂಜರಿ (೨೦೦೯)**

ಈ ಮುಖಪುಟವು ಕೇಸರಿ, ಬಿಳಿ, ಹಸಿರು, ಹಳದಿ, ಕಪ್ಪು ವರ್ಣದಲ್ಲಿ ಮೂಡಿ ಬಂದಿದೆ. ಮೇಲ್ಭಾಗದಲ್ಲಿ ಸಣ್ಣ ಅಕ್ಷರಗಳಲ್ಲಿ ವಿದ್ವಾನ್ ಮತ್ತೂರು ಶಂಕರಮೂರ್ತಿಯವರು ಸಂಪಾದಿಸಿರುವ ಕರ್ನಾಟಕ ಸಂಗೀತ ಸಂಪದ (೪) ಎಂದು ಬರೆಯಲಾಗಿದ್ದು, ಇದರಡಿಯಲ್ಲಿ ಶೀರ್ಷಿಕೆಯನ್ನು ಮಧ್ಯಮ ಅಕ್ಷರದಲ್ಲಿ ಮುದ್ರಿಸಲಾಗಿದೆ. ಮಧ್ಯದಲ್ಲಿ ಚೌಕಾಕಾರದಲ್ಲಿ ಮುತ್ತುಸ್ವಾಮಿ ಅಯ್ಯಂಗಾರ್‌ರವರು ಕುಳಿತು ವೀಣೆಯನ್ನು ನುಡಿಸುತ್ತಿರುವ ಚಿತ್ರಣ ಸೊಗಸಾಗಿ ಮೂಡಿ ಬಂದಿದೆ. ಭಾವಚಿತ್ರದ ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ ಹಾಗೂ ಚಿಹ್ನೆಯನ್ನು ಮುದ್ರಿಸಲಾಗಿದೆ. ಈ ಮುಖಪುಟವು ಹೆಚ್ಚು ಆಕರ್ಷಕವಾಗಿ ಮೂಡಿ ಬಂದಿಲ್ಲ. ಈ ಕೃತಿಯಲ್ಲಿ ಮುತ್ತುಸ್ವಾಮಿ ದೀಕ್ಷಿತರು ಸಾಹಿತ್ಯ, ಸಂಗೀತ ಕ್ಷೇತ್ರಕ್ಕೆ ನೀಡಿದ ಕೊಡುಗೆಗಳನ್ನು ತಿಳಿಸಲಾಗಿದೆ. ಇವರ ಸೇವೆಯನ್ನು ಕನ್ನಡ, ಆಂಗ್ಲ ಇತರ ಭಾಷೆಗಳ ಗ್ರಂಥಗಳಲ್ಲಿ ಮುದ್ರಿಸಿ ಬಿಡುಗಡೆ ಗೊಳಿಸಲಾಗಿದೆ. ಸಂಗೀತ ಕ್ಷೇತ್ರದ ದಿಗ್ಗಜರಲ್ಲಿ ಇವರು ಒಬ್ಬರೂ ಎಂಬುದನ್ನು ಈ ಕೃತಿಯು ವಿವರವಾಗಿ ತಿಳಿಸುತ್ತದೆ.

**೭.೬.೧೭. ಕರ್ನಾಟಕ ಸಂಗೀತ ಅಭ್ಯಾಸಗಾನ (೨೦೦೯)**

ಈ ಮುಖಪುಟವು ಹೆಚ್ಚಾಗಿ ನೀಲಿ ವರ್ಣ ಹೊಂದಿದ್ದು, ಕಪ್ಪು, ಬಿಳಿ, ಕೆಂಪು ವರ್ಣಗಳನ್ನು ಒಳಗೊಂಡಿದೆ. ಮುಖಪುಟದ ಮೇಲೆ ಕೆಳಗೆ ಚಿತ್ತಾರವನ್ನು ಬಿಡಿಸಲಾಗಿದ್ದು, ಮಧ್ಯದಲ್ಲಿ ಚಿತ್ರಣವನ್ನೊಳಗೊಂಡಿದೆ, ಮುಖಪುಟದ ಮೇಲ್ಭಾಗದಲ್ಲಿ ಸುವರ್ಣ ಕರ್ನಾಟಕದ ಚಿಹ್ನೆ, ವಿದ್ವಾನ್ ಮತ್ತೂರು ಶಂಕರಮೂರ್ತಿಯವರು ಸಂಪಾದಿಸಿರುವ ಕರ್ನಾಟಕ ಸಂಗೀತ ಸಂಪದ (೧) ಎಂದು ನಮೂದಿಸಲಾಗಿದೆ. ಕೆಳಗೆ ಶೀರ್ಷಿಕೆಯನ್ನು ಕಪ್ಪು ವರ್ಣದಲ್ಲಿ ಸ್ಪಷ್ಟವಾಗಿ ಮುದ್ರಿಸಲಾಗಿದೆ.ಮಧ್ಯದಲ್ಲಿ ಆಯಾತಾಕಾರದ ಚೌಕದಲ್ಲಿ ಸಂಗೀತ ಗುರುಗಳು ವಿದ್ಯಾರ್ಥಿಗಳಿಗೆ ಸಂಗೀತಾಭ್ಯಾಸ ಮಾಡಿಸುತ್ತಿರುವ ಚಿತ್ರಣ ಅತ್ಯುತ್ತಮವಾಗಿ ಮೂಡಿಬಂದಿದೆ.ಈ ಗ್ರಂಥದ ಮುಖಪುಟಕ್ಕೆ ಆಕರ್ಷಕ ಶೈಲಿಯ ಚಿತ್ರಣ ಇದಾಗಿದೆ. ಕೆಳಗಡೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ವಿಳಾಸ, ಚಿಹ್ನೆ ನೀಡಲಾಗಿದೆ. ಈ ಗ್ರಂಥವು ಸಂಗೀತ ಆರಂಭಿಸುವ, ಕಲಿಯುವ, ಅಭ್ಯಸಿಸುವ ಪರಿಯನ್ನು ಒಳಗೊಂಡಿದೆ. ಇದರ ಮುಖಪುಟವು ಸರಳ ಆಕರ್ಷಕವಾಗಿ ಮೂಡಿ ಬಂದಿದೆ.

**೭.೬.೧೮ ತ್ಯಾಗರಾಜರ ಕೃತಿಗಳು (೨೦೦೯)**

ಈ ಮುಖಪುಟ ಗಿಳಿ ಹಸಿರು, ಕೆಂಪು, ಕಪ್ಪು, ಬಿಳುಪಿನ ವರ್ಣಗಳನ್ನು ಒಳಗೊಂಡಿದೆ. ಮೇಲೆ, ಕೆಳಗೆ ಚಿತ್ತಾರದ ಚಿಕ್ಕ ಪಟ್ಟಿಗಳನ್ನು ಮೂಡಿಸಿದ್ದಾರೆ. ಮೇಲ್ಭಾಗದಲ್ಲಿ ಸುವರ್ಣ ಕರ್ನಾಟಕದ ಚಿಹ್ನೆಯನ್ನು ಬಲಕ್ಕೆ ವಿದ್ವಾನ್ ಮತ್ತೂರು ಶಂಕರಮೂರ್ತಿಯವರು ಸಂಪಾದಿಸಿರುವ ಕರ್ನಾಟಕ ಸಂಗೀತ ಸಂಪದ ೨

ಎಂದು ಇದರಡಿಯಲ್ಲಿ ಶೀರ್ಷಿಕೆಯಾದ 'ತ್ಯಾಗರಾಜರ ಕೃತಿಗಳು' ಭಾಗ ೧ ಎಂದು ಸ್ಪಷ್ಟ ಅಕ್ಷರಗಳಲ್ಲಿ ಮುದ್ರಿಸಿದ್ದಾರೆ. ಮಧ್ಯಭಾಗದಲ್ಲಿ ಆಯಾತಾಕಾರದ ಚೌಕದಲ್ಲಿ ತ್ಯಾಗರಾಜರು ವೀಣೆಯನ್ನು ನುಡಿಸುತ್ತಾ ಕುಳಿತಿರುವ ರೇಖಾಚಿತ್ರ ಆಕರ್ಷಕವಾಗಿದೆ. ಇದರ ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಚಿಹ್ನೆ, ವಿಳಾಸವನ್ನು ಕೊಡಲಾಗಿದೆ.ಈ ಗ್ರಂಥದಲ್ಲಿ ತ್ಯಾಗರಾಜರು ರಚಿಸಿರುವ ಕೃತಿಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಇದರ ಮುಖಪುಟವು ಸರಳತೆಯಿಂದ ಕೂಡಿದೆ.

**೭.೬.೧೯. ಸ್ವಾತಿ ತಿರುನಾಳರ ಕೃತಿಗಳು (೨೦೦೯)**

**ಭಾಗ–೧**

ಈ ಮುಖಪುಟವು ಬಾದಾಮಿ, ಕೇಸರಿ, ಕಂದು, ಕಪ್ಪು, ಬಿಳಿ ವರ್ಣಗಳಿಂದ ಕೂಡಿದೆ. ಮೇಲೆ ಕೆಳಗೆ ಚಿತ್ತಾರದ ಪಟ್ಟಿಯನ್ನು ಮುದ್ರಿಸಲಾಗಿದೆ. ಒಳಗಿನ ಮೇಲ್ಭಾಗದಲ್ಲಿ ಸುವರ್ಣ ಕರ್ನಾಟಕದ ಚಿಹ್ನೆ ಬಲಕ್ಕೆ ಚಿಕ್ಕ ಅಕ್ಷರಗಳಲ್ಲಿ ವಿದ್ವಾನ್ ಮತ್ತೂರು ಶಂಕರಮೂರ್ತಿಯವರು ಸಂಪಾದಿಸಿರುವ ಕರ್ನಾಟಕ ಸಂಗೀತ ಸಂಪದ ೫ ಎಂದು ಕೊಡಲಾಗಿದೆ. ಕೆಳಗೆ ಶೀರ್ಷಿಕೆಯನ್ನು ಮಧ್ಯಮ ಶೈಲಿಯ ಅಕ್ಷರದಲ್ಲಿ ಸ್ಪಷ್ಟವಾಗಿ ಕಾಣುವಂತೆ ಮೂಡಿಸಲಾಗಿದೆ.ಮಧ್ಯ ಆಯಾತಾಕಾರದ ಚೌಕದಲ್ಲಿ ಸ್ವಾತಿ ತಿರುನಾಳರ ಚಿತ್ರಣವನ್ನು ಮುದ್ರಿಸಲಾಗಿದೆ.ಇದರಡಿಯಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಚಿಹ್ನೆ ವಿಳಾಸವನ್ನು ನಮೂದಿಸಲಾಗಿದೆ.ಈ ಮುಖಪುಟವನ್ನು ವಿನ್ಯಾಸಗಾರರು ಸರಳವಾಗಿ ಮುದ್ರಿಸಿದ್ದಾರೆ.

**ಭಾಗ–೨**

ಇಲ್ಲಿನ ಮುಖಪುಟದಲ್ಲಿ ಕೇವಲ ಬಣ್ಣಗಳ ಬದಲಾವಣೆಯನ್ನು ಗಮನಿಸಬಹುದು. ಕರ್ನಾಟಕ ಸಂಗೀತ ಸಂಪದ ೬ ಹಾಗೂ ಭಾಗ –೨ರ ಗ್ರಂಥವಾಗಿದ್ದು, ಮೇಲೆ ತಿಳಿಸಿದಂತೆ ಏಕರೂಪದ ಮಾದರಿಯ ಮುಖಪುಟವಾಗಿದ್ದು, ಮೇಲಿನ ವಿವರಣೆಯೇ ಇದಕ್ಕೆ ಅನ್ವಯವಾಗುತ್ತದೆ. ಆದರೆ ಇಲ್ಲಿ ಕೇವಲ ವರ್ಣಗಳು ಮಾತ್ರ ಬದಲಾಗಿದ್ದು ಭಾಗ–೧, ಭಾಗ–೨ರ ಮುಖಪುಟವು (ತದ್ರೂಪವಾಗಿದೆ) ಒಂದೆಯಾಗಿದೆ.

**೭.೬.೨೦. ಪುರಂದರದಾಸರ ಕೀರ್ತನೆಗಳು (೨೦೦೯)**

ಈ ಗ್ರಂಥದ ಮುಖಪುಟವು ಹೆಚ್ಚಾಗಿ ಕೆಂಪು, ಕೇಸರಿ ವರ್ಣಗಳನ್ನು ಒಳಗೊಂಡಿದೆ. ಮುಖಪುಟದ ಮೇಲೆ ಎಡಕ್ಕೆ ಸುವರ್ಣ ಕರ್ನಾಟಕದ ಚಿಹ್ನೆ, ಪಕ್ಕಕ್ಕೆ ವಿದ್ವಾನ್ ಮತ್ತೂರು ಶಂಕರ ಮೂರ್ತಿಯವರು ಸಂಪಾದಿಸಿರುವ ಕರ್ನಾಟಕ ಸಂಗೀತ ಸಂಪದ ೭ ಎಂದಿದ್ದು, ಕೆಳಗೆ ಹಳದಿ ವರ್ಣದಲ್ಲಿ ಶೀರ್ಷಿಕೆಯನ್ನು ಸೂಕ್ಷ್ಮವಾಗಿ ಬರೆದಿದ್ದಾರೆ. ಮಧ್ಯೆ ಚೌಕದಲ್ಲಿ ಪುರಂದರದಾಸರು ತಾಳ, ತಂಬೂರಿ ಹಿಡಿದು ಕುಳಿತಿರುವ ದೃಶ್ಯ ಚೆನ್ನಾಗಿದೆ. ಚಿತ್ರದ ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಚಿಹ್ನೆ ವಿಳಾಸ ನಮೂದಿಸಿದ್ದಾರೆ. ಈ ಗ್ರಂಥದಲ್ಲಿ ದಾಸ ಶ್ರೇಷ್ಠರಲ್ಲಿ ಒಬ್ಬರಾದ ಪುರಂದರದಾಸರ ಆಯ್ದ ಪ್ರಸಿದ್ಧ ಗೀತೆಗಳನ್ನು (ಕೀರ್ತನೆ) ಒಳಗೊಂಡಿದೆ. ಈ ಮುಖಪುಟದಲ್ಲಿ ಶೀರ್ಷಿಕೆಯು ಸ್ಪಷ್ಟವಾಗಿ, ದಪ್ಪವಾಗಿ ಮೂಡಬೇಕಿತ್ತು. ಈ ಮುಖಪುಟವು ಸ್ಪಷ್ಟವಾಗಿ ಆಕರ್ಷಕವಾಗಿ ಮೂಡಿ ಬಂದಿಲ್ಲ.

## ೭.೬.೨೧. ಸಂಗೀತ ಸುಧಾ (೨೦೦೯)

ಈ ಮುಖಪುಟವು ಆಕರ್ಷಕವಾಗಿ ಮೂಡಿಬಂದಿದೆ. ಇಲ್ಲಿ ಬೂದು, ನೀಲಿ, ಕೇಸರಿ, ಕೆಂಪು, ಕಂದು, ಕಪ್ಪು, ಬಿಳಿ ವರ್ಣಗಳನ್ನು ಬಳಸಲಾಗಿದೆ. ಮೇಲೆ ಕೆಳಗೆ ಸಣ್ಣ ಪಟ್ಟಿಗಳಲ್ಲಿ ಚಿತ್ತಾರವನ್ನು ಬಿಡಿಸಲಾಗಿದೆ. ಮೇಲ್ಭಾಗದ ಎಡಕ್ಕೆ ಸುವರ್ಣ ಕರ್ನಾಟಕದ ಚಿಹ್ನೆಯನ್ನು ಬಲಕ್ಕೆ ಚಿಕ್ಕ ಅಕ್ಷರಗಳಲ್ಲಿ ವಿದ್ವಾನ್ ಮತ್ತೂರು ಶಂಕರಮೂರ್ತಿಯವರು ಸಂಪಾದಿಸಿರುವ ಕರ್ನಾಟಕ ಸಂಗೀತ ಸಂಪದ ೮ ಎಂದು ಬರೆಯಲಾಗಿದೆ. ಕೆಳಗೆ ದೊಡ್ಡ ಅಕ್ಷರ ಶೈಲಿಯಲ್ಲಿ ಶೀರ್ಷಿಕೆಯನ್ನು ಸ್ಪಷ್ಟವಾಗಿ ಕಾಣುವಂತೆ ಬರೆದಿದ್ದಾರೆ. ಇದರಡಿಯಲ್ಲಿ ಆಯಾತಾಕಾರದ ಚೌಕ ಪಟ್ಟಿಯೊಳಗೆ ಓರ್ವ ಮಹಿಳೆ ಕುಳಿತು ವೀಣೆ ನುಡಿಸುತ್ತಾ ಸಂಗೀತ ಸುಧೆ ಹರಿಸುತ್ತಿರುವ ಚಿತ್ರಣ ಗಮನ ಸೆಳೆಯುತ್ತಲಿದೆ. ಮುಖಪುಟದ ಕೆಳಭಾಗದಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಚಿಹ್ನೆ – ವಿಳಾಸವನ್ನು ಕೊಡಲಾಗಿದೆ. ಈ ಕೃತಿಯು ಓದುಗರ ಗಮನ ಆಕರ್ಷಿಸುತ್ತಲಿದೆ ಮುಖಪುಟವು ಸರಳ, ಸುಂದರವಾಗಿ ಮುದ್ರಿತವಾಗಿದೆ.

## ೭.೬.೨೨. ವಾಸುದೇವಾಚಾರ್ಯರ ಕೃತಿಗಳು (೨೦೦೯)

ಈ ಗ್ರಂಥವು ಕೂಡ ವಿದ್ವಾನ್ ಮತ್ತೂರು ಶಂಕರಮೂರ್ತಿಯವರು ಸಂಪಾದಿಸಿರುವ ಸಂಗೀತ ಸಂಪದ ೯ ಆಯ್ದ ಭಾಗವಾಗಿದೆ. ಈ ಮುಖಪುಟದ ಮೇಲೆ, ಕೆಳಗೆ ಚಿತ್ತಾರದ ಪಟ್ಟಿಗಳನ್ನು ರಚಿಸಲಾಗಿದೆ. ಮೇಲ್ಭಾಗದ ಎಡಕ್ಕೆ ಸುವರ್ಣ ಕರ್ನಾಟಕದ ಚಿಹ್ನೆಯನ್ನು ಬಲಕ್ಕೆ ಶಂಕರಮೂರ್ತಿ ಸಂಪಾದನೆಯ ಕರ್ನಾಟಕ ಸಂಗೀತ ಸಂಪದ ೯ ಎಂದು ಬರೆದಿದ್ದು ಕೆಳಕ್ಕೆ ಶೀರ್ಷಿಕೆಯು ಮಧ್ಯಮ ಪ್ರಮಾಣದ ಅಕ್ಷರ ಶೈಲಿಯಲ್ಲಿದೆ. ಮಧ್ಯ ಚೌಕದ ಪಟ್ಟಿಯೊಳಗೆ ವಾಸುದೇವಾಚಾರ್ಯರ ಸ್ಪಷ್ಟ ಭಾವಚಿತ್ರವಿದ್ದು ಪ್ರಮುಖ ಆಕರ್ಷಣೆಯ ಕೇಂದ್ರವಾಗಿದೆ. ಕೆಳಗಡೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಚಿಹ್ನೆ–ವಿಳಾಸವನ್ನು ನೀಡಲಾಗಿದೆ. ಈ ಮುಖಪುಟದಲ್ಲಿ ಹಳದಿ, ಕಿತ್ತಳೆ ಬಣ್ಣ, ನೀಲಿ, ಕಪ್ಪು, ಬಿಳಿ ವರ್ಣಗಳಿಂದ ಆಕರ್ಷಕವಾಗಿ ಓದುಗರನ್ನು ಸೆಳೆಯುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಕರ್ನಾಟಕ ಸಂಗೀತ ಸಂಪದ ಮಾಲಿಕೆಯಲ್ಲಿ (೨೦೦೯ರಲ್ಲಿ) ಲಾವಣ್ಯ ಮುದ್ರಣದಿಂದ ಪ್ರಕಟ–ಗೊಂಡಿರುವ ಮುಖಪುಟಗಳು. ಇವುಗಳ ವಿನ್ಯಾಸದಲ್ಲಿ ಒಂದೇತರನಾದ ಸ್ಥಳಾವಕಾಶ ಕಾಣಬಹುದು. ಅಂದರೆ ಮುಖಪುಟ ಮಧ್ಯದಲ್ಲಿ ಶೇಕಡ ೫೦ ರಿಂದ ೬೦ ರವರೆಗೆ ಆಯಾ ಕೃತಿ ಶೀರ್ಷಿಕೆಗೆ ಅನುಗುಣವಾಗಿ ಚಿತ್ರ, ಭಾವಚಿತ್ರ, ರೇಖಾಚಿತ್ರ, ಛಾಯಾಚಿತ್ರ ಉಪಯೋಗಿಸಿ ಮುಖಪುಟ ವಿನ್ಯಾಸ ರೂಪಿಸಿದ್ದಾರೆ. 'ಮುತ್ತು ಸ್ವಾಮಿ ದೀಕ್ಷಿತರ ಸಾಹಿತ್ಯ ಮಂಜರಿ', 'ತ್ಯಾಗರಾಜರ ಕೃತಿಗಳು,' 'ಸಂಗೀತ ಸುಧಾ' ಈ ಮೂರು ಗ್ರಂಥಗಳ ಮುಖಪುಟದಲ್ಲಿನ ಚಿತ್ರವು ಕಲಾ ಅಭ್ಯಾಸ ಮಾದರಿಯಲ್ಲಿನ ಲಕ್ಷಣಗಳನ್ನು ಹೊಂದಿವೆ. ಈ ಮೂರು ಗ್ರಂಥಗಳ ಶೀರ್ಷಿಕೆಯ ಅಕ್ಷರ ಶೈಲಿಗಳಲ್ಲಿ ಕೇವಲ ಹಿನ್ನೆಲೆ ವರ್ಣಗಳಲ್ಲಿ ಭಿನ್ನತೆ ಕಾಣಬಹುದು. ಮುಖಪುಟ ವಿನ್ಯಾಸದಲ್ಲಿ ವೈವಿಧ್ಯತೆಯನ್ನು ತರಬೇಕಾದರೆ ಹಾಗೂ ನೋಡುಗರಿಗೆ ಸ್ವಲ್ಪ ಹೊಸತನ ತೋರಿಸಲು ಈ ಭಿನ್ನಭಾವದ ಅವಶ್ಯಕತೆ ತುಂಬಾ ಇರುತ್ತದೆ. ಅದನ್ನು ಇಲ್ಲಿನ ಮುಖಪುಟಗಳಲ್ಲಿ ಕಾಣಲು ವಾಚಕರಿಗೆ ಸಾಧ್ಯವಾಗಬಹುದು.

### ೭.೬.೨೩. ಮಲ್ಲಿಕಾರ್ಜುನ ಮನಸೂರ (೨೦೧೦)

ಈ ಮುಖಪುಟವು ಸರಳ, ವೈಭವ, ಆಕರ್ಷಕವಾಗಿ ಮೂಡಿಬಂದಿದೆ.ಇಲ್ಲಿ ಕೆಂಪು ಹಳದಿ, ಕಪ್ಪು, ಬಿಳಿ ವರ್ಣಗಳು ಪ್ರಧಾನವಾಗಿವೆ. ಮುಖಪುಟ ಮೇಲ್ಭಾಗದಿಂದ ಅರ್ಧದ ವರೆಗೂ ಮಲ್ಲಿಕಾರ್ಜುನ ಮನಸೂರ ಭಾವಚಿತ್ರ ತುಂಬಾ ಆಕರ್ಷಕವಾಗಿ ಮೂಡಿದೆ. ಕೆಳಗೆ ಸಂಗೀತ ಸಾಮ್ರಾಟ್ ಮಲ್ಲಿಕಾರ್ಜುನ ಮನಸೂರ ಎಂಬ ಶೀರ್ಷಿಕೆಯ ಅಕ್ಷರಗಳು ವಿಶೇಷ ಶೈಲಿಯಲ್ಲಿ, ಬಿಳಿವರ್ಣದಲ್ಲಿ ಮೂಡಿಬಂದಿದೆ. ಇದರಡಿಯಲ್ಲಿ ಲೇಖಕರ ಹೆಸರು, ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಚಿಹ್ನೆ, ವಿಳಾಸವನ್ನೂ ಮುದ್ರಿಸಲಾಗಿದೆ. ಈ ಮುಖಪುಟ ಓದುಗರನ್ನು, ಸಾಹಿತ್ಯಾಭಿರುಚಿ ಉಳ್ಳವರನ್ನೂ ಗಮನ ಸೆಳೆಯುವಲ್ಲಿ ಯಶಸ್ವಿಯಾಗುವಂತಿದೆ. ಈ ಗ್ರಂಥದಲ್ಲಿ ಮಲ್ಲಿಕಾರ್ಜುನ ಮನಸೂರರು ಸಲ್ಲಿಸಿದ ಸೇವೆ, ಕಲಾ ವೈಭವ, ಅವರ ಜೀವನವನ್ನು ತಿಳಿಸುವ ಕೃತಿಯಾಗಿದೆ.

### ೭.೬.೨೪. ಕನ್ನಡದ ನೃತ್ಯ ನಾಟಕಗಳು (೨೦೧೦)

ಈ ಮುಖಪುಟದಲ್ಲಿ ಆಕರ್ಷಕ ವರ್ಣಗಳು ಸಮ್ಮಿಲನವಾಗಿದೆ. ಹೆಚ್ಚಾಗಿ ಕಪ್ಪು, ಕೆಂಪು, ಬಿಳಿ, ಹಳದಿ ವರ್ಣಗಳ ಸಮ್ಮಿಲನವಾಗಿದೆ. ಮೇಲ್ಭಾಗದಲ್ಲಿ ಗ್ರಂಥದ ಶೀರ್ಷಿಕೆಯನ್ನು ಬಿಳಿ ವರ್ಣದಲ್ಲಿ ವಿಶೇಷ ಅಕ್ಷರ ಶೈಲಿಯಲ್ಲಿ ಬರೆಯಲಾಗಿದ್ದು, ಕೆಳಗಡೆ ಲೇಖಕರ ಹೆಸರಿದ್ದು, ಇದರಡಿಯಲ್ಲಿ ಪುರುಷ–ಸ್ತ್ರೀ ಭರತನಾಟ್ಯ ಮಾಡುತ್ತಿರುವ ಶೈಲಿಯು ಸೂಕ್ಷ್ಮವಾಗಿ ಕಾಣುತ್ತದೆ. ಪಕ್ಕದಲ್ಲಿ ಕೆಂಪು ಪರದೆ ಎಳೆದು ಕಟ್ಟಿರುವುದು ಸೊಗಸಾಗಿದೆ. ಇಲ್ಲಿ ವಿನ್ಯಾಸಕಾರನ ಕೈ ಚಳಕ ಮೆಚ್ಚಲೇಬೇಕು. ಒಂದು ವೇದಿಕೆ, ಕೆಂಪು ಪರದೆಯನ್ನು ಪಕ್ಕಕ್ಕೆ ಎಳೆದು ಕಟ್ಟಿರುವುದು. ವೇದಿಕೆಯ ಮೇಲೆ ಸ್ತ್ರೀ–ಪುರುಷರಿಬ್ಬರೂ ಮೈ ಮರೆತು ನರ್ತಿಸುತ್ತಿರುವ ದೃಶ್ಯವು ಅಮೋಘ ಅದ್ಭುತ. ಇಲ್ಲಿ ನೃತ್ಯ ಮಾಡುತ್ತಿರುವ ವ್ಯಕ್ತಿ ಚಿತ್ರಣವನ್ನು ಎದ್ದು ಕಾಣುವಂತೆ ಚಿತ್ರಿಸಿದ್ದರೆ ಗ್ರಂಥಕ್ಕೆ ಇನ್ನೂ ಮೆರಗು ಬರುತ್ತಿತ್ತು. ಆದರು ಇಲ್ಲಿ ವಿನ್ಯಾಸಕಾರನ ಜಾಣ್ಮೆಯನ್ನು ಮೆಚ್ಚಲೇಬೇಕು. ಮುಖಪುಟವು ಆಕರ್ಷಕವಾಗಿ ಮೂಡಿ ಬಂದಿದೆ. ಇಲ್ಲಿನ ಶೀರ್ಷಿಕೆಗಳ ದೃಶ್ಯಕ್ಕೂ ಒಂದಕ್ಕೊಂದು ಸಂಬಂಧ ಕಲ್ಪಿಸುವಂತಿದೆ. ಈ ಮುಖಪುಟವು ವಾಚಕರಿಗೆ ಒಂದು ಹಿತಾನುಭವದ ಜೊತಗೆ ಒಂದು ಶಬ್ದವನ್ನು ಧ್ವನಿಸುತಿದ್ದಂತೆ ಭಾಸವಾಗುತ್ತಿದೆ.

### ೭.೬.೨೫. ನಾದ ವಿಜ್ಞಾನ ಸಂಪದ (೨೦೧೦)

ಇದರಲ್ಲಿನ ಮುಖಪುಟದಲ್ಲಿ ಹಸಿರು, ಕೆಂಪು, ಕೇಸರಿ, ಕಪ್ಪು, ಬಿಳುಪಿನ ವರ್ಣಗಳನ್ನು ಕಾಣಬಹುದು. ಈ ಮುಖಪುಟದ ಮೇಲ್ಭಾಗದಲ್ಲಿ ಶೀರ್ಷಿಕೆಯಾದ 'ನಾದ ವಿಜ್ಞಾನ ಸಂಪದ'ವೆಂದು ಬಿಳಿ ವರ್ಣದಲ್ಲಿ ಸ್ಪಷ್ಟವಾಗಿ ಬರೆಯಲಾಗಿದೆ. ಕೆಳಗೆ ಚಿಕ್ಕದಾಗಿ ಲೇಖಕರ ಹೆಸರಿದೆ. ಇದರಡಿಯಲ್ಲಿ ಮೇಲಿಂದ ಕೆಳಕ್ಕೆ ಸಂಗೀತ ವಾದ್ಯಗಳನ್ನು ಆಕರ್ಷಕವಾಗಿ ಚಿತ್ರಣಗಳನ್ನು ಮುದ್ರಿಸಲಾಗಿದೆ. ಇಲ್ಲಿ ವೀಣೆ, ಸಿತಾರ, ತಬಲ, ಎರಡು ದಿಬ್ಬಗಳಿರುವ ವೀಣೆಯ ಚಿತ್ರಣದ ಜೊತೆ ಕಂಪ್ಯೂಟರ್‌ನ ಚಿತ್ರಣ ಚೆನ್ನಾಗಿ ಕಾಣುತ್ತಿವೆ. ಈ ಚಿತ್ರಗಳೇ ನೋಡುಗರನ್ನು, ಓದುಗರನ್ನು ವಿಷಯದ ಕಡೆ ಸೆಳೆಯುತ್ತಲಿವೆ. ಈಗಿನ ದಿನಮಾನಗಳಲ್ಲಿ ಕಂಪ್ಯೂಟರ್‌ನ ಕೀ ಬೋರ್ಡ್‌ಗಳಲ್ಲಿ ಎಲ್ಲಾ ಸಂಗೀತ ವಾದ್ಯಗಳನ್ನು ನುಡಿಸುವಂತಹ ಸಾಫ್ಟ್‌ವೇರ್‌ಗಳು

ಹುಟ್ಟಿವೆ. ಇದು ಶೀರ್ಷಿಕೆಗೂ ಚಿತ್ರಕ್ಕೂ ಒಂದಕ್ಕೊಂದು ಸಂಬಂಧ ಕಲ್ಪಿಸುವಂತೆ ಮುಖಪುಟ ನೋಡುಗನ ಗಮನ ಸೆಳೆಯುತ್ತಿದೆ. ಆದರೆ ವರ್ಣಲೇಪನದಲ್ಲಿ ಪ್ರಖರತೆ ಇಲ್ಲದಿರುವುದೆ ಈ ಮುಖಪುಟದಲ್ಲಿನ ಕೊರತೆ ಎಂದು ಕಾಣುತ್ತಲಿದೆ.

**೭.೬.೨೬. ಭರತನ ಸಂಗೀತ ಸಿದ್ಧಾಂತ (೨೦೧೧)**

ಈ ಮುಖಪುಟವು ಹೆಚ್ಚು ಹಸಿರು ವರ್ಣದಿಂದ ಕೂಡಿದೆ. ಜೊತೆಗೆ ನೀಲಿ, ಕೆಂಪು, ಹಳದಿ, ಕಪ್ಪು, ಬಿಳಿ ವರ್ಣಗಳು ಸೇರಿ ವಿಶೇಷತೆಯಿಂದ ಕೂಡಿದೆ. ಮುಖಪುಟದಲ್ಲಿ ನೆರಳಿನಂತೆ ಸಂಗೀತ ವಾದಕಗಳನ್ನು ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಆಕರ್ಷಕ ಚಿತ್ತಾರವನ್ನು ಕೆಂಪು ಹಳದಿ ವರ್ಣದಲ್ಲಿ ಬಿಡಿಸಿದೆ. ಕೆಳಗೆ ಶೀರ್ಷಿಕೆಯನ್ನು ನೀಲಿ ವರ್ಣದಲ್ಲಿ ಮಧ್ಯಕ್ಕೆ ಆಕರ್ಷಕ ಶೈಲಿಯ ಅಕ್ಷರದಲ್ಲಿ ಮಧ್ಯಮ ಕ್ರಮಾಂಕದಲ್ಲಿ ಸುಂದರವಾಗಿ ಬರೆಯಲಾಗಿದೆ. ಇದರ ಕೆಳಗೆ ಲೇಖಕರ ಹೆಸರನ್ನು ಹಳದಿ ವರ್ಣದಲ್ಲಿ, ಮುಖಪುಟದ ಕೆಳಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಚಿಹ್ನೆ ಹಾಗು ವಿಳಾಸವನ್ನು ನಮೂದಿಸಲಾಗಿದೆ. ಈ ಮುಖಪುಟವು ಕತ್ತಲು ಆವರಿಸಿರುವಂತೆ ಎದ್ದು ಕಾಣುವ ಹಾಗೆ ಮುದ್ರಿತವಾಗಿದೆ.ಇಲ್ಲಿ ಶೀರ್ಷಿಕೆ ದೊಡ್ಡದಾಗಿ ಇರಬೇಕಿತ್ತು.

'ಕನ್ನಡದ ನೃತ್ಯ ನಾಟಕಗಳು' 'ಭರತನ ಸಂಗೀತ ಸಿದ್ಧಾಂತ' ಈ ಎರಡು ಗ್ರಂಥಗಳ ಮುಖಪುಟದ ವರ್ಣಗಳ ಬಳಕೆ ಮತ್ತು ಅದನ್ನು ಅತ್ಯಂತ ಉತ್ತಮವಾಗಿ ಸಂಯೋಜಿಸಿರುವ ರೀತಿ ಹಾಗೂ ಶೀರ್ಷಿಕೆಗೆ ಬಳಸಲಾದ ಸರಳಗ್ಯೆ ಅಕ್ಷರ ಶೈಲಿ ನೃತ್ಯಗಾರರ ಮೇಲೆ ಸ್ಪಾಟ್ ಲೈಟ್ ಬೆಳಕು ತೋರಿಸಿರುವ ರೀತಿ ತುಂಬಾ ಚೆನ್ನಾಗಿ ಕಲಾವಿದರು ಇಲ್ಲಿ ಕಲೆಯನ್ನು ಅಭಿವ್ಯಕ್ತಿಸಿದ್ದಾರೆ. ಈ ಎರಡು ಗ್ರಂಥಗಳ ಮುಖಪುಟವು ಶ್ರೀ ಮುರಳೀಧರ ವಿ ರಾಥೋಡ್ ರಚಿಸಿದ್ದಾರೆ. ಇಲ್ಲಿನ ವರ್ಣಲೇಪನ ಮತ್ತು ವರ್ಣ ರೇಖೆ ಹಾಗೂ ಕುಂಚದಿಂದ ರಚಿಸಿದ ಅಕ್ಷರ ಶೈಲಿ ಇವುಗಳನ್ನು ಗಮನಿಸಿದರೆ ಕಲಾವಿದರಿಗೆ ವರ್ಣ ಮತ್ತು ಕುಂಚದಲ್ಲಿ ಹಿಡಿತವಿದೆ ಎಂದು ಅನಿಸುತ್ತಿದೆ. ಓದುಗರ ಕಣ್ಣಿನ ನೋಟ ಸೆಳೆಯಲು ಕುತೂಹಲ ಹೆಚ್ಚಿಸುವಲ್ಲಿ ಈ ಮುಖಪುಟವು ಯಶಸ್ವಿಯಾಗಿವೆ ಎಂದು ಭಾವಿಸಿಕೊಳ್ಳಬಹುದು.

**೭.೬.೨೭.. ನಾದ ನುಡಿ ಸೌರಭ (೨೦೧೫)**

ಈ ಮುಖಪುಟವು ಹೆಚ್ಚು ಆಕರ್ಷಕವಾಗಿ ಮನಸೂರೆಗೊಳ್ಳುವಂತಿದೆ. ಇಲ್ಲಿ ಗಿಳಿ ಹಸಿರು, ಕೆಂಪು, ನೀಲಿ, ಬಿಳಿ, ಕಂದು, ಕಪ್ಪು ವರ್ಣಗಳು ಸೇರಿವೆ. ಮೇಲ್ಭಾಗದ ಎಡಕ್ಕೆ ರಂಗೋಲಿಯ ಚಿತ್ತಾರವನ್ನು ಬಿಡಿಸಲಾಗಿದೆ.ಬಲಕ್ಕೆ ಕರ್ನಾಟಕ ಸರ್ಕಾರದ, ಕರ್ನಾಟಕ ನೃತ್ಯ ಸಂಗೀತ ಅಕಾಡೆಮಿಯ ಚಿಹ್ನೆ, ವಿಳಾಸ ನೀಡಲಾಗಿದೆ. ಕೆಳಗೆ ಕೆಂಪು ಪಟ್ಟಿಯ ಚಿತ್ತಾರದಲ್ಲಿ ಬಿಳಿವರ್ಣದ ಸುಂದರ ಅಕ್ಷರ ಶೈಲಿಯ ಶೀರ್ಷಿಕೆಯನ್ನು ಬರೆಯಲಾಗಿದೆ. ಕೆಳಗೆ ಎಡಕ್ಕೆ ಲೇಖಕರ ಹೆಸರನ್ನು ನೀಡಲಾಗಿದೆ. ಮಧ್ಯದಿಂದ ಕೆಳಗಿನವರೆಗೂ ಚಿತ್ರವನ್ನು ಬಿಡಿಸಲಾಗಿದೆ. ವೀಣೆ ನುಡಿಸುತ್ತಿರುವ ಸರಸ್ವತಿ ದೇವಿಯ ಭಾವಚಿತ್ರವಿದ್ದು ಪಕ್ಕಕ್ಕೆ ಆಕರ್ಷಕ ನವಿಲಿದೆ. ಕೆಳಗಡೆ ಸಾಹಿತ್ಯಕ್ಕೆ ಸಂಬಂಧಿಸಿದ ಶಬ್ಧಗಳನ್ನು ಹಾಳೆಯಲ್ಲಿ ಬರೆಯಲಾಗಿದ್ದು, ಅವುಗಳನ್ನು ಸರಸ್ವತಿ ದೇವಿಯ ಪಾದದ ಕೆಳಗೆ ಪಕ್ಕಕ್ಕೆ ಹರಡಿರುವಂತೆ ಸೊಗಸಾಗಿ ಮುದ್ರಿಸಲಾಗಿದೆ. ಇಲ್ಲಿ ವಿದ್ಯಾದೇವತೆ

ಸರಸ್ವತಿಯು ನೀಲಿ ಜಗುಲಿಯ ಮೇಲೆ ಬಿಳಿ ಸೀರೆಯುಟ್ಟು, ಕೆಂಪು ವರ್ಣದ ಕುಪ್ಪಸ ತೊಟ್ಟಿರುವ ಆಕರ್ಷಿಸುವ ಮುಖದ ಚಿತ್ರಣ ತಕ್ಷಣವೇ ಗಮನ ಸೆಳೆಯುತ್ತಿದೆ. ಈ ಮುಖಪುಟವು ಓದುಗರನ್ನು, ನೋಡುಗರನ್ನು ಗಮನ ಸೆಳೆಯುವಲ್ಲಿ ಸಫಲವಾಗುತ್ತಿದೆ.

**೭.೬.೨೮. ಸಂಗೀತ ಶಾಸ್ತ್ರ ಚಿಂತನ ರಸಾಯನ (೨೦೧೫)**

ಈ ಮುಖಪುಟವು ನೇರಳೆ, ನೀಲಿ, ಹಳದಿ, ಸುವರ್ಣ ಬಣ್ಣ, ಕಪ್ಪು, ಬಿಳಿ, ವರ್ಣಗಳನ್ನು ಒಳಗೊಂಡಿದೆ. ಮೇಲ್ಭಾಗದಲ್ಲಿ ಹಳದಿ ವರ್ಣದಲ್ಲಿ ಶೀರ್ಷಿಕೆಯನ್ನು ಸ್ಪಷ್ಟವಾಗಿ ಬರೆಯಲಾಗಿದೆ. ಮಧ್ಯ ಸುವರ್ಣ (ಬಂಗಾರ) ಬಣ್ಣದ ವಿಗ್ರಹವಾದ ವಿದ್ಯಾದೇವತೆ ಸರಸ್ವತಿಯು ವೀಣೆ ನುಡಿಸುತ್ತಿರುವ ಚಿತ್ರ ಸ್ವಲ್ಪ ಮಗ್ಗುಲಾಗಿ ಆಕರ್ಷಕವಾಗಿ ಮೂಡಿ ಬಂದಿದೆ. ವಿಗ್ರಹದ ಕೆಳಗೆ ಲೇಖಕರ ಹೆಸರನ್ನು ಬರೆಯಲಾಗಿದೆ. ಕೆಳಗೆ ಬಣ್ಣದ ಚಿತ್ತಾರದ ಪಟ್ಟಿಯನ್ನು ಮುಖಪುಟದ ಲಕ್ಷಣಕ್ಕಾಗಿ ಮುದ್ರಿಸಲಾಗಿದೆ. ಈ ಮುಖಪುಟವು ಸರಳವಾಗಿ ಮೂಡಿ ಬಂದಿದೆ. ಇಲ್ಲಿ ಛಾಯಾಚಿತ್ರದ ಒಂದು ಚಿತ್ರವನ್ನು ಮುದ್ರಣಗೊಳಿಸಲಾಗಿದೆ. ಈ ಮುಖಪುಟದಲ್ಲಿ ದೇವಿ ಸರಸ್ವತಿಯ ವಿಗ್ರಹವೇ ಜನಾಕರ್ಷಣೆಯ ಕೇಂದ್ರ ಬಿಂದುವಾಗಿದೆ. ಓದುಗರನ್ನು ತನ್ನಡೆ ಸೆಳೆಯುತ್ತಿದೆ. ಈ ಮುಖಪುಟದ ಶೀರ್ಷಿಕೆಗೂ ಚಿತ್ರಕ್ಕೂ ಸಂಬಂಧವಿದೆ. ಈ ಗ್ರಂಥದಲ್ಲಿ ಸಂಗೀತ ಶಾಸ್ತ್ರದ ಬಗ್ಗೆ ಚಿಂತಿಸುವ, ಆಲಿಸುವ, ಕಲಿಯುವ ಪರಿಯನ್ನು ಅರ್ಥಗರ್ಭಿತವಾಗಿ ತಿಳಿಸಲಾಗಿದೆ.

ಒಟ್ಟಾರೆ ೧೯೫೮ರಿಂದ ೨೦೧೫ರವರೆಗೆ ಕೇವಲ ಒಂಬತ್ತು ಕೃತಿಗಳಿಗೆ ಕಲಾವಿದರು ಮುಖಪುಟ ರಚನೆ ಮಾಡಿದ್ದಾರೆ, ಹದಿನೈದು ಗ್ರಂಥಗಳು ಶ್ರೀರಂಗ ಮುದ್ರಣದಲ್ಲಿ ಪ್ರಕಟಗೊಂಡಿವೆ, ಏಳುಗ್ರಂಥಗಳು ಲಾವಣ್ಯ ಮುದ್ರಣದಲ್ಲಿ ಮುಂದ್ರಣಗೊಂಡಿವೆ, ಐದು ಗ್ರಂಥಗಳು ಮಂಜುಶ್ರೀ ಮುದ್ರಣದಲ್ಲಿ ಪ್ರಕಟವಾಗಿವೆ, ಹಾಗೂ ಇಳಾ, ಮಯೂರ, ನಂಜುಂಡ, ಲಿಬರ್ಟಿ ಮುದ್ರಣಗಳು ತಲಾ ಎರಡು ಗ್ರಂಥಗಳನ್ನು ಹೊರತಂದಿದ್ದಾರೆ. ಇನ್ನುಳಿದ ಇಪ್ಪತ್ತಾರು ಗ್ರಂಥಗಳು ಬೇರೆಬೇರೆ ಮುದ್ರಣದಲ್ಲಿ ಪ್ರಕಾಶನಗೊಂಡಿವೆ. ಇವುಗಳಲ್ಲಿ ಒಂಬತ್ತು ಮುಖಪುಟಗಳು ರೇಖಾಚಿತ್ರ, ವರ್ಣರೇಖಾಚಿತ್ರಗಳಿಂದ ರಚಿಸಲ್ಪಟ್ಟಿವೆ, ಹದಿಮೂರು ಗ್ರಂಥಗಳಿಗೆ ಅಕ್ಷರಗಳನ್ನೇ ಪ್ರಧಾನವಾಗಿ ಬಳಸಿಕೂಂಡು ಮುಖಪುಟಗಳನ್ನು ಮಾಡಿದ್ದಾರೆ, ಹನ್ನೊಂದು ಗ್ರಂಥಗಳಲ್ಲಿ ಪೆನ್ಸಿಲ್, ವರ್ಣ, ಛಾಯಚಿತ್ರಗಳ ಭಾವಚಿತ್ರಗಳನ್ನು ಬಳಸಿಕೊಂಡಿದ್ದಾರೆ, ಏಳು ಗ್ರಂಥಗಳ ಮುಖಪುಟಗಳು ಸಂಕೇತ, ಚಿನ್ಹೆ, ಹೊಂದಿದ್ದು, ಇನ್ನು ಏಳು ಗ್ರಂಥಗಳ ಮುಖಪುಟಗಳಲ್ಲಿ ನೈಜಶೈಲಿಯ ಚಿತ್ರಗಳು ಕಾಣುತ್ತವೆ.

❑❑❑

## ಸ್ವಾತಂತ್ರ್ಯೋತ್ತರ ಕನ್ನಡ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟಗಳು




೧೯೫೮




೧೯೬೦




೧೯೬೧




೧೯೬೩




೧೯೬೪




೧೯೬೪




೧೯೬೫




೧೯೬೮




೧೯೬೯




೧೯೬೯




೧೯೬೯




೧೯೭೧




೧೯೭೩




೧೯೭೩




೧೯೭೪




೧೯೭೬




೧೯೭೭




೧೯೭೮

ಎಂಬತ್ತರ ದಶಕದ ಕನ್ನಡ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟಗಳು



೧೯೮೬




೧೯೮೯

## ತೊಂಬತ್ತರ ದಶಕದ ಕನ್ನಡ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟಗಳು




೧೯೯೧




೧೯೯೨




೧೯೯೩




೧೯೯೩




೧೯೯೩




೧೯೯೩




೧೯೯೪




೧೯೯೪




೧೯೯೪



ಚೌಕಾಕರದ ಮುಖಪುಟ **Square Cover page**




೧೯೯೪




೧೯೯೫




೧೯೯೭




೧೯೯೮




೧೯೯೮




೧೯೯೮

# ಸರಣಿ ಮಾಲಿಕೆಯ ರಕ್ಷಾಪುಟಗಳು




೨೦೦೦




೨೦೦೧




೨೦೦೧






ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಕನ್ನಡ ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟಗಳು




೨೦೦೩




೨೦೦೪




೨೦೦೪




೨೦೦೭




೨೦೦೮




೨೦೦೮

ಅಗಲವಾದ ರಕ್ಷಾಪುಟ




೨೦೦೮

ಅಧ್ಯಾಯ : ಎಂಟು

# ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

- ಸ್ವಾತಂತ್ರ್ಯ ಪೂರ್ವ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ
- ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ
- ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಅಧ್ಯಾಯ : ಎಂಟು

# ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

೧೯ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಗ್ರಂಥ ಕೃತಿಗಳಿಗೆ, ಸಾಹಿತಿಗಳಿಗೆ, ಪ್ರಚಾರಕರಿಗೆ, ಮುದ್ರಕರಿಗೆ ಇವರಿಗೆಲ್ಲ ಸಾಹಿತ್ಯ ಸೃಷ್ಟಿಯಲ್ಲಿ, ಗ್ರಂಥ ರಚನೆಯಲ್ಲಿ, ಮುದ್ರಣದಲ್ಲಿ ಆಸಕ್ತಿ ತೀವ್ರತರವಾಗಿ ಮೂಡುತ್ತಿತ್ತೇ ವಿನಃ ಮುದ್ರಣದಲ್ಲಿ ಕಲಾತ್ಮಕತೆಯ ತೋರ್ಪಡಿಕೆ, ಆ ಕುರಿತಾಗಿನ ದೃಷ್ಟಿಕೋನದ ಅಗತ್ಯತೆಯ ಕುರಿತಂತೆ ಯಾವ ಪ್ರಜ್ಞೆಯೂ ವಿಧಿಸಲಿಲ್ಲ. ಬರಹಗಾರ ವರ್ಗ ಮತ್ತು ಮುದ್ರಕ ವರ್ಗ ಅಥವಾ ಪ್ರಕಾಶಕ ವರ್ಗ ಅಕ್ಷರ ಪ್ರಜ್ಞೆಯಲ್ಲಿ ಮುಳುಗಿತ್ತೇ ವಿನಃ ಅಕ್ಷರದ ಸೆಳೆತ ಗ್ರಂಥದ ಸೌಂದರ್ಯಯುಕ್ತ ರಕ್ಷಾಪುಟ / ಮುಖಪುಟಗಳಲ್ಲೂ ವಿಶೇಷವಾಗಿ ಅಡಗಿದೆಯೆಂಬ ದೃಷ್ಟಿಕೋನ ಬೆಳೆಯಲಿಲ್ಲ. ಆ ಕಾರಣದಿಂದಲೇ ಆ ಅವಧಿಯಲ್ಲಿ ಮುದ್ರಣಗೊಂಡ ಗ್ರಂಥಗಳಲ್ಲಿ ಒಂದು ದಪ್ಪ ರಟ್ಟಿನ ಸರಳ ರಕ್ಷಾಪುಟ ಹೊಂದಿದವುಗಳಾಗಿವೆ. ಅಷ್ಟೇ ಇಲ್ಲೂ ಕಾಣಬಹುದು.

ರಕ್ಷಾಪುಟದ ಒಳಗಿರುವ ಅಕ್ಷರಗಳ ರಕ್ಷಣೆಯ ಕುರಿತಾಗಿ ಕಾಳಜಿಯೇ ಆಗಿದೆ. ಆ ಅವಧಿ ಅಕ್ಷರ ನಿಷ್ಠೆ ಅವಧಿ ಬಹುಶಃ ಹಾಗಾಗಿಯೇ ಸಾಹಿತಿಗಳಿಗೆ / ಬರಹಗಾರರಿಗೆ ವಿಶೇಷ ಮನ್ನಣೆ ದೊರಕಿತೇ ಹೊರತು ಬರಹಗಾರಿಕೆಗೆ ಸರಿಯಾದ ಬೈಂಡಿಂಗ್ ಒದಗಿಸುವವರಿಗಲ್ಲ. ಈ ಅಧ್ಯಯನ ಕಾರ್ಯಾವಧಿಯಲ್ಲಿ ಪರಾಮರ್ಶಿಸಿದ ೧೯ನೆಯ ಶತಮಾನದ ಕನ್ನಡ ಗ್ರಂಥಗಳಲ್ಲಿಯೂ ರಕ್ಷಾಪುಟ ರಚಿಸಿದವರ ಹೆಸರೇ ಪ್ರಸ್ತಾಪವಾಗಿಲ್ಲ. ಆಗಿನ ಕಾಲಾವಧಿಯ ಅಕ್ಷರಭೂಯಿಷ್ಟ ವರ್ಗಕ್ಕೆ ಅಕ್ಷರ ಮುದ್ರಣದಲ್ಲಿ ಸಾಧ್ಯವಾದಷ್ಟರ ಮಟ್ಟಿಗೆ ಲೋಪವನ್ನು ನಿವಾರಿಸುವುದೇ ಒಂದು ಮಹತ್ಕಾರ್ಯ / ಪ್ರಮುಖ ಕಾರ್ಯ ಎಂಬ ಧೋರಣೆ ಮನೆ ಮಾಡಿದ್ದೂದು ಕೂಡ ಇದಕ್ಕೆ ಕಾರಣವಿದ್ದಿರಬಹುದು. ಅಲ್ಲದೇ ಆ ಅವಧಿಯ ಮುದ್ರಣಗಾರಿಕೆಯ

ಸ್ಥಿತಿ–ಗತಿಗಳೂ ಆಗಿನ ಸಾಹಿತ್ಯವಲಯ ಅಷ್ಟಕ್ಕೇ ತೃಪ್ತಿ ಪಟ್ಟುಕೊಳ್ಳಲು ಕಾರಣವಾಗಿರಬಹುದು. ತತ್ಕಾಲಿನ ಸಾಹಿತ್ಯ ಮಾರುಕಟ್ಟೆಗೆ ರಕ್ಷಾಪುಟದ ಆಕರ್ಷಣೆಯತೆ ಅನಿವಾರ್ಯ/ಅಗತ್ಯ ಎನಿಸದೇ ಇರಲೂಬಹುದು.

ಕ್ರಿ.ಶ. ೧೯೦೦ ರಿಂದ ೧೯೨೫ ದಶಕದಲ್ಲಿ ಮೂಡಿ ಬಂದ ಸಾಹಿತ್ಯ ಗ್ರಂಥಗಳ ಮುಖಪುಟಗಳು ಅಂದರೆ ಸ್ವಾತಂತ್ರಪೂರ್ವ ಕರ್ನಾಟಕದಲ್ಲಿ ಅಂದಿನ ಸ್ಥಿತಿಗತಿ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ವ್ಯಾಪಾರಿ ದೃಷ್ಟಿಕೋನ, ಕಲೆ, ಲಲಿತಕಲೆ ಇವೆಲ್ಲ ಗಮನಿಸಿದರೆ ಆ ದಿನಗಳು ತುಂಬಾ ತೊಂದರೆಯಿಂದ ಕೂಡಿದ ದಿನಗಳು ಎಂದು ಹೇಳ್ಳಬಹುದು. ಆದರು ಅಂದಿನ ಲೇಖಕರು, ಕವಿವರ್ಯರು, ಕೃತಿಗಳನ್ನು ರಚಿಸಿ ಸಾಧ್ಯವಾದಷ್ಟು ಕಲಾವಿದರಿಂದ, ವಿನ್ಯಾಸಕಾರರಿಂದ ಮುಖಪುಟಗಳನ್ನು ರಚಿಸಿ ಕೃತಿ ಪ್ರಕಟಿಸಿದ್ದಾರೆ. ಈ ದಶಕಗಳ ಹೊಸ್ತಿಲಲ್ಲಿ ಮೂಡಿ ಬಂದ ಪ್ರಾತಿನಿಧಿಕ ಕೃತಿಗಳು 'ಶ್ರೀ ಮದ್ಗೀತಾರ್ಥ ಸಾರದ' ಎಂಬ ಕೃತಿಯು ವೆಂಕಟಚಾರ್ಯರು ರಚಿಸಿದರು. ಶ್ರೀನಿವಾಸರಾವ್‌ರವರು ರಚಿಸಿದ 'ಕರ್ನಾಟಕ ಭಗವದ್ಗೀತೆ' ಅಂದವಾಗಿ ಮೂಡಿದೆ. ಪ್ರಸಿದ್ಧ ಕವಿಗಳಾದ ಬಿ. ಎಂ. ಶ್ರೀಕಂಠಯ್ಯನವರು ಬರೆದಿರುವ 'ಕನ್ನಡ ಮಾತು ತಲೆಯೆತ್ತುವ ಬಗೆ' ಸೊಗಸಾಗಿದೆ. ಮುಂ. ಆ. ರಾಮಾನುಜಯ್ಯಂಗಾರ್‌ರವರು ಭಾಮಿನಿ ಷಟ್ಪದಿಯಲ್ಲಿ ರಚಿಸಿರುವ 'ಕೋನಯ್ಯ ವಿರಚಿತ ಗಯ ಚರಿತ್ರೆ' ಸರಳವಾಗಿ ಮೂಡಿಬಂದಿದೆ. ಹಾಗೂ ಮೈಸೂರು ಸೀತಾರಾಮ ಶಾಸ್ತ್ರಿ ಬರೆದಿರುವ 'ಕರ್ನಾಟಕ ಪಂಚತಂತ್ರಂ'. ರಾಮಚಂದ್ರ ಹನುಮಂತ ದೇಶಪಾಂಡೆ ರಚಿಸಿದ 'ಅಕ್ಬರ್ ಚಕ್ರವರ್ತಿಯ ಚರಿತ್ರೆ' ಮತ್ತು ಶಂಬಾ.ಜೋಶಿ ಬರೆದಿರುವ 'ಮಹರ್ಷಿ ಅರವಿಂದ ಘೋಷ್' ಎಂಬ ಗ್ರಂಥಗಳ ಮುಖಪುಟಗಳ ಅಂದಿನ ಕಾಲಕ್ಕೆ ಸರಳವಾಗಿ ಮೂಡಿಬಂದ ಗ್ರಂಥಗಳಾಗಿವೆ. ಆ ದಿನಗಳಲ್ಲಿ ಕಂಪ್ಯೂಟರ್ (ಗಣಕ ಯಂತ್ರ) ಆಗಲಿ, ಉತ್ತಮ ಮುದ್ರಣ ಯಂತ್ರಗಳಾಗಲಿ, ಅತ್ಯುತ್ತಮ ವರ್ಣ ಶೈಲಿಗಳಾಗಲಿ, ಯಾವುದು ಇರಲಿಲ್ಲ. ಇಂತಹ ಸಂದರ್ಭದಲ್ಲಿ ನೈಜತೆಯಿಂದ ಕಲೆ, ಸಾಹಿತ್ಯ, ಮುದ್ರಣ, ಮುಖಪುಟ ರಚನೆ ಸಾಹಿತ್ಯ ಕ್ಷೇತ್ರದಲ್ಲಿ ಸವಾಲೆಂಬಂತೆ ಮೂಡಿ ಬಂದಿರುವುದನ್ನು ನಾವು ಗಮನಿಸಬಹುದು.

### ೮.೧. ಸ್ವಾತಂತ್ರ್ಯಪೂರ್ವ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

#### ೮.೧.೧. ಶ್ರೀಮದ್ಗೀತಾರ್ಥ ಸಾರದ (೧೯೦೦)

ಕ್ರಿ.ಶ. ೧೯೦೦ ರಲ್ಲಿ ಮೂಡಿಬಂದ ಗ್ರಂಥವಿದು. ಈ ಮುಖಪುಟವು ಅಕ್ಷರಗಳಿಂದ ಕೂಡಿದೆ. ಇಲ್ಲಿ ಕಂಡು ಬರುವ ಅಕ್ಷರ ಶೈಲಿಯು ಸ್ವಲ್ಪ ಹಳೆಗನ್ನಡವನ್ನು ಹೋಲುವಂತಿದೆ ಎಂಬುವದನ್ನು ಗಮನಿಸಬಹುದು. ಈ ಮುಖಪುಟವು ಕೇವಲ ಕಪ್ಪು ಬಿಳುಪು ವರ್ಣಗಳಿಂದ ಕೂಡಿದೆ. ಸುತ್ತಲೂ ಚೌಕ ವಿನ್ಯಾಸವನ್ನು ಗಮನಿಸಬಹುದು. ಆರಂಭದಲ್ಲಿ ಮೇಲ್ಭಾಗದಲ್ಲಿ ಶ್ರೀಕೃಷ್ಣಯೂ ನಮಃ ಎಂದು, ಕೆಳಗೆ ಶ್ರೀ ಕೃಷ್ಣನಿಂದ ಉದ್ಧಾರವಾದ ಗೀತೆಯ ಸಾಲುಗಳನ್ನು ಮಧ್ಯದಲ್ಲಿ ಸ್ಪಷ್ಟವಾಗಿ ಕಾಣುವಂತೆ ಶೀರ್ಷಿಕೆಯನ್ನು ಮುದ್ರಿಸಲಾಗಿದೆ. ಕೆಳಗೆ ಲೇಖಕರ ಹೆಸರನ್ನು ಇದರಡಿಯಲ್ಲಿ ಮುದ್ರಕರ ಹೆಸರು, ವಿಳಾಸವನ್ನು, ಮುದ್ರಣ ವರ್ಷವನ್ನು ಸ್ಪಷ್ಟವಾಗಿ ಮೂಡಿಸಲಾಗಿದೆ. ಈ ಮುಖಪುಟವು ಸರಳತೆಯಿಂದ ಕೂಡಿದೆ. ಆ ದಿನಗಳ ಮಟ್ಟಿಗೆ ಇದು ಅಮೂರ್ತ ಚಿತ್ರಣದ ಅಮೋಘ ಮುಖಪುಟವೆನ್ನಬಹುದು. ಅಥವಾ ಆ ಕಾಲದ ಮಟ್ಟಿಗೆ

ಜನ ಹಾಗೆ ಭಾವಿಸಿರಬಹುದು. ಈ ಗ್ರಂಥದಲ್ಲಿ ಮಹಾಭಾರತದ ಕುರುಕ್ಷೇತ್ರದಲ್ಲಿ ಯುದ್ಧಕ್ಕೆ ಮುನ್ನ ಶ್ರೀಕೃಷ್ಣ ಅರ್ಜುನನಿಗೆ ತನ್ನ ವಿಶ್ವರೂಪ ಪ್ರದರ್ಶನ ಮಾಡಿ, ಭಗವದ್ಗೀತೆಯನ್ನು ಪಠಿಸಿದ ರೀತಿಯಲ್ಲಿ ಅಮೋಘವಾಗಿ ಇಲ್ಲಿ ವೆಂಕಟಚಾರ್ಯರು ತಮ್ಮದೇ ಶೈಲಿಯಲ್ಲಿ ಆಕರ್ಷಕವಾಗಿ ಮಿಶ್ರ ಕನ್ನಡದಲ್ಲಿ ಬರೆದಿದ್ದಾರೆ.

**೮.೧.೨. ಕರ್ನಾಟಕ ಭಗವದ್ಗೀತೆ (೧೯೦೮)**

ಈ ಗ್ರಂಥವು ಕ್ರಿ.ಶ. ೧೯೦೮ ರಲ್ಲಿ ಲೇಖಕರಾದ ಶ್ರೀನಿವಾಸರಾವ್ ಅವರಿಂದ ಮೂಡಿಬಂದಿದೆ. ಈ ಮುಖಪುಟದಲ್ಲಿ ಕೇಸರಿ, ಕಪ್ಪು ವರ್ಣಗಳನ್ನು ಬಳಸಿ ಮುಖಪುಟ ಸಿದ್ಧಗೊಳಿಸಲಾಗಿದೆ. ಈ ಮುಖಪುಟದಲ್ಲಿ ಕೇಸರಿ ವರ್ಣ ನೋಡುಗರನ್ನೂ ಸೆಳೆಯುವಂತಿದೆ. ಅಕ್ಷರ ಶೈಲಿಯು ಕಪ್ಪು ವರ್ಣಗಳಲ್ಲಿ ಮೂಡಿಬಂದಿವೆ. ಮೇಲೆ ಕೆಳಗೆ ಒಂದೇ ರೀತಿಯ ಚಿತ್ತಾರದ ಸಾಲು ಇದೆ. ಈ ಸಾಲುಗಳ ಮಧ್ಯಭಾಗದಲ್ಲಿ ಶೀರ್ಷಿಕೆ, ಲೇಖಕರ ಹೆಸರನ್ನು ಗಮನಿಸಬಹುದು. ಮೇಲ್ಭಾಗದಲ್ಲಿ ಆಂಗ್ಲಭಾಷೆಯ ಶೈಲಿಯಲ್ಲಿ 'The Karnataka Bhaghavadgita' ಎಂದು ಕನ್ನಡದಲ್ಲಿ ನಾಗರನಕವಿಯಿಂದ ವಿರಚಿತವಾದ 'ಕರ್ನಾಟಕ ಭಗವದ್ಗೀತೆ' ಎಂದು ಕೆಳಗೆ ಆಂಗ್ಲಭಾಷೆಯಲ್ಲಿ ಲೇಖಕರ ಹೆಸರನ್ನು ನೀಡಲಾಗಿದೆ. ಈ ಮುಖಪುಟವು ಸರಳ ಆಕರ್ಷಕವಾಗಿದೆ. ಸಂಸ್ಕೃತದಲ್ಲಿ ರಚಿತವಾದ ಭಗವದ್ಗೀತೆಯನ್ನು ಕನ್ನಡದಲ್ಲಿ ಬರೆದು ಇದಕ್ಕೆ ಕರ್ನಾಟಕ ಭಗವದ್ಗೀತೆ ಎಂದು ಕರೆಯಲಾಗಿದ್ದು. ಇಲ್ಲಿ ಭಗವದ್ಗೀತೆಯ ಸಾರವನ್ನು ಕನ್ನಡದಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದ್ದು, ಸೊಗಸಾಗಿ ರಚನೆಯಾಗಿದೆ.

**೮.೧.೩. ಕನ್ನಡಮಾತು ತಲೆಯೆತ್ತುವ ಬಗೆ (೧೯೧೦)**

ಈ ಗ್ರಂಥವು ಕ್ರಿ.ಶ. ೧೯೧೦ ರಲ್ಲಿ ಮುದ್ರಣಗೊಂಡಿದೆ. ಈ ಕೃತಿಯನ್ನು ಪ್ರಖ್ಯಾತ ಕನ್ನಡದ ಕವಿಗಳಾದ ಬಿ.ಎಂ. ಶ್ರೀಕಂಠಯ್ಯ ಅವರು ರಚಿಸಿದ್ದಾರೆ. ಈ ಮುಖಪುಟದಲ್ಲಿ ಕಪ್ಪು-ಬಿಳಿ ವರ್ಣಗಳಿವೆ. ಸುತ್ತಲೂ ಚಿತ್ತಾರದ ಚೌಕವನ್ನು ಕಾಣಬಹುದು. ಮೇಲ್ಭಾಗದಲ್ಲಿ ಮಧ್ಯಮ ಅಕ್ಷರ ಶೈಲಿಯಲ್ಲಿ ಶೀರ್ಷಿಕೆಯನ್ನು ಬರೆಯಲಾಗಿದೆ. ಮಧ್ಯದಲ್ಲಿ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ೧೯೧೧ ನೆಯ ವಾರ್ಷಿಕ ಸಭೆಯಲ್ಲಿ ಮಾಡಿದ ಉಪನ್ಯಾಸ ಕೊಂಚ ತಿದ್ದಿರುತ್ತದೆ ಎಂದಿದೆ. ಇದರ ಕೆಳಗೆ ಲೇಖಕರ ಹೆಸರನ್ನು ನೀಡಲಾಗಿದೆ. ಇದರಡಿಯಲ್ಲಿ ಮುದ್ರಕರು ಶ್ರೀ ಮಹಾವೀರ ಪ್ರೆಸ್ ಬೆಳಗಾವಿ ಎಂದು ಮುದ್ರಿಸಲಾಗಿದೆ. ಈ ಮುಖಪುಟವು ಅಮೂರ್ತ ಚಿತ್ರಣದ್ದಾಗಿದ್ದು, ಸರಳ, ಸುಂದರವಾಗಿ ಮೂಡಿ ಬಂದಿದೆ. ಈ ಗ್ರಂಥದಲ್ಲಿ ಬಿ.ಎಂ.ಶ್ರೀ. ಯವರು ಕನ್ನಡ ಭಾಷೆ, ಶಬ್ದ, ಮಾತು ಹೇಗೆ ಹುಟ್ಟಿಕೊಂಡಿತು, ಬರಹಗಳು, ಕನ್ನಡ ಲಿಪಿಗಳ ಉಗಮ, ಭಾಷೆ ರಚನೆಯು ಹೇಗೆ ಆಗಿರಬಹುದು ಎಂಬ ತಾರ್ಕಿಕ ಆಲೋಚನೆಗಳು ಇಲ್ಲಿ ಮೂಡಿವೆ.

**೮.೧.೪. ಕೋನಯ್ಯ ವಿರಚಿತ ಗಯಚರಿತ್ರೆ (೧೯೧೫)**

ಕ್ರಿ.ಶ. ೧೯೧೫ರಲ್ಲಿ ರಚಿತವಾದ ಈ ಕೃತಿಯ ಕರ್ತೃ ಮಂ.ಆ.ರಾಮಾನುಜಯ್ಯಂಗಾರ್ ಈ

ಮುಖಪುಟದಲ್ಲಿ ಕಪ್ಪು, ಬಿಳಿ, ಆಕಾಶ ನೀಲಿ ವರ್ಣಗಳನ್ನು ಬಳಸಲಾಗಿದೆ. ಸ್ವಲ್ಪ ಮಟ್ಟಿಗೆ ವರ್ಣಗಳಲ್ಲಿ ಗಣನೀಯ ಬದಲಾವಣೆ ಗಮನಿಸಬಹುದು. ಮುದ್ರಣವನ್ನು ಶ್ರೀನಿವಾಸ ಮುದ್ರಣಾಲಯ ಮೈಸೂರಿನಲ್ಲಿ ಮಾಡಲಾಗಿದೆ. ಸುತ್ತಲೂ ರೇಖಾ ಚೌಕವನ್ನು ಕಾಣಬಹುದು. ನಾಲ್ಕು ಮೂಲೆಯ ಬದಿಯಲ್ಲಿ ಹೂವಿನ ಚಿತ್ರವನ್ನು ಸಣ್ಣದಾಗಿ ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಸಣ್ಣ ಅಕ್ಷರಗಳಲ್ಲಿ ಕರ್ನಾಟಕ ಕಾವ್ಯ ಕಲಾನಿಧಿ, ಕೋಶ ಸಂಖ್ಯೆ–೪೭ ಎಂದು, ಅದರ ಕೆಳಗೆ ಶೀರ್ಷಿಕೆಯನ್ನು ಮಧ್ಯಮ ಅಕ್ಷರ ಶೈಲಿಯಲ್ಲಿ ಬರೆಯಲಾಗಿದೆ. ಕೆಳಗೆ ಲೇಖಕರ ಹೆಸರನ್ನು ಇದರಡಿಯಲ್ಲಿ ಮುದ್ರಕರ ವಿಳಾಸವನ್ನು, ವರ್ಷವನ್ನೂ ನೀಡಲಾಗಿದೆ. ಈ ಮುಖಪುಟವು ಸರಳವಾಗಿದೆ. ಹೆಚ್ಚು ಆಕರ್ಷಕವಾಗಿ ಮುದ್ರಿಸಬಹುದಿತ್ತು. ಈ ಗ್ರಂಥದಲ್ಲಿ ಕೃಷ್ಣಾ–ಅರ್ಜುನರ ಸಮಾಗಮದ ಪ್ರಸಂಗವನ್ನು ತುಂಬಾ ಸೊಗಸಾಗಿ ರಚಿಸಲಾಗಿದೆ. ಈ ಗ್ರಂಥ ಕನ್ನಡ ವ್ಯಾಕರಣ ಶೈಲಿಯಲ್ಲೊಂದಾದ ಭಾಮಿನಿ ಷಟ್ಪದಿಯಲ್ಲಿ ಮೂಡಿ ಬಂದಿದೆ.

**೮.೧.೫. ಕರ್ನಾಟ ಪಂಚತಂತ್ರಂ (೧೯೧೯)**

ಇದು ಕ್ರಿ.ಶ. ೧೯೧೯ ರಲ್ಲಿ ಈ ಗ್ರಂಥವು ರಚನೆಯಾಗಿದ್ದು, ಇದನ್ನು ಲೇಖಕರಾದ ಮೈಸೂರು ಸೀತಾರಾಮಶಾಸ್ತ್ರಿಯವರು ರಚಿಸಿದ್ದಾರೆ. ಇದರ ಮುದ್ರಣ ದಿ. ಜಿ.ಟಿ.ಎ. ಪ್ರಿಂಟಿಂಗ್ ವರ್ಕ್ಸ್ ಮೈಸೂರಿನಲ್ಲಾಗಿದೆ. ಈ ಮುಖಪುಟದಲ್ಲಿ ವಿನ್ಯಾಸಕಾರರು ಕಪ್ಪು–ಬಿಳಿ ವರ್ಣಗಳನ್ನು ಮಾತ್ರ ಬಳಸಿಕೊಂಡು ಸರಳ, ಆಕರ್ಷಕವಾಗಿ ಮುದ್ರಿಸಿದ್ದಾರೆ. ಮುಖಪುಟದ ಮೇಲ್ಭಾಗದಲ್ಲಿ ಆಂಗ್ಲಭಾಷಾ ಅಕ್ಷರ ಶೈಲಿಯಲ್ಲಿ THE KARNATAKA GRANTHAMALA, Series No. ೮೫ ಎಂದು ಕೆಳಗೆ ಕನ್ನಡ ಅಕ್ಷರ ಶೈಲಿಯಲ್ಲಿ ಗ್ರಂಥದ ಶೀರ್ಷಿಕೆಯನ್ನು ಮನ ಸೆಳೆಯುವಂತೆ ಬರೆಯಲಾಗಿದ್ದು, ಕೆಳಗೆ ಮಿತ್ರಭೇದ 'ಪ್ರಥಮತಂತ್ರಂ' ಎಂದು ಬರೆಯಲಾಗಿದೆ.ಇನ್ನು ಕೆಳಗಡೆ ಲೇಖಕರ ಹೆಸರು ಇದರಡಿಯಲ್ಲಿ ಮುದ್ರಕರ ವಿಳಾಸ, ವರ್ಷ ಕೊಡಲಾಗಿದೆ. ಈ ಮುಖಪುಟವು ಅಮೂರ್ತ ಚಿತ್ರಣದ್ದಾಗಿದ್ದು, ಸರಳ, ಸುಂದರ, ಆಕರ್ಷಕವಾಗಿದೆ. ಈ ಗ್ರಂಥದಲ್ಲಿ ಪಂಚತಂತ್ರದ ನೀತಿಕಥೆಗಳು, ಕಾಡಿನಲ್ಲಿ ಪ್ರಾಣಿಗಳ ವಾಸ, ಜೀವನ ಶೈಲಿ, ಪ್ರಾಣಿಗಳ ಉಪಾಯ, ಸಹಾಯ, ಕಪಟತನ, ಮೋಸ ಇವುಗಳನ್ನು ಮಕ್ಕಳು, ವಯಸ್ಸಿನವರಿಗೂ ಅರ್ಥವಾಗುವಂತೆ ರಚಿಸಲಾಗಿದೆ.

**೮.೧.೬. ಅಕ್ಬರ್ ಚಕ್ರವರ್ತಿಯ ಚರಿತ್ರೆ (೧೯೧೯)**

ಕ್ರಿ.ಶ.೧೯೧೯ ರಲ್ಲಿ ಮೂಡಿಬಂದ ಇನ್ನೊಂದು ಅಮೋಘ ಕೃತಿ ಎಂದೇ ಬಿಂಬಿಸಬಹುದು. ಇದನ್ನು ರಾಮಚಂದ್ರ–ಹನುಮಂತ ದೇಶಪಾಂಡೆಯವರು ಸೊಗಸಾಗಿ ರಚಿಸಿದ್ದಾರೆ. ಇದನ್ನು ಜೆ.ಎಂ.ಎಸ್. ಮುದ್ರಣಾಲಯ, ಧಾರವಾಡ ಇಲ್ಲಿ ಮುದ್ರಿಸಲಾಗಿರುತ್ತದೆ. ಈ ಮುಖಪುಟದ ಸುತ್ತಲೂ ಚಿತ್ತಾರದ ಪಟ್ಟಿ, ಪಟ್ಟಿ ಒಳಗೆ ಅಕ್ಷರ ಶೈಲಿಗಳು ಮೂಡಿವೆ. ಮೇಲ್ಭಾಗದಲ್ಲಿ ಶೀರ್ಷಿಕೆಯನ್ನು ಆಕರ್ಷಕವಾಗಿ ಓದುಗರ ಗಮನ ಸೆಳೆಯುವಂತೆ ಬರೆಯಲಾಗಿದೆ. ಕೆಳಗೆ ಧಾರವಾಡದ ಸರ್ಕಾರಿ ಹೈಸ್ಕೂಲಿನ ಹೆಡ್‌ಮಾಸ್ತರ್ ರಾಮಚಂದ್ರ ಹನುಮಂತ ದೇಶಪಾಂಡೆ ಎಂದು ಲೇಖಕರ ಹೆಸರನ್ನು ಕಾಣುವಂತೆ ಬರೆಯಲಾಗಿದ್ದು, ಕೆಳಗೆ ಈ ಗ್ರಂಥದ ಎಲ್ಲಾ ಹಕ್ಕುಗಳನ್ನು ಗ್ರಂಥಕಾರರೇ ಇಟ್ಟುಕೊಂಡಿರುತ್ತಾರೆಂದು ಬರೆದಿದೆ. ಮುಖಪುಟ

ಕೊನೆಗೆ ಕೆಳಗೆ ಮುದ್ರಣಾಲಯದ ವಿಳಾಸವಿರುತ್ತದೆ. ಇದು ಸಹ ಸರಳ, ಆಕರ್ಷಕವಾಗಿದೆ. ಇಲ್ಲಿ ಅಕ್ಬರ್ ಚಕ್ರವರ್ತಿಯ ಭಾವಚಿತ್ರವನ್ನು ಮುದ್ರಿಸಬಹುದಿತ್ತು. ಈ ಗ್ರಂಥದಲ್ಲಿ 'ದಿ ಗ್ರೇಟ್ ಅಕ್ಬರ್' ಇವರ ಜೀವನ, ಸಾಧನೆ, ಏಳು/ಬೀಳುಗಳನ್ನು ರಚಿಸಲಾಗಿದೆ. ಇವರ ಜೀವನ ಚರಿತ್ರೆಯನ್ನು ಆ ಕಾಲದಲ್ಲಿಯೇ ಅಬ್ದುಲ್ ಪಜಲ್ ಎಂಬ ಕವಿಯ 'ಅಕ್ಬರ್ ನಾಮ' ಎಂದು ರಚಿಸಿದ್ದರು. ಇಲ್ಲಿ ದೇಶಪಾಂಡೆಯವರು ಕನ್ನಡದಲ್ಲಿ ಇನ್ನೂ ಎಳೆಎಳೆಯಾಗಿ ಮೊಘಲ್ ಅಧಿಪತಿಯ ಜೀವನವನ್ನು ಬಿಚ್ಚಿಟ್ಟಿದ್ದಾರೆ.

**೮.೧.೭. ಮಹರ್ಷಿ ಅರವಿಂದ ಘೋಷ (೧೯೨೧)**

ಕ್ರಿ.ಶ. ೧೯೨೧ ರಲ್ಲಿ ಶಂ. ಬಾ. ಜೋಶಿ ಯವರಿಂದ ರಚನೆಯಾದ ಈ ಗ್ರಂಥವನ್ನು ಗುರುರಾವ್, ಕರ್ನಾಟಕ ಟ್ರೇಡಿಂಗ್ ಕಂಪನಿ, ಧಾರವಾಡದ ಮುದ್ರಣಾಲಯದಲ್ಲಿ ಮುದ್ರಿತವಾಗಿದೆ. ಇದು ಮೂರ್ತ ಚಿತ್ರಣದಿಂದ ಕೂಡಿದೆ. ಇದರ ಮುಖಪುಟದಲ್ಲಿ ಕಪ್ಪು ಆಕಾಶ ನೀಲಿಯ ವರ್ಣವನ್ನು ಬಳಸಲಾಗಿದೆ. ಮೇಲ್ಭಾಗದಲ್ಲಿ ರೇಖಾ ಚಿತ್ತಾರದ ಶೈಲಿಯ ಕೆಳಗೆ ಗ್ರಂಥದ ಶೀರ್ಷಿಕೆಯನ್ನು ಕಪ್ಪು ವರ್ಣದಲ್ಲಿ ಎದ್ದು ಕಾಣುವಂತೆ ಆಕರ್ಷಕವಾಗಿ ಮುದ್ರಿಸಲಾಗಿದೆ. ಕೆಳಗೆ ಭಾರತಮಾತೆಯ ಚಿತ್ರ ಪಾದದಡಿಯಲ್ಲಿ ಹಿಂದಿ ಭಾಷೆಯಲ್ಲಿ 'ವಂದೇ ಮಾತರಂ' ಎಂದಿದೆ. ಇದರಡಿಯಲ್ಲಿ ಲೇಖಕರ ಹೆಸರು, ಮುದ್ರಣಾಲಯ, ವಿಳಾಸ, ಗ್ರಂಥ ಬಿಡುಗಡೆಯ ವರ್ಷವನ್ನು ಪುಸ್ತಕದ ಬೆಲೆ ೧೨ ಆಣೆ ಎಂದಿದೆ. ಈ ಗ್ರಂಥವು ನೋಡುಗರ, ಓದುಗರ, ಸಾಹಿತ್ಯಾಭಿರುಚಿಯುಳ್ಳವರನ್ನು ಸೆಳೆಯುವಂತಿದೆ. ೧೯೨೧ರ ಸುಮಾರಿಗೆ ಆ ಕಾಲದಲ್ಲಿ ಮೂಡಿಬಂದ ಒಂದು ಆಕರ್ಷಕ ಮುಖಪುಟ ಎಂದು ಹೇಳಿದರೇ ತಪ್ಪಾಗಲಾರದು. ಇಲ್ಲಿ ಮುದ್ರಕರು/ಪ್ರಕಾಶಕರ ಕೈಚಳಕ ಅತ್ಯುತ್ತಮವಾಗಿದೆ.

ಈ ಗ್ರಂಥವು ಮಹರ್ಷಿ ಅರವಿಂದ ಘೋಷರ ಜೀವನ ಚರಿತ್ರೆಯನ್ನು ಒಳಗೊಂಡಿದೆ. ಅರವಿಂದರ ಬಾಲ್ಯಜೀವನ, ವಿದ್ಯಾಭ್ಯಾಸ, ಆಶ್ರಮ ನಿರ್ಮಾಣ, ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ವದ ಪಾತ್ರ ವಹಿಸಿದ್ದರು. ಇವರು ಮಂದಗಾಮಿ ನಾಯಕರಾದ ಲಾಲ್, ಬಾಲ್, ಪಾಲ್, ಲಾಲಾ ಲಜಪತ್‌ರಾವ್, ಬಾಲಗಂಗಾಧರ ತಿಲಕ್, ಬಿಪಿನ್ ಚಂದ್ರಪಾಲ್‌ರೊಡನೆ ಸ್ನೇಹ ಬೆಳಸಿ ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದರು. ಇವರು ಆಶ್ರಮ ಶೈಲಿ, ಆಧ್ಯಾತ್ಮ ಜೀವನವನ್ನು ನೋಡಿದ ಬುದ್ಧಿಜೀವಿಗಳು ಇವರಿಗೆ ಮಹರ್ಷಿ ಎಂಬ ಬಿರುದನ್ನು ನೀಡಿದರು. ಇಲ್ಲಿ ಶಂ.ಬಾ. ಜೋಶಿಯವರು ಕನ್ನಡದಲ್ಲಿ ಮನೋಜ್ಞವಾಗಿ ಅವರ ಜೀವನ ಚರಿತ್ರೆಯನ್ನು ರಚಿಸಿದ್ದಾರೆ. ಗ್ರಂಥ ಓದುಗರ ಮನ ಗೆದ್ದರೆ ಮುಖಪುಟ ಎಲ್ಲಾ ವರ್ಗದವರನ್ನೂ ಸೆಳೆಯುತ್ತದೆ. ಆದರೆ ಈ ಮುಖಪುಟವನ್ನು ಸಾಧಾರಣವಾಗಿ ನಿರ್ಮಿಸಿದ್ದಾರೆ.

**೮.೨. ೧೯೨೬ರಿಂದ ೧೯೫೦ರ ಕಾಲಾವಧಿಯ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

೧೯೨೬ರಿಂದ ೧೯೫೦ರ ದಶಕದ ಸಾಲಿನಲ್ಲಿ ಮೂಡಿಬಂದ ಸಾಹಿತ್ಯ ಗ್ರಂಥಗಳ ಪ್ರಾತಿನಿಧಿಕ ಮುಖಪುಟ ವಿನ್ಯಾಸದ ವಿಮರ್ಶೆ. ಸ್ವಾತಂತ್ರ್ಯ ಪೂರ್ವ ವರ್ಷಗಳಾದರೂ ಈ ದಶಕದಲ್ಲಿ ಉತ್ತಮ

ಕೃತಿಗಳು, ಅದರ ಮುಖಪುಟ ವಿನ್ಯಾಸಗಳಲ್ಲಿ ಗಣನೀಯ ಬದಲಾವಣೆಯಾಯಿತು. ಬ್ರಿಟಿಷರ ಅಧೀನದಲ್ಲಿದ್ದ ಭಾರತ ದೇಶ. ಅದರಲ್ಲೂ ಕರ್ನಾಟಕ ರಾಜ್ಯದಲ್ಲಿ ಸಹ ಆಂಗ್ಲರ ಅಧಿಪತ್ಯವಿದ್ದರೂ, ಆಂಗ್ಲ ಭಾಷೆ, ಆಂಗ್ಲ ಗ್ರಂಥಗಳ ಪ್ರಭಾವವಿದ್ದರೂ ಕನ್ನಡ ಸಾಹಿತ್ಯ ಪ್ರಕಾರದಲ್ಲಿ ಅದ್ವಿತೀಯ ಗ್ರಂಥಗಳು, ಕ್ರಾಂತಿಕಾರಿ ಕೃತಿಗಳು, ಪ್ರಕೃತಿ ಗ್ರಂಥಗಳು, ವ್ಯಕ್ತಿ ಚರಿತ್ರೆಗಳು, ವಿಭಿನ್ನ ರೀತಿಯ ಕೃತಿಗಳು ಮೂಡಿ ಬಂದವು. ಪ್ರಮುಖವಾಗಿ ಜಿ.ಪಿ. ರಾಜರತ್ನಂ ಎಂಬ ಜನಪ್ರಿಯ ಸಾಹಿತಿಯ ಕೃತಿಯಾದ 'ಚೀನಾ ದೇಶದ ಬೌದ್ಧ ಯಾತ್ರಿಕರು' ತಿರುಮಲ ತಾತಾಚಾರ್ಯರ 'ಕಾಂಗ್ರೆಸ್ ಸುವರ್ಣ-ಮಹೋತ್ಸವ ಸಂಚಿಕೆ', ಸಚಿತ್ರ ರಚಿಸಿರುವ 'ಜವಾಹರ್ ಲಾಲ್ ನೆಹರು ಆತ್ಮಕಥೆ' ದೇವುಡು ರಚಿಸಿದ 'ಗಣೇಶನ ಕಥೆ' ಹಾಗೂ ರಾಷ್ಟ್ರಕವಿ ಕುವೆಂಪು ರಚಿಸಿದ ಸುಪ್ರಸಿದ್ಧ ಗ್ರಂಥವಾದ 'ಕಾನೂರು ಸುಬ್ಬಮ್ಮ ಹೆಗ್ಗಡತಿ', ಟಿ.ಎಸ್. ಮಹದೇವಯ್ಯನವರ 'ಕ್ರಾಂತಿಯ ದೀಪ' ಜಿ.ಪಿ. ರಾಜರತ್ನಂರವರ ಮತ್ತೊಂದು ಕೃತಿಯಾದ 'ನಮ್ಮ ನಮ್ಮವರು', ಎಲ್ ಗುಂಡಪ್ಪನವರು ಬರೆದಿರುವ 'ಕನ್ನಡ ಸಾಹಿತ್ಯ ಚಿತ್ರಗಳು', ಬಾಲಚಂದ್ರ ಫಾಣೇಕರ್ ರಚಿಸಿರುವ 'ಆಜಾದ್ ಹಿಂದ್', ಕಾಂತೇಶ ಕಮಲಾಪುರ ರವರ 'ಗಳಗನಾಥ' ಮತ್ತು ಸಿ.ಎಸ್. ಕರಬಿಯವರ 'ಜೋಗದ ಝೋಕು' ಎಂಬ ಕೃತಿಗಳು ಈ ದಶಕಗಳ ಸಾಲಿನಲ್ಲಿ ಮೂಡಿಬಂದವು. ಸಾಹಿತ್ಯಾಭಿರುಚಿ ಹುಟ್ಟಿದ್ದೆ ಈ ದಶಕಗಳಲ್ಲಿ ಅನೇಕ ಸಾಹಿತಿಗಳು ತಮ್ಮ ಬರಹಗಳ ಮೂಲಕ ಮನೆ ಮಾತಾದರೂ. ಅವರುಗಳಲ್ಲಿ ಜಿ.ಪಿ. ರಾಜರತ್ನಂ, ಕುವೆಂಪುರವರು ಕನ್ನಡ ಸಾಹಿತ್ಯ ಲೋಕದ ದಿಗ್ಗಜರಾದರು. ಈ ಸಾಲಿನಲ್ಲಿ ವಿನ್ಯಾಸಕಾರರು ತಮ್ಮ ಕೈ ಚಳಕದ ಮೂಲಕ ಮುಖಪುಟ ಅಂದವಾಗಿ ಮೂಡುವಂತೆ ಶ್ರಮಿಸಿರುವದನ್ನು ನಾವು ಇಲ್ಲಿ ಪ್ರತ್ಯಕ್ಷವಾಗಿ ಕಾಣಬಹುದು.

### ೮.೨.೧. ಚೀನಾ ದೇಶದ ಬೌದ್ಧ ಯಾತ್ರಿಕರು (೧೯೩೨)

ಕ್ರಿ.ಶ. ೧೯೩೨ ರಲ್ಲಿ ಜಿ.ಪಿ. ರಾಜರತ್ನಂ ರವರಿಂದ ರಚಿತವಾಯಿತು. ಯೂನಿವರ್ಸಲ್ ಪವರ್ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಮುದ್ರಣಗೊಂಡಿತು. ಇಲ್ಲಿ ಕಪ್ಪು, ಬಿಳಿ, ತೆಳು ಹಳದಿ, ನೀಲಿ ವರ್ಣಗಳನ್ನು ಬಳಸಿ ವಿನ್ಯಾಸಗಾರ ಮುಖಪುಟ ರಚಿಸಿದ್ದಾರೆ. ಮೇಲ್ಭಾಗದಲ್ಲಿ ಸ್ಪಷ್ಟವಾಗಿ ಶೀರ್ಷಿಕೆಯನ್ನು ಹಾಗೂ ಮೇಲಿನಿಂದ ಕೆಳಕ್ಕೆ ಓರ್ವ ಚೀನಿ ಯಾತ್ರಿಕನು ಬಟ್ಟೆಯ ಮೂಟೆಯನ್ನು ಬೆನ್ನಿಗೆ ಕಟ್ಟಿಕೊಂಡು, ಕೈಯಲ್ಲಿ ಕೋಲು ಹಿಡಿದು ಪಾದರಕ್ಷೆ ಹಾಕಿಕೊಂಡು ನಿಂತಿರುವ ಚಿತ್ರವನ್ನು ವಿನ್ಯಾಸಕಾರ ಸರಳ ರೇಖಾಚಿತ್ರದಿಂದ ಬಿಡಿಸಿದ್ದಾರೆ. ಕೆಳಗೆ ಕರ್ನಾಟಕ ಸಂಘದ ವಿಳಾಸ, ಮುದ್ರಣ ವರ್ಷವನ್ನೂ ನೀಡಲಾಗಿದೆ. ಈ ಮುಖಪುಟವು ಸರಳತೆಯಿಂದ ಕೂಡಿದ್ದು, ಹೆಚ್ಚು ಆಕರ್ಷಕವಾಗಿಲ್ಲ. ಇನ್ನೂ ಆಕರ್ಷಕವಾಗಿ ಬೌದ್ಧಯಾತ್ರಿಕನನ್ನು ಬಿಡಿಸಬಹುದಿತ್ತು. ಈ ಗ್ರಂಥವನ್ನು ರಾಜರತ್ನಂರವರು ರಚಿಸಿದ್ದು, ಇದರಲ್ಲಿ ಚೀನಾ ದೇಶದ ಯಾತ್ರಿಕರು ಬೌದ್ಧ ಧರ್ಮ ಪ್ರಚಾರಕ್ಕೆ ದೇಶ ವಿದೇಶಗಳಿಗೆ ಭೇಟಿ ನೀಡಿದ ಪ್ರಸಂಗಗಳನ್ನು ಈ ಪುಸ್ತಕದಲ್ಲಿ ತಿಳಿಯಬಹುದು. ಪ್ರಮುಖವಾಗಿ ಪಾಹಿಯಾನ, ಹ್ಯೂಯೆನ್ ತ್ಸಾಂಗ್ ರಂತಹ ಚೀನಾ ಯಾತ್ರಿಕರು ಭಾರತಕ್ಕೆ ಭೇಟಿ ನೀಡಿದ ಸನ್ನಿವೇಶಗಳನ್ನು ವಿವರವಾಗಿ ಬರೆಯಲಾಗಿದೆ.

### ೮.೨.೨. ಕಾಂಗ್ರೆಸ್ ಸುವರ್ಣ ಮಹೋತ್ಸವ ಸಂಚಿಕೆ (೧೯೩೫)

ಈ ಗ್ರಂಥವನ್ನು ತಿರುಮಲ ತಾತಾಚಾರ್ಯವರು ಕ್ರಿ.ಶ. ೧೯೩೫ ರಲ್ಲಿ ರಚಿಸಿದರು. ಇದು ಬಿ.ಎಸ್. ಅಯ್ಯಂಗಾರ್ ಮುದ್ರಣಾಲಯದಲ್ಲಿ ಅಚ್ಚಾಯಿತು. ಇಲ್ಲಿ ಕಪ್ಪು, ಬಿಳಿ, ಹಸಿರು, ನೀಲಿ ವರ್ಣಗಳನ್ನು ಬಳಸಿ ಮುಖಪುಟ ರಚಿಸಲಾಗಿದೆ. ಇದು ಅಮೂರ್ತ ಚಿತ್ರಣದ ಮುಖಪುಟವಾಗಿದೆ. ಮುಖಪುಟದ ಎಡ, ಬಲಗಳಲ್ಲಿ ಗೆರೆ ಎಳೆಯಲಾಗಿದ್ದು, ಮಧ್ಯ ವಿಷಯ ಅಡಗಿದೆ. ಮೇಲ್ಭಾಗದಲ್ಲಿ ಶೀರ್ಷಿಕೆಯನ್ನು ಮಧ್ಯಮ ಅಕ್ಷರ ಶೈಲಿಯಲ್ಲಿ ಮಧ್ಯೆ 'ವಿಶ್ವ ಕರ್ನಾಟಕ'ದ ಕಾಣಿಕೆಯೆಂದು ಬರೆಯಲಾಗಿದೆ. ಕೆಳಗೆ ಮುದ್ರಣ ವರ್ಷ ನೀಡಲಾಗಿದೆ. ಕಾಂಗ್ರೆಸ್ ಪಕ್ಷ ೧೮೮೫ರಲ್ಲಿ ಎ.ಓ. ಹ್ಯೂಮ್‌ರವರಿಂದ ರಚನೆಯಾಗಿ ಮೊದಲ ಅಧಿವೇಶನ ಮುಂಬೈನಲ್ಲಿ ನಡೆಯಿತು. ಅಲ್ಲಿಂದ ಅನೇಕ ಏಳು-ಬೀಳು ಕಂಡು ಸ್ವಾತಂತ್ರ್ಯ ಹೋರಾಟದಲ್ಲಿ ಕಾಂಗ್ರೆಸ್ ಪಕ್ಷದ ಪಾಲ್ಗೊಳ್ಳುವಿಕೆ ಅಲ್ಲಿಂದ ೧೮೮೫ ರಿಂದ ೧೯೩೫ ಕ್ಕೆ ಪಕ್ಷ ೫೦ ವರ್ಷಗಳನ್ನೂ ಪೂರೈಸಿದ ಸವಿ ನೆನಪಿಗಾಗಿ ತಿರುಮಲ ತಾತಾಚಾರ್ಯರು ಈ ಕೃತಿಯನ್ನು ರಚಿಸಿದರು.

### ೮.೨.೩. ಗಣೇಶನ ಕಥೆ (೧೯೩೭)

ಈ ಕೃತಿಯನ್ನು ಲೇಖಕರಾದ ದೇವುಡು ರವರು ಕ್ರಿ.ಶ. ೧೯೩೭ ರಲ್ಲಿ ರಚನೆ ಮಾಡಿದರು. ಇದು ಶ್ರೀ ವೆಂಕಟಾದ್ರಿ ಪ್ರೆಸ್‌ನಲ್ಲಿ ಮುದ್ರಣ ಕಂಡಿತು. ಇಲ್ಲಿ ಕಪ್ಪು, ಕೆಂಪು, ಹಳದಿ ವರ್ಣದ ಬಳಕೆ ಗಮನಿಸಬಹುದು. ಈ ಮುಖಪುಟ ಮೂರ್ತ ಚಿತ್ರಣದಿಂದ ಕೂಡಿದೆ. ಮೇಲ್ಭಾಗದಲ್ಲಿ ಶೀರ್ಷಿಕೆಯನ್ನು ಸ್ಪಷ್ಟ ಅಕ್ಷರಗಳಲ್ಲಿ ಆಕರ್ಷಕವಾಗಿ ಬರೆಯಲಾಗಿದೆ. ಕೆಳಗೆ ಚಿತ್ರಣವಿದೆ, ಜಮಖಾನದ ಮೇಲೆ ತಾಯಿ ತನ್ನಮಗನಿಗೆ ಪುಸ್ತಕ ತೋರಿಸುತ್ತಾ, ಗಣೇಶನ ಕಥೆ ಹೇಳುತ್ತಿರುವ ಚಿತ್ರ ಕೆಂಪು ವರ್ಣದಲ್ಲಿ ಸ್ಪಷ್ಟ ಆಕರ್ಷಕವಾಗಿ ಮೂಡಿ ಬಂದಿದೆ. ಚಿತ್ರದ ಕೆಳಗೆ ಅಡ್ಡಗೆರೆ ಎಳೆಯಲಾಗಿದ್ದು, ಕೃತಿಯ ಬೆಲೆಯಾದ ೧ ಆಣೆಯೆಂದು ವೃತ್ತದಲ್ಲಿ ಬರೆಯಲಾಗಿದೆ. ದೇವುಡುರವರು ವಿಘ್ನೇಶ್ವರ, ಅಥವಾ ಗಣಪನ ಜನನ, ಶಿವನೊಡನೆ ಹೋರಾಟ ಆನೆ ಮುಖ ಬಂದ ಬಗೆ, ಪ್ರಥಮ ಪೂಜೆಗೆ ಅಧಿಪತಿಯಾದ ಸಹಸ್ರ ನಾಮವುಳ್ಳ ಗಣೇಶನ ಕಥೆಯನ್ನು ಎಳೆ ಎಳೆಯಾಗಿ ರಚಿಸಿದ್ದಾರೆ. ಈ ಮುಖಪುಟದ ಚಿತ್ರದಲ್ಲಿ ತಾಯಿ-ಮಗನ ಬದಲಿಗೆ ಗಣಪತಿ, ಶಿವ-ಪಾರ್ವತಿಯರ ಚಿತ್ರಣವನ್ನು ಆಕರ್ಷಕವಾಗಿ ಬಿಡಿಸಿ ನೋಡುಗರನ್ನು ಸೆಳೆಯಬಹುದಿತ್ತು.

### ೮.೨.೪ ಕಾನೂರು ಸುಬ್ಬಮ್ಮ ಹೆಗ್ಗಡತಿ (೧೯೩೮)

ಕ್ರಿ.ಶ. ೧೯೩೮ ರಲ್ಲಿ ಕೆ.ವಿ. ಪುಟ್ಟಪ್ಪ (ಕುವೆಂಪು) ನವರಿಂದ ರಚನೆಗೊಂಡ ಸುಪ್ರಸಿದ್ಧ ಸಾಹಿತ್ಯ ಕೃತಿಯಾಗಿದೆ. ಇದು ಶಿವಮೊಗ್ಗ ಕಾವ್ಯಾಲಯದ ಕಾಣಿಕೆಯಾಗಿದ್ದು, ಬೆಂಗಳೂರು ಪ್ರೆಸ್‌ನಲ್ಲಿ ಮುದ್ರಣಗೊಂಡಿತು. ಈ ಮುಖಪುಟದಲ್ಲಿ ಕಪ್ಪು, ನೀಲಿ, ಹಳದಿ, ಪಚ್ಚೆ ಹಸಿರು ವರ್ಣಗಳನ್ನು ಬಳಸಿ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಸ್ಪಷ್ಟವಾಗಿ ಕೃತಿಯ ಶೀರ್ಷಿಕೆಯನ್ನು ಕೆಳಗೆ ಲೇಖಕರ ಹೆಸರು ಅಧ್ಯಾಯ ೩೮ ರಿಂದ ೫೮ ಎಂದು ಬರೆದಿದೆ.

ಮಧ್ಯದಿಂದ ಕೆಳಕ್ಕೆ ಮೇಲೆ ಕೆಳಗೆ ಮುಖಮಾಡಿ ಗರಿ ಬಿಚ್ಚಿ ಹಾರುತ್ತಿರುವ ಎರಡು ಪಕ್ಷಿಗಳ ಚಿತ್ರಣ ನೋಡುಗರನ್ನು ಆಕರ್ಷಿಸುತ್ತದೆ. ಕೆಳಗಡೆ ಕಾವ್ಯಾಲಯ, ಕೃತಿಯ ಮುದ್ರಣ ವರ್ಷವನ್ನು ನೀಡಲಾಗಿದೆ. ಈ ಮುಖಪುಟ ಸರಳಾಕರ್ಷಕವಾಗಿದೆ. ಕೆ.ವಿ. ಪುಟ್ಟಪ್ಪನವರು ಈ ಗ್ರಂಥದಲ್ಲಿ ಕಾನೂರಿನಲ್ಲಿ ವಾಸಿಸಿದ ಓರ್ವ ಮಹಿಳೆಯ ಜೀವನ ಶೈಲಿಯನ್ನು ತುಂಬಾ ಸೊಗಸಾಗಿ ರಚಿಸಿದ್ದಾರೆ. ಈ ಕೃತಿ ಕನ್ನಡ ಚಲನಚಿತ್ರವಾಗಿಯೂ ಹೆಸರು ಮಾಡಿತು. ಸಿನಿಮಾಗೆ ರಾಷ್ಟ್ರಪ್ರಶಸ್ತಿಯ ಗೌರವ ಕೂಡ ಲಭಿಸಿರುವುದು ಹೆಮ್ಮೆಯ ಸಂಗತಿಯಾಗಿದೆ.

**೮.೨.೫.ಕ್ರಾಂತಿಯ ದೀಪ (೧೯೩೮)**

ಈ ಪುಸ್ತಕವು ಕ್ರಿಶ. ೧೯೩೮ ರಲ್ಲಿ ಜಿ.ಎಸ್. ಮಹದೇವಯ್ಯ ಎಂಬ ಲೇಖಕರಿಂದ ರಚನೆಗೊಂಡಿತು. ಇದು ಶಿವಾನಂದ ಪ್ರಿಂಟಿಂಗ್ ಪ್ರೆಸ್ ಗದಗದಲ್ಲಿ ಮುದ್ರಣ ಕಂಡಿತು. ಕಪ್ಪು-ಬಿಳುಪಿನ ವರ್ಣದಲ್ಲಿ ಮೂಡಿ ಬಂದಿರುವ ಈ ಮುಖಪುಟ ಹೆಚ್ಚು ಆಕರ್ಷಕವಾಗಿದೆ. ಮೇಲ್ಭಾಗದಲ್ಲಿ ರೇಖಾ ಮಾದರಿಯ ಅಕ್ಷರ ಶೈಲಿಯಲ್ಲಿ ಗ್ರಂಥದ ಶೀರ್ಷಿಕೆ ಸ್ಪಷ್ಟ ವಿಶೇಷವಾಗಿದೆ. ಸುತ್ತಲೂ ಚೌಕದ ಗೆರೆ ಚೌಕದ ಒಳಗೆ ಶೀರ್ಷಿಕೆ ಕೆಳಗೆ ಚಿತ್ರಣವಿದೆ. ಚಿತ್ರದಲ್ಲಿ ಮೇಲೆ ಮೋಡಗಳ ಸಾಲು, ಕೆಳಗೆ ಗುಡ್ಡಗಳ ಸಾಲು-ಗುಡ್ಡಗಳ ಮುಂದೆ ಸಮುದ್ರ ನೀರಿನ ಮೇಲೆ ತೇಲುತ್ತಿರುವ ದೋಣಿಗಳು ಮಧ್ಯದಲ್ಲಿ ಭೂಮಿಯ ಮೇಲಿಂದ ಆಕಾಶಕ್ಕೆ ಚಾಚಿದಂತೆ ಕಂಬದ ಚಿತ್ರಣವಿದೆ. ಉದ್ದನೆಯ ಕಂಬದ ತುದಿಗೆ ದುಂಡನೆಯ ವಿದ್ಯುತ್ ಬಲ್ಬನಂತಿರುವ ದೀಪ ಪ್ರಕಾಶಮಾನವಾಗಿ ಪ್ರಜ್ವಲಿಸುವಂತೆ ವಿನ್ಯಾಸಕಾರ ರಚಿಸಿದ್ದಾನೆ. ಕೆಳಗೆ ಕಂಬದ ಸುತ್ತ ನೆರೆದಿರುವ ಜನಗಳ ಸಾಲು ಸಾಲು ಗುಂಪುಗಳು ಎಲ್ಲರೂ ತಲೆಯೆತ್ತಿ ಕಂಬದ ಮೇಲೆ ಪ್ರಜ್ವಲಿಸುವ ದೀಪವನ್ನು ನೋಡುತ್ತಿರುವಂತೆ ಚಿತ್ರ ಬಿಡಿಸಲಾಗಿದೆ.

ನಿಜಕ್ಕೂ ಈ ಮುಖಪುಟ ವಿನ್ಯಾಸಗೊಳಿಸಿದ, ಚಿತ್ರ ಬಿಡಿಸಿದ ಕಲಾವಿದನ ಕೈಚಳಕ ಮೆಚ್ಚಲೇಬೇಕು. ಈ ಗ್ರಂಥದಲ್ಲಿ ಅಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ಜನರನ್ನು ದೇಶ, ನಾಡು, ಜಲ ಇದರ ಬಗ್ಗೆ ಹೆಚ್ಚಾಗಿ ಪರಕೀಯರ ಅಧೀನದಲ್ಲಿದ್ದ ನಮ್ಮ ದೇಶ ಸ್ವಾತಂತ್ರ್ಯಕ್ಕಾಗಿ ಪರಿತಪಿಸುವ ಸ್ಥಿತಿಯಾಗಿತ್ತು. ಅಂತಹ ಸಂದರ್ಭದಲ್ಲಿ ಜನರಲ್ಲಿ ದೇಶ ಪ್ರೇಮದ ಕಿಚ್ಚು ಹಚ್ಚಿಸಲು ಇಂತಹ ಕೃತಿಗಳು ಸಹಾಯಕವಾದವು. ಅವರಲ್ಲಿ ಕ್ರಾಂತಿಯ ಹೊಗೆ ಹರಡಿತು. ಪ್ರತಿಯೊಬ್ಬರು ದೇಶಕ್ಕಾಗಿ ಏನಾದರೂ ತ್ಯಾಗ, ಬಲಿದಾನ ನೀಡಲು ಈ ಕೃತಿ ಮುಖಪುಟ ಪ್ರೇರೇಪಿಸುತ್ತದೆ. ನಮ್ಮ ದೇಶದ, ನಮ್ಮ ರಾಜ್ಯದ ಪ್ರತಿಯೋರ್ವನು ಕೂಡ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳಬೇಕೆಂಬ ಅಂಶವನ್ನು ಈ ಗ್ರಂಥದಲ್ಲಿ ಲೇಖಕರು ತಮ್ಮ ಮನದಾಳದ ಇಚ್ಛೆಯನ್ನು ತೆರೆದಿಟ್ಟಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಹೈದರ್, ಟಿಪ್ಪುಸುಲ್ತಾನ್, ಕಿತ್ತೂರು ಚೆನ್ನಮ್ಮ, ರಾಣಿ ಅಬ್ಬಕ್ಕ, ಝಾನ್ಸಿಯ ರಾಣಿ ಲಕ್ಷ್ಮೀಬಾಯಿ, ಇತರರು ಪರಕೀಯರ ವಿರುದ್ಧ ಹೋರಾಡಿದರು. ಬ್ರಿಟಿಷರ ವಿರುದ್ಧ ತಿಲಕ್, ಭಗತ್‌ಸಿಂಗ್, ಚಂದ್ರಶೇಖರ್ ಅಜಾದ್. ವಿ.ಡಿ. ಸಾವರ್ಕರ್, ಖುದಿರಾಮ್ ಬೋಸ್, ಮೌಲಾನಾ ಅಬ್ದುಲ್ ಕಲಾಂ ಆಜಾದ್ ಮತ್ತು ಸುಭಾಸ್ ಚಂದ್ರ ಬೋಸ್‌ರಂತಹ ಕ್ರಾಂತಿಕಾರಿಗಳು ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದನ್ನು ಇಲ್ಲಿನ ಗ್ರಂಥದಲ್ಲಿ ಗಮನಿಸಬಹುದು.

### ೮.೨.೬. ನಮ್ಮ ನಮ್ಮವರು (೧೯೩೫)

ಪ್ರಸಿದ್ಧ ಲೇಖಕರಾದ 'ಜಿ.ಪಿ. ರಾಜರತ್ನಂ'ರವರು ಕ್ರಿ.ಶ. ೧೯೩೫ ರಲ್ಲಿ ಈ ಕೃತಿಯನ್ನು ನಾಡಿಗೆ ಅರ್ಪಿಸಿದರು. ಈ ಮುಖಪುಟವು ಆಗಿನ ಕಾಲದ ತಂತ್ರಜ್ಞಾನಕ್ಕೆ ಕನ್ನಡಿ ಹಿಡಿದಂತಿದೆ. ಅಮೋಘ, ಅದ್ಭುತ ಚಿತ್ರಣದಿಂದ ಮುಖಪುಟ ಆಕರ್ಷಕವಾಗಿ ಮೂಡಿಬಂದಿದೆ. ಇಲ್ಲಿ ವಿನ್ಯಾಸಕಾರನ ಕೈಚಳಕದಿಂದ ಚಿತ್ರಣ ನೋಡುಗರನ್ನು ಸೆಳೆಯುವಂತಿದೆ. ಇದರಲ್ಲಿ ಕಪ್ಪು-ಬಿಳಿ, ಪಚ್ಚೆ ಹಸಿರಿನಿಂದ ಕೂಡಿದ ಚಿತ್ರಣ ಗಮನಿಸಬಹುದು. ಮೇಲ್ಭಾಗದಿಂದ ಮಧ್ಯಭಾಗದವರೆಗೆ ಮಾತ್ರ ಚಿತ್ರಣವನ್ನು ಮುಖಪುಟದಲ್ಲಿ ಮುದ್ರಿಸಲಾಗಿದೆ. ಚಿತ್ರದಲ್ಲಿ ಒಂದು ಶಾಲಾ ಕೊಠಡಿ ತರಗತಿಯಲ್ಲಿ ಕಪ್ಪು ಹಲಗೆಯ ಮುಂದೆ ಜಗುಲಿಯ ಮೇಲೆ ಶಿಕ್ಷಕನು ಕುರ್ಚಿ ಮೇಲೆ ಕುಳಿತು ಮೇಜಿನ ಮೇಲೆ ಕೈಯೂರಿ ಕುಳಿತು ಬೋಧಿಸುತ್ತಿರುವನು. ಪಾಠವನ್ನು ಕುಳಿತು ಆಲಿಸುತ್ತಿರುವ ವಿದ್ಯಾರ್ಥಿಗಳ ಚಿತ್ರಣ, ಗೋಡೆಯ ಮೇಲೆ ಕಿಟಕಿಯ ಕೆಳಗೆ ಚಾರ್ಟ್ ನೇತು ಹಾಕಲಾಗಿದೆ. ಶಿಕ್ಷಕನ ಹಿಂಭಾಗದಲ್ಲಿರುವ ಕಪ್ಪು ಹಲಗೆಯಲ್ಲಿ ವಿಶೇಷವಾಗಿ ಗ್ರಂಥ ಶೀರ್ಷಿಕೆಯಾದ 'ನಮ್ಮ ನಮ್ಮವರು' ಎಂದು ಬರೆಯಲಾಗಿದೆ. ಈ ಗ್ರಂಥ ಮುಖಪುಟದಲ್ಲಿನ ಕಪ್ಪು ಬಿಳುಪು ರೇಖಾಚಿತ್ರವು ಉತ್ತಮವಾಗಿ ರಚನೆಗೊಂಡಿದೆ.ಇದರ ಲೇಖಕರು ರಾಜರತ್ನಂ ಅವರು.

### ೮.೨.೭. ಕನ್ನಡ ಸಾಹಿತ್ಯ ಚಿತ್ರಗಳು (೧೯೪೫)

ಕ್ರಿ.ಶ. ೧೯೪೫ ರಲ್ಲಿ ಎಲ್. ಗುಂಡಪ್ಪನವರು ರಚಿಸಿದ್ದಾರೆ. ಈ ಗ್ರಂಥವನ್ನು ಎಸ್.ಎನ್. ಬುಕ್ ಡಿಪೋದವರು ಮುದ್ರಿಸಿದ್ದಾರೆ. ಕಪ್ಪು-ಬಿಳಿ ವರ್ಣದಲ್ಲಿ ಈ ಮುಖಪುಟವನ್ನು ಸಿದ್ಧಪಡಿಸಿದ್ದಾರೆ. ಮುಖಪುಟದ ಮೇಲ್ಭಾಗದಲ್ಲಿ ವೃತ್ತದ ಒಳಗೆ ಬಾಹುಬಲಿಯ ಮೂರ್ತಿ ಚಿತ್ರವನ್ನು ಕೊಡಲಾಗಿದೆ. ಪಕ್ಕಕ್ಕೆ ಬಳ್ಳಿ ಹೂವಿನ ಚಿತ್ತಾರದ ಸಾಲನ್ನು ಬಿಡಿಸಿದೆ. ಕೆಳಗೆ ಮಧ್ಯಮ ಅಕ್ಷರದಲ್ಲಿ ಶೀರ್ಷಿಕೆಯನ್ನು ಬರೆಯಲಾಗಿದೆ. ಮಧ್ಯದಲ್ಲಿ ಚೌಕದ ಆಕಾರದ ಒಳಗೆ ಪಂಪ ಮಹಾಕವಿ ಕುಳಿತು ಕಾವ್ಯ ರಚಿಸುತ್ತಿರುವ ಚಿತ್ರವಿದೆ. ಇದರ ಕೆಳಗೆ ಬಲದ ತುದಿಗೆ ಹೊಯ್ಸಳರ ಲಾಂಛನದ ದೃಶ್ಯವನ್ನು ಕಾಣಬರುತ್ತದೆ. ಚಿತ್ರದ ಎಡಕ್ಕೆ ಅಂಟಿಕೊಂಡಂತೆ ಬಳ್ಳಿ ಹೂವಿನ ಚಿತ್ರಣವನ್ನು ಬಿಡಿಸಲಾಗಿದೆ ಇಲ್ಲಿ ಈ ಮೂರು ಚಿತ್ರಗಳು ಸಮನಾಂತರವಾಗಿ ಚಿತ್ರಿಸಲಾಗಿದೆ. ನಲ್ವತ್ತರ ದಶಕಕ್ಕೆ ಹೋಲಿಸಿ ನೋಡಿದರೆ ಈ ಮುಖಪುಟವು ಆ ಕಾಲಾವಧಿಯಲ್ಲಿ ಆಕರ್ಷಕವಾಗಿ ಮೂಡಿಬಂದಿದೆ ಎಂದು ತಿಳಿದುಕೊಳ್ಳಬಹುದು.

### ೮.೨.೮.ಆಜಾದ ಹಿಂದ (೧೯೪೬)

ಲೇಖಕರಾದ ಬಾಲಚಂದ್ರ ಫಾಣೇಕರ್‌ರವರು ಕ್ರಿ.ಶ. ೧೯೪೬ ರಲ್ಲಿ ಸುಭಾಷ್ ಚಂದ್ರ ಬೋಸರ ಹೋರಾಟ ಮಾದರಿ ಕ್ರಾಂತಿಕಾರಿ ನಿಲುವನ್ನು ಇದರಲ್ಲಿ ತೋರಿಸಿದ್ದಾರೆ. ಇದರ ಮುಖಪುಟವು ಕೆಂಪು-ಬಿಳಿ ವರ್ಣದಲ್ಲಿ ಮೂಡಿ ಬಂದಿದೆ. ಮುಖಪುಟದ ಮೇಲ್ಭಾಗದ ಎಡಕ್ಕೆ ದೊಡ್ಡದಾಗಿ ಕೃತಿಯ ಶೀರ್ಷಿಕೆಯನ್ನು ಬರೆಯಲಾಗಿದೆ. ಬಲಕ್ಕೆ ಸುಭಾಷ್ ಚಂದ್ರ ಬೋಸ್‌ರ ಚಿತ್ರಣವನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಮೇಲಿಂದ ಕೆಳಕ್ಕೆ ಭಾರತದೇಶ ನಕಾಶೆಯನ್ನು ರಚಿಸಿದ್ದಾರೆ. ಕೆಳಗೆ ಮುದ್ರಣಾಲಯದ ವಿಳಾಸವನ್ನು ನೀಡಲಾಗಿದೆ.

ಈ ಮುಖಪುಟವು ಕೆಂಪು ವರ್ಣದ ಸರಳತೆಯಿಂದ ಕೂಡಿದೆ. ಇನ್ನೂ ಸ್ಪಷ್ಟವಾಗಿ ಬೇರೆ ವರ್ಣಗಳನ್ನು ಬಳಸಿ ಮುದ್ರಿಸಬಹುದಿತ್ತು.

ಈ ಕೃತಿಯಲ್ಲಿ ಸುಭಾಷ್ ಚಂದ್ರ ಬೋಸರ; ಕ್ರಾಂತಿಕಾರಿ ನಿಲುವು, ಅವರ ವೀರಾವೇಷ, ಬುದ್ಧಿಮಟ್ಟ, ಚಾಣಾಕ್ಷತನ, ಸಮಯಪಾಲನೆ, ಯುದ್ಧ ತಯಾರಿ, ಯುದ್ಧ ತರಬೇತಿ ಮುಂತಾದ ಅವರ ಜಾಣತನ ಸ್ವಾತಂತ್ರ್ಯ ತಂದುಕೊಡಲು ಭಾರತ ದೇಶಕ್ಕಾಗಿ ತಮ್ಮ ಪ್ರಾಣವನ್ನೇ ಪಣವಾಗಿಟ್ಟ ಭಾರತೀಯ ಧೀಮಂತ ನಾಯಕನ ವ್ಯಕ್ತಿತ್ವವನ್ನು ಈ ಗ್ರಂಥ ಎತ್ತಿ ತೋರಿಸಿದೆ. ಲೇಖಕರು ಉತ್ತಮ ಶೈಲಿಯ ಬರವಣಿಗೆಯ ಮೂಲಕ ಆ ಕಾಲದ ಓದುಗರನ್ನು ಸೆಳೆದಿದ್ದರು.

**೮.೨.೯. ಗಳಗನಾಥ (೧೯೪೬)**

ಲೇಖಕರಾದ ಕಾಂತೇಶ ಕಮಲಾಪುರ ಎಂಬುವವರು ಕ್ರಿ.ಶ. ೧೯೪೬ ರಲ್ಲಿ ಈ ಗ್ರಂಥವನ್ನು ರಚಿಸಿದ್ದಾರೆ. ಕೆ.ಎಸ್. ಅರ್ಕಸಾಲಿ ಎಂಬ ಕಲಾವಿದರು ಇದರ ಮುಖಪುಟಕ್ಕೆ ಗಳಗನಾಥರ ಭಾವಚಿತ್ರವು ಕಪ್ಪು-ಬಿಳಿ ಬಣ್ಣದಲ್ಲಿ ರಚಿಸಿದ್ದಾರೆ, ಮೇಲಿಂದ ಮಧ್ಯಭಾಗದ ಕೆಳಗಿನವರೆಗೆ ಗಳಗನಾಥರ ಚಿತ್ರಣವಿದೆ. ಕೆಳಗೆ ಕೃತಿಯ ಹೆಸರನ್ನು ಸ್ಪಷ್ಟವಾಗಿ ಬರೆಯಲಾಗಿದೆ. ಇಲ್ಲಿ ವಿನ್ಯಾಸಕಾರ ಅಥವಾ ಚಿತ್ರಕಾರನ ಕೈಚಳಕ ಒಮ್ಮೆ ನೋಡುಗರನ್ನು ಚಕಿತಗೊಳಿಸುವಂತಿದೆ. ಅತ್ಯುತ್ತಮವಾಗಿ ಚಿತ್ರಣವನ್ನು ಕಪ್ಪು-ಬಿಳಿ ಬಣ್ಣದಲ್ಲಿ ಚಿತ್ರಿಸಲಾಗಿದೆ. ಮುದ್ರಕರು ಸಹ ಸ್ಪಷ್ಟವಾಗಿ ಮುದ್ರಿಸಿದ್ದಾರೆ. ಇಲ್ಲಿ ಗಳಗನಾಥರ ತಲೆಗೆ ಪೇಟ ಸುತ್ತಿರುವ ಸುಂದರ ಮುಖವುಳ್ಳ ಬಿಳಿ ಮೀಸೆ ಹೊಂದಿರುವ, ಅಂಗಿ ಧರಿಸಿ ಅದರ ಮೇಲೆ ವಸ್ತ್ರವನ್ನು ಅಚ್ಚುಕಟ್ಟಾಗಿ ಹಾಕಿರುವಂತೆ ಚಿತ್ರ ಬರೆಯಲಾಗಿದೆ. ಈ ಮುಖಪುಟ ಓದುಗರನ್ನು, ನೋಡುಗರನ್ನು ತನ್ನತ್ತ ಸೆಳೆಯುವಂತಿದೆ. ಇದು ಗಳಗನಾಥರ ವ್ಯಕ್ತಿತ್ವದ ಜೀವನ ಚರಿತ್ರೆಯ ಗ್ರಂಥವಾಗಿದೆ.

**೮.೨.೧೦. ಜೋಗದ ಝೋಕು (೧೯೪೯)**

ಕ್ರಿ.ಶ. ೧೯೪೯ ರಲ್ಲಿ ಮೂಡಿ ಬಂದ ಈ ಗ್ರಂಥವನ್ನು ಸಾಹಿತಿಗಳಾದ ಸಿ.ಎಸ್. ಕರಬಿ ಯವರು ಬರೆದಿದ್ದಾರೆ. ಇದನ್ನು ಎ.ಆರ್. ಶಿವನಾಗಪ್ಪ ಮತ್ತು ಸನ್ಸ್‌ರವರ ಮುದ್ರಣಾಲಯದಲ್ಲಿ ಮುದ್ರಿಸಲಾಗಿದೆ. ಈ ಮುಖಪುಟವನ್ನು ಬಿಳಿ, ಹಸಿರು ವರ್ಣಗಳನ್ನು ಬಳಸಿ ಸಿದ್ಧಪಡಿಸಲಾಗಿದೆ. ಮೇಲ್ಭಾಗದಲ್ಲಿ ಸ್ವಲ್ಪ ಚಾಚಿಕೊಂಡಿರುವ ಮರದ ಕೊಂಬೆಗಳಲ್ಲಿ ಕಂಡು ಬರುವ ಎಲೆಯ ಚಿತ್ರ ಸ್ವಲ್ಪ ಕೆಳಗಿನಿಂದ ಪೂರ್ತಿ ಕೆಳಭಾಗದವರೆಗೆ ಜೋಗದ ಜಲಪಾತದ ಅಮೋಘ ಚಿತ್ರಣವನ್ನು ಬರೆದು ಮುದ್ರಿಸಲಾಗಿದೆ. ಇದರ ಕೆಳಗೆ ಗ್ರಂಥದ ಶೀರ್ಷಿಕೆಯನ್ನು ದೊಡ್ಡ ಅಕ್ಷರಗಳಲ್ಲಿ ಬರೆಯಲಾಗಿದೆ. ನಾಲ್ಕು ಕವಲುಗಳಾದ ರಾಜ, ರಾಣಿ, ರೋರರ್, ರಾಕೆಟ್ ಎಂಬ ಕವಲುಗಳಾಗಿ ಶರಾವತಿ ನದಿ ದುಮ್ಮಿಕ್ಕುತ್ತಿರುವ ನೀರನ್ನು ಬಿಳಿಯ ವರ್ಣದಲ್ಲಿ ಸೊಗಸಾಗಿ ಬಿಡಿಸಲಾಗಿದೆ. ಈ ಮುಖಪುಟವನ್ನು ಇನ್ನೂ ಹೆಚ್ಚು ವರ್ಣರಂಜಿತವಾಗಿ ಮೂಡಿಸಬಹುದಿತ್ತು. ಆದರೂ ಈ ಮುಖಪುಟ ಓದುಗರನ್ನು ಸಾಮಾನ್ಯವಾಗಿ ಸೆಳೆಯುವಂತಿದೆ.

## ೮.೩. ಐವತ್ತರ ದಶಕದಲ್ಲಿ ಮೂಡಿ ಬಂದ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಐವತ್ತರ ದಶಕವೆಂದರೆ ಪರಕೀಯರ (ಬ್ರಿಟಿಷರ) ಅಧೀನದಿಂದ ಭಾರತ ದೇಶ ಆಗ ತಾನೆ ಮುಕ್ತಗೊಂಡಿತ್ತು. ಕರ್ನಾಟಕದಲ್ಲಿ ಈ ಸಂದರ್ಭದಲ್ಲಿ ಸಾಹಿತ್ಯ ಕೃತಿಗಳು ಅನೇಕ ವಿಷಯಗಳ ಹಿನ್ನೆಲೆಯಲ್ಲಿ ರಚನೆಗೂ ಅದರ ಮುಖಪುಟ ವಿನ್ಯಾಸಗಳಲ್ಲಿ ಹೊಸ ಬದಲಾವಣೆಗಳಾಗಿ ವರ್ಣ ರಂಜಿತ, ಚಿತ್ರಣಗಳು ಮೂಡಿ ಬಂದವು. ಈ ದಶಕದಲ್ಲಿ ಕನ್ನಡ ಸಾಹಿತ್ಯ ಗ್ರಂಥಗಳು ಸುಮಾರು ಕೃತಿಗಳು ಲೋಕಾರ್ಪಣೆಗೊಂಡವು. ಅವುಗಳಲ್ಲಿ ಪ್ರಾಥಿನಿಧಿಕವಾಗಿ ಇಪ್ಪತ್ತಕ್ಕೂ ಹೆಚ್ಚು ಪ್ರಮುಖವಾದ ಕೃತಿಗಳು ಹೀಗಿವೆ, ಕಂದಾಡೆ ಕೃಷ್ಣಯ್ಯಂಗಾರ್ ರವರು ರಚಿಸಿರುವ 'ಜವಾಹರಲಾಲ್ ನೆಹರು', ಬಿ. ಶಂಕರಭಟ್ಟ ರವರು ಬರೆದಿರುವ 'ಗ್ರೀಕ್ ವೀರರು' ಅದ್ವಿತೀಯವಾಗದೆ. ಚೆನ್ನವೀರ ಕಣವಿಯವರು ರಚಿಸಿದ 'ಮಧುಚಂದ್ರ' ಗ.ಸ. ಹಾಲಪ್ಪನವರ 'ನಾವು ನಮ್ಮ ರಾಜ್ಯಾಡಳಿತ', ಎನ್.ಎಸ್. ವೀರಪ್ಪನವರ 'ಚಾರ್ಲ್ಸ್ ಡಾರ್ವಿನ್' ಗ್ರಮ್ಮ್ ಸಹೋದರರು ರಚಿಸಿರುವ 'ಚಂದ್ರನನ್ನು ತಂದರು' ಆಕರ್ಷಕವಾಗಿವೆ. ರಾ.ಶಿ. ರಚಿಸಿದ 'ತುಟಿ ಮೀರಿದುದು' ಅಮೋಘವಾಗಿದೆ. ಹಾಗೂ ಚ.ರಾ. ರಚಿಸಿದ 'ಕಡಲಕೆರೆಯ ಚಿತ್ರಗಳು' ಸೆಳೆಯುವಂತಿದೆ. ಕೆ.ವಿ. ಲಿಂಗಪ್ಪನವರ ಪ್ರಸಿದ್ಧ ಗ್ರಂಥ 'ಗಿರಿಬಾಲೆ' ಸ.ಚ. ಮಹಾದೇವ ನಾಯಕ್‌ರವರ 'ಹಳ್ಳಿಯ ಹಾಡುಗಳ' ಮುಖಪುಟವಂತು ಕಣ್ಮನ ಸೆಳೆಯುವಂತಿದೆ. ಉಷಾದೇವಿಯ ಅನುವಾದ ಗ್ರಂಥವಾದ 'ನೀನು ವಿಜ್ಞಾನಿಯಾಗು' ಮೆಚ್ಚುವಂತೆ ಮೂಡಿ ಬಂದಿದೆ.

ಬಿ.ವಿ.ಸುಬ್ಬರಾಯಪ್ಪನವರ 'ಆಹಾರ ಮತ್ತು ದೇಹ ಪೋಷಣೆ' ಮುಖಪುಟದಲ್ಲಿ ಹಣ್ಣು-ತರಕಾರಿಯ ಚಿತ್ರಣ ಚೆಂದವಾಗಿದೆ. ಪಿ.ಆರ್. ಶ್ರೀನಿವಾಸನ್ ಬರೆದಿರುವ 'ದಕ್ಷಿಣ ಭಾರತದ ದೇವಾಲಯಗಳು' ಇನ್ನೂ ಹಲವು ಗ್ರಂಥಗಳು ಈ ಕಾಲದಲ್ಲಿ ಮೂಡಿಬಂದಿವೆ. ಜೊತೆಗೆ ಅನೇಕರಲ್ಲಿ ಸಾಹಿತ್ಯಾಭಿರುಚಿ ಮೂಡಿಸಿ, ಸಾಹಿತಿಗಳಾಗುವಲ್ಲಿ ೫೦ ರ ದಶಕವು ಪ್ರೇರೇಪಿಸಿದ ದಶಕವಿದು ಈ ದಶಕದಲ್ಲಿ ಹೊರಹೊಮ್ಮಿದ ಕನ್ನಡ ಸಾಹಿತ್ಯ ಗ್ರಂಥಗಳ ಮುಖಪುಟ ಆಮೆ ವೇಗದಲ್ಲಿ ಬೆಳೆದು ಬಂದಿತು ಎಂಬ ಅಭಿಪ್ರಾಯಪಡಬಹುದು.

### ೮.೩.೧. ಜವಾಹರಲಾಲ್ ನೆಹರು (೧೯೫೨)

ಕ್ರಿ.ಶ. ೧೯೫೨ ರಲ್ಲಿ ಕಂದಾಡೆ ಕೃಷ್ಣಯ್ಯಂಗಾರ್ ಅವರು ರಚಿಸಿದ ಗ್ರಂಥವಾಗಿದೆ. ಇದು ನೆಹರುರವರ ಜೀವನ ಸಾಧನೆ ಕುರಿತದ್ದಾದ ಕೃತಿಯಾಗಿದೆ. ಇದನ್ನು ಕಲ್ಯಾಣ ಪ್ರಿಂಟರ್ಸ್‌ನಲ್ಲಿ ಮುದ್ರಿಸಲಾಗಿದೆ. ಇಲ್ಲಿ ಹಳದಿ, ಕಪ್ಪು ವರ್ಣಗಳನ್ನು ಬಳಸಿ ಮುಖಪುಟ ಸಿದ್ಧಪಡಿಸಲಾಗಿದೆ. ಮೇಲಿಂದ ಕೆಳಕ್ಕೆ ಸಂಪೂರ್ಣ ಹಳದಿ ವರ್ಣದ ಮುಖಪುಟದಲ್ಲಿ ಕಪ್ಪು ಬಣ್ಣದಿಂದ ಯುವ ನೆಹರುರವರ ಚಿತ್ರವನ್ನು ವಿನ್ಯಾಸಗಾರ-ಚಿತ್ರಗಾರ ಎಲ್ಲರ ಮನಸೂರೆಗೊಳ್ಳುವಂತೆ ಬಿಡಿಸಿದ್ದಾರೆ. ಇಲ್ಲಿ ನೆಹರುರವರು ಗಾಂಧಿ ಟೋಪಿ ಧರಿಸಿ ಅಂಗಿಯ ಮೇಲೆ ಶಾಲು ಹೊತ್ತಂತೆ ನಿಲವು ಕಣ್ಣುಳ್ಳ ನೆಹರು ಭಾವಚಿತ್ರ ಸ್ಮರಿಸುವಂತಿದೆ. ಈ ಮುಖಪುಟದ ವಿಶೇಷವೇನೆಂದರೆ ಇಲ್ಲಿ ಕೃತಿ ಶೀರ್ಷಿಕೆಯನ್ನು ಬರೆದೇ ಇಲ್ಲ. ಕಾರಣ ಭಾವಚಿತ್ರವನ್ನು ನೋಡುಗರು ನೋಡಿದ ಕೂಡಲೇ ಈ ಪುಸ್ತಕ ನೆಹರು ಜೀವನ ಆಧಾರಿತ ಗ್ರಂಥ ಎಂದು ತಿಳಿಯುವಂತೆ ವಿನ್ಯಾಸಕಾರ ಮುಖಪುಟ ರಚಿಸಿದ್ದಾರೆ. ಈ ಗ್ರಂಥದಲ್ಲಿ ನೆಹರು ಬಾಲ್ಯ, ವಿದ್ಯಾಭ್ಯಾಸ, ರಾಜಕೀಯ ಪ್ರವೇಶ, ಸ್ವಾತಂತ್ರ್ಯ

ಹೋರಾಟದ ಪಾತ್ರ, ಗಾಂಧಿಯೊಡನೆ ಇದ್ದ ಸ್ನೇಹ, ಪ್ರಥಮ ಪ್ರಧಾನಿಯಾಗಿ ಒಟ್ಟು ೧೭–೧೮ ವರ್ಷಗಳ ಸಲ್ಲಿಸಿದ ಸೇವೆ, ಅವರ ಸವಾಲುಗಳನ್ನು ಈ ಗ್ರಂಥದಲ್ಲಿ ಕಾಣಬಹುದು. ಇದು ಶೀರ್ಷಿಕೆರಹಿತ ಪುಸ್ತಕ.

**೮.೩.೨. ಗ್ರೀಕ್ ವೀರರು (೧೯೫೩)**

ಬಿ. ಶಂಕರಭಟ್ಟ ರವರು ಕ್ರಿ.ಶ. ೧೯೫೩ರಲ್ಲಿ ಈ ಕೃತಿಯನ್ನು ರಚಿಸಿ, ಕೆನರಾ ಪ್ರಿಂಟಿಂಗ್ ವರ್ಕ್ಸ್‌ನಲ್ಲಿ ಅಚ್ಚು ಹಾಕಿಸಿದರು. ಈ ಮುಖಪುಟಕ್ಕೆ ಕೆಂಪು, ಹಳದಿ, ಹಸಿರು ವರ್ಣಗಳನ್ನು ಬಳಸಲಾಗಿದೆ. ಮೇಲ್ಭಾಗದಿಂದ ಅರ್ಧಕ್ಕೂ ಹೆಚ್ಚು ಭಾಗದಲ್ಲಿ ಗ್ರೀಕ್‌ನ ಸಾಹಸಿ ಪುರುಷರು ತೊಡೆ ಭಾಗದಲ್ಲಿ ವಸ್ತ್ರಧರಿಸಿ ಅರೆನಗ್ನರಾಗಿ ಇಬ್ಬರು ವ್ಯಕ್ತಿಗಳು ಒಂದು ದೊಡ್ಡ, ಇನ್ನೊಂದು ಚಿಕ್ಕ ವ್ಯಕ್ತಿಗಳು ಕೈಯಲ್ಲಿ ಆಯುಧ ಹಿಡಿದು ಬೀಸುತ್ತಿರುವ ಚಿತ್ರಣ ಸೊಗಸಾಗಿ ಮೂಡಿಬಂದಿದೆ. ಕೆಳಗೆ ವೃತ್ತದಲ್ಲಿ ಮೇಲೆ ಕೆಳಗೆ ಬರುವಂತೆ ಶೀರ್ಷಿಕೆಯನ್ನು ಬರೆಯಲಾಗಿದೆ. ಲೇಖಕರು ಈ ಗ್ರಂಥದಲ್ಲಿ ಗ್ರೀಕ್‌ನ ಪ್ಲೇಟೋ, ಅವನ ಶಿಷ್ಯ ಸಾಕ್ರಟೀಸ್, ಈತನ ಶಿಷ್ಯ ಅರಿಸ್ಟಾಟಲ್ ಇವನ ಅಪ್ಪಟ ಶಿಷ್ಯ 'ಅಲೆಗ್ಸಾಂಡರ್' ಬಗ್ಗೆ ಮಾಹಿತಿ ಒಳಗೊಂಡಿದೆ. ಇಡಿ ವಿಶ್ವವನ್ನೇ ಗೆಲ್ಲಬೇಕೆಂಬ ಅಚಲ ವಿಶ್ವಾಸವಿಟ್ಟು ಅಲೆಗ್ಸಾಂಡರ್‌ನ ಶೌರ್ಯ ಪರಾಕ್ರಮಗಳು ಇಲ್ಲಿ ಗರಿ ಬಿಚ್ಚಿವೆ. ಇದೊಂದು ಅಮೋಘ ಕೃತಿಯಾಗಿದೆ. ಚಿತ್ರಕ್ಕೂ ಮುಖಪುಟಕ್ಕೂ ಸಂಬಂಧವಿರುವಂತೆ ಚಿತ್ರಿಸಲಾಗಿದೆ.

**೮.೩.೩. ಮಧುಚಂದ್ರ (೧೯೫೪)**

ಕಪ್ಪು–ಬಿಳುಪು, ಕೆಂಪು ವರ್ಣಗಳಿಂದ ಸಿದ್ಧವಾದ ಈ ಮುಖಪುಟ ಆಕರ್ಷಕವಾಗಿದೆ. ಈ ಕೃತಿಯನ್ನು ಕ್ರಿ.ಶ. ೧೯೫೪ ರಲ್ಲಿ ಚೆನ್ನವೀರ ಕಣವಿ ಯವರು ರಚಿಸಿದರು. ಇದನ್ನು ಎಸ್. ನಂಜುಂಡಸ್ವಾಮಿ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಮುದ್ರಿಸಲಾಯಿತು. ಈ ಮುಖಪುಟದ ಮೇಲೆ ಬಲಕ್ಕೆ ಪೂರ್ಣ ಚಂದರಿನನ್ನು ಬಿಂಬಿಸಲಾಗಿದೆ. ಕೆಳಗೆ ಕೆಂಪು ವರ್ಣದಲ್ಲಿ ಗ್ರಂಥದ ಶೀರ್ಷಿಕೆಯನ್ನು ದಪ್ಪ ಅಕ್ಷರಗಳಲ್ಲಿ ಸೊಗಸಾಗಿ ಮೂಡಿದೆ. ಎಡಕ್ಕೆ ಮೇಲೆ ಚಾಚಿಕೊಂಡ ಮರದ ಕೊಂಬೆ ಎಲೆಗಳು ಹರಡಿದೆ. ಕೆಳಗೆ ಓರ್ವ ಸ್ತ್ರೀ ವಿರಹದಲ್ಲಿರುವಂತೆ ಆಕಾಶದಲ್ಲಿರುವ ಚಂದ್ರನನ್ನೇ ನೋಡುತ್ತಿರುವ ದೃಶ್ಯ ಓದುಗರನ್ನು ನೋಡುಗರನ್ನು ತನ್ನತ್ತ ಸೆಳೆಯುತ್ತದೆ. ಇವಳ ಪಕ್ಕ ಚಿಕ್ಕ ಮೇಜಿನ ಮೇಲೆ ಹಾಲು, ಹಣ್ಣುಗಳನ್ನು ಕಾಣಬಹುದು. ಇಲ್ಲಿ ಮದನಾರಿ ಆಸನಕ್ಕೆ ಒರಗಿಕೊಂಡು ಹುಣ್ಣಿಮೆ ಚಂದ್ರನನ್ನೇ ನೋಡುತ್ತಿರುವ ಚಿತ್ರ ಬಿಡಿಸಿರುವ ಚಿತ್ರಕಾರನ ಕೈ ಚಳಕ ಒಮ್ಮೆ ನೋಡುಗರ ಮೈ ಪುಳಕಿತಗೊಳಿಸುವಂತೆ ಮಾಡಿದೆ. ಈ ಕೃತಿಯ ಲೇಖಕರು ಚೆನ್ನವೀರ ಕಣವಿಯವರು. ಮುಖಪುಟ ರಚನೆ ಎಸ್. ನಂಜುಂಡ ಸ್ವಾಮಿ ಅವರು ನಿರ್ಮಿಸಿದ್ದಾರೆ.

**೮.೩.೪. ನಾವು ನಮ್ಮ ರಾಜ್ಯಾಡಳಿತ (೧೯೫೫)**

ಈ ಕೃತಿಯನ್ನು ಗ.ಸ.ಹಾಲಪ್ಪನವರು ಕ್ರಿ.ಶ. ೧೯೫೫ ರಲ್ಲಿ ರಚಿಸಿದ್ದಾರೆ. ಇದು ಬಹುಮುಖ ಚಿತ್ರವುಳ್ಳ ಮುಖಪುಟವಾಗಿದೆ. ಇದನ್ನು ಮೈಸೂರು ಪ್ರಿಂಟಿಂಗ್ ಪ್ರೆಸ್‌ನಲ್ಲಿ ಮುದ್ರಣ ಮಾಡಿಸಲಾಗಿದೆ. ಈ ಮುಖಪುಟ ಕಪ್ಪು, ಬಿಳಿ, ಹಸಿರು ವರ್ಣಗಳಲ್ಲಿ ಕಂಗೊಳಿಸುತ್ತದೆ. ಮೇಲೆ ಎಡಕ್ಕೆ ಓರ್ವ ಅಂಗರಕ್ಷಕನ ಚಿತ್ರ ಪಕ್ಕಕ್ಕೆ ಸೂರ್ಯನ ಚಿತ್ರ ಅದಕ್ಕೆ ಅಂಟಿಕೊಂಡಿರುವ ಪಿರಂಗಿ ಇದೆ. ಇದರ ಮಗ್ಗುಲಲ್ಲಿ ಓರ್ವ

ನಾಯಕ ಪ್ರಜೆಗಳ ಕುರಿತು ಭಾಷಣ ಮಾಡುತ್ತಿದ್ದಾರೆ. ಇದರ ಕೆಳಗೆ ಪಟ್ಟಿಯೊಳಗೆ ಗ್ರಂಥದ ಶೀರ್ಷಿಕೆ ಮಧ್ಯಮ ಅಕ್ಷರದಲ್ಲಿದೆ. ಇದರಡಿಯಲ್ಲಿ ಮಧ್ಯಕ್ಕೆ ಹಿಂದೂ ದೇವಾಲಯ, ಮುಸ್ಲಿಂರ ಮಸೀದಿ, ಕ್ರೈಸ್ತರ ಚರ್ಚ್ ಅಂಟಿಕೊಂಡಂತೆ ಅದ್ಭುತವಾಗಿದೆ. ಮಧ್ಯೆ ಓರ್ವ ಯುವಕ ಭಾರತದ ತ್ರಿವರ್ಣ ಧ್ವಜ ಹಿಡಿದಿರುವ ಚಿತ್ರವಿದೆ. ಪಕ್ಕದಲ್ಲಿ ಸಾಲುಗಟ್ಟಿ ನಿಂತಿರುವ ಸೈನಿಕರ ಚಿತ್ರಣವಿದೆ. ಇದರ ಕೆಳಗೆ ಪ್ರಜೆಗಳು ಮತದಾನ ಮಾಡುತ್ತಿರುವ ಚಿತ್ರವಿದೆ. ಕೆಳಗೆ ಲೇಖಕರ ಹೆಸರಿದೆ. ಇವರ ಹೆಸರಿನಡಿಯಲ್ಲಿ ಓರ್ವ ಬಾಲಕ ಚರಕದಲ್ಲಿ ನೂಲು ತೆಗೆಯುತ್ತಿರುವ ಮಧ್ಯ ಸಮಾನವಾಗಿರುವ ತಕ್ಕಡಿ ಕೊನೆಗೆ ಓರ್ವ ರೈತ ಎತ್ತುಗಳಿಂದ ಹೊಲ ಹೊಡೆಯುತ್ತಿರುವ ಚಿತ್ರವಿದೆ. ಇದು ಬಹುಮುಖ ಹೊಂದಿದ ಚಿತ್ರವಿದ್ದು, ಕಲಬೆರಕೆ ಆದಂತಿದೆ. ಆದರೂ ಶೀರ್ಷಿಕೆಗೂ ಚಿತ್ರಕ್ಕೂ ಅವಿನಭಾವ ಸಂಬಂಧವಿದೆ.

**೮.೩.೫. ಚಾರ್ಲ್ಸ್ ಡಾರ್ವಿನ್ (೧೯೫೭)**

ಎನ್.ಎಸ್. ವೀರಪ್ಪ ನವರು ಕ್ರಿ.ಶ. ೧೯೫೭ರಲ್ಲಿ ಈ ಕೃತಿ ರಚಿಸಿದರು. ಇದನ್ನು ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್‌ನಲ್ಲಿ ಮುದ್ರಿಸಲಾಯಿತು. ಇಲ್ಲಿ ಬಿಳಿ, ಹಸಿರು, ಕಪ್ಪು, ಕೆಂಪು, ಬಾದಾಮಿ ವರ್ಣಗಳ ಬಳಕೆಯಿದೆ. ಈ ಮುಖಪುಟದ ಮೇಲ್ಭಾಗದಲ್ಲಿ ಸ್ಪಷ್ಟ ಅಕ್ಷರಗಳಲ್ಲಿ ಶೀರ್ಷಿಕೆಯನ್ನು ಬರೆದಿದ್ದಾರೆ. ಕೆಳಗೆ ಡಾರ್ವಿನ್‌ರವರ ದಾಡಿ ಬಿಟ್ಟಿರುವ ಭಾವಚಿತ್ರ ಹಸಿರು ವರ್ಣದಲ್ಲಿ ಮೂಡಿದೆ. ಈ ಮುಖಪುಟದಲ್ಲಿ ಡಾರ್ವಿನ್‌ರವರ ಚಿತ್ರವನ್ನು ಅಂದವಾಗಿ ಬಿಡಿಸಿದ್ದಾರೆ. ಈ ಮುಖಪುಟದಲ್ಲಿ ಡಾರ್ವಿನ್ ಚಿತ್ರದ ಕೆಳಗೆ ಅಂಗಿಯ ಮೇಲೆ ಲೇಖಕರ ಹೆಸರನ್ನು ಚಿಕ್ಕದಾಗಿ ನೀಡಲಾಗಿದೆ. ಈ ಗ್ರಂಥದಲ್ಲಿ ಲೇಖಕರು ಡಾರ್ವಿನ್‌ನ ಸಿದ್ಧಾಂತಗಳು, ತತ್ವಗಳು ಅವರು ವಿಜ್ಞಾನ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆಯ ಬಗ್ಗೆ ವಿವರಿಸಿದ್ದಾನೆ.

**೮.೩.೬. ಚಂದ್ರನನ್ನು ತಂದರು! (೧೯೫೭)**

ಮೈಸೂರು ಮುದ್ರಣಾಲಯದಲ್ಲಿ ಕ್ರಿ.ಶ. ೧೯೫೭ರಲ್ಲಿ ಮುದ್ರಣ ಕಂಡ ಈ ಕೃತಿಯನ್ನು ಗ್ರಿಮ್ಮ್ ಸೋದರರು ರಚಿಸಿದ್ದಾರೆ. ಕಪ್ಪು-ಬಿಳಿ ವರ್ಣದಲ್ಲಿ ಗ್ರಾಮೀಣ ಶೈಲಿಯಲ್ಲಿ ಚಿತ್ರ ಮೂಡಿ ಬಂದಿದೆ. ಈ ಮುಖಪುಟದ ಮೇಲ್ಭಾಗದ ಅರ್ಧದಷ್ಟು ಕಪ್ಪು ಪಟ್ಟಿಯಲ್ಲಿ ಬಿಳಿಯ ಬಣ್ಣದ ಚಿತ್ರಣ ಮೂಡಿದೆ. ಇಲ್ಲಿ ಚಿತ್ರಗಾರ ಒಂದು ಎತ್ತಿನಗಾಡಿಯಲ್ಲಿ ಪೂರ್ಣ ಚಂದಿರನನ್ನು ಮೂವರು ಗ್ರಾಮೀಣ ಸೊಗಸಿನ ಪಡ್ಡೆ ಹುಡುಗರು ಹಿಡಿದು ತರುತ್ತಿರುವ ದೃಶ್ಯ ಎದ್ದು ಕಾಣುತ್ತದೆ.

ಇದರ ಕೆಳಗೆ ಬಿಳಿಯ ಪಟ್ಟಿ ಕೆಳಗಿನವರೆಗೆ ಇದೆ. ಇದರಲ್ಲಿ ಮೇಲೆ ಕೃತಿಯ ಶೀರ್ಷಿಕೆಯಿದೆ. ಕೆಳಗೆ ಮಧ್ಯದಲ್ಲಿ ಲೇಖಕರ ಹೆಸರಿದೆ. ಮುಖಪುಟದ ಕೆಳಗೆ ಕಾವ್ಯಾಲಯದ ಚಿಹ್ನೆ ವಿಳಾಸ ನೀಡಲಾಗಿದೆ. ೧೯೫೭ ರ ದಶಕದಲ್ಲಿ ಮೊಟ್ಟ ಮೊದಲು ರಷ್ಯಾ ದೇಶದವರು ಚಂದ್ರಲೋಕಕ್ಕೆ ನಾಯಿ, ನಂತರ ಯೂರಿ ಗಗಾರಿನ್ ಎಂಬ ವ್ಯಕ್ತಿಯನ್ನು ಕಳುಹಿಸಿದ್ದರು. ಅಂತಹ ಚಂದ್ರನ ಕುರಿತಾಗಿ ಚಂದ್ರಲೋಕದಲ್ಲಿ ಬದುಕಬಹುದಾ? ಅಥವಾ ಚಂದ್ರನನ್ನೇ ಭೂಮಿಗೆ ತರಬಹುದಾ? ಎಂಬ ತಾರ್ಕಿಕ ಆಲೋಚನೆಗಳು ಜನರಲ್ಲಿ ಮೂಡಬಹುದೆಂಬ ವಿಚಾರ ಧಾರೆಗಳನ್ನು ಇಲ್ಲಿ ಲೇಖಕರು ತಿಳಿಸಿದ್ದಾರೆ.

೮.೩.೭. ತುಟಿ ಮೀರಿದುದು (೧೯೫೭)

ಈ ಮುಖಪುಟವು ನೋಡುಗರಿಗೆ, ಓದುಗರಿಗೆ ತನ್ನಡೆ ನೋಡುವಂತೆ, ಸೆಳೆಯುವಂತೆ ಅದ್ಭುತವಾಗಿ ಮೂಡಿಬಂದಿದೆ. ಕ್ರಿ.ಶ. ೧೯೫೭ ರಲ್ಲಿ ರಾ.ಶಿ.ಯವರು ಈ ಕೃತಿಯನ್ನು ರಚಿಸಿದ್ದಾರೆ. ಇಲ್ಲಿ ಕಪ್ಪು-ಬಿಳಿ, ಕೆಂಪು, ಕಂದು ವರ್ಣಗಳನ್ನು ಚಿತ್ರಕಾರ ಬಳಸಿ ಒಂದು ಅಮೋಘ ಮುಖಪುಟವನ್ನು ಚಿತ್ರಿಸಿದ್ದಾರೆ. ಮುಖಪುಟದ ಎಡಕ್ಕೆ ಮೇಲಿನಿಂದ ಕೆಳಕ್ಕೆ ಕಂದು ಬಣ್ಣದ ಚಿಕ್ಕ ಪಟ್ಟಿಯನ್ನು ಎಳೆಯಲಾಗಿದೆ. ಇನ್ನುಳಿದ ಮುಖಪುಟವನ್ನು ತ್ರಿಭುಜ ಶೈಲಿಯ ಎರಡು ಭಾಗ ಮಾಡಲಾಗಿದೆ. ಅರ್ಧ ಭಾಗದಲ್ಲಿ ಒಬ್ಬ ಸ್ತ್ರೀಯ ಅರ್ಧ ಮುಖವನ್ನು ಮಾತ್ರ ಕಪ್ಪು ವರ್ಣದಲ್ಲಿ ಒಂದು ಕಣ್ಣು, ಮೂಗು, ಕೇಶರಾಶಿ, ಕುತ್ತಿಗೆಯನ್ನು ಬಿಡಿಸಲಾಗಿದೆ. ತುಟಿಯನ್ನು ಮಾತ್ರ ಕೆಂಪು ವರ್ಣದಲ್ಲಿ ಸೊಗಸಾಗಿ ಬಿಡಿಸಿದ್ದಾರೆ. ಮುಖಪುಟದ ಇನ್ನರ್ಧ ಭಾಗವು ಕೆಂಪು ವರ್ಣದಿಂದ ತ್ರಿಕೋನ ಆಕಾರದಲ್ಲಿ ರಚನೆಗೊಂಡಿದ್ದು, ಇದರಲ್ಲಿ ಮೇಲಿಂದ ಕೆಳಕ್ಕೆ ಶೀರ್ಷಿಕೆಯನ್ನು ಬರೆದಿದೆ. ಈ ಮುಖಪುಟವು ಶೀರ್ಷಿಕೆಗೂ ಮತ್ತು ರೇಖಾಚಿತ್ರಕ್ಕೂ ಒಂದಕ್ಕೊಂದು ಸಂಬಂಧ ಕಲ್ಪಿಸುವಂತಿದೆ. ಸಾಹಿತ್ಯ ಆಸಕ್ತರನ್ನು ಬೇಗನೆ ಈ ಕೃತಿಯ ಮುಖಪುಟ ತನ್ನಡೆ ಸೆಳೆಯುವಂತಿದೆ. ಇದರ ವಿನ್ಯಾಕಾರರು ಎಸ್.ಎಲ್. ನಾರಾಯಣ್ ಎಂಬ ಕಲಾವಿದರು.

೮.೩.೮. ಕಡಲ ಕರೆಯ ಚಿತ್ರಗಳು (೧೯೫೮)

ಸಾಹಿತಿಗಳಾದ ಚ.ರಾ. ಬರೆದಿರುವ ಈ ಗ್ರಂಥವು ಕ್ರಿ.ಶ. ೧೯೫೮ ರಲ್ಲಿ ನಾನಾ ದೇಸಾಯಿ ಮುಂಬಯಿ ಮುದ್ರಣಾಲಯದಲ್ಲಿ ಮುದ್ರಿತವಾಯಿತು. ಕಪ್ಪು, ಬಿಳಿ, ಕೆಂಪು ಬಣ್ಣದಲ್ಲಿ ಬಿಡಿಸಿರುವ ಚಿತ್ರ ಅಂದವಾಗಿದೆ. ಮುಖಪುಟದ ಮೇಲೆ ಎಡಭಾಗದಲ್ಲಿ ಕೆಂಪು ಪಟ್ಟಿಯೊಳಗೆ ಬಿಳಿವರ್ಣದಲ್ಲಿ ಕೃತಿಯ ಹೆಸರನ್ನು ಬಿಂಬಿಸುವಂತೆ ಬರೆಯಲಾಗಿದೆ. ಕೆಳಗೆ ಪೂರ್ತಿ ಆಕಾಶ ಸಮುದ್ರದ ಚಿತ್ರ, ಸಮುದ್ರದ ಮುಂದೆ ಓರ್ವ ಹುಡುಗ ಬಲೆಯನ್ನು ಕೈಯಲ್ಲಿ ಹಿಡಿದು ಸಮುದ್ರವನ್ನೇ ನೋಡುತ್ತಿರುವ ದೃಶ್ಯವನ್ನು ಉತ್ತಮವಾಗಿ ಬರೆದಿದ್ದಾರೆ. ಆದರೆ ಈ ಮುಖಪುಟದ ಚಿತ್ರವನ್ನು ಇನ್ನೂ ಸೊಗಸಾಗಿ ಮೂಡಿಸಬಹುದಿತ್ತು. ಸಮುದ್ರದಲ್ಲಿ ದೋಣಿಗಳು ಸಾಗುತ್ತಿರುವ ದೃಶ್ಯ, ಬಲೆ ಬೀಸಿ ಮೀನು ಹಿಡಿಯುತ್ತಿರುವ ಹಾಗೂ ಸೂರ್ಯಾಸ್ತದ ಚಿತ್ರ ಆಕಾಶದಲ್ಲಿ ಪಕ್ಷಿಗಳು ಹಾರಿ ಹೋಗುತ್ತಿರುವ ದೃಶ್ಯಗಳನ್ನು ಸೇರಿಸಿದ್ದರೆ ಮುಖಪುಟ ಓದುಗರನ್ನು ಸೆಳೆಯುವಲ್ಲಿ ಸಫಲವಾಗುತ್ತಿತ್ತು. ಲೇಖಕರು ಇಲ್ಲಿ ಕಡಲ ತೀರದ ಜೀವನ, ಬದುಕು, ಮೀನುಗಾರಿಕೆಯನ್ನೇ ಉದ್ಯೋಗ ಮಾಡಿಕೊಂಡು ಎಷ್ಟೋ ಜನ ಬಾಳು ಸಾಗಿಸುತ್ತಿರುವ ಶೈಲಿಯನ್ನು ಇಲ್ಲಿ ತಿಳಿಸಿದ್ದಾರೆ.

೮.೩.೯. ಗಿರಿಬಾಲೆ (೧೯೫೮)

ಕೆ.ವಿ. ಲಿಂಗಪ್ಪ ನವರು ಕ್ರಿ.ಶ. ೧೯೫೮ ರಲ್ಲಿ ಗಿರಿಬಾಲೆ ಎನ್ನುವ ಕೃತಿಯನ್ನು ಬರೆದ್ದಿದು. ಎನ್.ಕೆ. ಅನಂತರಾಮನ್ಎಂಬ ಕಲಾವಿದರಿಂದ ಮುಖಪುಟ ವಿನ್ಯಾಸ ರಚನೆಗೊಂಡಿದೆ. ಈ ಮುಖಪುಟವು ನೀಲಿ, ಕೆಂಪು, ಕಪ್ಪು, ಬಿಳಿ ವರ್ಣವನ್ನು ಬಳಸಿ ಸಿದ್ಧಪಡಿಸಿದ್ದಾರೆ. ಎಡಕ್ಕೆ ಮೇಲಿಂದ ಕೆಳಕ್ಕೆ ನೀಲಿ ಬಣ್ಣದ ಚಿಹ್ನೆ ಪಟ್ಟಿಯನ್ನು ಕಾಣಬಹುದು. ಮುಖಪುಟದ ಮೇಲೆ ದೊಡ್ಡದಾಗಿ ಗ್ರಂಥದ ಶೀರ್ಷಿಕೆಯನ್ನು

ಪ್ರಕಾಶಿಸುವಂತೆ ಗಿರಿಬಾಲೆ ಎಂದು ಬರೆಯಲಾಗಿದೆ. ಕೆಳಗೆ ಎಡಭಾಗದಲ್ಲಿ ಓರ್ವ ಸ್ತ್ರೀ ಗುಡ್ಡಗಳ ಮುಂದೆ ಕುಳಿತಿರುವ ದೃಶ್ಯವಿದೆ. ಸೀರೆಯುಟ್ಟ ಮಹಿಳೆಯ ದೊಡ್ಡದಾದ ಚಿತ್ರವು ಮುಖಪುಟದ ಬಲಗಡೆ ಇದೆ. ಈ ಚಿತ್ರವು ಸ್ಕೇಚ್ ಡ್ರಾಯಿಂಗ್ ಲಕ್ಷಣಹೊಂದಿದೆ. ಚಿತ್ರವನ್ನು ಇನ್ನೂ ಉತ್ತಮವಾಗಿ ಬರೆದು ಅಂದವಾಗಿ ಕಾಣುವಂತೆ ಮಾಡಬಹುದಿತ್ತು. ಈ ಕೃತಿ ಶೀರ್ಷಿಕೆಯ ಅಕ್ಷರ ಶೈಲಿ ಕ್ಯಾಲಿಗ್ರಾಫಿಕ್ ಮಾದರಿಯದ್ದಾಗಿವೆ.

**೮.೩.೧೦. ಹಳ್ಳಿಯ ಹಾಡುಗಳು (೧೯೫೮)**

ಕ್ರಿ.ಶ. ೧೯೫೮ ರಲ್ಲಿ ಮೂಡಿಬಂದ ಈ ಕೃತಿಯನ್ನು ಮಹಾದೇವ ನಾಯಕ್‌ರವರು ರಚಿಸಿದ್ದಾರೆ. ಇದನ್ನು ಮೈಸೂರು ಪ್ರಿಂಟಿಂಗ್ ಪ್ರೆಸ್‌ನಲ್ಲಿ ಅಚ್ಚುಕಟ್ಟಾಗಿ ಮುದ್ರಿಸಲಾಗಿದೆ. ಕಪ್ಪು-ಬಿಳಿ ವರ್ಣದಲ್ಲೆ ಚಿತ್ರಿಸಿರುವ ಈ ಮುಖಪುಟ ತುಂಬಾ ಆಕರ್ಷಕವಾಗಿ ಮೂಡಿ ಬಂದಿದೆ. ಮುಖಪುಟದ ಮೇಲ್ಭಾಗದಲ್ಲಿ ಸ್ಪಷ್ಟವಾಗಿ ಶೀರ್ಷಿಕೆಯನ್ನು ಕಪ್ಪು ಶಾಹಿಯಲ್ಲಿ ಬರೆದಿದೆ. ಕೆಳಗೆ ಲೇಖಕರ ಹೆಸರನ್ನು ಸಣ್ಣದಾಗಿ ಕಾಣುವಂತೆ ಬರೆಯಲಾಗಿದೆ. ಇದರಡಿಯಲ್ಲಿ ಎದ್ದು ಕಾಣುವಂತಿರುವ ಈ ಮುಖಪುಟದ ಅಂದವನ್ನು ಹೆಚ್ಚಿಸಿರುವ ಚಿತ್ರವಿದೆ. ಚಿತ್ರದಲ್ಲಿ ಗ್ರಾಮೀಣ ಮಹಿಳೆ ಕುಳಿತು ಬೀಸುವ ಕಲ್ಲಿನಲ್ಲಿ ಧಾನ್ಯವನ್ನು ಹಾಕಿ ಬೀಸುತ್ತಿರುವ ದೃಶ್ಯವನ್ನು ಕಲಾವಿದ ಚಕಿತಗೊಳಿಸುವಂತೆ ಚಿತ್ರಿಸಿದ್ದಾನೆ. ಸೀರೆ–ಕುಪ್ಪಸ ತೊಟ್ಟು, ಹಣೆಯಲ್ಲಿ ಬೊಟ್ಟನಿಟ್ಟು, ತಲೆಯಲ್ಲಿ ಹೂವು ಮುಡಿದು, ಎಡಗೈಯಲ್ಲಿ ಬೀಸುವ ಕಲ್ಲನ್ನು ಬೀಸುತ್ತಾ, ಬಲಗೈಯಲ್ಲಿ ಮರದಲ್ಲಿರುವ ಧಾನ್ಯ ತೆಗೆದುಕೊಳ್ಳುತ್ತಿರುವ ದೃಶ್ಯ ಓದುಗರನ್ನು ಸೆಳೆಯುವಂತಿದೆ. ಇಲ್ಲಿ ಸಂಗ್ರಾಹಕ. ಸ.ಚ. ಮಹಾದೇವ್ ನಾಯಕ್ ಅವರು ಗ್ರಾಮಗಳಿಗೆ ಭೇಟಿ ನೀಡಿ ಜನಪದ ಹಾಡುಗಳನ್ನು ಸಂಗ್ರಹಿಸಿ ಬರೆದಿದ್ದಾರೆ. ಹಳ್ಳಿಯಲ್ಲಿ ಮಹಿಳೆಯರು ಬೀಸುವಾಗ, ಭತ್ತ ಕುಟ್ಟುವಾಗ ಅಥವಾ ಧಾನ್ಯ ಕುಟ್ಟುವಾಗ ಬೇಸರ ಕಳೆಯಲು ಪದಗಳನ್ನು ಹಾಡುತ್ತಾರೆ. ಇಂತಹ ಪದಗಳ ಸಂಗ್ರಹವೇ ಇಲ್ಲಿ ವ್ಯಕ್ತವಾಗಿದೆ. ಒಟ್ಟಾರೆ ಕಪ್ಪು-ಬಿಳುಪು ವರ್ಣದಲ್ಲೆ ಚಿತ್ರಿಸಿರುವ ಈ ಮುಖಪುಟ ತುಂಬಾ ಉತ್ತಮವಾಗಿ ಇಲ್ಲಿ ಸಂಯೋಜನೆಗೊಂಡು ಆಕರ್ಷಕವಾಗಿ ಕಾಣುವಂತಿದೆ.

**೮.೩.೧೧. ನೀನು ವಿಜ್ಞಾನಿಯಾಗು (೧೯೫೮)**

ಈ ಕೃತಿಯ ಮೂಲ ಲೇಖಕರು ಬೆರ್ಥಾ ಮಾರಿಸ್ ಪಾರ್ಕರ್ ರವರು ಆಂಗ್ಲ ಭಾಷೆಯಲ್ಲಿ ರಚಿಸಿದ್ದನ್ನು ಕನ್ನಡಕ್ಕೆ ಕ್ರಿ.ಶ. ೧೯೫೮ ರಲ್ಲಿ ಲೇಖಕಿ ಉಷಾದೇವಿ ಯವರು ಅನುವಾದಿಸಿದರು. ಈ ಮುಖಪುಟದಲ್ಲಿ ನೀಲಿ, ಹಳದಿ, ಬಿಳಿ, ಕಂದು, ಕಪ್ಪು ಬಣ್ಣಗಳನ್ನು ಬಳಸಿ ಚಿತ್ರಿಸಿದ್ದಾರೆ. ಮುಖಪುಟದ ಸುತ್ತಲೂ ನಾಲ್ಕು ಬದಿಗಳಲ್ಲಿ ವಿಜ್ಞಾನದ ಉಪಕರಣಗಳನ್ನು ಅಂದವಾಗಿ ಬಿಡಿಸಲಾಗಿದೆ. ಮಧ್ಯದಲ್ಲಿ ದ್ವಾರ ಬಾಗಿಲಿನ ಶೈಲಿಯ ಪಟ್ಟಿಯ ಮೇಲೆ ಕಮಾನಿನಲ್ಲಿ ಕೃತಿಯ ಶೀರ್ಷಿಕೆಯನ್ನು ಸ್ಪಷ್ಟವಾಗಿ ಬರೆಯಲಾಗಿದ್ದು, ಕೆಳಗೆ ಮೂಲ ಲೇಖಕರ ಹೆಸರನ್ನು ಕೊಡಲಾಗಿದೆ. ಒಳಗಡೆ ಒಬ್ಬ ಹುಡುಗ ನಿಂತು ಆಕಾಶವನ್ನು ನೋಡು ಎಂಬಂತೆ, ಪಕ್ಕದಲ್ಲಿರುವ ಹುಡುಗಿಗೆ ಸೂಚಿಸುತ್ತಿದ್ದಾನೆ. ಆ ಹುಡುಗಿಯು ದೂರದರ್ಶಕ (Telescope)ವನ್ನು ಹಿಡಿದು ಕಣ್ಣಿನಿಂದ ದೂರದರ್ಶಕದಲ್ಲಿ ಆಕಾಶವನ್ನು ವೀಕ್ಷಿಸುತ್ತಿದ್ದಾಳೆ. ಆಕಾಶದಲ್ಲಿ ಹಳದಿ ವರ್ಣದಲ್ಲಿ ವಿಮಾನ ಹಾರಿ ಹೋಗುತ್ತಿರುವ ಚಿತ್ರವಿದೆ. ಈ ದೃಷ್ಟಾಂತ ಚಿತ್ರ ತುಂಬ ಉತ್ತಮವಾಗಿ

ಕಲಾವಿದ ನಿರ್ಮಿಸಿದ್ದಾರೆ. ಈ ಗ್ರಂಥ ಮಕ್ಕಳಲ್ಲಿ ಉತ್ಸಾಹ ತುಂಬಲು ಸಹಾಯಕವಾಗಿದೆ. ಏನನ್ನಾದರೂ ಹೊಸ ಆವಿಷ್ಕಾರವನ್ನು ಮಾಡುವಂತೆ ಪ್ರೇರೇಪಿಸಲು ಈ ಗ್ರಂಥದ ಸಹಾಯವಿದೆ.

**೮.೩.೧೨. ಆಹಾರ ಮತ್ತು ದೇಹ ಪೋಷಣೆ (೧೯೫೫)**

ಬಿ.ವಿ. ಸುಬ್ಬರಾಯಪ್ಪ ಅವರು ರಚಿಸಿರುವ ಈ ಕೃತಿ ಕ್ರಿ.ಶ. ೧೯೫೫ ರಲ್ಲಿ ಪೀಪಲ್ಸ್ ಬುಕ್ ಹೌಸ್, ಮೈಸೂರು ಇಲ್ಲಿ ಮುದ್ರಣ ಕಂಡಿತು. ಈ ಮುಖಪುಟದ ಮೇಲೆ ಕೆಂಪು ವರ್ಣದಿಂದ ಮಧ್ಯಮ ಅಕ್ಷರಗಳಲ್ಲಿ ಕೃತಿಯ ಶೀರ್ಷಿಕೆ ಬರೆಯಲಾಗಿದೆ. ಕೆಳಗೆ ತಟ್ಟೆಯಲ್ಲಿ ಹಲವು ಹಣ್ಣುಗಳನ್ನು ಜೋಡಿಸಿಟ್ಟಿರುವ ಚಿತ್ರ, ಇದರ ಕೆಳಗೆ ತರಕಾರಿಗಳ ಚಿತ್ರ, ಇದರಡಿಯಲ್ಲಿ ಮೀನು, ಕೋಳಿ, ಮಾಂಸ, ಬ್ರೆಡ್‌ನ ಚಿತ್ರವಿದೆ. ಚಿತ್ರವನ್ನು ಇನ್ನೂ ದೊಡ್ಡದಾಗಿ ಬರೆಯಬಹುದಿತ್ತು. ಜೊತೆಗೆ ಶೀರ್ಷಿಕೆಯನ್ನು ಸಹ ಸ್ಪಷ್ಟವಾಗಿ ಕಾಣುವಂತೆ ಮಾಡಬಹುದಿತ್ತು. ಲೇಖಕರು ಈ ಕೃತಿಯಲ್ಲಿ ಮನುಷ್ಯ ಸೇವಿಸುವ ಆಹಾರಗಳಾದ ತರಕಾರಿ, ಹಣ್ಣುಗಳು, ಮೊಟ್ಟೆ, ಬ್ರೆಡ್, ಚಹಾ, ಕಾಫಿ, ಹಾಲು, ಮೀನು, ಕೋಳಿ, ಮಾಂಸ ಇತರೇ ಆಹಾರಗಳನ್ನು ಹೇಗೆ ಸೇವಿಸಬೇಕು. ಎಷ್ಟು ಪ್ರಮಾಣದಲ್ಲಿ ಸೇವನೆ ಮಾಡಬೇಕು. ದೇಹವನ್ನು ಸಮತೋಲನದಲ್ಲಿಟ್ಟುಕೊಳ್ಳಲು ಹೇಗೆ ಪ್ರಯತ್ನಿಸಬೇಕೆಂಬ ಮಾಹಿತಿಯು ಈ ಗ್ರಂಥದಲ್ಲಿ ಅಡಗಿದೆ. ಈ ಮುಖಪುಟ ಇನ್ನೂ ಹೆಚ್ಚು ಆಕರ್ಷಕವಾಗಿರಬೇಕಿತ್ತು.

**೮.೩.೧೩. ದಕ್ಷಿಣ ಭಾರತದ ದೇವಾಲಯಗಳು (೧೯೫೫)**

ಸಾಹಿತಿಗಳಾದ ಪಿ.ಆರ್. ಶ್ರೀನಿವಾಸನ್ ರವರು ಈ ಕೃತಿಯನ್ನು ಕ್ರಿ.ಶ. ೧೯೫೫ ರಲ್ಲಿ ರಚಿಸಿ, ಮೈಸೂರ ಮುದ್ರಣಾಲಯದಲ್ಲಿ ಅಚ್ಚು ಹಾಕಿಸಿದರು. ಈ ಮುಖಪುಟಕ್ಕೆ ಅರಿಶಿಣ ಬಣ್ಣ, ಕಪ್ಪು, ಬಿಳಿ, ಹಳದಿ ವರ್ಣಗಳನ್ನು ಬಳಸಲಾಗಿದೆ. ಮೇಲ್ಭಾಗದಲ್ಲಿ ಎಡಕ್ಕೆ ಗೋಪುರ ಶೈಲಿಯ ದೇವಾಲಯದ ಚಿತ್ರವನ್ನು ಬಿಡಿಸಲಾಗಿದೆ. ಪಕ್ಕಕ್ಕೆ ಸಾಲು ಕಂಬಗಳನ್ನು ಅದರ ನೆರಳು-ಛಾಯೆ ಬೀಳುವಂತೆ ಮನೋಜ್ಞವಾಗಿ ಬಿಡಿಸಲಾಗಿದೆ. ಕೆಳಗಡೆ ಕೃತಿಯ ಶೀರ್ಷಿಕೆಯನ್ನು ಕಪ್ಪು ಶಾಹಿಯಲ್ಲಿ ದೊಡ್ಡ ಅಕ್ಷರದಲ್ಲಿ ಪ್ರತಿಬಿಂಬಿಸುವಂತೆ ಬರೆಯಲಾಗಿದೆ. ಈ ಶೀರ್ಷಿಕೆಯು ಮೂರು ಹಂತಗಳಿಂದ ಒಂದರ ಕೆಳಗೆ ಒಂದರಂತೆ ಬರುವಂತೆ ಬರೆಯಲಾಗಿದ್ದು, ಇದರಡಿಯಲ್ಲಿ ಚಿಕ್ಕ ಅಕ್ಷರದಲ್ಲಿ ಲೇಖಕರ ಹೆಸರನ್ನು ಬರೆದಿದೆ.

ಈ ಕೃತಿಯಲ್ಲಿ ಲೇಖಕರು ದಕ್ಷಿಣ ಭಾರತವನ್ನಾಳಿದ ಪ್ರಾಚೀನ ವಂಶಗಳಿಂದ ಹಿಡಿದು ಆಧುನಿಕ ೧೯ನೆಯ ಶತಮಾನದ ವರೆಗೆ ಆಳಿದ ಅರಸು ಮನೆತನಗಳು ಅವರು ವಾಸ್ತುಶಿಲ್ಪಕ್ಕೆ ನೀಡಿದ ಕೊಡುಗೆಯನ್ನು ಇಲ್ಲಿ ಚಿತ್ರ ಸಹಿತ ವಿವರಿಸಲಾಗಿದೆ. ಉದಾ: ಶಾತವಾಹನರು, ಕದಂಬರ ಕಾಲದ ಪ್ರಾಚೀನ ದೇವಾಲಯಗಳ ವಾಸ್ತುಶಿಲ್ಪದ ಮಾಹಿತಿ, ಗಂಗರ ಕಾಲದ ಗೊಮ್ಮಟೇಶ್ವರ ವಿಗ್ರಹ, ದೇವಾಲಯಗಳು, ಬಾದಾಮಿ ಚಾಲುಕ್ಯರ ಬಾದಾಮಿ, ಐಹೊಳೆ, ಪಟ್ಟದಕಲ್ಲಿನ ದೇವಾಲಯಗಳು, ತಮಿಳುನಾಡಿನ ಚೋಳ, ಚೇರ, ಪಾಂಡ್ಯರ ಕಾಲದ ವಾಸ್ತುಶಿಲ್ಪ ಶೈಲಿ ಹಾಗೂ ಕೇರಳದ ಅನಂತ ಪದ್ಮನಾಭ ದೇವಾಲಯಗಳು, ವಿಜಯನಗರದ

ಹಂಪೆಯ ಚಿತ್ರಣಗಳು, ವಿರೂಪಾಕ್ಷ ದೇವಾಲಯ, ಕಲ್ಲಿನ ರಥ, ಹಾಜಾರ ರಾಮಸ್ವಾಮಿ ದೇವಾಲಯಗಳಿಗೆ ಸಂಬಂಧಿಸಿದ ಮಾಹಿತಿ ಇದೆ. ಮತ್ತು ಹೊಯ್ಸಳರ ಕಾಲದ ಬೇಲೂರಿನ ಚೆನ್ನಕೇಶವ, ಹಳೇಬೀಡಿನ ಹೊಯ್ಸಳೇಶ್ವರ, ಸೋಮನಾಥಪುರದ ದೇವಾಲಯಗಳ ಚಿತ್ರಣ ಮಾಹಿತಿಯನ್ನು ಒಳಗೊಂಡಿದೆ. ನಂಜನಗೂಡು, ಶ್ರೀರಂಗಪಟ್ಟಣ, ಮೂಡಬಿದರೆ, ಇತರೇ ಪ್ರವಾಸಿ ಪ್ರಸಿದ್ಧ ಸ್ಥಳಗಳಲ್ಲಿರುವ ದೇವಾಲಯಗಳ ಚಿತ್ರಣಗಳು, ಮಾಹಿತಿಗಳು ದಕ್ಷಿಣ ಭಾರತದ ಇತಿಹಾಸ ಪ್ರಸಿದ್ಧ ದೇವಾಲಯಗಳ ಬಗ್ಗೆ ಬೆಳಕು ಚೆಲ್ಲುವ ಒಂದು ಅಮೋಘ ಕೃತಿಯಾಗಿದೆ. ಈ ಮುಖಪುಟದಲ್ಲಿ ದಟ್ಟ ಹಳದಿ, ಕಪ್ಪು ವರ್ಣಗಳಿಂದ ಚಪ್ಪಟೆಯಾಗಿ ಚಿತ್ರಣವನ್ನು ಸುಂದರವಾಗಿ ಚಿತ್ರಿಸಿದ್ದಾರೆ.

**೮.೪. ಆರವತ್ತರ ದಶಕದಲ್ಲಿ ಮೂಡಿ ಬಂದ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಆರವತ್ತರ ದಶಕದ ಈ ಸಮಯದಲ್ಲಿ ಭಾರತದ ದೇಶ ಬಡತನ, ಕೃಷಿ, ಸಾಮಾಜಿಕ, ಆರ್ಥಿಕ, ರಾಜಕೀಯ ಆಯಾಮಗಳಲ್ಲಿ ದೇಶ ಸಂಕಷ್ಟದ ಹಾದಿಯನ್ನೇ ಎದುರಿಸಬೇಕಾಯಿತು. ಕಾರಣ ಭಾರತದ ಗಡಿಭಾಗದ ರಾಷ್ಟ್ರಗಳಾದ ಪಾಕಿಸ್ತಾನ, ಚೀನಾ, ದೇಶಗಳೊಡನೆ ನಮ್ಮ ದೇಶ ಯುದ್ಧದಲ್ಲಿ ತೊಡಗಿ ಅಪಾರ, ಸಾವು, ನೋವು ಆರ್ಥಿಕ ಹಿನ್ನಡೆಯನ್ನು ಅನುಭವಿಸಿದ ದಶಕವಿದು. ಈ ಪರಿಸ್ಥಿತಿ ಕರ್ನಾಟಕದ ಜನತೆಗೂ ಸಹ ಮುಟ್ಟಿತು. ಇಂತಹ ಸಂದರ್ಭದಲ್ಲಿಯೂ ಸಹ ಕನ್ನಡ ಸಾಹಿತ್ಯ ಕೃತಿಗಳು ಪ್ರಕಟಗೊಂಡಿವೆ. ಅವುಗಳಲ್ಲಿ ಪ್ರಮುಖವಾಗಿ ದೇಜಗೌ ಅವರು ರಚಿಸಿರುವ ಪ್ರಸಿದ್ಧ ಕೃತಿ 'ಆಲ್‌ಬರ್ಟ್ ಐನ್‌ಸ್ಟೀನ್', ಕೆ. ವೆಂಕಟರಾಮಪ್ಪ ನವರು ರಚಿಸಿದ 'ಗಣೇಶನ ಮದುವೆ', ಆರ್.ಎಲ್. ನರಸಿಂಹಯ್ಯನವರ 'ಚಂದ್ರಲೋಕ ಯಾತ್ರೆ', ಆಸೂರಿ ಕೆ. ರಾಮಸ್ವಾಮಯ್ಯಂಗಾರ್ ರವರ ಶೀ ಗೋಕರ್ಣ ಮಹಿಮಾದರ್ಶ', ಕೆ.ಆರ್. ಪ್ರಭಾಕರ ರವರ ಅನುವಾದ ಕೃತಿ 'ಜೀವದಾತ ಸೂರ್ಯ' ಹಾಗೂ ಡಾ. ಡಿ.ಎಸ್. ಶಿವಪ್ಪನವರ 'ಜೀವಂತ ಭೂಮಿತ', ಕುವೆಂಪು ರವರ 'ತಪೋ ನಂದನ' ಮತ್ತು ಬಸವರಾಜ ಕಟ್ಟಿಮನಿ ರಚಿಸಿದ ಪ್ರವಾಸ ಕಥನಾವಾದ 'ನಾನು ಕಂಡ ರಶಿಯಾ' ಎಂಬ ಕೃತಿಗಳು. ಆರವತ್ತರ ದಶಕದಲ್ಲಿ ಮೂಡಿಬಂದ ಕನ್ನಡ ಸಾಹಿತ್ಯ ಗ್ರಂಥಮುಖಪುಟ ರಚನೆಯಲ್ಲಿ ಹೊಸ–ಹೊಸ ವಿಭಿನ್ನ ಚಿತ್ರಣಗಳು ಮೂಡಿಬಂದಿರುವದು ಗಮನಿಸಬೇಕಾದ ಅಂಶ.

**೮.೪.೧. ಆಲ್‌ಬರ್ಟ್ ಐನ್‌ಸ್ಟೀನ್ (೧೯೬೨)**

ಕ್ರಿ.ಶ. ೧೯೬೨ ರಲ್ಲಿ ದೇ ಜವರೇಗೌಡರಿಂದ ರಚನೆಗೊಂಡ ಈ ಕೃತಿಯನ್ನು, ಕಲಾವಿದ ಎಸ್.ಕಾಳಪ್ಪ ಅವರಿಂದ ಮುಖಪುಟ ನಿರೂಪಿಸಲ್ಪಟ್ಟದ್ದು ಆಕರ್ಷಕವಾದ ರೇಖಾಭಾವ ಚಿತ್ರಣದೊಂದಿಗೆ ಹೊರ ಹೊಮ್ಮಿದೆ. ಇಲ್ಲಿ ಕಪ್ಪು, ಬಿಳಿ, ಆಕಾಶ ನೀಲಿ ವರ್ಣದಲ್ಲಿ ಈ ಚಿತ್ರವನ್ನು ಮೂಡಿಸಲಾಗಿದೆ. ಮೇಲ್ಭಾಗದಲ್ಲಿ ಕೃತಿಯ ಹೆಸರನ್ನು ಮಧ್ಯಮ ಅಕ್ಷರದಲ್ಲಿ ಕಪ್ಪು ಶಾಹಿಯಲ್ಲಿ ಬರೆಯಲಾಗಿದ್ದು, ಕೆಳಗೆ ಚಿಕ್ಕ ಅಕ್ಷರದಲ್ಲಿ ದೇಜಗೌ ಎಂದು ಬರೆದಿದ್ದಾರೆ. ಇದರ ಕೆಳಗೆ ಪೆನ್ ಮತ್ತು ಶಾಯಿನಿಂದ ಬಿಡಿಸಿದ ಐನ್‌ಸ್ಟೀನ್‌ನ ನಗುಮುಖದ ಭಾವಚಿತ್ರ ಅದರ ಛಾಯೆ, ಬೆಳಕು, ಮೈವಳಿಕೆ ಎಲ್ಲವು ಕಲಾತ್ಮಕತೆಯ ಹಿನ್ನೆಲೆಯಲ್ಲಿ

ಮೂಡಿಬಂದಿದೆ. ಆಕರ್ಷಕವಾಗಿ ಚಿತ್ರ ಮೂಡಿಬಂದರೂ, ಇಲ್ಲಿ ಶೀರ್ಷಿಕೆಯನ್ನು ದಪ್ಪ ಅಕ್ಷರದಲ್ಲಿ ಮೂಡಿಸಬೇಕಿತ್ತು. ಈ ಕೃತಿಯಲ್ಲಿ ಐನ್‌ಸ್ಟೀನ್‌ರ ಜೀವನ, ಅವರು ವಿಜ್ಞಾನ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಜಗತ್‌ವಿಖ್ಯಾತಿಗೊಂಡ ಬಗೆಯನ್ನು ಕೃತಿಯಲ್ಲಿ ತಿಳಿಸಲಾಗಿದೆ.

### ೮.೪.೨. ಗಣೇಶನ ಮದುವೆ (೧೯೬೨)

ಲೇಖಕರಾದ ಕೆ ವೆಂಕಟರಾಮಪ್ಪ ನವರು ಕ್ರಿ.ಶ. ೧೯೬೨ ರಲ್ಲಿ ಈ ಕೃತಿಯನ್ನು ರಚಿಸಿ ಮೈಸೂರು ಮುದ್ರಣಾಲಯದಲ್ಲಿ ಅಚ್ಚು ಹಾಕಿಸಿದ್ದಾರೆ. ಈ ಮುಖಪುಟವು ಕಪ್ಪು, ಬಿಳುಪು, ಕೆಂಪು, ತೆಳು ಹಳದಿ ಬಣ್ಣದಲ್ಲಿ ಮೂಡಿ ಬಂದಿದೆ. ಈ ಮುಖಪುಟಕ್ಕೆ ಉತ್ತಮ ಶೈಲಿಯಲ್ಲಿ ರೇಖಾಚಿತ್ರವನ್ನು ಬಿಡಿಸಿ ಕೊಟ್ಟಿದ್ದಾರೆ. ಇಲ್ಲಿ ಶೀರ್ಷಿಕೆಗೂ ಮುಖಪುಟಕ್ಕೂ ಒಂದಕ್ಕೊಂದು ಸಂಬಂಧವಿದೆ. ಮೇಲಿನಿಂದ ಕೆಳಕ್ಕೆ ಅಂದರೆ ಮುಕ್ಕಾಲು ಭಾಗ ಚಿತ್ರವನ್ನೊಳಗೊಂಡಿದೆ. ಚಿತ್ರದ ಕೊನೆಗೆ ಕೆಂಪು ಬಣ್ಣದ ಅಡ್ಡಗೆರೆ ಎಳೆದು ಕೆಳಗೆ ಶೀರ್ಷಿಕೆ ಹಾಗೂ ಲೇಖಕರ ಹೆಸರನ್ನು ನೀಡಲಾಗಿದೆ. ಶೀರ್ಷಿಕೆಯ ಅಕ್ಷರಗಳು ಸಾಮಾನ್ಯ ಶೈಲಿಯಲ್ಲಿವೆ. ಮೇಲ್ಭಾಗದ ಚಿತ್ರ ಗಮನಿಸಿದರೆ ಕೈಲಾಸವಾಸಿಯಾದ ಪರಮೇಶ್ವರ ಪಾರ್ವತಿ ಮಧ್ಯೆ ತಂದೆ–ತಾಯಿಯರ ನಡುವೆ ಗಣಪತಿ ಕುಳಿತಿರುವುದು ಕಂಡು ಬರುತ್ತದೆ.

ಶಿವ–ಪಾರ್ವತಿ ಗಣೇಶನಿಗೆ ಸುತ್ತಲೂ ಋಷಿ ಮುನಿಗಳು, ನಂದಿ ನಮಸ್ಕರಿಸುತ್ತಿರುವ ಚಿತ್ರ ಅಂದವಾಗಿ ಮೂಡಿಬಂದಿದೆ. ಇಲ್ಲಿ ಶೀರ್ಷಿಕೆಯನ್ನು ನೋಡಿದಾಗ ಒಂದು ಕ್ಷಣ ಆಶ್ಚರ್ಯವಾಗುತ್ತದೆ. ಏಕೆಂದರೇ ಗಣಪತಿ ಚಿರಂಜೀವಿ, ಬ್ರಹ್ಮಚಾರಿ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿಯೇ, ಆದರೇ ಗಣೇಶನಿಗೆ ಮದುವೆಯೇ? ಇದು ನಿಜವೇ? ಇದು ಸಾಧ್ಯವೇ? ಎಂಬ ಪ್ರಶ್ನೆಗಳು ಇದರ ಮುಖಪುಟ ನೋಡಿದವರಿಗೆ ಆಗುವ ಸಾಧ್ಯತೆ ಇದೆ.(ಇದಕ್ಕೆ ಸಂಬಂಧಿಸಿದಂತೆ ಲೇಖಕರು ಈ ಕೃತಿಯಲ್ಲಿ ತಿಳಿಸಿದ್ದಾರೆ.) ಇದು ಆ ಕಾಲದಲ್ಲಿನ ಉತ್ತಮ ಮುಖಪುಟ ಎಂದು ಅಭಿಪ್ರಾಯಪಡಬಹುದು.

### ೮.೪.೩. ಚಂದ್ರಲೋಕ ಯಾತ್ರೆ (೧೯೬೩)

ಆರ್.ಎಲ್. ನರಸಿಂಹಯ್ಯ ನವರು ಈ ಕೃತಿಯನ್ನು ರಚಿಸಿ ಕ್ರಿ.ಶ. ೧೯೬೩ ರಲ್ಲಿ ಮೈಸೂರು ಮುದ್ರಣಾಲಯದಲ್ಲಿ ಮುದ್ರಿಸಿದರು. ಇದರ ಮುಖಪುಟ ಸರಳ, ಆಕರ್ಷಕವಾಗಿ ಮೂಡಿಬಂದಿದೆ. ಮುಖಪುಟದ ಹಿಮ್ಮುಖ ಹೆಚ್ಚಾಗಿ ಕಪ್ಪು ವರ್ಣದಿಂದ ಕೂಡಿದ್ದು, ಮೇಲ್ಭಾಗದ ಎಡಕ್ಕೆ ದೊಡ್ಡ ಅಕ್ಷರಗಳಲ್ಲಿ ಕೆಂಪುವರ್ಣದಲ್ಲಿ ಶೀರ್ಷಿಕೆ ಮೂಡಿಬಂದಿದೆ. ಶೀರ್ಷಿಕೆ ನೋಡುಗರನ್ನು ಆಕರ್ಷಿಸುವಂತಿದೆ. ಎಡಭಾಗದ ಕೆಳಮೂಲೆಯಿಂದ ಬಲ ಮೂಲೆಯವರೆಗೂ ಮೇಲಕ್ಕೆ ಹಾರುತ್ತಿರುವ ರಾಕೆಟ್‌ನ ಚಿತ್ರಣ ಗಮನಿಸಿದರೆ ಚಂದ್ರಲೋಕಕ್ಕೆ ಹಾರುವಂತಿದೆ. ಮುಖಪುಟದ ಕೆಳಗೆ ಬಲಭಾಗಕ್ಕೂ ಅರ್ಧ ಭೂಮಿಯ ಚಿತ್ರದ ಮೇಲೆ ಬರುವಂತೆ ಕೆಳಗೆ ಲೇಖಕರ ಹೆಸರನ್ನು ಸ್ಪಷ್ಟವಾಗಿ ಕಾಣಿಸುವಂತೆ ಬರೆಯಲಾಗಿದೆ. ಇನ್ನುಳಿದಂತೆ ಕಪ್ಪು ರಾತ್ರಿ ಆಕಾಶದಲ್ಲಿ ನಕ್ಷತ್ರಗಳು ಮೂಡುವಂತೆ ಮುಖಪುಟ ರಚಿಸಲಾಗಿದ್ದು, ಈ ಮುಖಪುಟದಲ್ಲಿ ಯಾವುದೆ ಮೈವಳಿಕೆ ಇಲ್ಲ. ಆದರು ಬಾಹ್ಯಕಾಶಕ್ಕೆ ಸಂಬಂಧಿಸಿದ ಕೃತಿಯಾಗಿದ್ದು, ವಿಜ್ಞಾನ ವಿದ್ಯಾರ್ಥಿಗಳನ್ನು

ಸಹಜವಾಗಿ ಸೆಳೆಯುವಂತಿದೆ. ಲೇಖಕರು ಇಲ್ಲಿ ಚಂದ್ರಲೋಕ ಯಾತ್ರೆ ಕೈಗೊಳ್ಳುವ ಗಗನ ಯಾತ್ರಿಗಳು ಉಪಗ್ರಹ ರಾಕೆಟ್‌ನಲ್ಲಿ ಪಯಣಿಸುವ ಪರಿಯನ್ನು ತಿಳಿಸಿದ್ದಾರೆ.

**೮.೪.೪. ಶ್ರೀ ಗೋಕರ್ಣ ಮಹಿಮಾದರ್ಶ (೧೯೬೫)**

ಈ ಮುಖಪುಟದ ಹಿನ್ನೆಲೆ ತಿಳಿ ಹಳದಿ ಮತ್ತು ಸ್ವಲ್ಪ ಹಸಿರು ಮಿಶರ್ಣಹೊಂದಿದ ಬಣ್ಣದಿಂದ ಮೂಡಿದೆ. ಇದರ ಮಧ್ಯೆ ಕೆಂಪು ವರ್ಣದಲ್ಲಿ ಚಿತ್ರಣ ಸರಳವಾಗಿ ಮೂಡಿಬಂದಿದೆ. ಸುತ್ತಲೂ ಕೆಂಪು ವರ್ಣದ ಚಿತ್ತಾರದ ಪಟ್ಟಿಯನ್ನು ಪಟ್ಟಿಯ ಒಳಗೆ ಮತೋಂದು ಪಟ್ಟಿ ಅದರ ಒಳಗೆ ಚಿತ್ರ, ಚಿತ್ರದಲ್ಲಿ ಹಿಂದೆ ಪರ್ವತಗಳ ಸಾಲು ಮುಂದೆ ಪರಶಿವ ಮತ್ತು ಪಾರ್ವತಿ ದೇವಿ ಕುಳಿತಿದ್ದು, ಇವರ ಪಾದಗಳ ಬಳಿ ಓರ್ವ ವ್ಯಕ್ತಿ ನಮಸ್ಕಾರ ಮಾಡುವಂತೆ ಚಿತ್ರ ಬಿಡಿಸಿದ್ದಾರೆ. ಹೊರಗೆ ಮುದ್ರಕರ ವಿಳಾಸ ನೀಡಲಾಗಿದೆ. ಪಟ್ಟಿಯ ಒಳಗೆ ಚಿಕ್ಕ ಅಕ್ಷರದಲ್ಲಿ ಕೃತಿ ಶೀರ್ಷಿಕೆಯನ್ನು ಮತ್ತು ಕೆಳಗೆ ಈ ಗ್ರಂಥದ ಲೇಖಕರಾದ ಆಸೂರಿ, ಕೆ. ರಾಮಸ್ವಾಮಾಯ್ಯಂಗಾರ್ ಅವರು ಹೆಸರು ಮೂಡಿದೆ. ಇದು ಕ್ರಿ.ಶ. ೧೯೬೫ ರಲ್ಲಿ ಮಂಜುನಾಥ ಪ್ರಿಂಟರ್ಸ್‌ನಲ್ಲಿ ಅಚ್ಚು ಹಾಕಿಸಿದೆ.

**೮.೪.೫. ಜೀವದಾತ ಸೂರ್ಯ (೧೯೬೬)**

ಕ್ರಿ.ಶ. ೧೯೬೬ ರಲ್ಲಿ ಈ ಕೃತಿಯನ್ನು ಅನುವಾದ ಮಾಡಿ ರಚಿಸಿದವರು ಕೆ.ಆರ್. ಪ್ರಭಾಕರ ಅವರು. ಇದನ್ನು ಸೌರಾಷ್ಟ್ರ ಮುದ್ರಣಾಲಯದಲ್ಲಿ ಮುದ್ರಿಸಿದರು. ಇಲ್ಲಿ ಹಸಿರು, ಕೆಂಪು, ಕಪ್ಪು, ಬಿಳಿ ಬಣ್ಣಗಳನ್ನು ಬಳಸಿ ಮುಖಪುಟ ರಚಿಸಲಾಗಿದೆ. ಇಲ್ಲಿ ಮೇಲೆ ಹಸಿರು ಪಟ್ಟಿಯೊಳಗೆ ಎಡಕ್ಕೆ ಮುದ್ರಕರ ಚಿಹ್ನೆ ಬೆಲೆ ನೀಡಲಾಗಿದೆ. ಬಲಕ್ಕೆ ಚಿಕ್ಕ ಅಕ್ಷರದಲ್ಲಿ ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಸಹಕಾರದಿಂದ ಪ್ರಕಟಿತ ಎಂದು ಬರೆಯಲಾಗಿದೆ. ಇದರ ಕೆಳಗೆ ದೊಡ್ಡ ಬಿಳಿಯ ಪಟ್ಟಿಯಲ್ಲಿ ಶೀರ್ಷಿಕೆಯನ್ನು ಸ್ಪಷ್ಟ ಅಕ್ಷರಗಳಲ್ಲಿ ಮೂಡಿಸಿದ್ದಾರೆ. ಕೆಳಗೆ ಇದಕ್ಕಿಂತ ದೊಡ್ಡ ಹಸಿರು ಪಟ್ಟಿಯಿಂದ ಇದರ ಎಡಕ್ಕೆ ಕೆಂಪು ಸೂರ್ಯ, ಸೂರ್ಯನ ಕಿರಣವನ್ನು ಈ ಪಟ್ಟಿ ಮತ್ತು ಮೇಲಿನ ಹಸಿರು ಪಟ್ಟಿಗೂ ವಿಸ್ತರಿಸುವಂತೆ ಮುದ್ರಿಸಲಾಗಿದೆ. ಈ ಮುಖಪುಟ ಆಕರ್ಷಿಸುವಂತಿಲ್ಲ. ಇಲ್ಲಿ ವಿನ್ಯಾಸಕಾರ ಉದಯಿಸುತ್ತಿರುವ ಸುಂದರ ಸೂರ್ಯನ ಚಿತ್ರಣವನ್ನು ಸ್ಪಷ್ಟವಾಗಿ ಮೂಡಿಸಿ ಓದುಗರನ್ನು ಸೆಳೆಯುವಂತೆ ಮಾಡಬಹುದಿತ್ತು. ಕೇವಲ ದ್ವಿವರ್ಣದಿಂದ ಮತ್ತು ಚಪ್ಪಟೆಯಾಗಿ ವಿನ್ಯಾಸ ರಚಿಸಿದ್ದು ಅಸಮತೋಲನ ಹೊಂದಿದ ಮುಖಪುಟವೆಂದು ಹೇಳಬಹುದು.

**೮.೪.೬. ಜೀವಂತ ಭೂಮಿ (೧೯೬೭)**

ಈ ಮುಖಪುಟದಲ್ಲಿ ನೀಲಿ, ಕಪ್ಪು, ಕಂದು ಬಣ್ಣಗಳಿಂದ ರಚಿತವಾದ ಚಿತ್ರಣವನ್ನು ಕಾಣಬಹುದು. ಈ ಕೃತಿಯನ್ನು ಲೇಖಕರಾದ ಡಾ. ಡಿ.ಎಸ್. ಶಿವಪ್ಪನವರು ಇದನ್ನು ಆಂಗ್ಲ ಗ್ರಂಥದಿಂದ ಕನ್ನಡಕ್ಕೆ ಕ್ರಿ.ಶ. ೧೯೬೭ ರಲ್ಲಿ ಅನುವಾದಿಸಿ ಶಾರದ ಮುದ್ರಣಾಲಯದಲ್ಲಿ ಮುದ್ರಿಸಿದರು. ಈ ಮುಖಪುಟದಲ್ಲಿ ಮೇಲಿಂದ

ಕೆಳಕ್ಕೆ ಕಪ್ಪು ಗೆರೆಗಳನ್ನು ವಕ್ರವಾಗಿ ಎಳೆಯಲಾಗಿದೆ. ಮೇಲೆ ಭೂಮಿಯನ್ನು ದೊಡ್ಡದಾಗಿ ವೃತ್ತಾಕಾರದಲ್ಲಿ ಕಪ್ಪು ವರ್ಣದಲ್ಲಿ ಬಿಡಿಸಿ ಇದರ ಒಳಗೆ ಕಂದ ವರ್ಣದಲ್ಲಿ ಶೀರ್ಷಿಕೆಯನ್ನು ದೊಡ್ಡದಾಗಿ ಆಕರ್ಷಿಸುವಂತೆ ಬರೆಯಲಾಗಿದ್ದು, ಕೆಳಗೆ ಕಪ್ಪು ಪಟ್ಟಿಯಲ್ಲಿ ಮೂಲ ಲೇಖಕರಾದ ಸೀಟರ್ ಷಾರ್ಬ್‌ರ ಹೆಸರನ್ನು ಕಾಣುವಂತೆ ಬರೆದಿದ್ದಾರೆ. ಈ ಮುಖಪುಟದಲ್ಲಿ ಭೂಮಿಯ ಚಿತ್ರ ಕಪ್ಪು ವರ್ಣದಿಂದ ಮೂಡಿದೆ ಅದರ ಒಳಗಡೆ ಶೀರ್ಷಿಕೆಯು ಸ್ಪಷ್ಟವಾಗಿದೆ.

**೮.೪.೭. ತಪೋನಂದನ (೧೯೬೯)**

ಈ ಕೃತಿಯ ಮುಖಪುಟವು ಕೇವಲ ಅಕ್ಷರದಿಂದ ಕೂಡಿದೆ. ಇದನ್ನು ಕುವೆಂಪು ಅವರು ಕ್ರಿ.ಶ. ೧೯೬೯ ರಲ್ಲಿ ರಚಿಸಿದ್ದು, ಮೈಸೂರು ಮುದ್ರಣಾಲಯದಲ್ಲಿ ಈ ಕೃತಿ ಮುದ್ರಿಸಲಾಯಿತು. ಈ ಮುಖಪುಟದಲ್ಲಿ ಕೇವಲ ಕಪ್ಪು ವರ್ಣಗಳನ್ನು ಗಮನಿಸಬಹುದು. ಮುಖಪುಟ ಅತ್ಯಂತ ಸರಳ ಮಾದರಿಯಲ್ಲಿ ಮೂಡಿದೆ. ಇಲ್ಲಿ ಯಾವುದೇ ಚಿತ್ರ, ವಿನ್ಯಾಸ, ಬಳಕೆ ಇಲ್ಲ. ಮುಖಪುಟದ ಮೇಲೆ ಸರಳವಾದ ಮಧ್ಯಮ ಅಕ್ಷರದಲ್ಲಿ ಕೃತಿಯ ಶೀರ್ಷಿಕೆಯಿದೆ. ಕೆಳಗೆ ಚಿಕ್ಕ ಅಕ್ಷರದಲ್ಲಿ ಕುವೆಂಪು ಅವರ ಹೆಸರಿದೆ. ಮದ್ಯ ಭಾಗವೆಲ್ಲಾ ಖಾಲಿಯಾದ ಹಾಳೆಯನ್ನು ಕಾಣಬಹುದು. ಕೆಳಗೆ ಪ್ರಕಾಶಕರ ಹೆಸರು ಚಿಹ್ನೆ ವಿಳಾಸವಿದೆ.

**೮.೪.೮. ನಾನು ಕಂಡ ರಶಿಯಾ (೧೯೭೦)**

ಬಸವರಾಜ ಕಟ್ಟೀಮನಿ ಅವರು ತಾವು ಕೈಗೊಂಡ ರಷ್ಯಾದ ಪ್ರವಾಸವನ್ನು ಕುರಿತು ಕ್ರಿ.ಶ. ೧೯೭೦ ರಲ್ಲಿ ಒಂದು ಪ್ರವಾಸ ಕಥನವನ್ನು ರಚಿಸಿದ್ದಾರೆ. ಇದನ್ನು ಉಷಾ ಪ್ರೆಸ್‌ನಲ್ಲಿ ಮುದ್ರಿಸಲಾಗಿದೆ. ಈ ಮುಖಪುಟವು ನೀಲಿ, ಕಪ್ಪು, ಕಂದು, ಬೂದು, ಬಿಳಿ, ಹಳದಿ ವರ್ಣದಲ್ಲಿ ಮೂಡಿದೆ. ಮುಖಪುಟದ ಎಡಕ್ಕೆ ಮೇಲಿಂದ ಕೆಳಕ್ಕೆ ನೀಲಿ ಪಟ್ಟಿಯಿದೆ. ಮೇಲೆ ಎಡಕ್ಕೆ ಕೃತಿಯ ಶೀರ್ಷಿಕೆಯನ್ನು ಸ್ಪಷ್ಟವಾಗಿ ಕಪ್ಪು ಶಾಹಿಯಲ್ಲಿ ಮೂಡಿಸಿದ್ದಾರೆ. ಕೆಳಗೆ ಲೇಖಕರ ಹೆಸರನ್ನು ನೀಡಲಾಗಿದೆ. ಎಡಕ್ಕೆ ಕೆಳಗೆ ಕಂಬದ ಚಿತ್ರವಿದೆ. ಬಲಕ್ಕೆ ದೊಡ್ಡದಾದ (ವೇದಿಕೆಯತರ) ಇಬ್ಬರು ರಷ್ಯಾದ ವ್ಯಕ್ತಿಗಳ ಮೂರ್ತಿಗಳು ನಿಂತಿರುವ ವಿಗ್ರಹದ ಚಿತ್ರ ನೋಡಲು ಆಕರ್ಷಕವಾಗಿದೆ. ಕಟ್ಟೀಮನಿಯವರು ೬೦ ರ ದಶಕದಲ್ಲಿ ರಷ್ಯಾ ದೇಶಕ್ಕೆ ಪ್ರವಾಸ ಕೈಗೊಂಡಿದ್ದರು. ಅವರ ಪ್ರತಿಯೊಂದು ನೆನಪುಗಳನ್ನು ಬರಹದ ಮೂಲಕ ಇಲ್ಲಿ ತಿಳಿಸಿದ್ದಾರೆ.

**೮.೫. ಎಪ್ಪತ್ತರ ದಶಕದಲ್ಲಿ ಮೂಡಿ ಬಂದ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಈ ದಶಕದಲ್ಲಿ ಅಷ್ಟೇನೂ ಬದಲಾವಣೆ ಕಾಣದೇ ಯಥಾ ಪ್ರಕಾರ ೬೦ ರ ದಶಕದ ಹಾದಿಯಲ್ಲಿಯೇ ಕನ್ನಡ ಸಾಹಿತ್ಯ ಕೃತಿಗಳ ಮುಖಪುಟ ಮೂಡಿ ಬಂದವು. ಅವುಗಳಲ್ಲಿ ಹಲವು ಬೀಚಿ, ಕುವೆಂಪು, ಜಿ.ಪಿ. ರಾಜರತ್ನಂ, ಡಾ. ಅನುಪಮಾ ನಿರಂಜನ್‌ರವರಂತಹ ಮಹಾನ್ ಸಾಹಿತಿಗಳಿಂದ ಕೃತಿಗಳು ಹೊರ ಹೊಮ್ಮಿದವು. ಅವುಗಳಲ್ಲಿ ಪ್ರಮುಖವಾಗಿ ಎಂ. ವೆಂಕಟರಾವ್ ಅವರಿಂದ ಮುಂದ್ರಣ ಕಂಡ 'ಉದಯರಾಗ', ಪ್ರಸಿದ್ಧ ಹಾಸ್ಯ ಸಾಹಿತಿಯಾದ ಬೀಚಿಯವರಿಂದ ಒಡ ಮೂಡಿದ ಕೃತಿ 'ಅಂದನಾ ತಿಂಮ' ಎಸ್.

ಅನಂತನಾರಾಯಣರವರ 'ಮುರುಕು ಮಂಟಪ', ರಾಷ್ಟ್ರಕವಿ ಎಂದೇ ಖ್ಯಾತನಾಮರಾದ ಕುವೆಂಪುರವರ 'ಕಿಂಕಿಣಿ' ಎಂಬ ಕೃತಿ, ಮಕ್ಕಳ ಪ್ರೀತಿಯ ಕವಿ ಎಂದು ಹೆಸರಾದ ಜಿ.ಪಿ. ರಾಜರತ್ನಂ ರವರು ರಚಿಸಿದ ಐತಿಹಾಸಿಕ ಗ್ರಂಥ 'ವೀರ ಮಾರ್ತಂಡ ಚಾವುಂಡರಾಯ' ಹಾಗೂ ಅಮೇರಿಕಾ ರಾಜ್ಯ ಇಲಾಖೆಯ 'ಜನತಾ ಸರ್ಕಾರ' ಅಲ್ಲಿನ ರಾಜಕೀಯದ ಕೈಗನ್ನಡಿಯಂತೆ ಮೂಡಿಬಂದಿದೆ ಮತ್ತು ಡಾ. ಅನುಪಮ ನಿರಂಜನ್ ರವರ 'ಆರೋಗ್ಯ ಭಾಗ್ಯಕ್ಕೆ ವ್ಯಾಯಾಮ' ಎಂಬ ಕೃತಿಗಳು ಮೂಡಿ ಬಂದವು.

**೮.೫.೧. ಉದಯರಾಗ (೧೯೭೧)**

ಎಂ.ವೆಂಕಟರಾವ್ ಪ್ರಕಾಶನದಿಂದ ಕ್ರಿ.ಶ. ೧೯೭೧ ರಲ್ಲಿ ಈ ಕೃತಿ ಪ್ರಕಟಗೊಂಡಿದೆ. ಈ ಮುಖಪುಟವು ಕೆಂಪು, ಬಿಳಿ, ನೀಲಿ ವರ್ಣಗಳಿಂದ ಮೂಡಿದೆ. ಮೇಲ್ಭಾಗದಲ್ಲಿ ಕೆಂಪು ಪಟ್ಟಿಯ ಒಳಗೆ ಬಿಳಿ ವರ್ಣದಿಂದ ದಪ್ಪ ಅಕ್ಷರಗಳಲ್ಲಿ ಕೃತಿಯ ಶೀರ್ಷಿಕೆಯನ್ನು ನೀಡಲಾಗಿದೆ. ಈ ಶೀರ್ಷಿಕೆ ಕೆಳಗೆ ಮತ್ತು ಮುಖಪುಟ ಮಧ್ಯದಲ್ಲಿ ಮಹಿಳೆಯೊರ್ವಳು ಉದಯರಾಗ ನುಡಿಸುತ್ತಿರ ಚಿತ್ರವಿದೆ. ಇದು ಎಪ್ಪತ್ತರ ದಶಕದಲ್ಲಿನ ನಾಟಕ/ಸಿನಿಮಾದ ಭಿತ್ತಿಪತ್ರ ಮಾದರಿಹೊಂದಿದೆ. ಗುಡ್ಡಗಳ ಮಧ್ಯದಿಂದ ಸೂರ್ಯ ಉದಯಿಸುತ್ತಿರುವ ಚಿತ್ರ ಸುತ್ತ ತೆಂಗಿನ ಮರಗಳಿವೆ, ಪಕ್ಕದಲ್ಲಿ ದೇವಾಲಯಗಳ ಚಿತ್ರ ನೀರಿನಲ್ಲಿ ಕಮಲಗಳು ಅರಳಿರುವ ಚಿತ್ರ ಸೂರ್ಯನಿಗೆ ಆಹ್ವಾನ ನೀಡುವಂತಿದೆ. ಈ ಮುಖಪುಟದಲ್ಲಿ ಶೀರ್ಷಿಕೆ ಹಾಗೂ ಚಿತ್ರ ಸೊಗಸಾಗಿ ಮೂಡಿ ಬಂದಿದೆ ಅಲ್ಲದೆ ಶೀರ್ಷಿಕೆ ಚಿತ್ರಕ್ಕೂ ಅವಿನಾಭಾವ ಸಂಬಂಧವಿದೆ ಎಂಬುದು ಈ ಕೃತಿಯ ಮುಖಪುಟದಲ್ಲಿ ಕಾಣಬಹುದು.

**೮.೫.೨. ಮುರುಕು ಮಂಟಪ (೧೯೭೨)**

ಕ್ರಿ.ಶ. ೧೯೭೨ ರಲ್ಲಿ ಪೂರ್ಣಿಮ ಎಂಟರ್‌ಪ್ರೈಸಸ್‌ನಲ್ಲಿ ಮುದ್ರಣಗೊಂಡ ಈ ಕೃತಿಯನ್ನು ಎಸ್. ಅನಂತ ನಾರಾಯಣರವರು ರಚಿಸಿದ್ದಾರೆ. ಈ ಮುಖಪುಟವು ಆಕರ್ಷಿಸುವಂತೆ ಹಳದಿ, ಕೇಸರಿ, ಕಪ್ಪು, ಬಿಳಿ ವರ್ಣದಲ್ಲಿ ಮೂಡಿಬಂದಿದೆ. ಮೇಲ್ಭಾಗದಲ್ಲಿ ಕೃತಿಯ ಶೀರ್ಷಿಕೆಯನ್ನು ಎರಡು ವರ್ಣಗಳಲ್ಲಿ ಆಕರ್ಷಕವಾಗಿ ಬರೆದಿದ್ದಾರೆ. ಮಧ್ಯದಲ್ಲಿ ಪಾಳು ಬಿದ್ದ ಕಂಬ, ಮಂಟಪದ ಚಿತ್ರಣದ ಜೊತೆ ಓರ್ವ ವ್ಯಕ್ತಿ ನಿರಾಶೆಯಿಂದ ಕೈಕಟ್ಟಿ ನಿಂತಿರುವ ದೃಶ್ಯವು ಚೆನ್ನಾಗಿದೆ. ಇಲ್ಲಿನ ರೇಖಾಚಿತ್ರವು ಅರೆಛಾಯೆಯಿಂದಕೊಡಿದ್ದು ಕೆಳಗೆ ಲೇಖಕರ ಹೆಸರನ್ನು ಬರೆಯಲಾಗಿದೆ. ಶೀರ್ಷಿಕೆ ಚೆನ್ನಾಗಿ ಮೂಡಿಬಂದಿದೆ. ಈ ಕೃತಿಯಲ್ಲಿ ವ್ಯಕ್ತಿ ನೊಂದಾಗ ಆತನ ವೇದನೆ ಹೇಗಿರುತ್ತದೆ? ಮುರುಕು ಮಂಪಟ ಅಥವಾ ಹಾಳುಬಿದ್ದ ಮನೆಯಂತಾಗಿರುತ್ತದೆ ಎಂಬುದನ್ನು ಅಭಿವ್ಯಕ್ತಗೊಳಿಸಿದ್ದಾರೆ.

**೮.೫.೩. ಕಿಂಕಿಣಿ (೧೯೭೪)**

ರಾಷ್ಟ್ರಕವಿ ಕುವೆಂಪುರವರು ರಚಿಸಿದ ಈ ಸಾಹಿತ್ಯ ಕ್ರಿ.ಶ. ೧೯೭೪ ರಲ್ಲಿ ವೆಸ್ಲಿ ಪ್ರೆಸ್, ಮೈಸೂರು ಮುದ್ರಣಾಲಯದಲ್ಲಿ ಮುದ್ರಣಗೊಂಡಿತು. ಈ ಮುಖಪುಟವು ಗುಲಾಬಿ, ಕಪ್ಪು ವರ್ಣದಲ್ಲಿ ಮೂಡಿ

ಬಂದಿದೆ. ಮೇಲ್ಭಾಗದಲ್ಲಿ ಕಪ್ಪು ವರ್ಣದಲ್ಲಿ ಮಧ್ಯಮ ಅಕ್ಷರದಲ್ಲಿ ಶೀರ್ಷಿಕೆಯನ್ನು ಕೊಡಲಾಗಿದೆ. ಕೆಳಗೆ ಚಿಕ್ಕ ಅಕ್ಷರದಲ್ಲಿ ಕುವೆಂಪುರವರ ಹೆಸರನ್ನು ಕೊಟ್ಟಿದ್ದಾರೆ. ಮಧ್ಯದಲ್ಲಿ ಎರಡು ಪಕ್ಷಿಗಳು ಒಂದಕ್ಕೊಂದು ಮುಖ ನೋಡುತ್ತಾ ಹಾರುತ್ತಿರುವ ಚಿತ್ರವು ಕಪ್ಪು ವರ್ಣದಲ್ಲಿ ಮೂಡಿದೆ. ಕೆಳಗೆ ಪ್ರಕಾಶಕರ ವಿಳಾಸ ನೀಡಲಾಗಿದೆ. ಇಲ್ಲಿ ಶೀರ್ಷಿಕೆ ಆಕರ್ಷಕವಾಗಿ ದೊಡ್ಡದಾಗಿ ನೋಡುಗರನ್ನು ಸೆಳೆಯುವಂತಿಲ್ಲ. ಈ ಮುಖಪುಟದ ಹಿಂಭಾಗ ಸಂಪೂರ್ಣ ಗುಲಾಬಿ ಬಣ್ಣದಿಂದ ಆವೃತಗೊಂಡಿದೆ. ಈ ಮುಖಪುಟ ಸರಳವಾಗಿದೆ ಇದನ್ನು ಇನ್ನೂ ಹೆಚ್ಚಾಗಿ ಆಕರ್ಷಿಸುವಂತೆ ಮುದ್ರಿಸಬಹುದಿತ್ತು.

**೮.೫.೪. ವೀರ ಮಾರ್ತಾಂಡ ಚಾವುಂಡರಾಯ (೧೯೭೪)**

ಈ ಕೃತಿಯನ್ನು ಪ್ರಸಿದ್ಧ ಸಾಹಿತಿಗಳಾದ ಜಿ.ಪಿ. ರಾಜರತ್ನಂ ರವರು ಕ್ರಿ.ಶ. ೧೯೭೪ ರಲ್ಲಿ ಇದನ್ನು ರಚಿಸಿದರು. ಇದರ ಮುಖಪುಟ ಸರಳವಾಗಿದೆ. ಹೆಚ್ಚು ಆಕರ್ಷಕವಾಗಿಲ್ಲ. ಈ ಮುಖಪುಟವನ್ನು ಕೆಂಪು, ಹಸಿರು ವರ್ಣದಿಂದ ಮುದ್ರಿಸಲಾಗಿದೆ. ಮುಖಪುಟದ ಹಿಮ್ಮುಖದ ಅಂದವನ್ನು ಹಸಿರು ಬಣ್ಣದಿಂದ ಪೂರ್ತಿಗೊಳಿಸಿದ್ದಾರೆ. ಅದರ ಮೇಲೆ ಶೀರ್ಷಿಕೆ, ಚಿತ್ರ ಕೆಂಪು ಬಣ್ಣದಲ್ಲಿ ಮೂಡಿಸಿದ್ದಾರೆ. ಮುಖಪುಟದ ಮೇಲ್ಭಾಗದಲ್ಲಿ ಮಧ್ಯಮ ಅಕ್ಷರ ಶೈಲಿಯಲ್ಲಿ ಶೀರ್ಷಿಕೆಯನ್ನು ಕಾಣುವಂತೆ ಬರೆಯಲಾಗಿದೆ. ಕೆಳಗೆ ಜೈನ ಶಾಸನಗಳು, ಜೈನ ಕಾವ್ಯಗಳ ಆಧಾರದಿಂದ ರಚಿಸಿದ ಶಬ್ದ ಚಿತ್ರ ೧೨-೧೧-೧೯೫೬ ರಂದು ಬೆಂಗಳೂರು ಆಕಾಶವಾಣಿಯಿಂದ ಪ್ರಸಾರವಾಯಿತು ಎಂದು ಬರೆಯಲಾಗಿದೆ. ಇದರ ಕೆಳಗೆ ಕೆಂಪು ಚೌಕದ ಪಟ್ಟಿಯೊಳಗೆ ಓರ್ವ ಜೈನ ಯತಿಯು ಆಸನದ ಮೇಲೆ ಕುಳಿತು ಚಾವುಂಡರಾಯನಿಗೆ ಜೈನ ಧರ್ಮದ ಸಾರಗಳನ್ನು ಬೋಧಿಸುತ್ತಿರುವ ಚಿತ್ರ ಸರಳವಾಗಿ ಬಿಡಿಸಲಾಗಿದೆ. ಇವರ ಮಧ್ಯೆ ಗೊಮ್ಮಟ ಸಾರ ಎಂದು ಬರೆಯಲಾಗಿದೆ. ಪಟ್ಟಿಯ ಕೆಳಗೆ ರಾಜರತ್ನಂರ ಹೆಸರಿದೆ. ಇದರಡಿಯಲ್ಲಿ ಮುದ್ರಣಾಲಯದ ವಿಳಾಸ, ಕೃತಿಯ ಬೆಲೆಯನ್ನು ಸಹ ಮುದ್ರಿಸಲಾಗಿದೆ. ಈ ಗ್ರಂಥದಲ್ಲಿ ಲೇಖಕರು ಗೊಮ್ಮಟೇಶ್ವರನ ನೀತಿ ಕತೆ, ಸಾಹಸ ಪರಾಕ್ರಮ, ತ್ಯಾಗ, ಬಲಿದಾನ, ಜೈನ ಧರ್ಮದ ವಿಚಾರಧಾರೆಗಳು, ಶ್ರವಣಬೆಳಗೊಳದ ಬಗ್ಗೆ ವಿವರಿಸಿದ್ದಾರೆ.

**೮.೫.೫.. ಜನತಾ ಸರ್ಕಾರ (೧೯೭೬)**

ಈ ಕೃತಿಯನ್ನು ಅಮೇರಿಕ ರಾಜ್ಯ ಇಲಾಖೆಯು ಆಂಗ್ಲ ಭಾಷೆಯಲ್ಲಿ ಬಿಡುಗಡೆಗೊಳಿಸಿತು. ಅದನ್ನು ಕನ್ನಡಕ್ಕೆ ಇಲ್ಲಿ ಅನುವಾದಿಸಿ ಓರಿಯಂಟ್ ಪವರ್ ಪ್ರೆಸ್‌ನಲ್ಲಿ ಮುದ್ರಿಸಲಾಗಿದೆ. ಇದು ಕ್ರಿ.ಶ. ೧೯೭೬ ರಲ್ಲಿ ಕನ್ನಡ ಭಾಷೆಯಲ್ಲಿ ಮೂಡಿದೆ. ಈ ಮುಖಪುಟದಲ್ಲಿ ಕಪು, ಬಿಳಿ, ಹಸಿರು ವರ್ಣಗಳನ್ನು ಕಾಣಬಹುದು. ಈ ಮುಖಪುಟದ ಮೇಲ್ಭಾಗದಲ್ಲಿ ಕಪ್ಪು ಪಟ್ಟಿಯ ಒಳಗಡೆ ಅಮೆರಿಕಾದ ಸಂಸತ್ತಿನಲ್ಲಿ ಜನ ಪ್ರತಿನಿಧಿಗಳು ಕುಳಿತಿರುವುದನ್ನು ಗಮನಿಸಬಹುದು. ಮಧ್ಯದಲ್ಲಿ ಬಿಳಿಯ ಪಟ್ಟಿಯಲ್ಲಿ ಹಸಿರು ವರ್ಣದ ನೆರಳಿನ ಆಕಾರದ ಪ್ರಜೆಗಳು ಮಧ್ಯೆ ಮತಪೆಟ್ಟಿಗೆಯಿದೆ. ಎರಡು ಬದಿಯಲ್ಲಿ ನಡೆದು ಬಂದ ಪ್ರಜೆಗಳು ಮತದಾನ ಮಾಡುತ್ತಿರುವ ದೃಶ್ಯ ಕಾಣಬಹುದು. ಅರ್ಧದಿಂದ ಕೆಳಕ್ಕೆ ಕಪ್ಪು ವರ್ಣದಲ್ಲಿ ದೊಡ್ಡ ಅಕ್ಷರ ಶೈಲಿಯಲ್ಲಿ ಕೃತಿಯ ಶೀರ್ಷಿಕೆಯನ್ನು ಸ್ಪಷ್ಟ ಆಕರ್ಷಕವಾಗಿ ಮುದ್ರಿಸಲಾಗಿದೆ. ಈ ಕೃತಿಯಲ್ಲಿ ಅಮೇರಿಕಾದ

ಪ್ರಜಾಪ್ರಭುತ್ವ ಸರ್ಕಾರ, ಅಲ್ಲಿರುವ ಎರಡು ಪಕ್ಷಗಳು, ಅಧ್ಯಕ್ಷೀಯ ಪದ್ಧತಿ ಅಭಿವೃದ್ಧಿ ಮುಂತಾದ ವಿಷಯಗಳ ಸಾರವನ್ನು ಒಳಗೊಂಡಿದೆ.

### ೮.೫.೬. ಆರೋಗ್ಯ ಭಾಗ್ಯಕ್ಕೆ ವ್ಯಾಯಾಮ (೧೯೮೦)

ಡಾ. ಅನುಪಮ ನಿರಂಜನವರು ಕ್ರಿ.ಶ. ೧೯೮೦ ರಲ್ಲಿ ಈ ಕೃತಿಯನ್ನು ಬರೆದು, ಮೈಸೂರು ಪ್ರಿಂಟಿಂಗ್‌ನಲ್ಲಿ ಮುದ್ರಿಸಿ ಲೋಕಾರ್ಪಣೆಗೊಳಿಸಿದರು. ಈ ಮುಖಪುಟವು ಸರಳತೆಯಿಂದ ಆಕರ್ಷಿಸುತ್ತದೆ. ಇಲ್ಲಿ ಗುಲಾಬಿ, ಬಿಳಿ, ಕಪ್ಪು ವರ್ಣ ಕಾಣಬಹುದು. ಮುಖಪುಟದ ಎಡ ಮತ್ತು ಬಲಗಳಲ್ಲಿ ಗುಲಾಬಿ ವರ್ಣದ ಚಿಕ್ಕ ಪಟ್ಟಿಗಳು ಮೇಲಿಂದ ಕೆಳಕ್ಕೆ ಇವೆ. ಎಡಭಾಗದ ಪಟ್ಟಿಯಲ್ಲಿ ಸಹ ಇದನ್ನೇ ಬರೆಯಲಾಗಿದೆ. ಮಧ್ಯೆ ಮೇಲಿನಿಂದ ಕೆಳಕ್ಕೆ ಅಗಲವಾದ ಬಿಳಿಯ ಪಟ್ಟಿಯಿದೆ. ಪಟ್ಟಿಯ ಒಳಗೆ ಶೀರ್ಷಿಕೆ, ಚಿತ್ರಗಳನ್ನು ಬರೆಯಲಾಗಿದೆ. ಮುಖಪುಟದ ಮೇಲೆ ಅಡ್ಡಗೆರೆ ಎಳೆದಿದ್ದು, ಗೆರೆಯ ಮೇಲೆ ಲೇಖಕಿಯಾದ ಅನುಪಮ ನಿರಂಜನರ ಹೆಸರಿದೆ. ಗೆರೆಯ ಕೆಳಗೆ ಚಿಕ್ಕ ಅಕ್ಷರಗಳಲ್ಲಿ ಮೂಡಿಸಬಹುದಿತ್ತು. ಕೆಳಗಡೆ ಅಡ್ಡಗೆರೆ ಎಳೆದಿದ್ದು ಇದರ ಕೆಳಗೆ ಮುದ್ರಕರ ವಿಳಾಸವನ್ನು ನೀಡಲಾಗಿದೆ. ಮುಖಪುಟದ ಮಧ್ಯಭಾಗದಲ್ಲಿ ಓರ್ವ ಮಹಿಳೆ ಯೋಗಾಸನದ ಮಾದರಿಯ ಭಂಗಿಯಲ್ಲಿ ಕಾಲುಗಳ ಬಳಿ ಕೈ ಬರುವಂತೆ ಸೊಂಟವನ್ನು ಬಗ್ಗಿಸಿರುವ ಭಂಗಿ ಆಕರ್ಷಿಸುವಂತಿದೆ. ಇದರಲ್ಲಿ ವ್ಯಾಯಾಮ ಭಂಗಿಗಳ ಚಿತ್ರಣ, ಮಾಡುವ ಬಗೆ, ಅದರಿಂದ ಆಗುವ ಉಪಯೋಗ ತಿಳಿಸಿದ್ದಾರೆ. ಡಾ. ಅನುಪಮ ನಿರಂಜನವರು ಇದೇ ಮಾದರಿಯ ಮುಖಪುಟಗಳನ್ನೇ ತನ್ನೆಲ್ಲಾ ಕೃತಿಗಳಿಗೆ ಬಳಸಿಕೊಂಡಿರುವುದು ವಿಶೇಷ.

### ೮.೬. ಎಂಬತ್ತರ ದಶಕದಲ್ಲಿ ಮೂಡಿ ಬಂದ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ

ಕನ್ನಡ ಸಾಹಿತ್ಯದಲ್ಲಿ ನಾಟಕ, ಕಾವ್ಯಗಳು ಈ ದಶಕದಲ್ಲಿ ಅಂದರೆ ೮೦ ರ ದಶಕದಲ್ಲಿ ಹೆಚ್ಚಾಗಿ ಮೂಡಿಬಂದವು. ಕರ್ನಾಟಕ ರಾಜ್ಯದಲ್ಲಿ/ ಕನ್ನಡ ಸಾಹಿತ್ಯದಲ್ಲಿ ಹೆಚ್ಚು ಹೆಚ್ಚು ಕೃತಿಗಳು ಮುದ್ರಣಗೊಂಡವು. ಈ ದಶಕದಲ್ಲಿ ಕರ್ನಾಟಕ ರಾಜ್ಯದಲಿ ಮುಖಪುಟದ ವಿನ್ಯಾಸಗಾರರು/ಮುದ್ರಣಗಾರರು ಹಲವು ವರ್ಣಗಳನ್ನು ಬಳಸಿ ಮುಖಪುಟವನ್ನು ಅಂದವಾಗಿ/ಸೊಗಸಾಗಿ ಮೂಡುವಂತೆ ಪ್ರಯತ್ನ ಮಾಡಿದರು. ಸಾಹಿತ್ಯ ಲೋಕ, ಸಾಹಿತಿಗಳು ಹೆಚ್ಚು ಬೆಳೆದು ಕರ್ನಾಟಕದಾದ್ಯಂತ ಮನೆಮಾತಾಗಿದ್ದಾರೆ. ಅವರಲ್ಲಿ ಪ್ರಮುಖರಾದ ಕುವೆಂಪು, ದ.ರಾ. ಬೇಂದ್ರೆ, ಶಿವರಾಮ ಕಾರಂತರು, ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರಂತಹ ವ್ಯಕ್ತಿಗಳು ಕೇಂದ್ರ ಸರ್ಕಾರ ನೀಡುವ ಅತ್ಯುನ್ನತ 'ಜ್ಞಾನಪೀಠ ಪ್ರಶಸ್ತಿ' ಯನ್ನು ಕನ್ನಡ ಭಾಷೆಗೆ ತಂದುಕೊಟ್ಟು ಕನ್ನಡ ಭಾಷೆಯನ್ನು ಎತ್ತಿ ತೋರಿಸಿದರು. ಹಲವು ಹೊಸಬರಿಗೆ ಸಾಹಿತ್ಯದಲ್ಲಿ ಆಸಕ್ತಿ ಮೂಡುವಂತೆ ಮಾಡಿದರು. ಈ ದಶಕದಲ್ಲಿ ಮೂಡಿ ಬಂದ ಸಾಹಿತ್ಯ ಕೃತಿಗಳಾವುವೆಂದರೆ, ಪ್ರೊ. ಬಿ.ಜಿ.ಎಲ್. ಸ್ವಾಮಿಯವರ 'ಫಲಶೃತಿ' ಕಾಕೆಮಾನಿ ಬರೆದ 'ಬೇಟೆ ನೆನಪು' ಹಾಗೂ ಸುಧಾಮೂರ್ತಿಯವರು ರಚಿಸಿರುವ 'ಮಹಾಶ್ವೇತೆ' ಕನ್ನಡ ಸಾಹಿತ್ಯ ಲೋಕದ ಓರ್ವ ದಿಗ್ಗಜರಾದ ರಾಷ್ಟ್ರಕವಿ ಎಂದೇ ಖ್ಯಾತನಾಮರಾದ ಡಾ.ಜಿ.ಎಸ್.ಶಿವರುದ್ರಪ್ಪನವರ ಪ್ರಸಿದ್ಧ ಕೃತಿಗಳಾದ 'ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ' ಮತ್ತೊಂದು ಜನಪ್ರಸಿದ್ಧ ಕೃತಿಯಾದ

'ಕನ್ನಡ ಸಾಹಿತ್ಯದಲ್ಲಿ ಕಾಳಿದಾಸ'ಎಂಬ ಕೃತಿಗಳು ಈ ದಶಕದಲ್ಲಿ ಮೂಡಿಬಂದು ಜನ ಮನ್ನಣೆ ಗಳಿಸಿದವು. ಇವುಗಳ ಮುಖಪುಟದಲ್ಲೂ ಸಹ ವಿಭಿನ್ನತೆಯಿಂದ ಕೂಡಿದ್ದರಿಂದ ನೋಡುಗರ, ಓದುಗರಲ್ಲಿ ಸಂಚಲನವುಂಟು ಮಾಡಿದವು.

**೮.೬.೧. ಫಲಶೃತಿ (೧೯೮೪)**

ಈ ಕೃತಿಯು ಕ್ರಿ.ಶ. ೧೯೮೪ರಲ್ಲಿ ಸಾಹಿತಿಗಳಾದ ಪ್ರೊ. ಬಿ.ಜಿ.ಎಲ್. ಸ್ವಾಮಿಯವರಿಂದ ರಚನೆಗೊಂಡಿತು. ಇದರ ಮುಖಪುಟ ಹೆಚ್ಚು ಆಕರ್ಷಕವಾಗಿ ಮೂಡಿ ಬಂದಿದೆ. ಇಲ್ಲಿ ಹಲವು ವರ್ಣಗಳ ಸಮ್ಮಿಲನವಾಗಿದೆ. ಮುಖಪುಟ ಚಿತ್ರದ ಹಿಂಭಾಗ ಸಂಪೂರ್ಣ ಗುಲಾಬಿ ವರ್ಣದಿಂದಾವೃತವಾಗಿದೆ. ಉಳಿದಂತೆ ಕೆಂಪು, ಹಸಿರು, ಹಳದಿ, ಅರಿಶಿಣ, ಕಪ್ಪು, ಬಿಳಿ, ನೀಲಿ ವರ್ಣಗಳು ಸೇರಿ ಚಿತ್ರ ಶೀರ್ಷಿಕೆ ಮೂಡಿಬಂದಿದೆ. ಮೇಲ್ಭಾಗ ದೊಡ್ಡ ಅಕ್ಷರಗಳಲ್ಲಿ ಆಕರ್ಷಕವಾಗಿ ಕೃತಿಯ ಶೀರ್ಷಿಕೆ ಎಲ್ಲರ ಗಮನ ತನ್ನೆಡೆ ಸೆಳೆಯುವಂತೆ ಮಾಡಿದೆ. ಕೆಳಗೆ ಸಣ್ಣ ಅಕ್ಷರಗಳಲ್ಲಿ ಲೇಖಕರ ಹೆಸರನ್ನು ನೀಡಲಾಗಿದೆ. ಇದರಡಿಯಲ್ಲಿ ಕೆಳಗಿನವರೆಗೂ ಚಿತ್ರಣ ಮೂಡಿ ಬಂದಿದೆ. ಇಲ್ಲಿ ಕಲ್ಲಂಗಡಿ, ಕರಬೂಜಾ, ದ್ರಾಕ್ಷಿಯಂತಹ ಹಣ್ಣಿನ ಚಿತ್ರ, ಬೆಂಡೆಕಾಯಿ, ಬಟಾಣಿ, ಈರುಳ್ಳಿ, ಎಲೆಕೋಸು, ಹೂಕೋಸು, ಸೊಪ್ಪುಗಳ ಚಿತ್ರ, ಗುಲಾಬಿ ಹೂವು, ಸೂರ್ಯಕಾಂತಿ, ದಾಸವಾಳದ ಹೂವಿನ ಚಿತ್ರಣವನ್ನು ಇಲ್ಲಿ ವಿನ್ಯಾಸಕಾರ ಶೀರ್ಷಿಕೆಗೆ ಅನುಗುಣವಾಗಿ ಮುಖಪುಟವನ್ನು ಆಕರ್ಷಿಸುವಂತೆ ಚಿತ್ರಿಸಿದ್ದಾರೆ.

**೮.೬.೨. ಬೇಟೆ ನೆನಪು (೧೯೮೪)**

ಲೇಖಕಿಯಾದ ಕಾಕೆಯಾಗಿ ಯವರು ಕ್ರಿ.ಶ. ೧೯೮೪ ರಲ್ಲಿ ಈ ಗ್ರಂಥವನ್ನು ಬರೆದು, ಪ್ರಮೀಳಾ ಮುದ್ರಣಾಲಯದಲ್ಲಿ ಈ ಕೃತಿಯನ್ನು ಮುದ್ರಿಸಿದರು. ಇಲ್ಲಿ ಮೇಲ್ಭಾಗದಲ್ಲಿ ಓರ್ವ ವ್ಯಕ್ತಿಯ ತಲೆಯ ಚಿತ್ರಣ ಎಡಭಾಗದಲ್ಲಿದೆ. ಗಡ್ಡ, ಮೀಸೆ, ಬಿಟ್ಟು ಕನ್ನಡಕ ಧರಿಸಿರುವ ತಲೆಯ ತುಂಬಾ ಕೂದಲುಗಳು ತಲೆಯ ಮಧ್ಯಭಾಗದಿಂದ ವೃತ್ತಗಳನ್ನು ಕೊಡಲಾಗಿದೆ. ಇಲ್ಲಿ ವ್ಯಕ್ತಿ ಚಿಂತನೆ, ನೆನಪು ಮಾಡುತ್ತಿರುವಂತಿದೆ. ಬಲಕ್ಕೆ ಸ್ಪಷ್ಟವಾದ ಅಕ್ಷರದಲ್ಲಿ ಶೀರ್ಷಿಕೆಯನ್ನು ಎರಡು ಹಂತದಲ್ಲಿ ಮೂಡಿಸಲಾಗಿದೆ. ಕೆಳಗೆ ಚಿಕ್ಕ ಅಕ್ಷರದಲ್ಲಿ ಲೇಖಕರ ಹೆಸರನ್ನು ಬರೆದಿದೆ. ಮೇಲಿನ ನೀಲಿ ಪಟ್ಟಿಯ ನಂತರ ಕೆಳಗಿರುವ ಬಿಳಿ ಪಟ್ಟಿಯಲ್ಲಿ ಆಯತಾಕಾರದ ಚೌಕಗಳ ಮುಂದೆ ಹುಲಿ ನಡೆದು ಹೋಗುತ್ತಿರುವ ಚಿತ್ರ. ಹುಲಿ ತಲೆಯ ಮೇಲೆ ಗಿಡದ ಕೊಂಬೆ ಎಲೆಯಿದೆ. ಹುಲಿಯ ಕಾಲ ಬಳಿ ಹರಡಿರುವ ಹುಲ್ಲಿನ ಚಿತ್ರ ಹಚ್ಚ ಹಸಿರಿನಿಂದ ಕೂಡಿದೆ. ಇಲ್ಲಿ ನೀಲಿ, ಹಸಿರು, ಹಳದಿ, ಕಪ್ಪು, ಬಿಳಿ, ಗುಲಾಬಿ ವರ್ಣಗಳನ್ನು ಗಮನಿಸಬಹುದು.

**೮.೬.೩. ಮಹಾಶ್ವೇತೆ (೧೯೮೫)**

ಸುಧಾಮೂರ್ತಿಯವರ ಈ ಮಹತ್ವಕಾಂಕ್ಷೆಯ ಕೃತಿಯು ೧೯೮೫ ರಲ್ಲಿ ಲೋಕಾರ್ಪಣೆಗೊಂಡಿದೆ. ಹೆಣ್ಣಿನ ನೋವು, ತಾಳ್ಮೆ, ಸಾಧನೆಯನ್ನು ತಿಳಿಸಿದ್ದಾರೆ. ಇದರ ಮುದ್ರಣವನ್ನು ಸಂಜಯ ಎಂಟರ್‌ಪ್ರೈಸಸ್‌ನಲ್ಲಿ

ಮುದ್ರಿಸಲಾಯಿತು. ಈ ಮುಖಪುಟಕ್ಕೆ ಹಸಿರು, ಗುಲಾಬಿ ವರ್ಣ, ಕಪ್ಪು, ಆಕಾಶ ನೀಲಿ ಬಣ್ಣಗಳನ್ನು ಬಳಸಲಾಗಿದೆ. ಈ ಮುಖಪುಟ ಓದುಗರನ್ನು ಆಕರ್ಷಿಸುವಂತೆ ಮೂಡಿಬಂದಿದೆ. ಮೇಲ್ಭಾಗದಿಂದ ಅರ್ಧದಷ್ಟು ಮತ್ತು ಕೆಳಗಿನ ಬಲಭಾಗದವರೆಗಿನ ಹಿಮ್ಮುಖವನ್ನು ಹಸಿರು ವರ್ಣದಿಂದ ಮೂಡಿಸಿದ್ದಾರೆ. ಮೇಲ್ಭಾಗದಲ್ಲಿ ದೊಡ್ಡದಾದ ಅಕ್ಷರ ಶೈಲಿಯಲ್ಲಿ ಕೃತಿಯ ಶೀರ್ಷಿಕೆಯನ್ನು ಕೆಳಗೆ ಸ್ಪಷ್ಟ ಅಕ್ಷರಗಳಲ್ಲಿ ಲೇಖಕಿಯ ಹೆಸರನ್ನು ಬರೆದಿದೆ. ಕೆಳಭಾಗದ ಬಲಕ್ಕೆ ಓರ್ವ ವ್ಯಕ್ತಿಯ ಅರ್ಧ ಮುಖವು ಎಡಭಾಗದ ಸ್ತ್ರೀಯನ್ನು ನೋಡುತ್ತಿರುವಂತೆ ಚಿತ್ರವನ್ನು ಬಿಡಿಸಲಾಗಿದೆ. ಮುಖಪುಟದ ಅರ್ಧಭಾಗದಿಂದ ಕೆಳಗಿನವರೆಗೂ ಗುಲಾಬಿ ವರ್ಣದ ಪಟ್ಟಿಯೊಳಗೆ ಓರ್ವ ಮಹಿಳೆ ಕಣ್ಣು ಮುಚ್ಚಿ ತಲೆಗೂದಲು ಹರಡಿರುವಂತೆ ಚಿಂತಾಕ್ರಾಂತಳಾದ ಚಿತ್ರ ಅತ್ಯಂತ ಸೊಗಸಾಗಿದೆ. ಅವಳ ಕುತ್ತಿಗೆಯ ಭಾಗದಲ್ಲಿ ಓರ್ವ ಕನ್ನಡಕ ಧರಿಸಿದ ಪುರುಷನ ಚಿತ್ರವನ್ನು ಬಿಡಿಸಲಾಗಿದೆ. ಇಲ್ಲಿ ಹೆಣ್ಣಿನ ಆಂತರ್ಯದ ನೋವು ಮುಖಪುಟದಲ್ಲೇ ತಿಳಿಯುವಂತೆ ವಿನ್ಯಾಸಕಾರ ರಚಿಸಿದ್ದಾರೆ. ಎಲ್ಲವನ್ನೂ ಮೆಚ್ಚಿ ನಿಲ್ಲುವ ಸ್ತ್ರೀಯ ಮನೋಧೈರ್ಯ ಈ ಕೃತಿಯಲ್ಲಿ ಮೂಡಿ ಬಂದಿದೆ.

**೮.೬.೪. ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ (೧೯೯೦)**

ಕ್ರಿ.ಶ. ೧೯೯೦ ರಲ್ಲಿ ಮೂಡಿ ಬಂದ ಈ ಕೃತಿಯನ್ನು ಡಾ. ಜಿ.ಎಸ್. ಶಿವರುದ್ರಪ್ಪನವರು ರಚಿಸಿದು ಇದನ್ನು ರಶ್ಮಿ ಪ್ರಿಂಟರ್ಸ್ ಎಂಬಲ್ಲಿ ಮುದ್ರಿಸಲಾಗಿದೆ. ಇದೊಂದು ಸುಪ್ರಸಿದ್ಧ ಕೃತಿಯಾಗಿದೆ. ಈ ಮುಖಪುಟದಲ್ಲಿ ಕೆಂಪು, ತೆಳು ಕೆಂಪು, ನೀಲಿ, ಬಿಳಿ ವರ್ಣಗಳ ಬಳಕೆಯನ್ನು ನಾವು ಕಾಣಬಹುದು. ಮೇಲೆ ಕೆಂಪು ಪಟ್ಟಿಯಲ್ಲಿ ಶೀರ್ಷಿಕೆಯೂ ಬಿಳಿವರ್ಣದಲ್ಲಿ ಎದ್ದು ಕಾಣುವಂತೆ ನೋಡುಗರನ್ನು ಆಕರ್ಷಿಸುವಂತೆ ಬರೆಯಲಾಗಿದೆ. ಕೆಳಗೆ ತೆಳು ಕೆಂಪು ಪಟ್ಟಿಯಲ್ಲಿ ವಿಲಿಯಂ ಷೇಕ್ಸ್‌ಪಿಯರ್‌ರವರ ಭಾವಚಿತ್ರ, ನೀಲಿ, ಬಿಳಿ ವರ್ಣದಲ್ಲಿ ಮೂಡಿಬಂದಿದೆ. ಇವರ ಭಾವಚಿತ್ರವನ್ನು ಅಸ್ಪಷ್ಟವಾಗಿ ಮುದ್ರಿಸಿರುವುದು ಕಲೆಯ ಒಂದು ತಂತ್ರಗಾರಿಕೆ ಇದಕ್ಕೆ ಕಲಾ ಭಾಷೆಯಲ್ಲಿ ಸ್ಕ್ರಿಬಲಿಂಗ್ ವಿಧಾನ ಎಂದು ಹೇಳುತ್ತಾರೆ. ಕೆಳಗಡೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಚಿಹ್ನೆ ವಿಳಾಸ ನೀಡಲಾಗಿದೆ. ಷೇಕ್ಸ್‌ಪಿಯರ್ ಇವರು ವಿಶ್ವಪ್ರಸಿದ್ಧ ನಾಟಕಕಾರ, ಕಾವ್ಯ ರಚನೆಕಾರ, ಸಾಹಿತಿ, ಕವಿಯಾಗಿ ಇಂದಿನ ಪೀಳಿಗೆಗೂ ಮಾದರಿಯಾದ ರಚನೆಗಾರರಾಗಿದ್ದಾರೆ.ಇಲ್ಲಿ ಶಿವರುದ್ರಪ್ಪನವರು ಇವರ ಅನೇಕ ಆಯ್ದ ಕಾವ್ಯ, ಕವನ ಸಂಕಲನಗಳನ್ನು ಕನ್ನಡ ಸಾಹಿತ್ಯಕ್ಕೆ ತಂದು ಕೊಟ್ಟಿದ್ದಾರೆ.

**೮.೬.೫. ಕನ್ನಡ ಸಾಹಿತ್ಯದಲ್ಲಿ ಕಾಳಿದಾಸ (೧೯೯೦)**

ಕಾಳಿದಾಸ ಮಹಾಕವಿ ಸಂಸ್ಕೃತ ಭಾಷೆಯಲ್ಲಿ ತನ್ನ ಕಾವ್ಯ, ನಾಟಕಗಳನ್ನು ರಚಿಸಿದ್ದಾರೆ. ಇವರ ಸಾಹಿತ್ಯವನ್ನು ಕನ್ನಡಕ್ಕೆ ಡಾ. ಜಿ.ಎಸ್. ಶಿವರುದ್ರಪ್ಪನವರು ಕ್ರಿ.ಶ. ೧೯೯೦ ರಲ್ಲಿ ರಚಿಸಿ, ಅಶ್ವಿನಿ ಪ್ರಿಂಟರ್ಸ್‌ನಲ್ಲಿ ಮುದ್ರಣ ಮಾಡಿಸಿದರು. ಈ ಮುಖಪುಟ ಹಸಿರು, ನೀಲಿ, ಕಪ್ಪು, ಬಿಳಿ ಬಣ್ಣದಲ್ಲಿ ನೋಡುಗರನ್ನು ಸೆಳೆಯುವಂತೆ ಮೂಡಿಬಂದಿದೆ. ಮೇಲ್ಭಾಗದಲ್ಲಿ ಚಿಕ್ಕ ಚಿಹ್ನೆಯಿದೆ. ಇದರ ಕೆಳಗೆ ಅರ್ಧದವರೆಗೆ ನೀಲಿಯ

ಪಟ್ಟಿಯಿದೆ. ಪಟ್ಟಿಯ ಒಳಗೆ ಬಿಳಿ ವರ್ಣದಲ್ಲಿ ಮೂರು ಹಂತದಲ್ಲಿ ಕೃತಿಯ ಶೀರ್ಷಿಕೆಯ ಮೆಟ್ಟಿಲು ಮಾದರಿಯಲ್ಲಿ ಬರೆಯಲಾಗಿದೆ. ಇದರ ಕೆಳಗೆ ಹಸಿರು ಪಟ್ಟಿ ಕೆಳಗಿನವರೆಗೆ ಆವರಿಸಿದೆ. ಇದರಲ್ಲಿ ಕಾವ್ಯ ರಚಿಸುವ ಪಕ್ಷಿಯ ಗರಿ ಮತ್ತು ಇಂಕು ತುಂಬಿಡುವ ದುಂಡನೆಯ ಮುಚ್ಚಳವಿರುವ ಡಬ್ಬಿಯಿದೆ. ಮುಖಪುಟ ಕೆಳಗೆ ನೀಲಿಯ ಚಿಕ್ಕಪಟ್ಟಿ. ಇದರ ಒಳಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಎಂದು ಬರೆಯಲಾಗಿದೆ. ಈ ಮುಖಪುಟ ಆಕರ್ಷಕವಾಗಿ ಮೂಡಿಬಂದಿದೆ. ಶೀರ್ಷಿಕೆಯೂ ಚೆನ್ನಾಗಿದೆ. ಆದರೆ ಇಲ್ಲಿ ಕವಿ ಕಾಳಿದಾಸರ ಚಿತ್ರ ಬರೆಯಬಹುದಿತ್ತು. ಕಾಳಿಯ ವರಪುತ್ರದಿಂದ ಜನಿಸಿದ ಕಾಳಿದಾಸರಿಂದ ಮೇಘದೂತ, ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶಿಯ, ಅಭಿಜ್ಞಾನ ಶಾಕುಂತಲಾ ಎಂಬ ಸಾಹಿತ್ಯಗಳು ಸಂಸ್ಕೃತದಲ್ಲಿ ಮೂಡಿಬಂದವು. ಅವುಗಳನ್ನು ಇಲ್ಲಿ ಕನ್ನಡಕ್ಕೆ ಅವಶ್ಯಕತೆ ಇರುವಷ್ಟು ಜಿ.ಎಸ್. ಶಿವರುದ್ರಪ್ಪ ನವರು ಎಳೆ–ಎಳೆಯಾಗಿ ರಚಿಸಿ ಬರೆದಿದ್ದಾರೆ.

**೮.೭. ತೊಂಬತ್ತರ ದಶಕದಲ್ಲಿ ಮೂಡಿ ಬಂದ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಅಂದರೆ ೯೦ ರ ದಶಕದಲ್ಲಿ ಕನ್ನಡ ಸಾಹಿತ್ಯ ಕೃತಿಗಳು ಹೆಚ್ಚಾಗಿ ಮೂಡಿಬಂದವು. ಈ ಸಮಯದಲ್ಲಿ ಗಣಕಯಂತ್ರಗಳು, ವಿಶೇಷ ಮುದ್ರಣ ಯಂತ್ರಗಳು ಬಳಕೆಗೆ ಬಂದವು. ಚಿತ್ರಗಾರರು, ವಿನ್ಯಾಸಕಾರರ ಸಂಖ್ಯೆ ಹೆಚ್ಚಾಯಿತು. ಮುದ್ರಣಾಲಯಗಳು ಸಹ ಹೆಚ್ಚಾಗಿ ತೆರೆದವು. ಆದ್ದರಿಂದ ಅನೇಕ ಸಾಹಿತಿಗಳ ಅವರ ಕೃತಿಗಳು ಮುದ್ರಣ ಕಂಡವು. ಮುಖಪುಟ ರಚನೆಯಲ್ಲಿ ಹೊಸ ಮಾದರಿಯ ಕಲೆ ಹೊರಹೊಮ್ಮಿದವು. ಹಾಗೂ ಹಲವು ವರ್ಣಗಳ ಬಳಕೆ ಹೇರಳವಾಯಿತು. ಸಾಹಿತಿ ಮನದಲ್ಲಿ ಅಂದುಕೊಂಡಂತಹ ಕಲ್ಪನಾ ಚಿತ್ರಗಳು ಮುಖಪುಟ ರಚನೆಯಲ್ಲಿ ತಯಾರಾದವು.

ಈ ದಶಕದಲ್ಲಿ ಗರಿಷ್ಟ ೫೦ ಕ್ಕೂ ಹೆಚ್ಚು ಕೃತಿಗಳು ಲೋಕಾರ್ಪಣೆಗೊಂಡವು. ಅವುಗಳಲ್ಲಿ ಪ್ರಮುಖವಾದವುಗಳು. ವೆಂ. ನಾಗರಾಜರಾವ್ ರವರು ರಚಿಸಿರುವ 'ಮನದ ತೆರೆಯ ಮೇಲೆ', ಸಾಹಿತಿಯಾದ ಮಹಾಬಲೇಶ್ವರ ಕಾಟ್ರಹಳ್ಳಿಯವರ 'ಸಾಹಿತ್ಯ ಮತ್ತು ಸಿನಿಮಾ', ಕೃನ.ಮೂರ್ತಿಯವರ 'ನದಿಯೊಂದೆ ದಡವೆರಡು', ಪ್ರಸಿದ್ಧ ಸಾಹಿತಿಗಳಾದ ಬರಗೂರು ರಾಮಚಂದ್ರಪ್ಪನವರ 'ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ', ಡಾ. ಎನ್.ಆರ್. ನಾಯಕ್‌ರವರ 'ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ' ಗುರುಲಿಂಗ ಕಾಪಸೆಯವರ 'ಪಟೇಲ ಧೂಲಾಸಾಹೇಬ' ಹಾಗೂ ದೇವೆಗೌಡ ಲಿಂ. ರಚಿಸಿರುವ 'ದೇವರು' ಎಂಬ ಕೃತಿ ಸೊಗಸಾಗಿದೆ. ರಘುಸುತರವರು ರಚಿಸಿರುವ 'ಮಲ್ಲಿಗೆ ಮಾಲೆ' ಇದೊಂದು ಸಾಮಾಜಿಕ ಕಾದಂಬರಿಯಾಗಿದೆ. ಎ.ಕೆ. ಹಂಪಣ್ಣರವರ 'ಸಾಲಿ ರಾಮಚಂದ್ರ ರಾಯ' ಇನ್ನೋರ್ವ ಪ್ರಸಿದ್ಧ ಕವಿಗಳಾದ ಡಾ. ಎನ್.ಎಸ್. ಲಕ್ಷ್ಮೀ ನಾರಾಯಣ ಭಟ್ಟರವರು ರಚಿಸಿರುವ ರಚನೆ 'ಮಾದಾರ ಚನ್ನಯ್ಯಾ' ಇದೊಂದು ಕವನ ಸಂಕಲನವಾಗಿದೆ. ಎನ್.ಕೆ. ನರಸಿಂಹಮೂರ್ತಿಯವರ 'ಮಿತ್ರ ಸಂಪ್ರಾಪ್ತಿ' ಮತ್ತು ರಾಜಶೇಖರ ಹತಗುಂದಿಯವರ 'ಬುದ್ಧನ ನಾಡಿನಲಿ', ಡಾ. ಸೂರ್ಯನಾಥ ಕಾಮತ್‌ರವರ 'ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು' ಚೆನ್ನಾಗಿ ಮೂಡಿಬಂದಿದೆ. ಎಸ್.ವಿ. ಶ್ರೀನಿವಾಸರಾವ್ ರವರು ರಚಿಸಿರುವ 'ಆನಂದ ಕಂದ' ಸೊಗಸಾಗಿದೆ. ಈ

ದಶಕದಲ್ಲಿ ಇನ್ನೂ ಹಲವಾರು ಸಾಹಿತ್ಯ ಕೃತಿಗಳು ಮೂಡಿಬಂದು ಮುಖಪುಟ ರಚನೆಯಲ್ಲಿ ಹೊಸ ಸಂಚಲನವುಂಟಾಯಿತು. ಹಾಗೂ ಮುಖಪುಟಗಳಲ್ಲಿ ಹೊಸ ಪ್ರಯೋಗಕ್ಕೆ ಅವಕಾಶ ನೀಡಿದಂತಾಯಿತು.

**೮.೭.೧. ಮನದ ತೆರೆಯ ಮೇಲೆ (೧೯೯೧)**

ಹ.ವೆಂ. ನಾಗರಾಜರಾವ್ ಅವರು ಕ್ರಿ.ಶ. ೧೯೯೧ರಲ್ಲಿ ರಚಿಸಿದ ಈ ಕೃತಿಯನ್ನು ಕಲಾವಿದ ಚಂದ್ರನಾಥ್ ಅವರು ಮುಖಪುಟ ವಿನ್ಯಾಸ ಮಾಡಿದ್ದಾರೆ. ಈ ಮುಖಪುಟದಲ್ಲಿ ಕಪ್ಪು, ಬಿಳಿ, ಹಸಿರು, ಹಳದಿ, ಕೇಸರಿ ವರ್ಣಗಳನ್ನು ಗಮನಿಸಬಹುದು. ಈ ಮುಖಪುಟವು ಮುಕ್ಕಾಲು ಭಾಗ ಕಪ್ಪು ವರ್ಣದಿಂದ ಕೂಡಿದ್ದು ಇದರಲ್ಲೆ ಓರ್ವ ಸ್ತ್ರೀಯ ಮುಖ ಬರುವಂತೆ ಸೂಕ್ಷ್ಮವಾಗಿ ರಚಿಸಿದ್ದಾರೆ. ಇನ್ನುಳಿದ ಭಾಗ ಹಸಿರು ವರ್ಣದಿಂದ ಕೂಡಿದೆ. ಮೇಲ್ಭಾಗದಲ್ಲಿ ಬಿಳಿ ವರ್ಣದಿಂದ ವಿಶೇಷ ಶೈಲಿ ಕ್ಯಾಲಿಗ್ರಾಫಿ ಅಕ್ಷರದಲ್ಲಿ ಕೃತಿಯ ಶೀರ್ಷಿಕೆಯನ್ನು ಸ್ಪಷ್ಟವಾಗಿ ಬರೆಯಲಾಗಿದೆ. ಸ್ತ್ರೀಯ ತಲೆ ಭಾಗದಲ್ಲಿ ಅಂದವಾಗಿ ಕಾಣಲು ಹಸಿರು, ಹಳದಿ, ಕೇಸರಿ ವರ್ಣಗಳನ್ನು ಕುಂಚದಿಂದ ಹಚ್ಚಲಾಗಿದೆ. ಕೆಳಭಾಗದ ಬಲಕ್ಕೆ ಹಸಿರು ಭಾಗದಲ್ಲಿ ಬಿಳಿ ವರ್ಣದಲ್ಲಿ ಸಾಹಿತಿಯ ಹೆಸರನ್ನು ಕೊಡಲಾಗಿದೆ. ಈ ಮುಖಪುಟದಲ್ಲಿ ಶೀರ್ಷಿಕೆಯು ಆಕರ್ಷಕವಾಗಿದೆ. ವಿಶೇಷ ಶೈಲಿಯ ಚಿತ್ರ ಇಲ್ಲಿ ಮೂಡಿದೆ. ಈ ಕೃತಿಯಲ್ಲಿ ಮನುಷ್ಯನ ಮನಸ್ಸಿನ ಮೇಲೆ ಉಂಟಾಗುವ ಪ್ರಭಾವಗಳನ್ನು ಲೇಖಕರು ವಿವರವಾಗಿ ರಚಿಸಿದ್ದಾರೆ. ಇದೊಂದು ಉತ್ತಮವಾದ ಮುಖಪುಟ ಎಂದು ಹೇಳ್ಳಬಹುದು.

**೮.೭.೨. ಸಾಹಿತ್ಯ ಮತ್ತು ಸಿನಿಮಾ (೧೯೯೩)**

ಈ ಕೃತಿಯ ಕ್ರಿ.ಶ. ೧೯೯೩ ರಲ್ಲಿ ಮಹಾಬಲೇಶ್ವರ ಕಾಟ್ರಹಳ್ಳಿಯವರಿಂದ ರಚನೆಯಾಯಿತು. ಈ ಕೃತಿಯ ಮುಖಪುಟ ಸಿ. ಚಂದ್ರಶೇಖರ ಅವರು ರಚಿಸಿದ್ದಾರೆ. ಈ ಮುಖಪುಟದ ಹಿನ್ನೆಲೆ ಹಲವು ವರ್ಣಗಳಿಂದ ಚುಕ್ಕೆ ರೀತಿಯಲ್ಲಿ ಮೈವಳಿಕೆ (ರಫ್‌ತರ) ಮೂಡಿ ಬಂದಿದೆ. ಇದರ ಮೇಲ್ಭಾಗದಲ್ಲಿ ಒಂದರ ಕೆಳಗೆ ಒಂದರಂತೆ ಬರುವಂತೆ ಶೀರ್ಷಿಕೆಯನ್ನು ಬರೆಯಲಾಗಿದೆ. ಕೆಳಗೆ ಹಳದಿ ವರ್ಣದಲ್ಲಿ ಸಾಹಿತಿಯ ಹೆಸರಿದೆ. ಮುಖಪುಟದ ಮೇಲ್ಭಾಗದಿಂದ ಸ್ವಲ್ಪ ಕೆಳಗಿನಿಂದ ರಂಗೋಲಿಯ ಶೈಲಿಯ ಚಿತ್ರಣ ಹಸಿರು, ಹಳದಿ, ಕೇಸರಿ, ಕಂದು ಬಣ್ಣದ ಪಟ್ಟಿಗಳು ಮುಖಪುಟದ ಬಲಕ್ಕೆ ಕೆಳಗಿನವರೆಗೆ ಹಬ್ಬಿದೆ. ಈ ಮುಖಪುಟವು ಶೀರ್ಷಿಕೆಗೂ, ಚಿತ್ರಕ್ಕೂ ಒಂದಕ್ಕೊಂದು ಸಂಬಂಧವಿಲ್ಲದಂತೆ ಮೂಡಿಬಂದಿದೆ. ಶೀರ್ಷಿಕೆ ಇನ್ನೂ ಸ್ಪಷ್ಟವಾಗಿ ಎದ್ದು ಕಾಣುವ ಹಾಗೆ ಇರಬೇಕಿತ್ತು. ಈ ಕೃತಿಯಲ್ಲಿ ಸಾಹಿತ್ಯ ಮತ್ತು ಸಿನಿಮಾಗೆ ಇರುವ ಸಂಬಂಧ ವಿವರಿಸಲಾಗಿದೆ.ಹಲವು ಸಾಹಿತ್ಯ ಕೃತಿಗಳು ಸಿನಿಮಾ ಆಗಿರುವ ಉದಾಹರಣೆಗಳಿವೆ. ಕೆಲವು ಸಾಹಿತ್ಯದ ಸಾಲುಗಳು ಸಿನಿಮಾ ಹಾಡುಗಳಾಗಿರುವುದನ್ನು ಇಲ್ಲಿ ಗಮನಿಸಬಹುದು.

**೮.೭.೩. ನದಿಯೊಂದೆ ದಡವೆರಡು (೧೯೯೩)**

ಈ ಮುಖಪುಟವು ಸರಳ ಮಾದರಿಯಿಂದ ನೋಡುಗರನ್ನು ಆಕರ್ಷಿಸುವಂತಿದೆ. ಈ ಮುಖಪುಟದಲ್ಲಿ ಸಂಪೂರ್ಣ ಹಿನ್ನೆಲೆ ಆಕಾಶ ನೀಲಿ ವರ್ಣದಿಂದ ಆವೃತವಾಗಿದೆ. ಇನ್ನುಳಿದಂತೆ ಹಳದಿ, ಹಸಿರು, ನೀಲಿ,

ಕಪ್ಪು ವರ್ಣದಲ್ಲಿ ಮೂಡಿ ಬಂದಿದೆ. ಮುಖಪುಟದ ಎಡ ಭಾಗದಲ್ಲಿ ನಾಲ್ಕು ಚೌಕದ ಪಟ್ಟಿಗಳಿವೆ. ಈ ಪಟ್ಟಿಯಲ್ಲಿ ಮೊದಲನೆಯದರಲ್ಲಿ ಓರ್ವ ಯಕ್ಷಗಾನ ಕಲಾವಿದನ ಮುಖವನ್ನು ಮುದ್ರಿಸಲಾಗಿದೆ. ಎರಡನೆಯದರಲ್ಲಿ ಹಂಪಿಯ ಕಲ್ಲಿನ ರಥದ ಚಿತ್ರ ಸ್ಪಷ್ಟವಾಗಿದೆ. ಮೂರನೆಯದರಲ್ಲಿ ಓರ್ವ ಮಹಿಳೆ ತನ್ನ ಮಗಳೊಂದಿಗೆ ನಿಂತಿರುವ ಚಿತ್ರ. ನಾಲ್ಕನೆಯದರಲ್ಲಿ ಕೆಲವು ಮನೆಗಳು, ವಾಲಿರುವ ಮೂರು-ನಾಲ್ಕು ತೆಂಗಿನ ಮರಗಳ ಚಿತ್ರವಿದೆ. ಇವುಗಳ ಪಕ್ಕ ಮೇಲ್ಭಾಗದಲ್ಲಿ ಶೀರ್ಷಿಕೆ ಕೆಳಗೆ ಚಿಕ್ಕ ಅಕ್ಷರದಲ್ಲಿ ಸಾಹಿತಿಯ ಹೆಸರಿದೆ. ಮಧ್ಯದಲ್ಲಿ ಒಂದು ಚೌಕವಿದೆ ಇದರಲ್ಲಿ ಗುಡಿಸಲು ಸಾಲಾಗಿ ಇರುವ ಚಿತ್ರವಿದೆ.

ಒಟ್ಟು ಐದು ಪಟ್ಟಿಗಳಲ್ಲಿ ಹಸಿರು, ಹಳದಿ ವರ್ಣಗಳಿಂದ ಚಿತ್ರ ಹೊರಹೊಮ್ಮಿವೆ. ಕೆಳಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಚಿಹ್ನೆ, ವಿಳಾಸವಿದೆ. ಇಲ್ಲಿನ ಶೀರ್ಷಿಕೆ ಅಕ್ಷರ ಆಕರ್ಷಕವಾಗಿವೆ ಚಿತ್ರಣಗಳು ಸೊಗಸಾಗಿ ಮೂಡುವೆ. ಈ ಕೃತಿಯನ್ನು ಲೇಖಕರಾದ ಕೃ.ನ. ಮೂರ್ತಿ ಯವರು ಕ್ರಿ.ಶ. ೧೯೯೩ ರಚಿಸಿ, ಲಾವಣ್ಯ ಮುದ್ರಣಾಲಯದಲ್ಲಿ ಅಚ್ಚು ಹಾಕಿಸಿದ್ದಾರೆ.

**೮.೭.೪. ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ (೧೯೯೩)**

ಡಾ. ಎನ್.ಆರ್. ನಾಯಕ್ ರವರು ಕ್ರಿ.ಶ. ೧೯೯೩ರಲ್ಲಿ ಈ ಗ್ರಂಥವನ್ನು ರಚಿಸಿ ಲಾವಣ್ಯ ಮುದ್ರಣಾಲಯದಲ್ಲಿ ಮುದ್ರಿಸಿದರು. ಈ ಮುಖಪುಟವು ಹೆಚ್ಚು ಹಸಿರು ಬಣ್ಣದಿಂದ ಆವೃತವಾಗಿದೆ. ಇನ್ನುಳಿದಂತೆ ಆಕಾಶ ನೀಲಿ, ಕೆಂಪು ಹಳದಿ, ಕೇಸರಿ, ಕಂದು ವರ್ಣಗಳು ಅಡಗಿವೆ. ಈ ಮುಖಪುಟ ಮೇಲೆ ಅರ್ಧ ಚಂದ್ರಾಕೃತಿಯ ಶೈಲಿಯಲ್ಲಿ ಉಪಸಂಸ್ಕೃತಿ ಅಧ್ಯಯನವೆಂದಿದ್ದು ಈ ಅಕ್ಷರಗಳು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಚಿಹ್ನೆಯನ್ನು ಸುತ್ತುವರೆದಂತಿದೆ. ಇನ್ನೂ ಶೀರ್ಷಿಕೆ ಅಕ್ಷರಕ್ಕೆ ಆಕಾಶ ನೀಲಿ ವರ್ಣದಲ್ಲಿ ನೋಡುಗರ ಕಣ್ಮನ ಸೆಳೆಯುವಂತೆ ಬರೆಯಲಾಗಿದೆ. ಇದರ ಕೆಳಗೆ ಕೆಂಪು, ಹಳದಿ, ಕಂದು, ಕೇಸರಿ ವರ್ಣಗಳ ಬೃಹತ್ತ ವೃತ್ತದಂತೆ ಚಿತ್ರಣವಿದೆ. ಈ ವೃತ್ತದಲ್ಲಿ ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿಯ ಅನಾವರಣಗೊಂಡಿದೆ. ಇಲ್ಲಿ ಹಲವು ಪುರುಷರು ಆಯುಧಗಳನ್ನು, ಸಂಗೀತ ವಾದ್ಯಗಳನ್ನು ಹಿಡಿದಿರುವಂತೆ ಕಾಣುತ್ತದೆ. ಹಲವು ಸಾಕುಪ್ರಾಣಿಗಳ ಪಕ್ಷಿಗಳ ಚಿತ್ರವು ನೆರಳಿನಂತೆ ಮೂಡಿದೆ. ಹಾವು, ಸೂರ್ಯ, ಚಂದ್ರನನ್ನು ಕಾಣಬಹುದು. ಕೆಳಗಡೆ ಲೇಖಕರ ಹೆಸರನ್ನು ಕೊಡಲಾಗಿದೆ. ಈ ಮುಖಪುಟ ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವಂತೆ ಮೂಡಿಬಂದಿದೆ. ಸುಕ್ಷ್ಮವಾಗಿ ಗಮನಿಸಿದರೇ ಸಿಂಧು ಬಯಲಿನ ನಾಗರೀಕತೆಯನ್ನು ಇಲ್ಲಿನ ಮುಖಪುಟವು ನೆನಪಿಸುವಂತೆ ಮೂಡಿಬಂದಿದೆ. ಈ ಕೃತಿಯಲ್ಲಿ ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ ಹೇಗೆ ಬೆಳೆದು ಬಂದಿತು ಎಂಬುದನ್ನು ತಿಳಿಯಬಹುದು. ಇದು ಸಹ ಉತ್ತಮವಾದ ಮುಖಪುಟ ಎಂದು ಕರೆಯಬಹುದು.

**೮.೭.೫. ಪಟೇಲ ಥೂಲಾ ಸಾಹೇಬ (೧೯೯೪)**

ಕ್ರಿ.ಶ. ೧೯೯೪ರಲ್ಲಿ ಲೇಖಕರಾದ ಗುರುಲಿಂಗ ಕಾಪಸೆಯವರಿಂದ ರಚನೆಯಾಯಿತು. ಈ ಕೃತಿಯ ಮುಖಪುಟವು ಖ್ಯಾತ ಕಲಾವಿದ ಸಿ ಚಂದ್ರಶೇಖರವರು ನಿರ್ಮಿಸಿದ್ದಾರೆ ಈ ಮುಖಪುಟದಲ್ಲಿ

ಹಳದಿ, ನೀಲಿ, ಹಸಿರು, ಕಂದು, ಕೇಸರಿ, ಕಪ್ಪು, ಬಿಳಿ ವರ್ಣಗಳನ್ನು ಬಳಸಿಕೊಂಡು ವಿನ್ಯಾಸಕಾರ ಉತ್ತಮ ಮುಖಪುಟವನ್ನು ಚಿತ್ರಿಸಿ ಮುದ್ರಿಸಿಕೊಟ್ಟಿದ್ದಾರೆ. ಮೇಲ್ಭಾಗದಲ್ಲಿ ಚಿಕ್ಕದಾಗಿ 'ಮರೆಯಲಾಗದ ಬರಹಗಾರರು' ಎಂದಿದೆ. ಕೆಳಗೆ ನೀಲಿ ಬಣ್ಣದಲ್ಲಿ ಶೀರ್ಷಿಕೆ ಮಧ್ಯಮ ಅಕ್ಷರಗಳಲ್ಲಿ ಎದ್ದು ಕಾಣುವಂತಿದೆ. ಕೆಳಗೆ ಸಾಹಿತ್ಯ ವಾಚಿಕೆ ಎಂದಿದ್ದು ಇದರಡಿ ಚಿಕ್ಕ ಅಕ್ಷರದಲ್ಲಿ ಲೇಖಕರ ಹೆಸರಿದೆ. ಮುಖಪುಟದ ಅರ್ಧದಿಂದ ಪೂರ್ಣ ಕೆಳಗಿನವರೆಗೆ ಅಮೋಘ ಚಿತ್ರಣವಿದೆ. ಒಂದರ ಮೇಲೊಂದು ಇಟ್ಟಿರುವಂತೆ ಮೂರು ಪುಸ್ತಕಗಳು ಮೆಚ್ಚಿವೆ, ಇದರ ಮೇಲಿನ ನಾಲ್ಕನೆಯ ಪುಸ್ತಕವು ತೆರೆದಿದೆ. ಅದರಲ್ಲಿ ಅಕ್ಷರಗಳು ಕಾಣುವಂತೆ ಪುಸ್ತಕಗಳ ಚಿತ್ರವನ್ನು ಅತ್ಯಂತ ಆಕರ್ಷಕವಾಗಿ ಬಿಡಿಸಲಾಗಿದೆ. ಈ ಮುಖಪುಟದ ಶೀರ್ಷಿಕೆ ಅಕ್ಷರ ಅಂಕುಡೊಂಕಾಗಿದ್ದು ನೋಡುಗರನ್ನು ಸಹಜವಾಗಿ ಸೆಳೆಯುತ್ತದೆ. ಜೋತೆಗೆ ತಕ್ಷಣ ಸೆಳೆಯುವುದು ಈ ಮುಖಪುಟದಲ್ಲಿನ ಪುಸ್ತಕದ ಚಿತ್ರವೆಂದರೆ ತಪ್ಪಾಗಲಾರದು. ಮುಖಪುಟ ಆಕರ್ಷಕವಾಗಿ ಮೂಡಿಬಂದಿದೆ.

### ೮.೭.೬. ದೇವರು (೧೯೯೪)

ಕ್ರಿ.ಶ. ೧೯೯೪ ರಲ್ಲಿ ದೇವೇಗೌಡ ಲಿಂ. ರವರು ಈ ಕೃತಿಯನ್ನು ಬರೆದು, ಸೆಕ್ಯೂರಿಟಿ ಪ್ರಿಂಟರ್ಸ್' ಎಂಬ ಮುದ್ರಣಾಲಯದಲ್ಲಿ ಮುದ್ರಿಸಿದರು. ಈ ಮುಖಪುಟ ಸರಳವಾಗಿ ಆಕರ್ಷಕವಾಗಿದೆ. ಹಳದಿ, ಬಾದಾಮಿ ವರ್ಣದಿಂದ ಮುಖಪುಟ ಆವೃತಗೊಂಡಿದೆ. ಮುಖಪುಟದ ಮಧ್ಯದಲ್ಲಿ ಭೂಮಿಯ ಚಿತ್ರಣ ವೃತ್ತಾಕಾರವಾಗಿದೆ. ಇದರಲ್ಲಿ ನೀಲಿವರ್ಣ ಅಭಿವ್ಯಕ್ತಗೊಂಡಿದೆ. ಭೂಮಿಯ ರಚನೆ ಭೂಮಂಡಲದ ಖಂಡಗಳು ನಕಾಶೆಯನ್ನು ಒಳಗಡೆ ಬಿಡಿಸಲಾಗಿದೆ. ವೃತ್ತದ ಒಳಗೆ ಮಧ್ಯಕ್ಕೆ ದೊಡ್ಡದಾಗಿ ಕೃತಿಯ ಶೀರ್ಷಿಕೆಯನ್ನು ಆಕರ್ಷಕವಾಗಿ ಮುದ್ರಿಸಲಾಗಿದೆ. ಶೀರ್ಷಿಕೆಯ ನಾಮವಾದ ದೇವರು ಎಂಬ ಅಕ್ಷರಗಳ ಒಳಗೆ ಹಿಂದೂ, ಮುಸ್ಲಿಂ, ಕ್ರೈಸ್ತ, ಜೈನ, ಬೌದ್ಧ ಧರ್ಮಗಳ ಚಿಹ್ನೆಗಳನ್ನು ಚಿಕ್ಕದಾಗಿ ಮುದ್ರಿಸಿದ್ದಾರೆ. ವೃತ್ತದ ಒಳಗೆ ಚಿಕ್ಕ ಅಕ್ಷರಗಳಲ್ಲಿ ಲೇಖಕರ ಹೆಸರನ್ನು ಕೊಡಲಾಗಿದೆ. ಈ ಕೃತಿಯಲ್ಲಿ ಲೇಖಕರು ದೇವರ ಬಗ್ಗೆ ಎಲ್ಲ ಧರ್ಮಗಳ ದೇವತೆಗಳ ಮಾಹಿತಿಯನ್ನು ಅಭಿವ್ಯಕ್ತಗೊಳಿಸಿದ್ದಾರೆ. ಮುಖಪುಟದಲ್ಲಿನ ವೃತ್ತದ ಹೊರಗೆ ಖಾಲಿ ಇರುವ ಸ್ಥಳವು ಸಹ ಈ ಮುಖಪುಟ ಅತ್ಯಾಕರ್ಷಕವಾಗಿ ಮೂಡಿ ಬರಲುಕಾರಣವಾಗಿದೆ.

### ೮.೭.೭. ಮಲ್ಲಿಗೆ ಮಾಲೆ (೧೯೯೪)

ಸಾಹಿತಿಗಳಾದ ರಘುಸುತ ರವರು ಈ ಕೃತಿಯನ್ನು ಕ್ರಿ.ಶ. ೧೯೯೪ ರಲ್ಲಿ ರಚಿಸಿ ಇದನ್ನು ಚಂದ್ರ ಪ್ರಿಂಟರ್ಸ್‌ನಲ್ಲಿ ಮುದ್ರಿಸಲಾಗಿದೆ. ಇದೊಂದು ಸಾಮಾಜಿಕ ಕಾದಂಬರಿಯಾಗಿದೆ. ಈ ಮುಖಪುಟದಲ್ಲಿ ಕಪ್ಪು, ಬಿಳಿ, ಗುಲಾಬಿ, ನೀಲಿ ವರ್ಣಗಳನ್ನು ಕಾಣಬಹುದು. ಮೇಲ್ಭಾಗದಲ್ಲಿ ಶೀರ್ಷಿಕೆಯನ್ನು ಕಪ್ಪು ವರ್ಣದಿಂದ ಕಟ್ಸ್‌ಸ್ಟೈಲ್ ಸೈಲಿಯಲ್ಲಿ ಎದ್ದು ಕಾಣುವಂತೆ ಬರೆಯಲಾಗಿದೆ. ಕೆಳಗೆ ನೀಲಿ, ಕಪ್ಪು, ಬಿಳಿ ವರ್ಣಗಳಿಂದ ಮೊಡದ ಆಕಾರದ ಮೇಲ್ಭಾಗದಲ್ಲಿ ಓರ್ವ ಸ್ತ್ರೀಯ ಭುಜದವರೆಗಿನ ಚಿತ್ರವಿದೆ. ಕೆಳಗಡೆ ಓರ್ವ ಸ್ತ್ರೀ ಮತ್ತು ಪುರುಷನ ಚಿತ್ರ ಕಾಣಬಹುದು. ಕೆಳಗೆ ಲೇಖಕರ ಹೆಸರನ್ನು ಕೊಡಲಾಗಿದೆ. ಈ ಮುಖಪುಟದಲ್ಲಿ ಶೀರ್ಷಿಕೆ ಆಕರ್ಷಕವಾಗಿದೆ. ಇಬ್ಬರು ಸ್ತ್ರೀಯ ಓರ್ವ ಪುರುಷನ ಚಿತ್ರವನ್ನು ಚಿತ್ರಕಾರ

ಸೊಗಸಾಗಿ ಚಿತ್ರಿಸಿದ್ದಾನೆ. ಈ ಮುಖಪುಟದಲ್ಲಿನ ಚಿತ್ರಕ್ಕೆ ಕಲಾವಲಿಯದಲ್ಲಿ ವಿರಣಾತ್ಮಕ/ದೃಷ್ಟಾಂತ ಚಿತ್ರವೆಂದು ಕರೆಯುತ್ತಾರೆ. ಲೇಖಕರು ಇಲ್ಲಿ ಮಲ್ಲಿಗೆಯಂತಹ ಗುಣವುಳ್ಳ, ಹೂವಿನ ಸ್ವಭಾವದ ಸ್ತ್ರೀಯ ಭಾವನೆಯಿಂದ ಅವಳ ಕಷ್ಟ ಸುಖ ಜೀವನವನ್ನು ಇಲ್ಲಿ ವಿವರಿಸಲಾಗಿದೆ.

**೮.೭.೮. ಸಾಲಿ ರಾಮಚಂದ್ರ ರಾಯ (೧೯೯೫)**

ಎ.ಕೆ. ಹಂಪಣ್ಣನವರು ಕ್ರಿ.ಶ. ೧೯೯೫ ರಲ್ಲಿ ಈ ಕೃತಿಯನ್ನು ರಚಿಸಿದರು. ಈ ಮುಖಪುಟದ ಕೆಳಗಿನ ಅರ್ಧಭಾಗ ಚಿತ್ರಣದಿಂದ ಎಲ್ಲರನ್ನು ಆಕರ್ಷಿಸುವಂತೆ ಮೂಡಿಬಂದಿದೆ. ಮೇಲ್ಭಾಗದಲ್ಲಿ ಮರೆಯಲಾಗದ ಬರಹಗಾರರು ಎಂದು ಕೇಸರಿ ವರ್ಣದಲ್ಲಿ ಕೆಳಗೆ ಹಸಿರು ವರ್ಣದಲ್ಲಿ ಮಧ್ಯಮ ಅಕ್ಷರ ಗಾತ್ರದಲ್ಲಿ ಶೀರ್ಷಿಕೆಯಿದೆ. ಕೆಳಗೆ ಕೇಸರಿ ವರ್ಣದಲ್ಲಿ ಸಾಹಿತ್ಯ ವಾಚಿಕೆ ಎಂದಿದೆ. ಇದರಡಿಯಲ್ಲಿ ಲೇಖಕರ ಹೆಸರಿದೆ, ಮುಖಪುಟದ ಅರ್ಧಭಾಗದಿಂದ ಕೆಳಕ್ಕೆ ಒಂದರ ಮೇಲೊಂದು ಪುಸ್ತಕಗಳನ್ನು ಜೋಡಿಸಿರುವಂತೆ, ಮೇಲಿನ ಪುಸ್ತಕ ತೆರೆದಿರುವಂತೆ ಅತ್ಯಾಕರ್ಷವಾಗಿದ್ದು, ಓದುಗರನ್ನು ಕೈ ಬೀಸಿ ಕರೆಯುವಂತೆ ಮೂಡಿಬಂದಿದೆ. ಈ ಕೃತಿಯು ವ್ಯಕ್ತಿ ಜೀವನ ಚರಿತ್ರೆಯಾಗಿದೆ. ಇದೇ ಮಾದರಿ ಮುಖಪುಟವನ್ನು (ಪಟೇಲ ಧೂಲಾಸಾಹೇಬ) 'ಮರೆಯಲಾಗದ ಬರಹಗಾರರು' ಸಾಹಿತ್ಯ ವಾಚಿಕೆ ಮಾಲಿಕೆಯ ಇನ್ನುಳಿದ ಹಲವು ಪುಸ್ತಕಗಳಿಗೆ ಬಳಸಿಕೊಂಡಿದ್ದಾರೆ. ಇಂತಹ ವಿಧಾನಕ್ಕೆ ಏಕರೂಪದ ಮುಖಪುಟ ಎಂದು ಕರೆಯಬಹುದು.

**೮.೭.೯. ಮಕ್ಕಳ ಸಾಹಿತ್ಯ ಕತೆಗಳು (೧೯೯೬)**

ಈ ಕೃತಿಯು ಕ್ರಿ.ಶ. ೧೯೯೬ ರಲ್ಲಿ ಪ್ರಸಿದ್ಧ ಲೇಖಕರಾದ ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ ಇವರಿಂದ ರಚನೆಗೊಂಡಿದೆ. ಲೇಖಕರು ಈ ಕೃತಿಯನ್ನು ಎಸ್.ಜಿ. ಸ್ವಾಮಿ ಮುದ್ರಣಾಲಯದಲ್ಲಿ ಅಚ್ಚು ಹಾಕಿಸಿದ್ದಾರೆ. ಈ ಮುಖಪುಟ ಅತ್ಯಂತ ಸರಳ ರೇಖಾಚಿತ್ರ ಮಾದರಿಯಲ್ಲಿ ಮೂಡಿಬಂದಿದೆ. ಈ ಮುಖಪುಟದಲ್ಲಿ ಬಾದಾಮಿ ಹಳದಿ ಮಿಶ್ರಿತ ವರ್ಣವೇ ಇಡೀ ಮುಖಪುಟದ ಹಿನ್ನೆಲೆಗೆ ಆವರಿಸಿದೆ. ಮೇಲ್ಭಾಗ ಸಣ್ಣ ಅಕ್ಷರದಲ್ಲಿ ಕನ್ನಡ ಸಾಹಿತ್ಯ: ಕಾಲು ಶತಮಾನ ಅದರ ಕೆಳಗೆ ಸ್ಪಷ್ಟ ಅಕ್ಷರದಲ್ಲಿ ಶೀರ್ಷಿಕೆ ಆಕರ್ಷಕವಾಗಿ ಮೂಡಿ ಬಂದಿದೆ. ಮಧ್ಯ ಭಾಗದಿಂದ ಕೆಳಗಿನವರೆಗೆ ಗೆರೆ ಎಳೆದಂತಹ ಸರಳ ರೇಖಾಚಿತ್ರ ನೋಡುಗರನ್ನು ವಿಚಲಿತಗೊಳಿಸುವಂತಿದೆ. ಇಲ್ಲಿ ಇಬ್ಬರು ಮಕ್ಕಳ ಪಕ್ಕದಲ್ಲಿ ಮೊಗ್ಗುಗಳ ಚಿತ್ರಣವಿದೆ. ಇದನ್ನು ಸೂಕ್ಷ್ಮ ಸರಳ ಚಿತ್ರಕಲೆ ಎನ್ನಬಹುದು. ಈ ಕೃತಿಯಲ್ಲಿ ಲೇಖಕರು ಮಕ್ಕಳಿಗೆ ಅರ್ಥವಾಗುವಂತಹ ಸರಳ ಪದಗಳಿಂದ ಕೂಡಿರುವಂತಹ ಚಿಕ್ಕ ಚಿಕ್ಕ ಕಥಾಹಂದರವನ್ನು ಹೊಂದಿರುವ ಕೃತಿಯಾಗಿದೆ. ಇದು ಅತ್ಯಂತ ಸರಳ ಮತ್ತು ಸುಂದರ ಮುಖಪುಟ ಎನ್ನಿಸಿಕೋಳ್ಳುತ್ತದೆ.

**೮.೭.೧೦. ಮಾದಾರ ಚನ್ನಯ್ಯ (ಕವನ ಸಂಕಲನ) (೧೯೯೬)**

ಸಿದ್ದಪ್ಪಮಾದರ ರವರು ಈ ಕೃತಿಯನ್ನು ೧೯೯೬ ರಲ್ಲಿ ರಚಿಸಿದ್ದಾರೆ. ಈ ಕೃತಿಯ ಮುಖಪುಟವು ಬಸವರಾಜ ಗವಿಮಠ್ ಅವರು ರಚಿಸಿದ್ದು, ಇದು ಕಪ್ಪು-ಬಿಳಿ ಕೆಂಪು ವರ್ಣದಲ್ಲಿ ಮೂಡಿಬಂದ

ಮುಖಪುಟವಾಗಿದೆ. ಮೇಲ್ಭಾಗದಲ್ಲಿ ಎಲ್ಲರ ಕಣ್ಮನ ಸೆಳೆಯುವಂತೆ ಶೀರ್ಷಿಕೆ ಮೂಡಿಬಂದಿದೆ. ಮಧ್ಯೆ ಚಿತ್ರಕಾರನಿಂದ ಸೊಗಸಾದ ಚಿತ್ರ ಮೂಡಿದೆ. ಚಿತ್ರದಲ್ಲಿ ಒಂದುಗೂಡಿಸಲು ಅಲ್ಲಿ ಮಾದಾರ ಚೆನ್ನಯ್ಯ ಬಾಗಿಲ ಹೊರಗೆ ನಿಂತಿರುವ ಮತ್ತು ಬಾಗಿಲ ಒಳಗೆ ಅವನ ಪತ್ನಿ ನಿಂತಿರುವ ದೃಶ್ಯವಿದೆ. ಹೊರಗಡೆಯಿಂದ ರಾಜ ಬಂದು ಚೆನ್ನಯ್ಯನವರ ಕಾಲಿಗೆ ಬಿದ್ದು ಆಶೀರ್ವಾದ ಪಡೆಯುತ್ತಿದ್ದು, ಇದನ್ನು ಇಬ್ಬರು ನಿಂತು ನೋಡುತ್ತಿರುವ ದೃಶ್ಯ ಸೊಗಸಾಗಿ ಮೂಡಿ ಬಂದಿದೆ. ಇಡಿ ಮುಖಪುಟ ರೇಖಾಚಿತ್ರದಿಂದ ಕಪ್ಪು-ಬಿಳಪು ವರ್ಣಗಳಿಂದ ಹಾಗೂ ಉತ್ತಮವಾದ ಬೆಳಕು-ನೆರಳುನಿಂದ ನಿರ್ಮಾಣಗೊಂಡಿದೆ. ಶೀರ್ಷಿಕೆಯ ಅಕ್ಷರಗಳು ವಿಶೇಷ ಶೈಲಿಹೊಂದಿವೆ. ಕೆಳಗೆ ಲೇಖಕರ ಹೆಸರನ್ನು ಮುದ್ರಿಸಲಾಗಿದೆ. ಕೃತಿಯಲ್ಲಿ ಲೇಖಕರು ಶರಣ ಶಿವಭಕ್ತರಾದ ಮಾದಾರ ಚೆನ್ನಯ್ಯನವರ ಜೀವನ ವೃತ್ತಾಂತವನ್ನು ಇಲ್ಲಿ ತಿಳಿಸಿದ್ದಾರೆ. ಈ ಮುಖಪುಟವು ಆಕರ್ಷಕವಾಗಿ ಮೂಡಿಬಂದಿದೆ.

### ೮.೭.೧೧. ಮಿತ್ರ ಸಂಪ್ರಾಪ್ತಿ (೧೯೯೬)

ಈ ಕೃತಿಯನ್ನು ಎನ್.ಕೆ. ನರಸಿಂಹಮೂರ್ತಿ ಯವರು ಕ್ರಿ.ಶ. ೧೯೯೬ ರಲ್ಲಿ ರಚಿಸಿ, ಪರಿಮಳ ಮುದ್ರಣಾಲಯದಲ್ಲಿ ಮುದ್ರಣ ಮಾಡಿಸಿದರು. ಈ ಮುಖಪುಟವು ಅಂದವಾಗಿ ಮೂಡಿದ್ದು, ಸ್ನೇಹತ್ವ ಸಾರುವ ದೃಶ್ಯವನ್ನು ಒಳಗೊಂಡಿದೆ. ಇಲ್ಲಿ ಆಕಾಶ ನೀಲಿ, ಕಪ್ಪು, ಬಿಳಿ, ಕೆಂಪು, ಬೂದಿ, ಕೇಸರಿ, ಹಸಿರು ವರ್ಣಗಳ ಬಳಕೆ ಮಾಡಿ ಮುಖಪುಟ ರಚಿಸಿದ್ದಾರೆ. ಮೇಲ್ಭಾಗದಿಂದ ಅರ್ಧಕ್ಕಿಂತ ಹೆಚ್ಚು ಮುಖಪುಟ ಆಕಾಶದಿಂದ ಆವೃತವಾಗಿದ್ದು, ಬಿಳಿಯ ಮೋಡಗಳನ್ನು ನೋಡಬಹುದು. ಮೇಲ್ಭಾಗದಲ್ಲಿ ಕೆಂಪು ವರ್ಣದಲ್ಲಿ ಶೀರ್ಷಿಕೆ ಕ್ಯಾಲಿಗ್ರಾಫಿ ಅಕ್ಷರಗಳ ಶೈಲಿಯಲ್ಲಿ ಸೊಗಸಾಗಿದೆ. ಅಕ್ಕಪಕ್ಕ ಮೋಡಗಳು, ಇದರ ಕೆಳಗೆ ಒಂದು ಪಕ್ಷಿಯ ಮೇಲೆ ಒಂದು ಚಿಕ್ಕ ಪ್ರಾಣಿ ಇಲಿ ಕುಳಿತಿರುವುದು ಕಾಣುತ್ತೆ. ಪಕ್ಷಿ ಅದನ್ನು ಹೊತ್ತು ಹಾರುವ ಚಿತ್ರವು ಸುಂದರವಾಗಿದೆ. ಕೆಳಗೆ ಬೆಟ್ಟಗಳ ಸಾಲು, ಅದರಡಿ ಹಸಿರಿನಿಂದ ಕಂಗೊಳಿಸುವ ಮರಗಳಿವೆ. ಇಲ್ಲಿ ಕಲಾವಿದರು ಮಿತ್ರ ಸಂಪ್ರಾಪ್ತಿ ಶೀರ್ಷಿಕೆಗೆ ಅರ್ಥಗರ್ಭಿತವಾದ ಮುಖಪುಟ ರಚಿಸಿದ್ದಾರೆ. ಚಿತ್ರವನ್ನು ಗಮನಿಸಿದಾಗ ಇಲ್ಲಿ ಪಕ್ಷಿಯು ಇಲಿಗೆ ಸಹಾಯ ಮಾಡುತ್ತಿದೆ. ಇದು ಸ್ನೇಹದ ಪ್ರತೀಕವೆಂದು, ಸ್ನೇಹ-ಸಂಕೇತಗಳನ್ನು ತಿಳಿಸಿದ್ದಾರೆ. ಈ ಮುಖಪುಟ ಆಕರ್ಷಕವಾಗಿ ನೋಡುಗರ ಗಮನ ಸೆಳೆಯುತ್ತದೆ.

### ೮.೭.೧೨. ಬುದ್ಧನ ನಾಡಿನಲ್ಲಿ (೧೯೯೮)

ಈ ಕೃತಿಯನ್ನು ಲೇಖಕರಾದ ರಾಜಶೇಖರ ಹತಗುಂದಿ ಯವರು ಕ್ರಿ.ಶ. ೧೯೯೮ ರಲ್ಲಿ ರಚಿಸಿದರು. ಈ ಮುಖಪುಟ ಅತ್ಯಂತ ಅಮೋಘ, ಆಕರ್ಷಕವಾಗಿ ಮೂಡಿಬಂದಿದೆ. ಇಲ್ಲಿ ಹಸಿರು, ಗುಲಾಬಿ, ಹಳದಿ, ಕೆಂಪು, ಕಪ್ಪು-ಬಿಳಿ ವರ್ಣಗಳಿಂದ ತಯಾರಾದ ಮುಖಪುಟ ಕಾಣಬಹುದು. ಮುಖಪುಟದ ಮೇಲ್ಭಾಗ, ಕೆಳಭಾಗ ಕಪ್ಪು ವರ್ಣದಿಂದ ಆವೃತವಾಗಿದೆ. ಇನ್ನುಳಿದಂತೆ ಹಸಿರು ವರ್ಣ ಮುಖಪುಟವನ್ನು ಆವರಿಸಿದೆ. ಮೇಲೆ ಹಳದಿ ಬಣ್ಣದಲ್ಲಿ ಮಧ್ಯಮ ಅಕ್ಷರ ಗಾತ್ರದಲ್ಲಿ ಶೀರ್ಷಿಕೆ ಸೊಗಸಾಗಿದೆ. ಕೆಳಗೆ ಬಲಕ್ಕೆ ಬರುವಂತೆ ಚಿಕ್ಕ ಗಾತ್ರದ ಅಕ್ಷರದಲ್ಲಿ ಲೇಖಕರ ಹೆಸರಿದೆ. ಮುಖಪುಟದ ಮಧ್ಯಭಾಗದಲ್ಲಿ ಗುಲಾಬಿ ವರ್ಣದ ಗೌತಮ

ಬುದ್ಧನ ವಿಗ್ರಹ ಎಲ್ಲರ ಕಣ್ಣು ಕುಕ್ಕುವ ಹಾಗೆ ಮೂಡಿದೆ. ಅರಳಿರುವ ಕಮಲದ ಮೇಲೆ ಕುಳಿತು ಆಶೀರ್ವಾದ ಮಾಡುತ್ತಿರುವ ಹಸನ್ಮುಖಿ ವಿಗ್ರಹ ಮನಸೂರೆಗೊಳ್ಳುತ್ತದೆ. ಕೆಳಗೆ ಅರಳಿರುವಂತೆ ಕಮಲದ ಹೂವಿದೆ. ಅದರ ಸುತ್ತಲಿಂದ ಚಿತ್ತಾರ ಬಿಡಿಸಿ ಅದರ ಎಲೆಗಳು ಬುದ್ಧನ ವಿಗ್ರಹಕ್ಕೆ ಅಂದ ಮೂಡಿಸಿವೆ. ವಿಗ್ರಹದ ಹಿಂಭಾಗ ಜ್ಞಾನೋದಯವಾದ ಬುದ್ಧನಿಗೆ ಹಿಂಬದಿಯಿಂದ ಪ್ರಜ್ವಲಿಸುವ ಬೆಳಕು ಮೂಡುವಂತೆ ವಿನ್ಯಾಸಕಾರ ಒಂದು ಅಮೋಘ ಮುಖಪುಟ ರಚಿಸಿದ್ದಾರೆ. ಈ ಮುಖಪುಟ ನೋಡುತ್ತಿದರ ಶಾಂತತೆಯ ಭಾವ ಮೂಡುತದೆ. ತುಂಬಾ ಅರ್ಥತಗರ್ಭಿತವಾದ ಮತ್ತು ಸಮತೋಲನತೆ ಕಾದು ಕೊಂಡ ರಚನೆಗೊಂಡ ಮುಖಪುಟವಿನ್ಯಾಸ. ಭಾರತದಾದ್ಯಂತ ತನ್ನ ಬೌದ್ಧ ಧರ್ಮವನ್ನು ಅದರ ಸಾರವನ್ನು ಪ್ರಚಾರ ಮಾಡಿದು, ಬುದ್ಧ ಹುಟ್ಟಿದ ಜ್ಞಾನೋದಯವಾದ ಸ್ಥಳ, ಪ್ರಚಾರ ಮಾಡಿದ ಸ್ಥಳಗಳ ಮಾಹಿತಿಯನ್ನು ಇಲ್ಲಿ ಲೇಖಕರು ಓದುಗರನ್ನು ಬೇರೊಂದು ಲೋಕಕ್ಕೆ ಕೊಂಡೊಯ್ಯುವಂತೆ ರಚಿಸಿದ್ದಾರೆ.

### ೮.೭.೧೩. ಸ್ವಾತಂತ್ರ್ಯ ಸಮರದ, ಗೇಯ ಗೀತೆಗಳು (೧೯೯೮)

ಈ ಸಾಹಿತ್ಯ ಕೃತಿಯನ್ನು ಸಂಪಾದಕರಾದ ಡಾ. ಸೂರ್ಯನಾಥ ಕಾಮತ್ ರವರು ಕ್ರಿ.ಶ. ೧೯೯೮ ರಲ್ಲಿ ರಚಿಸಿದರು. ಈ ಮುಖಪುಟದಲ್ಲಿ ಕಪ್ಪು, ಬಿಳಿ, ಕೇಸರಿ, ನೀಲಿ ವರ್ಣಗಳನ್ನು ಕಾಣಬಹುದು. ಮೇಲ್ಭಾಗದಲ್ಲಿ ಕಪ್ಪು ವರ್ಣದಿಂದ ಸ್ಪಷ್ಟವಾಗಿ ಶೀರ್ಷಿಕೆ ಆಕರ್ಷಿಸುವಂತೆ ದಪ್ಪ ಅಕ್ಷರಗಳಲ್ಲಿ ಬರೆಯಲಾಗಿದೆ. ಇದಕ್ಕೆ ಅಂಟಿಕೊಂಡಂತೆ ಒಂದು ದೊಡ್ಡ ನೀಲಿ ವೃತ್ತವನ್ನು ಚುಕ್ಕೆ ಮಾದರಿಯಲ್ಲಿ ಬಿಡಿಸಿದೆ. ಈ ವೃತ್ತದ ಮುಂದೆ ಕಂದು ವರ್ಣದಲ್ಲಿ ಪುರುಷರು ಹಲಗೆ ಬಡಿಯುತ್ತಾ, ಹಾಡು ಹಾಡುತ್ತಾ, ನೃತ್ಯ ಮಾಡುತ್ತಿರುವುದು ಎದ್ದು ಕಾಣುತ್ತದೆ. ಇಲ್ಲಿ ರಚನೆಗೊಂಡ ಚಿತ್ರಗಳು ತುಂಬಾ ಉತ್ತಮ ಶೈಲಿ ಮತ್ತು ಚಪ್ಪಟೆ ಲೇಪನದಿಂದ ಕೊಡಿವೆ. ನೃತ್ಯ ಮಾಡುತ್ತಿರವ ಚಿತ್ರದ ಕೆಳಗೆ ಸಂಪಾದಕರ ಹೆಸರನ್ನು ನೀಲಿ ಬಣ್ಣದಲ್ಲಿ ಕಾಣುವಂತೆ ಬರೆದಿದೆ. ಕೆಳಗೆ ಗೆರೆ ಎಳೆದು ಅದರಡಿಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡಮಿಯ ಚಿಹ್ನೆ ವಿಳಾಸ ನೀಡಲಾಗಿದೆ. ಈ ಮುಖಪುಟದ ಚಿತ್ರದ ಹಿಂಭಾಗ ಸಂಪೂರ್ಣ ಬಿಳಿ ವರ್ಣದಿಂದ ಆವೃತಗೊಂಡಿದೆ. ಬ್ರಿಟಿಷರ ದಾಸ್ಯದಲ್ಲಿ ಹೇಡಿಗಳಂತಿದ್ದ ಪುರುಷರನ್ನು ಬಡಿದೆಬ್ಬಿಸಲು, ಪ್ರತಿಯೊಬ್ಬರಿಗೂ ಮನವರಿಕೆ ಮಾಡಲು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಅಣಿಗೊಳಿಸುವ ಗೀತೆಗಳನ್ನು ಹಾಡುತ್ತಿದ್ದರು. ಅಂತಹ ಗೀತೆಗಳನ್ನು ಕೃತಿಯಲ್ಲಿ ಸಂಪಾದಕರು ಸಂಪಾದಿಸಿ ರಚಿಸಿದ್ದಾರೆ.

### ೮.೭.೧೪. ಆನಂದಕಂದ (೨೦೦೦)

ಎಸ್.ವಿ. ಶ್ರೀನಿವಾಸರಾವ್ ರವರು ರಚಿಸಿದರು ಈ ಕೃತಿ ಕ್ರಿ.ಶ. ೨೦೦೦ ದಲ್ಲಿ ಆರ್. ಸೂರಿ ಮುದ್ರಣಾಲಯದಲ್ಲಿ ಮುದ್ರಣ ಕಂಡಿತು. ಸರಳ ವರ್ಣ ರಂಜಿತ ಮುಖಪುಟವಾಗಿದೆ. ಮೇಲ್ಭಾಗದಲ್ಲಿ ಮತ್ತು ಶೀರ್ಷಿಕೆಯ ಕೆಳಗೆ ಬಿಳಿವರ್ಣದಲ್ಲಿ ಮರೆಯಲಾಗದ ಬರಹಗಾರರು, ಸಾಹಿತ್ಯ ವಾಚಿಕೆ ಎಂದಿದೆ. ಕೇಸರಿ ವರ್ಣದಲ್ಲಿ ಲೇಖಕರ ಹೆಸರಿದೆ. ಮಧ್ಯದಿಂದ ಕೆಳಗಿನವರೆಗೆ ನಾಲ್ಕು ಪುಸ್ತಕಗಳನ್ನು ಎರಡೆರೆಡು ಅದಲು ಬದಲಿನಂತೆ ಬಿಡಿಸಿದ್ದಾರೆ. ಗುಲಾಬಿ, ಹಸಿರು, ಕೇಸರಿ, ನೀಲಿ ವರ್ಣದಲ್ಲಿ ಕಪ್ಪು ಬಿಳಿ ವರ್ಣದಲ್ಲಿ

ಒಂದರ ಮೇಲೊಂದು ಇಟ್ಟಿರುವಂತೆ ಪುಸ್ತಕಗಳು ಸೊಗಸಾಗಿದೆ. ಕಪ್ಪು, ನೀಲಿ ಮಿಶ್ರಣದ ಬಣ್ಣದಿಂದ ಮುಖಪುಟ ಆವೃತ್ತಗೊಂಡಿದೆ. ಇಲ್ಲಿ ಶೀರ್ಷಿಕೆ ಆಕರ್ಷಕವಾಗಿ ಮೂಡಬೇಕಾಗಿತ್ತು.ಇದಕ್ಕೆ ಸಾದರ ಮುಖಪುಟ ಎನ್ನಬಹುದು.

**೮.೮.ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಈ ಸಾಲಿನಲ್ಲಿ ತಂತ್ರಜ್ಞಾನ ಅಪಾರವಾಗಿ ಬೆಳೆಯಿತು. ಕಂಪ್ಯೂಟರ್, ಮೊಬೈಲ್, ಟ್ಯಾಬ್‌ಲೆಟ್‌ಗಳು, ವಿಶೇಷ ಕಲರ್ ಮುದ್ರಣ ಯಂತ್ರಗಳು, ಬೇಕೆಂದ ರೀತಿ ಚಿತ್ರ ರಚನೆ, ಬಣ್ಣಗಳ ಮಿಶ್ರಣ, ವಿಭಿನ್ನ, ವಿಶೇಷ ಅಕ್ಷರ ಶೈಲಿಯಲ್ಲಿ ಕಂಪ್ಯೂಟರ್‌ನಲ್ಲಿ ತಯಾರಿಸಿ ಮುಖಪುಟ ಕೃತಿಯನ್ನು ರಚಿಸುವ ಕಾಲ ಇದಾಗಿದೆ. ಅಸಾಧ್ಯವಾದ ಮುಖಪುಟವನ್ನು ಕೆಲವೇ ಸಮಯಗಳಲ್ಲಿ, ರಚಿಸಿ ಬಿಡುವಂತಹ ತಂತ್ರಜ್ಞಾನ ಬೆಳೆದಿದೆ. ಈ ಕಾಲ ಯಾಂತ್ರಿಕ ಕಾಲವಾಗಿದೆ. ಮಾನವ ಮಾಡಬೇಕಾದ ಕಾರ್ಯಗಳನ್ನು ಕೆಲವೇ ನಿಮಿಷಗಳಲ್ಲಿ ಯಂತ್ರೋಪಕರಣಗಳಿಂದ ಸ್ಪಷ್ಟವಾಗಿ ಮೂಡುವಂತಹ ಕಲೆ ರಚನೆಯಾಗಿದೆ. ಎಲ್ಲವು ಸಾಧ್ಯವಾಗುವಂತಹ ಮಟ್ಟಕ್ಕೆ ಬಂದಿದೆ.

ಭಾರತ ದೇಶ ಹಿಂದೆ ಹಲವು ಕಂಪ್ಯೂಟರ್‌ಗಳನ್ನು, ಮೊಬೈಲ್, ಟ್ಯಾಬಲೆಟ್‌ಗಳನ್ನು ಅನೇಕ ಯಂತ್ರೋಪಕರಣಗಳನ್ನು ನೆರೆಹೊರೆ ದೇಶಗಳಾದ ಚೀನಾ, ಜಪಾನ್ ನಿಂದ ಆಮದು ಮಾಡಿಕೊಂಡು ಬೆಳೆಯಿತು. ಈಗ ಸ್ವತಃ ಭಾರತ ದೇಶವೇ ಎಲ್ಲಾ ಮಾದರಿಯ ಯಂತ್ರೋಪರಣಗಳನ್ನು ಸಿದ್ಧಪಡಿಸುವ ಹಂತಕ್ಕೆ ಬಂದಿದೆ. ಆಮದು ಕಡಿಮೆ ಮಾಡಿ, ರಫ್ತು ಮಾಡುವ ಹಂತಕ್ಕೆ ಭಾರತ ದೇಶ ಬೆಳೆಯುತ್ತಿದೆ. ಎಲ್ಲಾ ಮಾದರಿಯ ವಸ್ತುಗಳು ಭಾರತದಲ್ಲಿಯೇ ತಯಾರಾಗಬೇಕೆಂಬ ಹಂಬಲದಿಂದ ಮೇಕ್ ಇನ್ ಇಂಡಿಯಾ ಎಂಬ ಹೊಸ ತಯಾರಿಕೆ ಆರಂಭವಾಗಿದೆ. ಆದರೆ ಇಲ್ಲಿ ೨೦೦೧ ರಿಂದ ೨೦೧೫ ರವರೆಗೆ ಕನ್ನಡ ಸಾಹಿತ್ಯ ಕೃತಿಗಳ ಮುಖಪುಟದಲ್ಲಾದ ಬದಲಾವಣೆ ಗಮನಿಸಬಹುದು. ಈ ಅವದಿಯಲ್ಲಿ ಸುಮಾರು ಕೃತಿಗಳು ಮೂಡಿಬಂದಿವೆ. ಅವುಗಳಲ್ಲಿ ಕೆಲವು ಕೃತಿಗಳು ಈ ಮುಂದಿನಂತಿವೆ.

ಡಾ. ಗುರುಲಿಂಗ ಕಾಪಸೆ ರಚಿಸಿರುವ 'ಮಧುರ ಚೆನ್ನ ಬದುಕು' ಪ್ರೊ. ಶಿವರಾಮು ಕಾಡನಕುಪ್ಪೆ ರವರ 'ಹಾಮಾನಾ' (ಸಾಹಿತ್ಯ ಅವಲೋಕನ) ಶ್ಯಾಮಸುಂದರ ಬಿದರ ಕುಂದಿ ಯವರ 'ದೀಪದಡಿಯ ಗದ್ದುಗೆ' ಡಾ. ರಾಜೇಂದ್ರ ಚೆನ್ನಿ ಯವರ 'ಜಾಗತೀಕರಣ' ಒಂದು ಸಮಗ್ರ ಮಂಥನ ಡಾ. ಎಂ.ಎಸ್. ಶೇಖರ್‌ರವರ 'ಮೊದಲ ತಲೆಮಾರಿನ ದಲಿತ ಸಾಹಿತಿಗಳು' ಡಾ. ಸಬಿಹಾ ಭೂಮಿಗೌಡರು ರಚಿಸಿರುವ 'ಮಹಿಳಾ ಆತ್ಮಕಥೆಗಳು' ಲಕ್ಷ್ಮಿ ನಾರಾಯಣ ರಚಿಸಿದ 'ಜ್ಞಾನಪೀಠ ಪ್ರಶಸ್ತಿ ವಿಜೇತರು – ಮಾಸ್ತಿ' ಮಲ್ಲೇಪುರಂ ಜಿ. ವೆಂಕಟೇಶರವರ 'ಜ್ಞಾನಪೀಠ ಪ್ರಶಸ್ತಿ ವಿಜೇತರು –ಗೋಕಾಕ್' ಡಾ. ಕೃಷ್ಣಮೂರ್ತಿ ಚಂದರ್ ರವರ 'ಜ್ಞಾನಪೀಠ ಪ್ರಶಸ್ತಿವಿಜೇತರು ಗಿರೀಶ್ ಕಾರ್ನಾಡ್' ಕೆ.ಎಂ. ಮುನಿಕೃಷ್ಣಪ್ಪ ರವರ 'ಜ್ಞಾನಪೀಠ ಪ್ರಶಸ್ತಿ ವಿಜೇತರು–ಕುವೆಂಪು' ಡಾ. ಡಿ. ಮಂಗಳಾ ಪ್ರಿಯದರ್ಶಿನಿಯವರ 'ಜ್ಞಾನಪೀಠ ಪ್ರಶಸ್ತಿ ವಿಜೇತರು–ಬೇಂದ್ರೆ' ಡಾ. ಕಾಳ್ತಜೆ ವಸಂತಕುಮಾರ್ ರವರ 'ಜ್ಞಾನಪೀಠ ಪ್ರಶಸ್ತಿ ವಿಜೇತರು –

ಶಿವರಾಮ ಕಾರಂತ' ಗಿರಡ್ಡಿ ಗೋವಿಂದರಾಜರವರ ಪ್ರಸಿದ್ಧ ಕೃತಿ 'ಜನ್ನ' ಡಾ. ಜಯಶ್ರೀ ದಂಡೆ ಯವರ 'ಕನ್ನಡಕ್ಕೆ ಶಾಸ್ತ್ರೀಯ ಭಾಷೆ ಸ್ಥಾನಮಾನ' ಡಾ. ಎಸ್.ಎಸ್. ಪಾಟೀಲ ರವರ 'ವಿಜ್ಞಾನ ಸಾಹಿತ್ಯ – ೨೦೦೮' ಡಾ. ಬಾಳಾ ಸಾಹೇಬ ಲೋಕಾಪುರ ರವರ 'ಬೆಳಗೊಳದ ಬೆಳಸು' ಶೂದ್ರ ಶ್ರೀನಿವಾಸ ರವರ 'ಜ್ಞಾನಪೀಠ ಪ್ರಶಸ್ತಿ ವಿಜೇತರು –ಯು.ಆರ್. ಅನಂತಮೂರ್ತಿ' ಎಂ. ಧ್ರುವ ನಾರಾಯಣರವರು ರಚಿಸಿದ 'ಹೈ–ಕ ಕನ್ನಡ ಕಟ್ಟಿದವರು' ಶೋಭಾ ದೇ.ಪಿಡ್ಡಿ ಯವರ 'ಮನದಂಗಳದ ಹಾಡು' ಡಾ. ಜಯಶ್ರೀ ದಂಡೆಯವರು 'ಕನ್ನಡ–ತಮಿಳು' ಕೃತಿ ಸೊಗಸಾಗಿದೆ. ಚಂದ್ರಶೇಖರ ತಾಳ್ಯ ಮತ್ತು ಡಾ. ಕುಂಸಿ ಉಮೇಶ್‌ರವರ "ನೆಲದ ತಳಮಳ" (ಕವನ ಸಂಗ್ರಹ) ಪಂಡಿತ ಕೆ. ರಾಥೋಡ್‌ರವರ 'ಬಂಜಾರ ಸಂಸ್ಕೃತಿ ಕಥನ' ಪ್ರಜ್ಞಾ ಮತ್ತಿಹಳ್ಳಿಯವರ 'ದೇವರ ಸ್ವಂತ ನಾಡಿನಲ್ಲಿ' ಮೇದೂರು ತೇಜರವರ 'ತೇಟ ತೆಲುಗು ನಾಡಿನಲ್ಲಿ' ಎಂಬ ಅನೇಕ ಕೃತಿಗಳು ಈ ಸಾಲಿನಲ್ಲಿ ಮೂಡಿ ಬಂದವು.

**೮.೮.೧. ಮಧುರ ಚೆನ್ನ : ಬದುಕು–ಬರಹ–ಚಿಂತನೆ (೨೦೦೩)**

ಈ ಮುಖಪುಟವು ಅತ್ಯಂತ ವರ್ಣರಂಜಿತವಾಗಿ ಮೂಡಿಬಂದಿದೆ. ಈ ಕೃತಿಯನ್ನು ಕ್ರಿ.ಶ. ೨೦೦೩ ರಲ್ಲಿ ಡಾ. ಗುರುಲಿಂಗ ಕಾಪಸೆಯವರು ರಚಿಸಿದ್ದಾರೆ. ಮೇಲ್ಭಾಗದ ಎಡಕ್ಕೆ ಆಕಾಶವು ನೀಲಿವರ್ಣದಿಂದ ಕಂಗೊಳಿಸುತ್ತಿದೆ. ಬಲಕ್ಕೆ ಹಚ್ಚ ಹಸಿರಿನ ಮರವಿದೆ. ಮಧ್ಯದಲ್ಲಿ ಬೆಟ್ಟವಿದ್ದು ಕೆಳಗಿನ ಭೂ ಪ್ರದೇಶ ಹಸಿರಿನಿಂದ ಕಂಗೊಳಿಸುವಂತಿದೆ. ಈ ಭೂ ಪ್ರದೇಶದಲ್ಲಿ ಒಂದು ನವಿಲು ಭಾಗಿದ್ದು, ಇನ್ನೊಂದು ನವಿಲು ಗರಿಬಿಚ್ಚಿ ನೀಲಿ, ಹಸಿರು, ಹಳದಿ ಬಂಗಾರದ ವರ್ಣದಲ್ಲಿ ಕಣ್ಮನ ಸೆಳೆಯುವಂತಿದೆ. ಕೆಳಗೆ ಸಾಹಿತ್ಯ ಅಕಾಡೆಮಿಯ ಚಿಹ್ನೆ ವಿಳಾಸ ನೀಡಲಾಗಿದೆ. ಈ ಮುಖಪುಟದ ಮೇಲ್ಭಾಗದಲ್ಲಿ ಬಿಳಿವರ್ಣದಿಂದ ಶೀರ್ಷಿಕೆಯನ್ನು ಬರೆದಿದೆ ಮುಖಪುಟದ ಮಧ್ಯದ ಎಡಕ್ಕೆ ಲೇಖಕರ ಹೆಸರನ್ನು ಕೊಡಲಾಗಿದೆ. ಇದು ವ್ಯಕ್ತಿ ಸಂಬಂಧ ಕೃತಿಯಾಗಿದ್ದು, ಇಲ್ಲಿ ನವಿಲುಗಳ ಚಿತ್ರಣಕ್ಕೂ ಸಂಬಂಧವಿಲ್ಲ. ಆದರೆ ಮುಖಪುಟ ಆಕರ್ಷಕವಾಗಿ ಮೂಡಿ ಬಂದಿದೆ.

**೮.೮..೨. ಹಾ.ಮಾ.ನಾ ಸಾಹಿತ್ಯ ಅವಲೋಕನ (೨೦೦೩)**

ಇವರ ಸಂಪೂರ್ಣ ಹೆಸರು ಹಾರೋಗದ್ದೆ ಮಾನಪ್ಪ ನಾಯಕ ಎಂದಿದ್ದು, ಇದನ್ನು ಸ್ವತಃ ಅವರೇ ಹಾ ಮಾ ನಾ ಅಥವಾ ಹಾ.ಮಾ. ನಾಯಕ್ ಎಂದು ಕರೆದುಕೊಂಡಿದ್ದು. ಎಲ್ಲರಿಗೂ ಈ ಹೆಸರೇ ಪರಿಚಿತವಾಗಿದೆ. ಇವರ ಸಂಪೂರ್ಣ ಸಾಹಿತ್ಯ ಅವಲೋಕನ, ಜೀವನ, ಸಾಧಕ–ಬಾಧಕಗಳು ಹೇಗಿದ್ದವು ಎಂಬುದನ್ನು ಇಲ್ಲಿ ಪ್ರೊ. ಶಿವರಾಮ ಕಾಡನಕುಪ್ಪೆಯವರು ಕ್ರಿ.ಶ. ೨೦೦೩ ರಲ್ಲಿ ಈ ಕೃತಿಯನ್ನು ರಚಿಸಿ ಇದನ್ನು ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಎಂಬಲ್ಲಿ ಮುದ್ರಿಸಲಾಯಿತು. ಈ ಮುಖಪುಟದ ಮೇಲ್ಭಾಗ ಶೀರ್ಷಿಕೆ ವಿಶೇಷ ಶೈಲಿಯಲ್ಲಿದ್ದು ಸ್ವಲ್ಪ ಕೆಳಗೆ ಸಾಹಿತ್ಯಾವಲೋಕನವೆಂದಿದ್ದು ಇದರ ಕೆಳಗೆ ಬಲಕ್ಕೆ ಸಂಪಾದಕರ ಹೆಸರಿದೆ. ಮುಖಪುಟದ ಮೇಲ್ಭಾಗದಿಂದ ಕೆಳಗಿನವರೆಗೆ ಹಾ. ಮಾ .ನಾಯಕ್‌ರವರ ಮುಖದ ಭಾವಚಿತ್ರವನ್ನು ಕಪ್ಪು, ಬಿಳಿ ವರ್ಣದಲ್ಲಿ ಕುತ್ತಿಗೆವರೆಗೆ ಮಾತ್ರ ಮುದ್ರಿಸಲಾಗಿದೆ.

ಬಲದ ಕೆಳಗಿನ ತುದಿಯಲ್ಲಿ ಹಾಮಾನಾರವರು ಬಿಳಿ ಜುಬ್ಬಾ ಧರಿಸಿರುವ ಉದ್ದನೆಯ ಕೂದಲು ಬಿಟ್ಟಿರುವ, ಸೊಂಟದವರೆಗಿನ ನಿಂತ ಚಿತ್ರ ಕಪ್ಪು, ಬಿಳಿ ವರ್ಣದಲ್ಲಿ ಸ್ಪಷ್ಟವಾಗಿ, ಆಕರ್ಷಕವಾಗಿ ಮೂಡಿಬಂದಿದೆ. ಇಲ್ಲಿ ಶೀರ್ಷಿಕೆಗೂ ಚಿತ್ರಕ್ಕೂ ಒಂದಕ್ಕೊಂದು ಸಂಬಂಧವಿದೆ.

**೮.೮.೩. ದೀಪದಡಿಯ ಗದ್ದುಗೆ (೨೦೦೩)**

ಈ ಮುಖಪುಟ ಮೇಲ್ಭಾಗದಿಂದ ಅರ್ಧದವರೆಗೂ ಸಂಪೂರ್ಣ ನೀಲಿವರ್ಣ ಆವರಿಸಿದೆ. ಅದರಲ್ಲಿ ಮೇಲೆ ಮೋಡಗಳ ರೀತಿ ಒಂದು ಸೂಕ್ಷ್ಮ ದೀಪವಿರುವಂತಿದೆ. ಕೆಳಗೆ ಹಳದಿ ವರ್ಣದಲ್ಲಿ ಶೀರ್ಷಿಕೆಯ ಹಿಮ್ಮುಖದ ನೀಲಿವರ್ಣದ ಮೇಲೆ ಮೂಡಿರುವುದರಿಂದ ಆಕರ್ಷಕವಾಗಿ ಕಾಣುತ್ತದೆ. ಅರ್ಧ ಭಾಗದ ಕೆಳಗೆ ಮೇಲೆ ಮರಗಳ ಕೊಂಬೆಗಳ ನೆರಳಲ್ಲಿ ಒಂದು ಬಂಗಾರ ವರ್ಣದ ವಿಶಾಲವಾದ ದೇವಾಲಯದ ಚಿತ್ರಣವಿದೆ. ಸುತ್ತಲೂ ಕಂಬಗಳಿರುವಂತೆ ಮುಂಭಾಗದಲ್ಲಿ ವಿಶಾಲವಾದ ಖಾಲಿ ಜಾಗ ಹಳದಿ ವರ್ಣದಲ್ಲಿ ಮೂಡಿಬಂದಿದೆ. ಈ ಕೃತಿಯನ್ನು ಸಾಹಿತಿಗಳಾದ ಶ್ಯಾಮಸುಂದರ ಬಿದರಕುಂದಿಯವರು ಕ್ರಿ.ಶ ೨೦೦೩ ರಲ್ಲಿ ರಚಿಸಿ ಲೋಕಾರ್ಪಣೆ ಮಾಡಿದರು. ಈ ಮುಖಪುಟದಲ್ಲಿ ಮೇಲ್ಭಾಗ, ಕೆಳಭಾಗಕ್ಕೂ ಅಂತರವಿರುವಂತೆ ಚಿತ್ರವನ್ನು ರಚಿಸಲಾಗಿದೆ.

**೮.೮.೪. ಜಾಗತೀಕರಣ : ಒಂದು ಸಮಗ್ರ ಮಂಥನ (೨೦೦೪)**

ಈ ಕೃತಿಯು ಕ್ರಿ.ಶ. ೨೦೦೪ ರಲ್ಲಿ ಡಾ. ರಾಜೇಂದ್ರ ಚೆನ್ನಿಯವರು ರಚಿಸಿ, ಮೋನಪ್ಪ ಮುದ್ರಣಾಲಯದಲ್ಲಿ ಮುದ್ರಿಸಲಾಗಿದೆ. ನೀಲಿವರ್ಣದಲ್ಲಿ ಮುಖಪುಟದ ಹಿಮ್ಮುಖ ಮೂಡಿ ಬಂದಿದ್ದು ಮೇಲ್ಭಾಗದಲ್ಲಿ ಹಲವು ವರ್ಣಗಳಿಂದ ವರ್ಣರಂಜಿತ ಮುಖಪುಟ ಅತ್ಯಾಕರ್ಷಕವಾಗಿ ಮೂಡಿಬಂದಿದೆ. ಮುಖಪುಟದ ಮೇಲ್ಭಾಗದಲ್ಲಿ ಹಳದಿ ವರ್ಣದಿಂದ ಶೀರ್ಷಿಕೆ ಅಕ್ಷರಗಳು ಜಿಗ್‌ಜಾಗ್ ಶೈಲಿಯಲ್ಲಿ ಸ್ಪಷ್ಟವಾಗಿ ಮೂಡಿದೆ. ಇದರಡಿ ಬಿಳಿಬಣ್ಣದ ಅಕ್ಷರಗಳಲ್ಲಿ ಒಂದು ಸಮಗ್ರ ಮಥನ ಎಂದು ಬರೆದಿದೆ. ಕೆಳಗೆ ಬಲಕ್ಕೆ ಸಂಪಾದಕರಾದ 'ರಾಜೇಂದ್ರ ಚೆನ್ನಿ' ಮತ್ತು 'ಎಸ್. ಸಿರಾಜ್ ಅಹಮದ್' ರವರ ಹೆಸರನ್ನು ಬರೆಯಲಾಗಿದೆ. ಎಡಭಾಗದಿಂದ ಬಲಭಾಗದವರೆಗೂ ಆಕಾಶ ವರ್ಣದಂತೆ ಹಳದಿ ಬಣ್ಣದಲ್ಲಿ ಬೆಳಕು ಮೂಡಿಸಲಾಗಿದೆ. ಮಧ್ಯಭಾಗದಿಂದ ಕೆಳಗಿನವರೆಗೂ ದೊಡ್ಡ ವೃತ್ತದಂತಿರುವ ಭೂಮಿಯ ಚಿತ್ರವನ್ನು ನೀಲಿ, ಹಳದಿ, ಬಿಳಿ, ಕಪ್ಪು, ಹಸಿರು ವರ್ಣ ಬಳಸಿ ಉತ್ತಮ ಚಿತ್ರವನ್ನು ಅದರಲ್ಲೂ ಕನ್ನಡಕವನ್ನು ಎಲ್ಲರೂ ಧರಿಸುವಂತೆ ಚಿತ್ರ ರಚಿಸಲಾಗಿದೆ. ಭೂಮಿಯಲ್ಲಿ ಜನಸಂಖ್ಯೆ, ಜಾಗತೀಕ ತಾಪಮಾನ, ಪರಿಸರ ನಾಶ, ಯಾಂತ್ರೀಕರಣ ಸಂಘರ್ಷಗಳು ಹೆಚ್ಚಾಗುತ್ತಿರುವದನ್ನು ಈ ಕೃತಿಯಲ್ಲಿ ತಿಳಿಸಲಾಗಿದೆ.

**೮.೮.೫. ಆಧುನಿಕ ಕನ್ನಡ ಸಾಹಿತ್ಯದ ಮೊದಲ ತಲೆಮಾರಿನ ದಲಿತ ಸಾಹಿತಿಗಳು (೨೦೦೬)**

ಈ ಕೃತಿಯನ್ನು ಡಾ. ಎಂ.ಎಸ್. ಶೇಖರ್‌ರವರು ಕ್ರಿ.ಶ. ೨೦೦೬ ರಲ್ಲಿ ರಚಿಸಿದರು. ಈ ಮುಖಪುಟವು ಹಸಿರು, ನೀಲಿ, ಕಪ್ಪು ಬಿಳಿ, ಕಂದು, ಕೆಂಪು, ಹಳದಿ ವರ್ಣಗಳಿಂದ ಮೂಡಿದೆ. ಮಧ್ಯೆ ಚೌಕದಲ್ಲಿ ಚಿತ್ರವಿದೆ. ಸುತ್ತಲೂ ಗಿಳಿ ಹಸಿರು ವರ್ಣದಿಂದ ಮುಖಪುಟ ಕಂಗೊಳಿಸುತ್ತದೆ. ಮೇಲ್ಭಾಗದಲ್ಲಿ

ಚಿಕ್ಕ ಅಕ್ಷರ ಗಾತ್ರದಲ್ಲಿ ಶೀರ್ಷಿಕೆಯನ್ನು ಬರೆಯಲಾಗಿದೆ. ಕೆಳಗೆ ಸಂಪಾದಕರ ಹೆಸರಿದೆ. ಚೌಕದಲ್ಲಿ ಉಲ್ಟಾ-ಪಲ್ಟಿಯಾಗಿ ಚಿತ್ರ ರಚಿಸಲಾಗಿದೆ. ಮೇಲ್ಭಾಗದಲ್ಲಿ ಹಿಮಾಲಯದ ತಪ್ಪಲಿನಲ್ಲಿ ಮನೆಗಳ ಸಾಲಿನ ಚಿತ್ರವಿದ್ದು, ಇದು ತಲೆಕೆಳಗಾಗಿದೆ. ಮಧ್ಯೆ ನೀಲಿ ವರ್ಣದ ಆಕಾಶ, ಮಧ್ಯದಲ್ಲಿ ಕ್ಷಿಪಣಿ ಹೊತ್ತ ಯುದ್ಧ ಟ್ಯಾಂಕರ್‌ಗಳು ಮೂರು ಬಿಳಿ ಚಿಕ್ಕ ಪಟ್ಟಿಯಲ್ಲಿ ಬಿಡಿ ಬಿಡಿಯಾಗಿ ಚಿತ್ರಿಸಲಾಗಿದೆ. ಕೆಳಗೆ ಹಿಮಾಲಯ ಪರ್ವತ ಅದರ ಮುಂದೆ ಸಮುದ್ರವಿದ್ದು, ಮರಳಿನ ದಡವಿದೆ. ದಡದಲ್ಲಿ ಒಂದು ಕಪ್ಪು ವರ್ಣದ ದೋಣಿಯನ್ನು ಬಿಡಿಸಲಾಗಿದೆ. ಇಲ್ಲಿ ಕಲಾವಿದ ಕೆ.ಟಿ.ಶಿವಪ್ರಸಾದ್ ಅವರು ಸೃಜನಾತ್ಮಕ ನೆಲೆಯಲ್ಲಿ ಮುಖಪುಟ ವಿನ್ಯಾಸ ಮಾಡಿದ್ದಾರೆ. ಲೇಖಕರು ದಲಿತ ಸಾಹಿತಿಗಳ ಪರಿಚಯ, ಅವರ ಹೋರಾಟದ ಬದುಕನ್ನು ಈ ಕೃತಿಯಲ್ಲಿ ತೆರೆದಿಟ್ಟಿದ್ದಾರೆ.

**೮.೮.೬. ಮಹಿಳಾ ಆತ್ಮಕಥೆಗಳು : ಅನುಸಂಧಾನ (೨೦೦೭)**

ಕ್ರಿ.ಶ. ೨೦೦೭ ರಲ್ಲಿ ಡಾ. ಸಬಿಹಾ ಭೂಮಿಗೌಡರವರಿಂದ ಈ ಸಾಹಿತ್ಯ ಮೂಡಿಬಂದಿದೆ. ಈ ಮುಖಪುಟದ ಮಧ್ಯದಲ್ಲಿರುವ ಕಲಾಕೃತಿ ಸೋನಾಲ್ ಆರ್. ದಾಭಡೆ ಅವರದು. ಎರಡು ಬದಿ ಹೊರಗಡೆ, ಎರಡು ಪಾರ್ಶ್ವಗಳಂತೆ ಒಂದು ಭಾಗ ಹಸಿರು, ಇನ್ನೊಂದು ಭಾಗ ಕೇಸರಿ ವರ್ಣದಿಂದ ಕೂಡಿದೆ. ಮೇಲ್ಭಾಗದಲ್ಲಿ ಶೀರ್ಷಿಕೆಯೂ ಚಿಕ್ಕ ಅಕ್ಷರಗಳಲ್ಲಿ ಮಾಡಿದ್ದು, ದೊಡ್ಡ ಅಕ್ಷರದಲ್ಲಿ ಆಕರ್ಷಕವಾಗಿ ಇರಬೇಕಿತ್ತು. ಇದರ ಕೆಳಗೆ ಸಂಪಾದಕರ ಹೆಸರಿದೆ. ಮಧ್ಯ ಚೌಕದಲ್ಲಿ ಓರ್ವ ಮಹಿಳೆ ಮನೆ ಮುಂದಿನ ಕಂಬ ಹಿಡಿದು ಬೇಸರವಾಗಿ ನಿಂತಿದ್ದಾಳೆ. ಮನೆ ಮುಂದೆ ಪಕ್ಷಿಯ ರೆಕ್ಕೆಗಳು ಕಾಣುತ್ತವೆ. ಅವಳ ಕಾಲ ಬಳಿ ಒಂದು ಪಕ್ಷಿ ಗರಿ ಬಿಚ್ಚಿ ನಿಂತಿದೆ. ಇಲ್ಲಿ ಸಂಪಾದಕರು ಪ್ರತಿಯೋರ್ವ ಮಹಿಳೆಯ ಮನದಾಳದ ನೋವು, ಕಷ್ಟದ ಜೀವನ ಯಾತನೆಯನ್ನು ಸ್ಪಷ್ಟವಾಗಿ ಬರೆದಿದ್ದಾರೆ. ಈ ಮುಖಪುಟ ಚಿತ್ರ ಸೊಗಸಾಗಿ, ಸಮತೋಲನವಾಗಿ ವಿನ್ಯಾಸಗೊಂಡಿದೆ.

**೮.೮.೭. ಜ್ಞಾನಪೀಠ ಪ್ರಶಸ್ತಿ ವಿಜೇತರು – ಮಾಸ್ತಿ (೨೦೦೭)**

ಈ ಕೃತಿಯನ್ನು ಲಕ್ಷ್ಮಿನಾರಾಯಣ ರವರು ಕ್ರಿ.ಶ. ೨೦೦೭ ರಲ್ಲಿ ರಚಿಸಿದ್ದಾರೆ. ಈ ಮುಖಪುಟವು ಹಲವು ವರ್ಣಗಳಿಂದ ಕೂಡಿ ವರ್ಣ ರಂಜಿತವಾಗಿದೆ. ಮೇಲ್ಭಾಗದ ಬಲದಲ್ಲಿ ಚೌಕದಲ್ಲಿ ಜ್ಞಾನಪೀಠ ಪ್ರಶಸ್ತಿ ವಿಜೇತರು ಎಂದು ಚಿಕ್ಕ ಅಕ್ಷರದಲ್ಲಿ ಮೂಡಿದೆ. ಪಕ್ಕದಲ್ಲಿ ಪ್ರಶಸ್ತಿಯ ವಿಗ್ರಹದ ಚಿತ್ರವಿದೆ. ಇದರ ಕೆಳಗೆ ದೊಡ್ಡದಾಗಿ ಹಳದಿ ವರ್ಣದಲ್ಲಿ 'ಮಾಸ್ತಿ' ಎಂದು ಆಕರ್ಷಕವಾಗಿ ಬರೆಯಲಾಗಿದೆ. ಮಧ್ಯದ ಎಡಕ್ಕೆ ಮಾಸ್ತಿಯವರ ಚಿತ್ರ ಕುತ್ತಿಗೆಯವರಿಗೆ ಇದೆ. ಇವರ ಹಿಮ್ಮುಖ ಹಾಗೂ ಮುಖಪುಟದಲ್ಲಿ ಆಕಾಶ, ಮೋಡಗಳು, ಸಮುದ್ರದ ಚಿತ್ರಣ ಕಾಣಬಹುದು. ಕೆಳಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಚಿಹ್ನೆ, ವಿಳಾಸವಿದೆ. ಈ ಮುಖಪುಟವು ಓದುಗರನ್ನು ಆಕರ್ಷಿಸುವಂತಿದೆ. ಮಾಸ್ತಿ ವೆಂಕಟೇಶ ಐಯ್ಯಂಗಾರ್ ಇವರನ್ನು ಕನ್ನಡದ ಆಸ್ತಿ ಎನ್ನುವರು. ಕನ್ನಡ ತಾಯಿ ಭುವನೇಶ್ವರಿಯ ಹೆಸರು, ಕರ್ನಾಟಕದ ಹೆಸರನ್ನು ಎತ್ತಿ ಹಿಡಿದ ವ್ಯಕ್ತಿಗಳಲ್ಲಿ ಇವರು ಅಪರೂಪದ ವ್ಯಕ್ತಿಯಾಗಿದ್ದಾರೆ. ಈ ಕೃತಿಯಲ್ಲಿ ಇವರ ವ್ಯಕ್ತಿತ್ವ, ಜೀವನ ಸಾಧನೆಗಳಿವೆ. 'ಚಿಕ್ಕವೀರ ರಾಜೇಂದ್ರ' ಎಂಬ ಕೃತಿಗೆ ಈ ಪ್ರಶಸ್ತಿ ದೊರಕಿದೆ.

### ೮.೮.೮. ಜ್ಞಾನಪೀಠ ಪ್ರಶಸ್ತಿ ವಿಜೇತರು – ಗೋಕಾಕ್ (೨೦೦೭)

ಈ ಮುಖಪುಟದಲ್ಲಿ ವರ್ಣಗಳು ಬದಲಾಗಿವೆ. ಈ ಕೃತಿಯು ಕ್ರಿ.ಶ. ೨೦೦೭ ರಲ್ಲಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್‌ರವರಿಂದ ರಚನೆಯಾಗಿದೆ. ಇಲ್ಲಿ ಮೇಲ್ಭಾಗದ ಬಲಕ್ಕೆ ಪ್ರಶಸ್ತಿಯ ವಿಗ್ರಹವಿದೆ. ಪಕ್ಕಕ್ಕೆ ಜ್ಞಾನಪೀಠ ಪ್ರಶಸ್ತಿ ವಿಜೇತರು ಎಂಬುದಿದೆ. ಕೆಳಗೆ 'ಗೋಕಾಕ್' ಎಂಬ ಶೀರ್ಷಿಕೆ ಬಿಳಿವರ್ಣದಲ್ಲಿ ಸ್ಪಷ್ಟವಾಗಿದೆ. ಮಧ್ಯ ಎಡಕ್ಕೆ ಗೋಕಾಕ್‌ರು ಕೈಯನ್ನು ಗಡ್ಡಕ್ಕೆ ಹಿಡಿದಿರುವ ಕುತ್ತಿಗೆಯವರಿಗೆ ಭಾವಚಿತ್ರವಿದೆ. ಕೆಳಗೆ ಸಾಹಿತ್ಯ ಅಕಾಡೆಮಿಯ ಚಿಹ್ನೆ, ವಿಳಾಸವಿದೆ. ಇವರ ಹಿಮ್ಮುಖದಲ್ಲಿ ಆಕಾಶ, ಮೋಡಗಳು ಸಮುದ್ರದಲ್ಲಿ ಸೂರ್ಯಾಸ್ಥಗೊಳ್ಳುತ್ತಿರುವ ಚಿತ್ರ ಸೊಗಸಾಗಿದೆ. ಸಮುದ್ರದಲ್ಲಿ ಅಲೆಗಳು ತೇಲುತ್ತಿರುವಂತೆ ಚಿತ್ರಣವಿದೆ. ಇಲ್ಲಿ ಗೋಕಾಕ್‌ರು ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಯನ್ನು ಲೇಖಕರು ವಿವರಿಸಿದ್ದಾರೆ. ಈ ಮುಖಪುಟ ಆಕರ್ಷಕವಾಗಿದೆ. ಗೋಕಾಕ್‌ರ 'ಭಾರತ ಸಿಂಧೂ–ರಶ್ಮಿ' ಎಂಬ ಕೃತಿಗೆ ಈ ಪ್ರಶಸ್ತಿ ಲಭಿಸಿದೆ.

### ೮.೮.೯. ಜ್ಞಾನಪೀಠ ಪ್ರಶಸ್ತಿ ವಿಜೇತರು – ಗಿರೀಶ್ ಕಾರ್ನಾಡ್ (೨೦೦೭)

ಈ ಮುಖಪುಟವು ಕಪ್ಪು, ಬಿಳಿ, ಹಳದಿ, ಹಸಿರು, ಹಳದಿ ವರ್ಣದಿಂದ ಮೂಡಿದೆ. ಈ ಮುಖಪುಟದ ಮೇಲೆ ಪ್ರಶಸ್ತಿಯ ವಿಗ್ರಹ ಕೆಳಗೆ ಆಕರ್ಷಕವಾಗಿ ಹಳದಿ ವರ್ಣದಲ್ಲಿ ಶೀರ್ಷಿಕೆ ಮೂಡಿ ಬಂದಿದೆ. ಕೆಳಗೆ ಲೇಖಕರ ಹೆಸರಿದೆ. ಮಧ್ಯದ ಎಡಭಾಗದಲ್ಲಿ ಕಾರ್ನಾಡ್‌ರವರ ಭಾವಚಿತ್ರ ಎದೆಯವರೆಗಿನ ಚಿತ್ರ ಕಪ್ಪು–ಬಿಳಿ ವರ್ಣದಲ್ಲಿ ಸೊಗಸಾಗಿ ಮೂಡಿಬಂದಿದೆ. ಕಾರ್ನಾಡ್‌ರ ಮುಂದೆ ಸಮುದ್ರದ ಚಿತ್ರವಿದೆ. ಮುಖಪುಟದಲ್ಲಿ ಹಿಮ್ಮುಖ ಹಸಿರು ವರ್ಣದಿಂದ ಕೂಡಿದೆ. ಇವರೊಬ್ಬ ಪ್ರಸಿದ್ಧ ನಾಟಕ ರಚನೆಕಾರರಾಗಿದ್ದರು. ಇವರ ನಾಟಕಗಳು, ಕೃತಿಗಳು, ಜನಪ್ರಿಯತೆಯನ್ನು ಇಲ್ಲಿ ಬರೆಯಲಾಗಿದೆ. ವಿಶೇಷವಾಗಿ ಕಾರ್ನಾಡ್‌ರವರು ಕನ್ನಡ, ತೆಲುಗು, ತಮಿಳು, ಹಿಂದಿ ಭಾಷೆಗಳ ಸಿನಿಮಾಗಳಲ್ಲಿ ಉತ್ತಮ ಪಾತ್ರಗಳನ್ನು ಆಯ್ದುಕೊಂಡು ಉತ್ತಮ ನಟನೆಯನ್ನು ಮಾಡಿ ಜನಪ್ರಿಯರಾಗಿದ್ದಾರೆ. ಇವರಿಗೆ ಸಂಬಂಧಿಸಿದ ಈ ಕೃತಿಯನ್ನು ಡಾ. ಕೃಷ್ಣ ಮೂರ್ತಿ ಚಂದರ್‌ರವರು ಕ್ರಿ.ಶ. ೨೦೦೭ ರಲ್ಲಿ ರಚಿಸಿದ್ದಾರೆ. ಕಾರ್ನಾಡ್‌ರ 'ಸಮಗ್ರ ಕೃತಿಗೆ' ಈ ಪ್ರಶಸ್ತಿ ಒಲಿದಿದೆ.

### ೮.೮.೧೦. ಜ್ಞಾನಪೀಠ ಪ್ರಶಸ್ತಿ ವಿಜೇತರು – ಕುವೆಂಪು (೨೦೦೭)

ಈ ಮುಖಪುಟದ ಬಲಭಾಗದಲ್ಲಿ ಶೀರ್ಷಿಕೆಯಿದೆ. ಎಡಭಾಗದ ಮಧ್ಯಕ್ಕೆ ಕುವೆಂಪುರವರು ಕನ್ನಡಕ ಧರಿಸಿ, ಬಿಳಿಯ ಅಂಗಿ ತೊಟ್ಟ ಚಿತ್ರ ಸೊಗಸಾಗಿದೆ. ಇಲ್ಲಿ ಹಳದಿ, ನೀಲಿ, ಕಪ್ಪು, ಬಿಳಿ ವರ್ಣಗಳನ್ನು ಗಮನಿಸಬಹುದು. ರಾಷ್ಟ್ರಕವಿ ಎಂಬ ಬಿರುದು ಪಡೆದ ಎರಡನೆಯ ಕನ್ನಡದ ಕವಿಗಳು ಇವರು, ಆದರೇ ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲು ಈ ಪ್ರಶಸ್ತಿಯನ್ನು ಪಡೆದ ಏಕೈಕ ಕನ್ನಡಿಗರು ಇವರಾಗಿದ್ದಾರೆ. ಇವರ 'ರಾಮಾಯಣ ದರ್ಶನಂ' ಎಂಬ ಕೃತಿ ಮೂಲ ವಾಲ್ಮೀಕಿ ರಾಮಾಯಣವನ್ನು ಕುರಿತು ಮಹಾಛಂದಸ್ಸಿನಲ್ಲಿ ರಚಿಸಿ ಜ್ಞಾನಪೀಠವನ್ನು ೧೯೬೮ರಲ್ಲಿ ಮುಡಿಗೇರಿಸಿಕೊಂಡರು. ಕನ್ನಡದ

ನೆಲ, ಜಲದ ಬಗ್ಗೆ ತಮ್ಮ ಸಾಹಿತ್ಯದಲ್ಲಿ ಮೂಡಿಸಿದ್ದಾರೆ. ಇವರ ಈ ಕೃತಿಯನ್ನು ಕೆ.ಎಂ ಮುನಿ ಕೃಷ್ಣಪ್ಪನವರು ೨೦೦೭ ರಲ್ಲಿ ರಚಿಸಿದ್ದಾರೆ. ಈ ಮುಖಪುಟ ಸರಳವಾಗಿ ಮೂಡಿಬಂದಿದೆ. ಇಲ್ಲಿ ಶೀರ್ಷಿಕೆ ಮಾತ್ರ ಸ್ಪಷ್ಟವಾಗಿ ಮೂಡಿದೆ. ಆದರೆ ರಾಷ್ಟ್ರಕವಿ ಕುವೆಂಪುರವರ ಭಾವಚಿತ್ರವನ್ನು ಇನ್ನೂ ದೊಡ್ಡದಾಗಿ ಮುಖಪುಟದಲ್ಲಿ ಪ್ರಕಾಶಿಸುವಂತೆ ಮುದ್ರಿಸಬಹುದಿತ್ತು.

### ೮.೮.೧೧. ಜ್ಞಾನಪೀಠ ಪ್ರಶಸ್ತಿ ವಿಜೇತರು – ಬೇಂದ್ರೆ (೨೦೦೭)

ಈ ಮುಖಪುಟ ಸರಳ ಆಕರ್ಷಕವಾಗಿದೆ. ಈ ಕೃತಿಯನ್ನು ಡಾ. ಡಿ. ಮಂಗಳಾ ಪ್ರಿಯದರ್ಶಿನಿ ಯವರು ಕ್ರಿ.ಶ. ೨೦೦೭ ರಲ್ಲಿ ರಚಿಸಿದರು. ದ.ರಾ.ಬೇಂದ್ರೆ ಕುರಿತಾ ಕೃತಿಯಾಗಿದ್ದು, ಇವರ ಸಂಪೂರ್ಣ ಹೆಸರು ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಎಂದಿದ್ದು. ಇವರ ನಾಕುತಂತಿ ಎಂಬ ಕೃತಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ. ಈ ಮುಖಪುಟದಲ್ಲಿ ನೀಲಿ, ಹಳದಿ, ಕೇಸರಿ, ಕಪ್ಪು, ಬಿಳಿ ವರ್ಣಗಳಿಂದ ಕೂಡಿದ ಮುಖಪುಟ ಕಾಣಬಹುದು. ಮೇಲೆ ಬಲಕ್ಕೆ ಶೀರ್ಷಿಕೆ ಆಕರ್ಷಕವಾಗಿದೆ. ಕೆಳಗೆ ಲೇಖಕರ ಹೆಸರಿದೆ, ಎಡಭಾಗದ ಮಧ್ಯದಲ್ಲಿ ಬೇಂದ್ರೆಯವರ ಪ್ರಸಿದ್ಧ ಮುಖಪುಟವಿದೆ. ಇವರ ಕೆಳಗೆ ಮೋಡಗಳು ಹರಡಿರುವಂತೆ ಚಿತ್ರಿಸಲಾಗಿದೆ. ಬೇಂದ್ರೆಯವರ ಜೀವನ ಸಾಧನೆಯನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ.

### ೮.೮.೧೨.ಜ್ಞಾನಪೀಠ ಪ್ರಶಸ್ತಿ ವಿಜೇತರು – ಶಿವರಾಮ ಕಾರಂತ (೨೦೦೭)

ಈ ಮುಖಪುಟ ವಿಶೇಷವಾಗಿದೆ. ಎಲ್ಲವೂ ಒಂದೇ ಸರಣಿಯಂತೆ ಮೂಡಿಬಂದಿದ್ದರೂ ಇದು ವಿಭಿನ್ನತೆಯಿಂದ ಕೂಡಿದೆ. ಮುಖಪುಟದ ಮೇಲೆ ಎಡಕ್ಕೆ ಪ್ರಶಸ್ತಿಯ ವಿಗ್ರಹವಿದೆ. ಪಕ್ಕದಲ್ಲಿ ಚಿಕ್ಕ ಅಕ್ಷರಗಳಲ್ಲಿ ಜ್ಞಾನಪೀಠ ಪ್ರಶಸ್ತಿ ವಿಜೇತರು ಎಂದು ಬರೆದಿದ್ದು, ಇದಕ್ಕೆ ಕೆಳಗೆ ಚುಕ್ಕೆಯಲ್ಲಿ ಅಡ್ಡಸಾಲು ಎಳೆಯಲಾಗಿದೆ. ಇದರಡಿ ಹಳದಿ ವರ್ಣದಲ್ಲಿ ಶೀರ್ಷಿಕೆ ಮಧ್ಯಮ ಅಕ್ಷರದಲ್ಲಿದೆ. ಕೆಳಗೆ ಲೇಖಕರ ಹೆಸರಿದೆ. ಮುಖಪುಟದ ಮಧ್ಯೆ ಕೆಳಗಿನವರೆಗೂ ಸಮಭಾಗದಲ್ಲಿ ಶಿವರಾಮ ಕಾರಂತರ ಆಕರ್ಷಕ ಮುಖದ ಚಿತ್ರವಿದೆ. ಕಪ್ಪು ಬಿಳುಪಿನಿಂದ  ಕೂಡಿರುವ ಚಿತ್ರ ನೋಡುಗರನ್ನು ಸೆಳೆಯುತ್ತದೆ. ಇವರ ಮುಖವನ್ನು ಇನ್ನೂ ಪ್ರಕಾಶಮಾನವಾಗಿ ಚಿತ್ರಿಸಬೇಕಿತ್ತು. ಇವರ ಅಕ್ಕಪಕ್ಕ ಹಿಮ್ಮುಖದಲ್ಲಿ ಆಕರ್ಷಕ ವರ್ಣಗಳಿಂದ ಪ್ರಜ್ವಲಿಸುವ ಕಾಂತಿಯಿದೆ. ಇನ್ನು ಡಾ. ತಾಳ್ತಜೆ ವಸಂತಕುಮಾರ್‌ರವರು ಕ್ರಿ.ಶ. ೨೦೦೭ರಲ್ಲಿ ರಚಿಸಿದರು. ಇಲ್ಲಿ ಶಿವರಾಮ ಕಾರಂತರ ಸಾಧಕ, ಬಾಧಕ, ಬದುಕು, ಬರಹ, ಚಿಂತನೆಯ ಸಾರವಿದೆ. ಇವರ 'ಮೂಕಜ್ಜಿಯ ಕನಸುಗಳು' ಎಂಬ ಕೃತಿಗೆ ಈ ಪ್ರಶಸ್ತಿ ಲಭಿಸಿದೆ. ಜ್ಞಾನಪೀಠ ಪ್ರಶಸ್ತಿ ವಿಜೇತರು ಎಂಬ ಶೀರ್ಷಿಕೆಯ ಈ ಆರು ಕೃತಿಗಳ ಮುಖಪುಟ ಸರಣಿ ಮಾಲಿಕೆ ಮುಖಪುಟವೆಂದು ಗುರುತಿಸಿಕೊಳ್ಳಲಾಗಿದೆ. ಕಾರಣ ಯವುದೇ ಒಂದು ವಿಷಯದ ಕುರಿತು ನಿರಂತರವಾಗಿ ಕಾರ್ಯಚಟುವಟಿಕೆ ನಡೆಯುತ್ತಿದರೆ ಮತ್ತು ಅದು ಒಂದೇ ತರನಾಗಿದ್ದರೆ ಜಾಹಿರಾತು ಕಲೆಯಲ್ಲಿ ಸರಣಿ (Series) ಮಾಲಿಕೆ ಎಂದು ಕರೆಯುತ್ತಾರೆ.

### ೮.೮.೧೩. ಜನ್ನ (೨೦೦೮)

ಈ ಕೃತಿಯನ್ನು ಸಾಹಿತಿಗಳಾದ ಗಿರಡ್ಡಿ ಗೋವಿಂದರಾಜ್ ರವರು ಕ್ರಿ.ಶ. ೨೦೦೮ ರಲ್ಲಿ ರಚಿಸಿ,

ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್‌ನಲ್ಲಿ ಮುದ್ರಿಸಲಾಯಿತು. ಈ ಮುಖಪುಟ ತುಂಬಾ ವಿಶೇಷ ವರ್ಣಗಳಿಂದ ವರ್ಣರಂಜಿತವಾಗಿ ಓದುಗರನ್ನು ತನ್ನೆಡೆ ಆಕರ್ಷಿಸುವಂತೆ ಮೂಡಿ ಬಂದಿದೆ. ಈ ಮುಖಪುಟದಲ್ಲಿ ಮೇಲಿನಿಂದ ಕೆಳಕ್ಕೆ ಮೂರು ಪಟ್ಟಿಗಳಿವೆ. ಒಂದು ಮತ್ತು ಮೂರನೆಯ ಪಟ್ಟಿ ನೀಲಿ ವರ್ಣದಿಂದ ಆವರಿಸಿದೆ. ಮಧ್ಯದಲ್ಲಿರುವ ಪಟ್ಟಿ ಕಪ್ಪು ವರ್ಣಗಳಿಂದ ಅಗಲವಾಗಿ ಮೂಡಿದೆ. ಇದರಲ್ಲಿ ಸುಮಾರು ಆರು ಅರ್ಧ ಚಂದ್ರಗಳನ್ನು ಬಿಡಿಸಲಾಗಿದೆ. ಈ ಅರ್ಧಚಂದ್ರಗಳು ಮೂರು ಪಟ್ಟಿಗಳಿಗೆ ಹೊಂದಿಕೊಂಡಂತಿವೆ. ಮಧ್ಯ ಪಟ್ಟಿಯ ಮೇಲ್ಭಾಗದಲ್ಲಿ ಶೀರ್ಷಿಕೆ ಹಳದಿ ವರ್ಣದಲ್ಲಿ ವಿಶೇಷ ಅಕ್ಷರ ಶೈಲಿಯಲ್ಲಿ ದೊಡ್ಡದಾಗಿ ಆಕರ್ಷಿಸುವಂತೆ ಮೂಡಿದೆ. ಮಧ್ಯದಲ್ಲಿ ವಿನ್ಯಾಸಕಾರ ಕುಂಚದಿಂದ ಹಲವು ಬಣ್ಣಗಳನ್ನು ಹಚ್ಚಿ ಈ ಮುಖಪುಟದ ಅಂದವನ್ನು ಹೆಚ್ಚಿಸಿದ್ದಾರೆ. ಈ ಕೃತಿಯಲ್ಲಿ ಲೇಖಕರು ಕವಿಗಳಾದ ಜನ್ನರ ಸಾಹಿತ್ಯಗಳನ್ನು ವಿಮರ್ಶಿಸಿ, ವಿವರಿಸಿದ್ದಾರೆ. ಈ ಕೃತಿಯ ಮುಖಪುಟವು ಜಾಗತ್ತೀಕರಣ/ಸಮಾಕಾಲೀನ ಮಾರುಕಟ್ಟೆಯಲ್ಲಿ ಗ್ರಂಥ ಮಾರಾಟಕ್ಕೆ ಮತ್ತು ಓದುಗನನ್ನು ಆಕರ್ಷಿಸುವುದಕ್ಕೆ ಬಹಳ ಸೂಕ್ತವಾಗಿದೆ ಎಂದು ಅಭಿಪ್ರಾಯಪಡಬಹುದು.

**೮.೮.೧೪. ಕನ್ನಡಕ್ಕೆ ಶಾಸ್ತ್ರೀಯ ಭಾಷೆ ಸ್ಥಾನಮಾನ (೨೦೧೦)**

ಈ ಮುಖಪುಟ ಸರಳ ಆಕರ್ಷಕವಾಗಿ ಮೂಡಿ ಬಂದಿದೆ. ಆದರೆ ಶೀರ್ಷಿಕೆಯು ಚಿಕ್ಕ ಅಕ್ಷರಗಳಲ್ಲಿ ಮೂಡಿಬಂದಿದೆ. ಈ ಮುಖಪುಟದಲ್ಲಿ ಹೆಚ್ಚು ಬಿಳಿ, ಬೂದು ವರ್ಣಗಳು ಆವರಿಸಿವೆ. ಮೇಲೆ ಚಿಕ್ಕದಾಗಿ ಚಿನ್ನದ ಹಬ್ಬದ ವರ್ಷ–೨೦೧೦ ಎಂದಿದ್ದು ಕೆಳಗೆ ಸಾಹಿತ್ಯ ಅಕಾಡೆಮಿಯ ಚಿಹ್ನೆಯಿದೆ. ಬಲಭಾಗದ ಮೇಲಿನಿಂದ ಅರ್ಧದವರೆಗೆ ರಂಗೋಲಿ ಮಾದರಿಯ ಚಿತ್ತಾರ ಸೊಗಸಾಗಿದೆ. ಮೇಲ್ಭಾಗದಿಂದ ಮಧ್ಯದಲ್ಲಿ ಶೀರ್ಷಿಕೆ ಕಪ್ಪು ವರ್ಣದಲ್ಲಿ ಮೂಡಿದೆ. ಇನ್ನೂ ದಪ್ಪ ಅಕ್ಷರಗಳಲ್ಲಿ ಬರೆಯಬೇಕಿತ್ತು. ಕೆಳಗೆ ಬಲಕ್ಕೆ ಒಂದು ಕಲ್ಲಿನ ಚಿತ್ರವಿದೆ. ಇದು ಒಂದು ಪ್ರಾಚೀನ ಶಾಸನದ ಕಲ್ಲಾಗಿದೆ. ಇದರಲ್ಲಿ ಹಳೆಗನ್ನಡ ಅಕ್ಷರಗಳು ಸ್ಪಷ್ಟವಾಗಿ ಕಾಣುವಂತೆ ಚಿತ್ರ ಮೂಡಿಬಂದಿದೆ. ಈ ಮುಖಪುಟದ ಹೊಳಪನ್ನು ಹೆಚ್ಚಿಸಿರುವುದೇ ಈ ಕಲ್ಲಿನ ಚಿತ್ರಣ. ಈ ಕೃತಿಯು ಡಾ. ಜಯಶ್ರೀ ದಂಡೆಯವರಿಂದ ಕ್ರಿ.ಶ. ೨೦೧೦ ರಲ್ಲಿ ಲೋಕಾರ್ಪಣೆಗೊಂಡಿದೆ. ಈ ಮುಖಪುಟ ವು ಶ್ವೇತ ಎಂಬ ಕಲಾವಿದರು ರಚಿಸಿದ್ದಾರೆ. ಇದರಲ್ಲಿ ಕನ್ನಡ ಭಾಷೆಯ ಸ್ಥಾನಮಾನ ವಿವರಿಸಲಾಗಿದೆ.

**೮.೮.೧೫.ವಿಜ್ಞಾನ ಸಾಹಿತ್ಯ–೨೦೦೮ (೨೦೧೦)**

ಈ ಕೃತಿಯನ್ನು ಎಸ್.ಎಸ್. ಪಾಟೀಲರವರು ಕ್ರಿ.ಶ. ೨೦೦೮ ರಲ್ಲಿ ರಚಿಸಿ, ಇದನ್ನು ೨೦೧೦ ರಲ್ಲಿ ನಾಡಿಗೆ ಅರ್ಪಿಸಿದರು. ಈ ಮುಖಪುಟ ಅರ್ಧದಷ್ಟು ಹಸಿರು ವರ್ಣದಿಂದ ಕೂಡಿದೆ. ಮೇಲ್ಭಾಗದಿಂದ ಅರ್ಧಕ್ಕಿಂತ ಹೆಚ್ಚು ಭಾಗದವರೆಗೆ ಪಟ್ಟಿಯಿದ್ದು, ಪಟ್ಟಿಯೊಳಗೆ ವಿಜ್ಞಾನಕ್ಕೆ ಸಂಬಂಧಿಸಿದಂತೆ ಉಪಗ್ರಹಗಳು ಹಾರುತ್ತಿರುವ, ಅವು ಸಂಗ್ರಹಿಸಿದ ದೃಶ್ಯ, ಧ್ವನಿ ವಿಷಯಗಳನ್ನು ಉಪಗ್ರಹಗಳ ಬುಟ್ಟಿಗೆ ಅಂದರೆ ಭೂಮಿಗೆ ತಲುಪಿಸುವಂತೆ ತರಂಗಗಳು ಬಂದಿರುವಂತೆ ಮುದ್ರಿಸಲಾಗಿದೆ. ಎಡಕ್ಕೆ ಒಬ್ಬ ಮಾನವನ ರೋಬೋ

ಮುಖವನ್ನು ಕೊಟ್ಟಿದ್ದಾರೆ. ತರಂಗಗಳು ಅವನ ತಲೆ, ಕಣ್ಣಿಗೆ ಬಿದ್ದಿರುವ ಹಾಗೆ ಇವೆ. ಕೆಳಗೆ ಇನ್ನೋರ್ವ ರೋಬೋ ಮುಖವಿದೆ. ಬಲಕ್ಕೆ ಉಪಗ್ರಹಗಳ ಬುಟ್ಟಿಗಳು ಹಲವು ಇರುವಂತೆ ಚಿತ್ರ ಮೂಡಿಬಂದಿದೆ. ಇದರ ಕೆಳಗೆ ಶೀರ್ಷಿಕೆ ಸ್ಪಷ್ಟವಾಗಿ ಬಿಳಿವರ್ಣದಲ್ಲಿ ಬರೆಯಲಾಗಿದೆ. ಮುಖಪುಟದ ಕೆಳಗೆ ಸಂಪಾದಕರ ಹೆಸರನ್ನು ಬರೆದಿದ್ದಾರೆ. ಕಲಾವಿದ ಚಂದ್ರಕಾಂತ ಪಟ್ಟಣ ಈ ಕೃತಿಯು ಮುಖಪುಟ ವಿನ್ಯಾಸಗೊಳಿಸಿದ್ದರೆ. ವಿಜ್ಞಾನಕ್ಕೆ ಸಂಬಂಧಿಸಿದ ಕೃತಿಯಾಗಿದೆ.

**೮.೮.೧೬. ಬೆಳಗೊಳದ ಬೆಳಸು (೨೦೧೦)**

ಇದೊಂದು ಐತಿಹಾಸಿಕ ವಿಷಯಕ್ಕೆ ಸಂಬಂಧಿಸಿದ ಕೃತಿಯಾಗಿದೆ. ಇದನ್ನು ಸಾಹಿತಿಗಳಾದ ಡಾ. ಬಾಳಾಸಾಹೇಬ ಲೋಕಾಪುರ ಅವರು ಕ್ರಿ.ಶ. ೨೦೧೦ ರಲ್ಲಿ ರಚಿಸಿದ್ದಾರೆ. ಕಲಾವಿದ ಚಂದ್ರಕಾಂತ ಪಟ್ಟಣ ಈ ಕೃತಿಯು ಮುಖಪುಟ ವಿನ್ಯಾಸಗೊಳಿಸಿದ್ದರೆ. ಈ ಮುಖಪುಟ ಕಪ್ಪು, ಬಿಳಿ, ಹಳದಿ ವರ್ಣದಲ್ಲಿ ಲಕ್ಷಣವಾಗಿ ಮೂಡಿಬಂದಿದೆ. ಮೇಲ್ಭಾಗ ಚಿಕ್ಕ ಹಳದಿ ಪಟ್ಟಿಯಲ್ಲಿ ಚಿನ್ನದ ಕನ್ನಡ ಹಬ್ಬ ಹಾಗೂ ಸಾಹಿತ್ಯ ಅಕಾಡೆಮಿಯ ಚಿಹ್ನೆಯಿದೆ. ಮುಖಪುಟದ ಮೇಲ್ಭಾಗ ಶ್ರವಣಬೆಳಗೊಳದಲ್ಲಿರುವ ಚಂದ್ರಗಿರಿಯ ಬೆಟ್ಟದಲ್ಲಿರುವ ಕಲ್ಲಿನ ದೇವಾಲಯದ ಮುಖ್ಯದ್ವಾರದ ಚಿತ್ರ ಕಪ್ಪು, ಬಿಳಿ ವರ್ಣದಲ್ಲಿ ಸೊಗಸಾಗಿ ಮೂಡಿಬಂದಿದೆ. ಇದರಡಿ ಬಿಳಿವರ್ಣದಲ್ಲಿ ಪ್ರಜ್ವಲಿಸುವಂತೆ ಶೀರ್ಷಿಕೆಯನ್ನು ಮಧ್ಯಮ ಅಕ್ಷರ ಶೈಲಿಯಲ್ಲಿ ಬರೆದಿದೆ. ಕೆಳಗೆ ಅಡ್ಡಲಾಗಿ ಗಡಿಯಾರದ ಮಾದರಿಯ ಪಟ್ಟಿ ಇದೆ. ಮಧ್ಯ ಚೌಕವಿದೆ. ಚೌಕವು ಹಳದಿ ವರ್ಣದಲ್ಲಿ ಕಂಗೊಳಿಸುತ್ತದೆ. ಅಡ್ಡ ಪಟ್ಟಿಗಳಲ್ಲಿ ಕೆತ್ತನೆ ಚಿತ್ರಣದಲ್ಲಿ ಆನೆ, ಕುದುರೆಯ ಯುದ್ಧದ ಸಾಲುಗಳಿವೆ. ಈ ಬೆಳಗೊಳಕ್ಕೆ ಕ್ರಿಪೂ. ಕಾಲದಲ್ಲಿ ಮೌರ್ಯರ ಸ್ಥಾಪಕ ಚಂದ್ರಗುಪ್ತ ಮೌರ್ಯ, ಭದ್ರ ಬಾಹುವಿನ ಸಹಾಯದಿಂದ ಈ ಸ್ಥಳಕ್ಕೆ ಆಗಮಿಸಿ ಜೈನಧರ್ಮ ಸ್ವೀಕರಿಸಿ, ಸಲ್ಲೇಖನ ವ್ರತ ಕೈಗೊಂಡ ಬಗ್ಗೆ ಮತ್ತು ಚಾವುಂಡರಾಯನ ಸ್ಥಾಪನೆಯಾದ ಗೊಮ್ಮಟೇಶ್ವರ ವಿಗ್ರಹದ ಬಗ್ಗೆ ಮಾಹಿತಿ ಒಳಗೊಂಡಿದೆ.

**೮.೮.೧೭. ಹೈದರಾಬಾದ ಕರ್ನಾಟಕದಲ್ಲಿ ಕನ್ನಡ ಕಟ್ಟಿದವರು (೨೦೧೧)**

ಕ್ರಿ.ಶ. ೨೦೧೧ ರಲ್ಲಿ ಮುದ್ರಣಗೊಂಡ ಈ ಗ್ರಂಥವನ್ನು ಸಂಪಾದಕರಾದ ಎಂ. ಧ್ರುವ ನಾರಾಯಣರವರು ರಚಿಸಿ ಬರೆದಿದ್ದಾರೆ. ಈ ಮುಖಪುಟದ ಮೇಲ್ಭಾಗದಲ್ಲಿ ಕರ್ನಾಟಕದ ಬಾವುಟದ ಬಣ್ಣವಾದ ಹಳದಿ, ಕೆಂಪು ವರ್ಣದಲ್ಲಿ ಶೀರ್ಷಿಕೆ ಮೂಡಿಬಂದಿದೆ. ಇನ್ನೂ ಆಕರ್ಷಕವಾಗಿರಬೇಕಿತ್ತು. ಹಸಿರು ವರ್ಣದಲ್ಲಿ ಹೆಚ್ಚು ಭಾಗ ಮುಖಪುಟ ಸಿದ್ಧಗೊಂಡಿದೆ. ಮಧ್ಯದಲ್ಲಿ ಕರ್ನಾಟಕದ ನಕಾಶೆಯ ಚಿತ್ರವಿದ್ದು ಒಳಗಡೆ ಬಹುಮನಿ ಸುಲ್ತಾನರ, ವಿಜಯನಗರ ಸಾಮ್ರಾಜ್ಯದ ದೇವಾಲಯಗಳ, ಶಿಲ್ಪಕಲೆಗಳು, ಕೋಟೆ, ಕೊತ್ತಲಗಳ ಚಿತ್ರಣ ಸೊಗಸಾಗಿ ಮೂಡಿಬಂದಿದೆ. ಕರ್ನಾಟಕದ ಹಿಂಭಾಗದಲ್ಲಿ ನೆರಳಿನಂತೆ ಹೈದರಾಬಾದಿನ ನಿಜಾಮರು ನಿರ್ಮಿಸಿರುವ ಪ್ರಸಿದ್ಧ 'ಚಾರ್‌ಮಿನಾರ್'ನ ಚಿತ್ರಣ ಅಂದವಾಗಿದೆ. ಈ ಚಾರ್‌ಮಿನಾರ್‌ನ ಮಧ್ಯಕ್ಕೆ ಸ್ಪಷ್ಟ ಕರ್ನಾಟಕದ ಚಿತ್ರಣ ನೋಡುಗರನ್ನು ಸೆಳೆಯುವಂತಿದೆ. ಕೆಳಗೆ ಸಾಹಿತ್ಯ ಅಕಾಡೆಮಿಯ ಚಿಹ್ನೆ ವಿಳಾಸವಿದೆ. ಈ ಕೃತಿಯಲ್ಲಿ ಲೇಖಕರು ಕರ್ನಾಟಕ-ಹೈದರಾಬಾದ್‌ನ ಭಾಗದಲ್ಲಿದ್ದ

ಬೀದರ್, ಗುಲ್ಬರ್ಗಾ, ರಾಯಚೂರು, ಬಳ್ಳಾರಿ, ಚಿತ್ರದುರ್ಗ ಜಿಲ್ಲೆಯ ಗಡಿಭಾಗದ ಜನತೆಯ ವಾಸ. ಅಲ್ಲಿ ಪ್ರಮುಖ ವ್ಯಕ್ತಿಗಳ ಸಾಧನೆ, ಕನ್ನಡವನ್ನು ಬೆಳೆಸಿದ ಪರಿಯನ್ನು ತಿಳಿಸಲಾಗಿದೆ. ಬಿ.ಎಲ್. ನರಸಿಂಹ ಮೂರ್ತಿ ಇದರ ಮುಖಪುಟ ರಚಿಸಿದ್ದಾರೆ.

**೮.೮.೧೮. ಮನದಂಗಳದ ಹಾಡು (೨೦೧೧)**

ಈ ಮುಖಪುಟದಲ್ಲಿ ಹಲವು ಬಣ್ಣಗಳನ್ನು ಬಳಸಿ ವರ್ಣರಂಜಿತ, ಆಕರ್ಷಕ ಮುಖಪುಟವನ್ನು ವಿನ್ಯಾಸಗಾರ ರಚಿಸಿ ಕೊಟ್ಟಿದ್ದಾರೆ. ಈ ಕೃತಿಯನ್ನು ಶೋಭಾ ದೇ. ಪಿಡ್ಡಿಯವರು ೨೦೧೧ ರಲ್ಲಿ ಬರೆದು, ಒರಿಜಿನ್ ಆರ್ಟ್ಸ್ ಗದಗ ಮುದ್ರಣಾಲಯದಲ್ಲಿ ಅಚ್ಚು ಹಾಕಿಸಿದ್ದಾರೆ. ಇಡಿ ಮುಖಪುಟದಲ್ಲಿ ಎರಡು ಸ್ತ್ರೀಯ ಮುಖಛಾಯೆ ಎದ್ದು ಕಾಣುತ್ತವೆ. ಅದರಲ್ಲಿ ಹಳದಿ ವರ್ಣದ ಒಂದು ಮುಖ ನೋಡುಗರನ್ನು ಸೆಳೆಯುವಂತಿದೆ. ಇನ್ನೊಂದು ಮುಖ ಸೂಕ್ಷ್ಮವಾಗಿದೆ. ಇನ್ನುಳಿದಂತೆ ವಿನ್ಯಾಸಕಾರ ತನ್ನ ಕುಂಚದಲ್ಲಿ ಆಕರ್ಷಕ ಚಿತ್ತಾರ ಮೂಡಿಸಿದ್ದಾರೆ. ಮುಖಪುಟದ ಮೇಲ್ಭಾಗದಲ್ಲಿ ಶೀರ್ಷಿಕೆ ಹಳದಿ ಬಣ್ಣದಲ್ಲಿ ಪ್ರಜ್ವಲಿಸುವಂತೆ ಬರೆಯಲಾಗಿದ್ದು, ಓದುಗರನ್ನು ಆಕರ್ಷಿಸುತ್ತದೆ. ಈ ಗ್ರಂಥದ ಮುಖಪುಟ ಒಂದು ಕಲಾಕೃತಿಯು ನೋಡಿದಂತೆ ಭಾಸವಾಗುತ್ತದೆ.

**೮.೮.೧೯. ಕನ್ನಡ-ತಮಿಳು (೨೦೧೩)**

ಸಂಪಾದಕರಾದ ಡಾ. ಜಯಶ್ರೀ ದಂಡೆಯವರು ಕ್ರಿ.ಶ. ೨೦೧೩ ರಲ್ಲಿ ಈ ಕೃತಿಯನ್ನು ರಚಿಸಿದ್ದಾರೆ. ಈ ಮುಖಪುಟ ಸರಳ ಕಪ್ಪು, ಬಿಳುಪು, ಕಂದು, ಹಳದಿ ವರ್ಣದಲ್ಲಿ ರಚನೆಯಾಗಿದೆ. ಮುಖಪುಟದ ಮೇಲ್ಭಾಗ ಕಂದು ಬಣ್ಣದ ಪಟ್ಟಿಯಲ್ಲಿ ಶೀರ್ಷಿಕೆಯು ಬಿಳಿ ವರ್ಣದಲ್ಲಿ ಆಕರ್ಷಕವಾಗಿ ಗಮನ ಸೆಳೆಯುವಂತೆ ಬರೆಯಲಾಗಿದೆ. ಇದರಡಿ ಭಾಷಿಕ ಮತ್ತು ಸಾಹಿತ್ಯಿಕ ಸಂಬಂಧಗಳು ಎಂಬ ಬರಹವಿದೆ. ಕೆಳಗೆ ಸಂಪಾದಕರ ಹೆಸರನ್ನು ಮಾತ್ರ ಹಳದಿ ವರ್ಣದಲ್ಲಿ ರಚನೆಯಾಗಿದೆ. ಇದರ ಕೆಳಗೆ ಕಪ್ಪು ಬಿಳುಪಿನ ಪಟ್ಟಿಯಿದ್ದು, ಅದರಲ್ಲಿ ಗೋಡೆಯ ಪಕ್ಕ ದೀಪದ ಲಾಟೀನು ಸೊಗಸಾಗಿ ಬಂದಿದೆ. ಈ ಮುಖಪುಟದಲ್ಲಿ ಶೀರ್ಷಿಕೆ ಹಾಗೂ ಚಿತ್ರ ಎಲ್ಲರನ್ನು ಸೆಳೆಯುವಂತೆ ಮೂಡಿ ಬಂದಿದೆ. ಕಲಾವಿದ ಆರುಣ್ ಕುಮಾರ್ ಜಿ. ಅವರು ಈ ಮುಖಪುಟ ರಚಿಸಿದ್ದಾರೆ. ಇದು ಅಸಮತೋಲನಾ ಮುಖಪುಟವಾಗಿದೆ. ನೋಡುಗರನ್ನು ಒಂದೇ ಭಾಗಕ್ಕೆ ಆಕರ್ಷಿಸುವುದಕ್ಕೆ ಮುಖಪುಟ ವಿನ್ಯಾಸದಲ್ಲಿ ಅಸಮತೋಲನಾ ವಿನ್ಯಾಸವೆಂದುಕರೆಯುತ್ತಾರೆ.

**೮.೮.೨೦. ನೆಲದ ತಳಮಳ (ಕವನ ಸಂಗ್ರಹ) (೨೦೧೫)**

ಈ ಕೃತಿಯನ್ನು ಇಬ್ಬರೂ ಸಂಪಾದಕರಾದ ಚಂದ್ರಶೇಖರ ತಾಳ್ಯ ಮತ್ತು ಡಾ. ಕುಂಸಿ ಉಮೇಶ್'ರವರು ಒಡಗೂಡಿ ರಚಿಸಿದ ಕವನಗಳ ಸಂಗ್ರಹ ಕೃತಿಯು ಕ್ರಿ.ಶ. ೨೦೧೫ ಲೋಕಾರ್ಪಣೆಗೊಂಡಿತು. ಈ ಮುಖಮಟವು ಹೆಚ್ಚು ಆಕಾಶ ನೀಲಿ ವರ್ಣದಿಂದ ಆವರಿಸಿ ಮೇಲೆ ಹಸಿರು, ಕೇಸರಿ, ನೀಲಿ, ಕಪ್ಪು ವರ್ಣದಲ್ಲಿ ಭೂಮಿಯ ಬಿರುಕಿನಂತೆ ಚಿತ್ರ ಮಧ್ಯದವರೆಗೂ ಚಾಚಿಕೊಂಡಿದೆ. ಅದರ ಕೆಳಗಡೆ ಶೀರ್ಷಿಕೆಯ

ಅಕ್ಷರಗಳು ಕ್ಯಾಲಿಗ್ರಾಫಿಕ್ ಶೈಲಿಯಲ್ಲಿ ಗಮನ ಸೆಳೆಯುವಂತೆ ಬರೆಯಲಾಗಿದೆ. ಮುಖಪುಟದ ಎಡಭಾಗದ ಕೆಳಗೆ ಸಂಪಾದಕರ ಹೆಸರನ್ನು ಕೊಡಲಾಗಿದೆ. ಕೆಳಗಿನಿಂದ ಮೇಲಕ್ಕೆ ಎತ್ತಿರುವ ಐದು ಕೈಗಳನ್ನು ವರ್ಣಮಯವಾಗಿ ಬಿಡಿಸಲಾಗಿದೆ. ಈ ಮುಖಪುಟದಲ್ಲಿನ ಕೈಗಳು ಭೂಮಿಯನ್ನು ರಕ್ಷಿಸಿ ಎಂಬ ಸೂಚನೆ ನಿಡುತ್ತಲ್ಲಿದೆ/ಇದರಲ್ಲಿ ಅಡಗಿದೆ. ಇಂದು ಅಧಿಕ ಕೊಳವೆ ಬಾವಿ ಕೊರೆತ, ಕಾಡುನಾಶ, ಅಧಿಕ ಕೈಗಾರಿಕೆಗಳು, ಪರಿಸರ ನಾಶ ಭೂಮಂಡಲದ ತೇವಾಂಶ ಬತ್ತಿ ಹೋಗುತ್ತಿರುವುದು. ಇದರಿಂದ ಪ್ರಕೃತಿ ವಿಕೋಪಗಳಿಂದ ಭೂಕಂಪ, ಸುನಾಮಿ, ಚಂಡಮಾರುತಗಳು ಉಂಟಾಗಬಹುದು. ಕೊನೆಗೆ ಭೂಮಿಯ ನಾಶವು ಆಗುತ್ತದೆ ಎಂಬ ಅಂಶಗಳು ಅಡಗಿವೆ. ಕಲಾವಿದ ಆರುಣ್ ಕುಮಾರ್ ಜಿ. ಅವರು ಈ ಮುಖಪುಟ ಸೃಜನಶೀಲತೆಯಿಂದ ರಚಿಸಿದ್ದಾರೆ.

### ೮.೮.೨೧. ಬಂಜಾರ ಸಂಸ್ಕೃತಿ ಕಥನ (೨೦೧೫)

ಡಾ. ಪಂಡಿತ. ಕೆ. ರಾಥೋಡ್ ಕ್ರಿ.ಶ. ೨೦೧೫ ರಲ್ಲಿ ಈ ಸಾಹಿತ್ಯ ಕೃತಿಯನ್ನು ಬರೆದು ಸರ್ಕಾರಿ ಕೇಂದ್ರ ಮುದ್ರಣಾಲಯದಲ್ಲಿ ಮುದ್ರಿಸಿದರು. ಇಲ್ಲಿನ ಮುಖಪುಟದಲ್ಲಿ ಕೆಂಪು, ಹಳದಿ, ಕೇಸರಿ, ನೀಲಿ, ಕಪ್ಪು, ಬಿಳಿ ವರ್ಣಗಳು ಅಭಿವ್ಯಕ್ತಗೊಂಡಿವೆ. ಮೇಲ್ಭಾಗದಲ್ಲಿ ಶೀರ್ಷಿಕೆ ಅಕ್ಷರ ಎರಡು ಗುಣ/ಸ್ವರೂಪದಿಂದಕೂಡಿವೆ ಮತ್ತು ಹಳದಿ ವರ್ಣದಲ್ಲಿ ಕಣ್ಮನ ಸೆಳೆಯುವಂತೆ ಮೂಡಿಬಂದಿದೆ. ಕೆಳಗೆ ಸಾಹಿತಿಗಳ ಹೆಸರನ್ನು ಬರೆಯಲಾಗಿದ್ದು, ಮುಖಪುಟದ ಎಡದ ಮಧ್ಯಕ್ಕೆ ತುಂಡು ಬಟ್ಟೆಯ ಪಟ್ಟಿಗೆ ಕವಡೆ, ಕನ್ನಡಿ ಗುಂಡಿಗಳನ್ನು ಪೋಣಿಸಿರುವ ತ್ರಿಭುಜಾ ಮಾದರಿಯ ಪಟ್ಟಿಯನ್ನು ಚಿತ್ರಿಸಲಾಗಿದೆ. ಇದರ ಕೆಳಗೆ ಎಡಭಾಗದಲ್ಲಿ ಓರ್ವ ಬಂಜಾರ ಸ್ತ್ರೀಯು ಮೂರು ಮಡಕೆಗಳನ್ನು ಹೊತ್ತು ನರ್ತಿಸುತ್ತಿರುವ ದೃಶ್ಯ ಕಪ್ಪು ವರ್ಣದಲ್ಲಿ ನೆರಳಿನಂತೆ ಕಂಗೊಳಿಸುತ್ತದೆ. ಪಕ್ಕದಲ್ಲಿ ಇನ್ನೋರ್ವ ಸ್ತ್ರೀಯು ಆಕಾಶ ನೋಡುತ್ತಾ ಕೈ ಮೇಲಕ್ಕೆ ಎತ್ತಿರುವ ಮುಖದ ಚಿತ್ರ ಸೊಗಸಾಗಿದೆ. ಮಧ್ಯದ ಬಲಕ್ಕೆ ಬಂಜಾರ ಸ್ತ್ರೀಯರು ಒಬ್ಬರ ಹಿಂದೆ ಒಬ್ಬರಂತೆ ನಿಂತು ಸಾಮೂಹಿಕ ನೃತ್ಯ ಮಾಡುತ್ತಿರುವ ಸೊಂಟದವರೆಗಿನ ದೃಶ್ಯ ಕಾಣುತ್ತದೆ. ಇವರಲ್ಲಿ ಮುಂದೆ ನಿಂತಿರುವ ಮಹಿಳೆ ನೀಲಿವರ್ಣ ಹಾಗೂ ಬಹುವರ್ಣದ ಹವಳ, ಕವಡೆ, ಕನ್ನಡಿ ಜೋಡಿಸಿದ ಬಟ್ಟೆ ಧರಿಸಿ ನೃತ್ತಿಸುತ್ತಿರುವ ಚಿತ್ರ ವೃತ್ತಾಕಾರದಲ್ಲಿ ಮನಮೋಹಕವಾಗಿ ಮೂಡಿಬಂದಿದೆ. ಈ ಮುಖಪುಟವನ್ನು ವಿನ್ಯಾಸಕಾರ ಆಕರ್ಷಕವಾಗಿ ಚಿತ್ರಿಸಿದ್ದಾರೆ ಎಂದು ಅಬಿಪ್ರಾಯಪಡಬಹುದು.

### ೮.೮.೨೨. ದೇವರ ಸ್ವಂತ ನಾಡಿನಲ್ಲಿ (೨೦೧೫)

ಈ ಮುಖಪುಟದ ಮಧ್ಯೆ ಚೌಕದ ಪಟ್ಟಿಯೊಳಗೆ ೮ ವಿವಿಧ ಚಿತ್ರಗಳು ಮೂಡಿಬಂದಿವೆ. ಈ ಚಿತ್ರಗಳಲ್ಲಿ ಮೂಡಿಬಂದಿರುವ ಸ್ಥಳಗಳು ಕೇರಳ ರಾಜ್ಯದ ಪ್ರಸಿದ್ಧ ಯಾತ್ರಾ ಸ್ಥಳಗಳಾಗಿವೆ. ಮೇಲಿನ ಸಾಲಿನಲ್ಲಿ ದೇವಾಲಯಗಳ ಚಿತ್ರ, ಮಧ್ಯದಲ್ಲಿ ಎರಡು ತೀರ ಪ್ರದೇಶಗಳು ಕೊನೆಗಿರುವುದು ಓರ್ವ ಯಕ್ಷಗಾನ ಪೋಷಾಕು ತೊಟ್ಟ ವ್ಯಕ್ತಿ ನಿಂತ ಚಿತ್ರಣವಿದೆ. ಕೆಳಗಿನ ಸಾಲಿನಲ್ಲಿ ತೀರ ಪ್ರದೇಶಗಳ ಚಿತ್ರವಿದೆ. ಭಾರತದ ನಕಾಶೆಯಲ್ಲಿ ಪಶ್ಚಿಮಕ್ಕೆ ಅರಬ್ಬಿ ಸಮುದ್ರಕ್ಕೆ ಅಂಟಿಕೊಂಡಂತಿರುವ ಕೇರಳ ರಾಜ್ಯದಲ್ಲಿ ಅನೇಕ

ಸಹಸ್ರಾರು ದೇವಸ್ಥಾನಗಳನ್ನು ಕಾಣುವುದರಿಂದ ಈ ನಾಡಿಗೆ ದೇವರ ನಾಡು 'Gods own country' ಎನ್ನಲಾಗುತ್ತದೆ. ಚೌಕದ ಸುತ್ತಾ ಮುಖಪುಟ ಹಳದಿ ವರ್ಣದಲ್ಲಿ ಮೂಡಿ ಬಂದಿದ್ದು, ಮೇಲ್ಭಾಗದಲ್ಲಿ ಮಧ್ಯ ಅಕ್ಷರದಲ್ಲಿ ಶೀರ್ಷಿಕೆಯನ್ನು ಕಪ್ಪು ವರ್ಣದಲ್ಲಿ ಬರೆದಿದ್ದಾರೆ. ಶೀರ್ಷಿಕೆಯ ಕೆಳಗೆ ಕೇರಳ ರಾಜ್ಯ ಪ್ರವಾಸ ಕಥನ ಎಂದು ಬರೆಯಲಾಗಿದೆ. ಕೆಳಗೆ ಸಾಹಿತಿಯ ಹೆಸರಿದೆ. ಈ ಸಾಹಿತ್ಯ ಕೃತಿಯನ್ನು ಪ್ರಜ್ಞಾ ಮತ್ತಿಹಳ್ಳಿಯವರು ಕೇರಳ ರಾಜ್ಯ ಪ್ರವಾಸ ಮಾಡಿ ವಿಷಯ ಸಂಗ್ರಹಿಸಿಕೊಂಡು ಕ್ರಿ.ಶ. ೨೦೧೫ ರಲ್ಲಿ ಈ ಕೃತಿ ರಚಿಸಿ, ಸರ್ಕಾರಿ ಕೇಂದ್ರ ಮುದ್ರಣಾಲಯದಲ್ಲಿ ಅಚ್ಚು ಹಾಕಿಸಿ ಲೋಕಾರ್ಪಣೆಗೊಳಿಸಿದ್ದಾರೆ ಇಲ್ಲಿ ಶೀರ್ಷಿಕೆ ಸ್ಪಷ್ಟವಾಗಿ ಮೂಡಿಲ್ಲ. ಅನೇಕ ಚಿತ್ರಗಳ ಬದಲು ಕೇರಳದ ಪ್ರಸಿದ್ಧ ದೇವಾಲಯ ಹಾಗೂ ಒಂದು ತೀರ ಪ್ರದೇಶದ ಚಿತ್ರಣವನ್ನೂ ಇಲ್ಲಿ ರಚಿಸಿದ್ದರೆ, ಈ ಮುಖಪುಟಕ್ಕೆ ಒಂದು ಆಕರ್ಷಕ ಕಳೆ ಬರುತ್ತಿತ್ತು.

**೮.೮.೨೩. ತೇಟ ತೆಲುಗು ನಾಡಿನಲ್ಲಿ (೨೦೧೫)**

ಈ ಕೃತಿಯನ್ನು ಕ್ರಿ.ಶ. ೨೦೧೫ರಲ್ಲಿ ಮೋದೂರು ತೇಜ ಅವರು ಸೀಮಾಂಧ್ರ ರಾಜ್ಯ ಪ್ರವಾಸ ಮಾಡಿ ಅಲ್ಲಿನ ಶಿಲ್ಪಕಲೆ, ಇತರೆ ಸ್ಥಳಗಳ ಛಾಯಾಚಿತ್ರ, ವಿಷಯ ಸಂಗ್ರಹಿಸಿ ಒಂದು ಪ್ರವಾಸ ಕಥನ ಬರೆದಿದ್ದಾರೆ. ಅರ್ಧ ಭಾಗದಿಂದ ಮುಖಪುಟದಲ್ಲಿ ಕೆಳಗಿನವರೆಗೆ ಚೌಕವಿದ್ದು, ಇದರಲ್ಲಿ ಆರು ಚಿತ್ರಗಳು ಅಡಗಿವೆ. ಇದರಲ್ಲಿ ತಿರುಪತಿ ದೇವಾಲಯ, ವಿಶಾಖಪಟ್ಟಣದ ಬಂದರಿನಲ್ಲಿ ಹಡಗು ನಿಂತಿರುವ, ನಂದಿ ಪರ್ವತಗಳ ಚಿತ್ರ, ಪಾಳು ದೇವಾಲಯದ ಚಿತ್ರ, ನಿಜಾಮರ ಕೋಟೆಯ ಚಿತ್ರ ಗಮನ ಸೆಳೆಯುತ್ತವೆ. ಮುಖಪುಟದ ಸುತ್ತ ಅರಿಶಿಣ ವರ್ಣದಿಂದ ಆವೃತವಾಗಿದೆ. ಮೇಲ್ಭಾಗದಲ್ಲಿ ಹಳದಿ ವರ್ಣದಿಂದ ಮೂಡಿ ಬಂದಿರುವ ಶೀರ್ಷಿಕೆ ಆಕರ್ಷಕವಾಗಿ ಒಂದರ ಕೆಳಗೊಂದರಂತೆ ಮೂರು ಹಂತದಲ್ಲಿ ಬರೆಯಲಾಗಿದೆ. ಕೆಳಗೆ ಬಿಳಿ ವರ್ಣದಲ್ಲಿ ಚಿಕ್ಕ ಗಾತ್ರದ ಅಕ್ಷರದಲ್ಲಿ 'ಸೀಮಾಂಧ್ರ ರಾಜ್ಯ ಪ್ರವಾಸ ಕಥನ' ವೆಂದಿದೆ. ಇದರಡಿ ಗೆರೆ ಎಳೆದಿದ್ದು ಕೆಳಗೆ ಲೇಖಕರ ಹೆಸರು ಸ್ಪಷ್ಟವಾಗಿ ಕಾಣುತ್ತದೆ. ಈ ಮುಖಪುಟ ಆಕರ್ಷಕವಾಗಿ ಮೂಡಿದೆ. ಇಲ್ಲಿ ಓದುಗರನ್ನು ಸೆಳೆಯುವುದು ಶೀರ್ಷಿಕೆಯೇ ಇದನ್ನು ನೋಡಿದವರು ಅದರಲ್ಲಿನ ಚಿತ್ರಣವನ್ನು ನೋಡಲು ಬಯಸುವಂತಿದೆ. ಕಲಾವಿದ ಅರುಣ್ ಕುಮಾರ್ ಜಿ. ಅವರು ಈ ಕೃತಿಯ ಮುಖಪುಟ ರಚಿಸಿದ್ದಾರೆ.

ಒಟ್ಟಾರೆ ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ ಗ್ರಂಥಕೃತಿಗಳ ಮುದ್ರಣಗಾರಿಕೆಯ ಕೆಲಸ ಸಮಾನ್ಯವಾಗಿತ್ತು. ಬರಹಗಾರರು,ಪ್ರಕಾಶಕರು, ಮುದ್ರಕವರ್ಗದವರಿಗೆಲ್ಲ ಗ್ರಂಥರಚನೆ ಮತ್ತು ಮುದ್ರಣದಲ್ಲಿ ಆಸಕ್ತಿಯಿತ್ತು ವಿನಃ ಪುಸ್ತಕದ ರಕ್ಷಾಪುಟ/ ರಕ್ಷಾಕವಚ/ ಮುಖಪುಟಗಳಲ್ಲಿ ಕಲಾತ್ಮಕತೆಯ ತೋರ್ಪಡಿಕೆ ಮತ್ತು ಗ್ರಂಥಮುಖ ಸೌಂದರ್ಯದ ಕಡೆಗೆ ವಿಶೇಷವಾಗಿ ನೋಡುವ ದೃಷ್ಟಿಕೋನ ಬೆಳೆಯಲಿಲ್ಲ. ಈ ಕಾರಣದಿಂದ ಆ ಕಾಲಘಟ್ಟದಲ್ಲಿ ಮುದ್ರಣಗೊಂಡ ಪ್ರಾತಿನಿಧಿಕ ಗ್ರಂಥಗಳ ಅವಲೋಕನದಿಂದ ಅವುಗಳ ರಕ್ಷಾಪುಟ ವಿನ್ಯಾಸವು ಸಾಮಾನ್ಯ ಶೈಲಿ ಅಥವಾ ಮಾದರಿಯಲ್ಲಿ ನಿರ್ಮಾಣಗೊಂಡಿವೆ. ೧೯೨೫ ರಿಂದ ೧೯೫೦ರ ಅವಧಿಯ ಮುಖಪುಟ ವಿನ್ಯಾಸಗಳಲ್ಲಿ ಗಣನೀಯ ಬದಲಾವಣೆ ಕಂಡುಬರುತ್ತದೆ.

ಸ್ವಾತಂತ್ರ್ಯೋತ್ತರ ಕರ್ನಾಟದಲ್ಲಿ ಗ್ರಂಥಗಳ ಮುದ್ರಣ, ಪ್ರಕಾಶನ, ಪ್ರಚಾರ ಇತ್ಯಾದಿ ಸಾಹಿತ್ಯ ಚಟುವಟಿಕೆ ಹೊಸ ಹುರುಪುನಿಂದ ಬೆಳೆಯಲಾರಂಬಿಸಿತ್ತು. ಹೊಸ ಹೊಸ ಮುದ್ರಣ ಯಂತ್ರಗಳು ಬಳಕೆಗೆಬಂದವು. ಇದರಿಂದಾಗಿ ಮುಖಪುಟ ಚಿತ್ರಕಾರರ, ವಿನ್ಯಾಸಕಾರರ ಸಂಖ್ಯೆ ಹೆಚ್ಚಾಯಿತು ಸಾಹಿತ್ಯಕೃತಿಗಳ ಮುಖಪುಟ/ರಕ್ಷಾಪುಟ ರಚನೆಯಲ್ಲಿ ಹೊಸ ಮಾದರಿಯ ಕಲೆಗಳು ಹೊರಹೊಮ್ಮಿದವು. ಮತ್ತು ವರ್ಣಗಳ ಬಳಕೆಯಲ್ಲಿ, ತಂತ್ರಗಾರಿಕೆಯಲ್ಲಿ, ಅಕ್ಷರ ಆಕಾರಗಳಲ್ಲಿ ಹಾಗೂ ಕೃತಿಯ ಅಳತೆ, ಆಕಾರಗಳಲ್ಲಿ ಬದಲಾವಣೆಗಳನ್ನು ಸ್ಪಷ್ಟವಾಗಿ ಮೂಡಲಾರಂಭಿಸಿದುದನ್ನು ಇಲ್ಲಿ ನೋಡಬಹುದು.

❑❑❑

# ಸ್ವಾತಂತ್ರ್ಯಪೂರ್ವ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟಗಳು


ಭಾರತಯುದ್ಧಾರಂಭದಲ್ಲಿ ಅರ್ಜುನನಂ ವ್ಯಾಜೀಕರಿಸಿ
ಸರ್ವಲೋಕ ಹಿತಾರ್ಥವಾಗಿ
ಶ್ರೀಕೃಷ್ಣ ಪರಮಾತ್ಮನಿಂದುಪದಿಷ್ಟವಾದ
ಶ್ರೀಭಗವದ್ಗೀತಾ ಪ್ರಬಂಧಕ್ಕೆ ದ್ವೈತಾದ್ವೈತ
ವಿಶಿಷ್ಟಾದ್ವೈತ ಭಾಷ್ಯಾರ್ಥಗಳಂಸಂಗ್ರಹಿಸಿರುವ
ಶ್ರೀಮದ್ಗೀತಾರ್ಥ ಸಾರದ
ದ್ವಿತೀಯ ಸಂಪುಟವು.
ಶ್ರೀಮನ್ಮಹೀಶೂರ ಮಹಾ ಸಂಸ್ಥಾನದ ಶ್ರೀಮನ್ಮಹಾರಾಣೀ
ರೀಜಂಟ್ ಸಿ, ಐ, ಬಿರುದಂ ವಹಿಸಿದ
ಶ್ರೀವಾಣೀವಿಲಾಸ ಮಹಾ ಸನ್ನಿಧಾನದ ಪರಿಪೂರ್ಣ ಸಹಾಯದಿಂದ
ಬೆಂಗಳೂರು ತುಲಸೀ ತೋಟದಲ್ಲಿರುವ
ತೂಪ್ಪುಲ್ ವೆಂಕಟಾಚಾರ್ಯರಿಂದ
ಬರೆಯಲ್ಪಟ್ಟಿತು.
ಬ್ರ|| ಶ್ರೀ|| ವಾಜಪೇಯಂ|| ಕೃಷ್ಣಯ್ಯನವರ
ಬೆಂಗಳೂರು ... ಮುದ್ರಾಕ್ಷರಶಾಲೆಯಲ್ಲಿ
ಮುದ್ರಿಸಲ್ಪಟ್ಟಿತು, ಬೆಂಗಳೂರು.
1900.
Right of Translation & Copy-right reserved.

೧೯೦೦


THE
KARNATAKA BHAGAVADGITA
ಕರ್ಣಾಟಕ ಭಗವದ್ಗೀತೆ.
M. SRINIVASA RAO, B.A.
Price 0-8-0

೧೯೦೮


ಕನ್ನಡಮಾತು ತಲೆಯೆತ್ತುವ ಬಗೆ.
ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ
೧೯೧೧ ನೆಯ ವಾರ್ಷಿಕ ಸಭೆಯಲ್ಲಿ
ಮಾಡಿದ ಉಪನ್ಯಾಸ.
ಬಿ. ಎಂ. ಶ್ರೀಕಂಠಯ್ಯ ಎಂ. ಎ. ಬಿ. ಎಲ್.
ಲೆಕ್ಚರರ್, ಮಹಾರಾಜರ ಕಾಲೇಜು
ಮೈಸೂರು.
"ಶ್ರೀಮಹಾವೀರ" ಪ್ರೆಸ್ ಬೆಳಗಾಂವಿ.

೧೯೧೦


ಕರ್ಣಾಟಕ ಕಾವ್ಯ ಕಲಾನಿಧಿ. ಕೋಶಸಂಖ್ಯೆ.—
ಕೋನಯ್ಯ
ವಿರಚಿತ
ಗಯಚರಿತ್ರೆ
ಅಥವಾ
ಕೃಷ್ಣಾರ್ಜುನರ ಸಂಗರ
(ಭಾಮಿನೀ ಷಟ್ಪದಿ)
ಎಂ. ಎ. ರಾಮಾನುಜಯ್ಯಂಗಾರ್,
ಅವರಿಂದ ಶೋಧಿತವಾಗಿ
ಮೈಸೂರು
1913

೧೯೧೩




೧೯೧೯




೧೯೧೯




೧೯೨೧




೧೯೩೨

# ೧೯೨೬ ರಿಂದ ೧೯೫೦ರ ಕಾಲಾವಧಿಯ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟಗಳು




೧೯೩೫




೧೯೩೭




೧೯೩೮




೧೯೩೮




೧೯೩೯




೧೯೪೫



೧೯೪೬




೧೯೪೬



೧೯೪೯



೧೯೫೨

ಐವತ್ತರ ದಶಕದಲ್ಲಿನ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟಗಳು




೧೯೫೩




೧೯೫೪




೧೯೫೫




೧೯೫೭




೧೯೫೭



೧೯೫೭



೧೯೬೯




೧೯೬೯

ಆರವತ್ತರ ದಶಕದಲ್ಲಿನ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟಗಳು




೧೯೭೦




೧೯೭೦




೧೯೬೩




೧೯೬೪




೧೯೬೬




೧೯೬೯




೧೯೬೯




೧೯೭೦

ಎಪ್ಪತ್ತರ ದಶಕದಲ್ಲಿನ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟಗಳು




೧೯೭೧




೧೯೭೨




೧೯೭೪




೧೯೭೪




೧೯೭೬




೧೯೮೦

## ಎಂಬತ್ತರ ದಶಕದಲ್ಲಿನ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟಗಳು




೧೯೮೪




೧೯೮೪




೧೯೮೫




೧೯೯೦

ತೊಂಬತ್ತರ ದಶಕದಲ್ಲಿನ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟಗಳು




೧೯೯೦



೧೯೯೧




೧೯೯೨




೧೯೯೨




೧೯೯೩




೧೯೯೪




೧೯೯೫




೧೯೯೪




೧೯೯೪




೧೯೯೬




೧೯೯೬




೧೯೯೬




೧೯೯೮




೧೯೯೮

ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದಲ್ಲಿನ ಕನ್ನಡ ಸಾಹಿತ್ಯ ಗ್ರಂಥಗಳ ರಕ್ಷಾಪುಟಗಳು




೨೦೦೦




೨೦೦೩

ಸರಣಿಮಾಲಿಕೆಯ ಮುಖಪುಟ ವಿನ್ಯಾಸಗಳು




೨೦೦೭




೨೦೦೭




೨೦೦೭




೨೦೦೭




೨೦೦೭




೨೦೦೭

ವಿವಿಧ ಮಾದರಿಯ ಮುಖಪುಟ ವಿನ್ಯಾಸಗಳು




೨೦೧೦




೨೦೧೧




೨೦೧೦




೨೦೧೦




೨೦೧೧




೨೦೧೨

ಅಧ್ಯಾಯ : ಒಂಭತ್ತು

# ಸಮಾರೋಪ

ಗ್ರಂಥ ಒಂದಕ್ಕೆ ರಕ್ಷಾಪುಟ ಇಲ್ಲದಿದ್ದರೆ ಒಲೆಗೆ ಉರಿಯಾಗಿ ಹೋಗುವ ಹುಳಗಳಿಗೆ ಆಹಾರವಾಗಿ ಹೋಗುವ ತಿಪ್ಪೆಗೆ ಕಸವಾಗಿ ಸೇರುವ ಇಲ್ಲವೇ ಭೂಸ್ಪಕ್ಕೆ ಬಲಿಯಾಗುವ ಗ್ರಂಥಗಳನ್ನು ರಕ್ಷಿಸುವಲ್ಲಿ ರಕ್ಷಾಪುಟಗಳ ಮಹತ್ವ ತಿಳಿದುಬರುತ್ತದೆ. ಏಕೆಂದರೆ ಅವುಗಳ ಮಹತ್ವ ಏನೆಂದರೆ 'ತೈಲಾದ್ರಕ್ಷ, ಜ್ವಾಲಾದ್ರಕ್ಷ, ಜಲದ್ರಕ್ಷ ಬಂಧನಾತ್ ಮುರ್ಖ ಹಸ್ನೇನ ದಾರ್ತ್ಯು ವೇದಂ ವದಾರೆ ಪುಸ್ತಕಂ'[೧] ಮುಂದುವರೆದು ಹೇಳುತ್ತಾ ಪುಸ್ತಕ 'ವನಿತಂ ವಿತ್ತಾ ಪರಹಸ್ತಿಗತಂ ಅಥವಾ ಪುನರಾಯತಂ ಜೀವನಂ ಭ್ರಷ್ಟಚ ಖಂಡನಂ'[೨]ಎಂದರೆ ಎಣ್ಣೆಯಿಂದ ರಕ್ಷಿಸಬೇಕು, ನೀರುನಿಂದ ರಕ್ಷಿಸಬೇಕು, ಸಡಿಲು ಕಟ್ಟುವಿಕೆಯಿಂದ ರಕ್ಷಿಸಬೇಕು ಮುರ್ಖರ ಕೈಯಲ್ಲಿ ಕೊಡಬಾರದೆಂದು ನಿವೇಧಿಸಿಕೊಳ್ಳುವ ಗ್ರಂಥಗಳು ಮರಳಿಬರುವುದಾದರು ಹೇಗೆಂದರೆ ಹಣವು ಬಳಸಿದ ನಂತರ ಪುಸ್ತಕವು ಹಾಳಾಗಿ ಜೀರ್ಣ ರೂಪದಲ್ಲಿ ಹೆಣ್ಣು ಭ್ರಷ್ಟತೆಯಲ್ಲಿ ಮರುಳುತ್ತವೆ ಎಂಬ ಮಾರ್ಮಿಕವಾದ ಉತ್ತರವನ್ನು ಕಾಣಬಹುದಾಗಿದೆ.

ಪ್ರಾಚೀನ ಕಾಲದಲ್ಲಿ ಕಲ್ಲುಗಳ ಮೇಲೆ ಶಿಲಾಶಾಸನ ಕೆತ್ತುತ್ತಾ ಮಾಹಿತಿಯನ್ನು ಸಂಗ್ರಹಿಸಿಡಲು ಮತ್ತು ತಮ್ಮ ಮುಂದಿನ ಪೀಳಿಗೆಗೆ ತಾವು ಮಾಡಿರುವ ಸಾಧನೆ ಗೊತ್ತಾಗಲೆಂದು ಅವುಗಳಮೇಲೆ ಅಕ್ಷರ ಲಿಪಿಯನ್ನು ಕೆತ್ತುತ್ತಿದ್ದರು. ಹೀಗೆ ಮಾಹಿತಿ ಸಂಗ್ರಹಣೆ ಮಾಡುತ್ತಾ ನಂತರ ಬಟ್ಟೆಯ ಮೇಲೆಯೂ ಕೂಡ ಸಂದೇಶ, ಮಾಹಿತಿಯನ್ನು ಬರೆಯಲಾರಂಭಿಸಿದರು, ಹಂತ ಹಂತ ಬೆಳವಣೆಗೆಯಾಗುತ್ತಾ ನಂತರ ಕಾಗದ ಸಂಶೋಧನೆಯಾಯಿತು. ಸಂಶೋಧಿಸಿದ ಕಾಗದದ ಮೇಲೆ ಮುದ್ರಣ ಯಂತ್ರದ ಮುಖಾಂತರಲಿಪಿಗಳ

---

೦೧. ಎಂ.ಎಂ.ಕಲಬುರ್ಗಿ: ಕನ್ನಡ ಗ್ರಂಥಸಂಪಾದನಾ ಶಾಸ್ತ್ರ ,ಪು-೧೦೯

೦೨. ಅದೇ., ಪು-೫೨

ಸಹಾಯದೊಂದಿಗೆ ಮಾಹಿತಿಯನ್ನು ಸಂಗ್ರಹಿಸಿಡುವ ಪದ್ಧತಿ ಪ್ರಾರಂಭವಾಯಿತು, ಇದು ಮಾಹಿತಿ ಸಂಗ್ರಹಕ್ಕೆಂದು ಪ್ರಾರಂಭವಾದ ಈ ಪದ್ಧತಿ ನಾಗರೀಕರು ವಿದ್ಯಾವಂತರಾದಂತೆ ಅವರಿಗೆ ಹೆಚ್ಚಿನ ಮಾಹಿತಿ ಅರಿವು, ಜ್ಞಾನ, ತಿಳುವಳಿಕೆ, ನೀಡುವ ಉದ್ದೇಶದಿಂದ ಪುಸ್ತಕಗಳ ಪ್ರಕಟನೆ ಆರಂಭವಾಗಿರಬೇಕು/ಆರಂಭವಾಯಿತು. ಪ್ರಕಟವಾಗುವ ಪುಸ್ತಕಗಳೊಂದಿಗೆ ಅದರ ಮಾಹಿತಿ ನೀಡುವ ರಕ್ಷಾಪುಟವು ಬಳಕೆಗೆ ಬಂದಿತು/ಉಪಯೋಗಿಸಲಾರಂಭಿಸಿದರು. ರಕ್ಷಾಪುಟ ಚಿತ್ರಕಲೆಯು ಬೆಳೆಯುತ್ತಾ ಅದು ಪುಸ್ತಕದಲ್ಲಿನ ಎಲ್ಲಾ ಮಾಹಿತಿ ಒಂದೇ ಪುಟದಲ್ಲಿ ಅಥವಾ ಹಿಂಬದಿ ಪುಟದಲ್ಲಿಯೂ ಸಹ ಸಂಕ್ಷೇಪ್ತವಾಗಿ ಮತ್ತು ಆಕರ್ಷಕವಾಗಿ ಸುಂದರ ವರ್ಣಗಳೊಂದಿಗೆ ಉತ್ತಮ ವಿನ್ಯಾಸದಿಂದ ಅಭಿವೃದ್ಧಿಯ ಕಡೆಗೆ ಹೇಗೆ ಗಮನಹರಿಸಲಾಯಿತು ಎಂಬುವುದು ಅಧ್ಯಯನದಿಂದ ತಿಳಿದುಕೊಳ್ಳಲಾಗಿದೆ.

ಬಹಳ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಅನೇಕ ವ್ಯಕ್ತಿಗಳು ಕುಟುಂಬಗಳು ಸಮುದಾಯಗಳು ಗ್ರಂಥಗಳನ್ನು ದೈವಿಸ್ವರೂಪವೆಂದು ಭಾವಿಸಿದ್ದು ಯಾವುದೇ ಗ್ರಂಥಗಳ (ಪುರಾಣ ವಾಚನ) ವಾಚನಕ್ಕೆ ಮೊದಲು ಪೂಜೆ ಸಲ್ಲಿಸುತ್ತಿದ್ದರು. ಅಲ್ಲದೆ ಅಣ್ಣ ತಮ್ಮಂದಿರು ತಮ್ಮ ಮನೆಯಲ್ಲಿನ ಚಿರ-ಚರ ಆಸ್ತಿಯಂತೆ ಹಸ್ತ ಪ್ರತಿಗಳನ್ನು ಹಂಚಿಕೊಂಡು ದೇವರ ಜಗಲಿಯಲ್ಲಿಟ್ಟು ಪೂಜೆ ಸಲ್ಲಿಸುವುದು ಕಂಡುಬರುತ್ತದೆ.ಅಂತಹ ಸಮಯದಲ್ಲಿ ನೀರು ಬಿದ್ದು ಹಾಳಾಗದಂತೆ ರಕ್ಷಾಪುಟಗಳು ಹಸ್ತಪ್ರತಿಗಳನ್ನು/ಗ್ರಂಥಗಳನ್ನು ಕಾಪಾಡಿವೆ.

ಅನೇಕ ವೈವಿಧ್ಯತೆಗಳಿಂದ ಕೂಡಿದ ಭರತ ಖಂಡದಲ್ಲಿ ನೂರಾರು ಭಾಷೆಗಳು ಬಳಕೆಯಲ್ಲಿವೆ.ಸ್ವಾತಂತ್ರ್ಯ ನಂತರ ಕನ್ನಡನಾಡು ಏಕೀಕರಣದ ಅನಂತರ ನಿಜವಾದ ಕಲಾ ರಸಿಕರ ತವರೂರಾಗಿದ್ದ ಕನ್ನಡಿಗರು ಧರ್ಮಾಭಿಮಾನಕ್ಕೂ, ರಸಿಕತೆಗೂ, ಲೋಕೋತ್ತರವಾದ ಕಲಾ ಕೌಶಲ್ಯಕ್ಕೂ, ಶಿಲ್ಪ, ಸಾಹಿತ್ಯ, ಸಂಗೀತ, ನೃತ್ಯ, ಜನಪದ, ಯಕ್ಷಗಾನ, ನಾಟಕ, ದೃಶ್ಯಕಲೆಗಳ ತವರೂರಾಗಿದ್ದೂ ಈ ಕನ್ನಡ ಗ್ರಂಥಗಳು ಇಡೀ ವಿಶ್ವ ಸಾಹಿತ್ಯದ ಗಮನವನ್ನು ಸೆಳೆದಿರುವುದಲ್ಲದೆ ಸಾಕಷ್ಟು ಸಮೃದ್ಧವಾಗಿದ್ದು ತನ್ನತನವನ್ನೆ ಶ್ರೀಮಂತಗೊಳಿಸಿದೆ.

ದಕ್ಷಿಣ ಭಾರತದಲ್ಲೆ ಪಂಚ ದ್ರಾವಿಡ ಭಾಷೆಗಳಲ್ಲಿ ಕನ್ನಡವೂ ಎಲ್ಲೆಡೆ ಪ್ರಸರಿಸಿದ್ದು ಕನ್ನಡ ನಾಡು ನುಡಿ ಸಂಸ್ಕೃತಿ ಸತ್ವವನ್ನು ಯಾರೊಬ್ಬ ಕನ್ನಡಿಗನು ಮರೆಯುವಂತಿಲ್ಲ. ಸಹಸ್ರ ವರ್ಷಗಳ ಇತಿಹಾಸ ಹೊಂದಿದ ಕನ್ನಡ ಭಾಷೆ ಗ್ರಂಥಗಳು ವೈವಿಧ್ಯತೆಯಿಂದ ಕೂಡಿದ್ದು ಅವುಗಳಲ್ಲಿ ಮುಖ್ಯವಾಗಿ ರಕ್ಷಾಪುಟ ಚಿತ್ರಕಲೆಯು ಒಂದು ವಿಶೇಷತೆಯೆ ಆಗಿದೆ. ಒಟ್ಟಿನಲ್ಲಿ ಸುಮಾರು ಒಂದು ಸಾವಿರದ ಐದು ನೂರು ವರ್ಷಗಳ ಭದ್ರ ಪರಂಪರೆಯಿಂದ ಸೃಷ್ಟಿಗೊಂಡಿರುವ ಕನ್ನಡ ಸಾಹಿತ್ಯ ಕಲೆಗಳು ಆಯಾ ಶತಮಾನಗಳಲ್ಲಿ ಆಯಾ ಕಾಲದ ಸತ್ವಹೀರಿ ಬೆಳೆದು ತನ್ನ ವೈಶಿಷ್ಟತೆಯಿಂದ ಜೀವಂತಿಕೆ ಪಡೆದದ್ದು ಅವುಗಳ ಹಿನ್ನೆಲೆಯಾಗಿ ಮುಖಪುಟಗಳು ಮತ್ತು ಅವುಗಳ ಮೇಲಿನ ಚಿತ್ರಕಲೆಯು ಹೇಗೆ ಮೂಡಿ ಬಂದಿವೆ ಎಂಬುವುದನ್ನು ಇಂದು ತಿಳಿಯಲೇಬೇಕಾದಂತ ಮುಖ್ಯ ಅಂಶ ಎಂದು ಈ ಅದ್ಯಯನವು ಕೈಗೆತ್ತಿಕೊಳ್ಳಲಾಗಿದೆ.

ನಾವು ನಮ್ಮ ಜೀವನದಲ್ಲಿ ತಿಳಿದೋ, ತಿಳಿಯದೆಯೋ ವಿನ್ಯಾಸಕ್ಕೆ ಹೆಚ್ಚಿನ ಮಹತ್ವವನ್ನೂ ಕೊಡುತ್ತೇವೆ. ಹೇಗೆಂದರೆ ಮಾನವನು ಮೊದಲಿನಿಂದಲೂ ತನ್ನ ಸಾಮಾನ್ಯವಾದ, ಸಹಜವಾದ

ತಿಳುವಳಿಕೆಯಿಂದ ಅವನ ಕುಟೀರ (ಗುಡಿಸಲು) ಅಥವಾ ಆಯುಧಗಳನ್ನು ವಿನ್ಯಾಸಗೊಳಿಸುತ್ತಿದ್ದನು. ಅದು ಪೂರ್ವಯೋಜನೆ ಮಾಡಿ ಅಥವಾ ಆಕಸ್ಮಿಕವಾಗಿ ಬಂದಂತ ಯೊಚನೆಯನ್ನು ಆಧರಿಸಿ ವಿನ್ಯಾಸವನ್ನು ರೂಪಿಸುವುದು. ಅದು ಅವನ ಕುಶಲತೆಯ ಮೇಲೆ ಆಧಾರವಾಗಿತ್ತು. ಅವನು ಪ್ರಕೃತಿಯನ್ನು ಅನುಕರುಸಲು ಆರಂಭಿಸಿದನು, ಪ್ರಕೃತಿಯಲ್ಲಿ ಕಾಣುವ ಪ್ರತಿಯೊಂದು ಸನ್ನಿವೇಶ ಅದು ಮಾನವ ನಿರ್ಮಿತವಾಗಿರಬಹುದು ಅಥವಾ ಪ್ರಕೃತಿದತ್ತವಾದ ಅಲಂಕಾರಿಕ ದೃಶ್ಯವಾಗಿರಬಹುದು, ಕೊನೆಯಿಲ್ಲದ ಅಪ್ಪಟ ವಿನ್ಯಾಸಕ್ಕೆ ಮಾದರಿಯಾಗಿವೆ. ಪ್ರಕೃತಿಯನ್ನು ವೀಕ್ಷಿಸಿದರೆ ಅವಶ್ಯಕವಾಗಿ ನಮ್ಮನ್ನು ಅದರ ಬಗ್ಗೆ ಆಶ್ಚರ್ಯ ಹುಟ್ಟುವಂತೆ ಅಥವಾ ಆಕೃತಿ ರಚಿಸಲು ಪ್ರೇರೇಪಿಸುವಂತ ಸನ್ನಿವೇಶವನ್ನು ಸೃಷ್ಟಿಸುತ್ತದೆ.

ಹಲವಾರು ವರ್ಷಗಳಿಂದ ಮಾನವ ತನ್ನ ಸೃಜನಶೀಲ ಕ್ರಿಯಾಶೀಲತೆಯಿಂದ ವಿನ್ಯಾಸವನ್ನು ರೂಪಿಸುತ್ತಾ ಪ್ರಕೃತಿಯ ಜೊತೆ ಪೈಪೋಟಿಗೆ ಇಳಿದು ಪ್ರಯತ್ನ ನಡೆಸಿದ್ದಾನೆ. ಅವನ ವಿನ್ಯಾಸ ಪ್ರಜ್ಞೆಯ ಕ್ರಾಂತಿ ಬದಲಾವಣೆಯನ್ನು ಕಂಡಿತು. ಅವನ ಮೂಲ ಆಕೃತಿ ಮತ್ತು ವಿನ್ಯಾಸಕ್ಕೆ ಹಾಗೂ ಕಲ್ಪನೆಗೆ ಹೆಚ್ಚಿನ ಮಹತ್ವ ಮತ್ತು ಬೆಲೆಯು ಪ್ರಾಪ್ತವಾಯಿತು. ಹಾಗೆಯೇ ಬೆಳೆಯುತ್ತಿರುವ ಯಂತ್ರೋಪಕರಣಗಳ ಬಳಿಕೆಯಿಂದ ಹಾಗೂ ಉದ್ಯಮಗಳ ಬೆಳವಣಿಗೆಯಿಂದ ಪ್ರಪಂಚದಾದ್ಯಂತ ಪುರಾತನ ಆಕೃತಿಗಳ ಪುನರ್ ವಿನ್ಯಾಸಗೊಳಿಸಲಾಯಿತು. ಈ ಕ್ರಾಂತಿಕಾರಿ ಉದ್ಯಮವು ನೂತನ ಪೀಳಿಗೆಯ ವ್ಯಕ್ತಿಗೆ ಅವಶ್ಯಕವೆನಿಸಿದ ಆಕೃತಿಯ ವಿನ್ಯಾಸವನ್ನು ಜನ್ಮವಿತ್ತಿದೆ,

ಹೀಗೆ ನಾವು ನೋಡುವ ಯಾವುದೇ ಒಂದು ದೃಶ್ಯವಾಗಿರಲಿ, ಒಬ್ಬ ವ್ಯಕ್ತಿಯ ವಸ್ತ್ರಧಾರಣೆಯಾಗಿರಲಿ ಅದರಲ್ಲಿ ವಿನ್ಯಾಸಮಯವಲ್ಲದ ವಿಷಯಗಳತ್ತ ನಮ್ಮ ಗಮನ ಹರಿಯುವುದಿಲ್ಲ. ಅದೇ ನಾವು ನೋಡುವ ದೃಶ್ಯದಲ್ಲಿ ಅಥವಾ ವಸ್ತುವಿನಲ್ಲಿ ವಿನ್ಯಾಸವಿದ್ದಲ್ಲಿ ಅದು ನೋಡುಗರನ್ನೂ ಆಕರ್ಷಿಸುತ್ತಾ ಮತ್ತೆ ಮತ್ತೆ ನೊಡುವಂತೆ ಪ್ರೇರೇಪಿಸುತ್ತದೆ. ಹೀಗೆ ನಮಗೆ ಕಾಣುವ ಪ್ರತಿಯೊಂದು ವಿಷಯವೂ ವಿನ್ಯಾಸಮಯವಾಗಿ-ರಬೇಕೆಂದೇ ಬಯಸುತ್ತೇವೆ. ಅಂತೆಯೇ ನಮ್ಮ ಮನೆಯಲ್ಲಿ ಎಲ್ಲ ವಸ್ತುಗಳು ಹರಡಿಕೊಂಡು ಬಿದ್ದಿದ್ದರೆ ಗೋಡೆಗಳು ಬಣ್ಣ ಕಳೆದುಕೊಂಡು, ಆಯಾ ಕೊಠಡಿಗೆ ತಕ್ಕ ವಸ್ತುಗಳಲ್ಲದ ಮನೆಯಲ್ಲಿ ನೆಮ್ಮದಿಯಿಂದ ಇರಲು ಸಾಧ್ಯವಾಗುವುದಿಲ್ಲ.

ನಮ್ಮ ಸ್ನೇಹಿತರನ್ನೂ ಅಥವಾ ಬಂಧುಗಳನ್ನು ಮನೆಗೆ ಆಹ್ವಾನಿಸಲು ಸಂಕೋಚಪಡುವಂತಾಗುತ್ತದೆ. ಅದೇ ಮನೆಯಲ್ಲಿ ವಸ್ತುಗಳು ಅಚ್ಚುಕಟ್ಟಾಗಿ ಆಯಾ ಕೊಠಡಿಗೆ ತಕ್ಕ ಹಾಗೆ ಜೋಡಿಸಿ ಇಟ್ಟಲ್ಲಿ ಹಾಗೂ ಮನೆಯ ಗೋಡೆಗಳು ಆಕರ್ಷಕ ವಸ್ತುಗಳು ಮತ್ತು ಬಣ್ಣಗಳಿಂದ ರಾರಾಜಿಸುತ್ತಿದ್ದರೆ, ಅಂತಹ ಮನೆ ನೋಡುಗರನ್ನು ಚಕಿತಗೊಳಿಸುತ್ತದೆ. ಹಾಗೆಯೇ ಗ್ರಂಥ/ಪುಸ್ತಕಗಳ ರಕ್ಷಾಪುಟಚಿತ್ರಕಲೆಯ ವಿನ್ಯಾಸವೂ ಸಹ. ರಕ್ಷಾಪುಟಚಿತ್ರಕಲೆಯಲ್ಲಿ ಪದಜೋಡಣೆ ಅಥವಾ ಅಕ್ಷರಗಳ ಜೋಡಣೆ, ಅದರ ಬಣ್ಣ, ಅಲಂಕರಣೆ, ಇವುಗಳ ಸಮತೋಲನೆ ಇಲ್ಲದೇ ಹೋದರೆ ಆ ರಕ್ಷಾಪುಟಚಿತ್ರಕಲೆ ಕಣ್ಣಿದ್ದೂ ಕಾಣದಂತೆ ವ್ಯರ್ಥವಾಗಿ ಬಿಡುತ್ತದೆ. ಅದೇ ರಕ್ಷಾಪುಟಚಿತ್ರಕಲೆಯಲ್ಲಿ ಈ ಎಲ್ಲಾ ಅಂಶಗಳು ಸರಿಯಾಗಿ ಸಮತೋಲನವಾಗಿ

ಜೋಡಣೆಯಾದಲ್ಲಿ ನೋಡುಗರನ್ನು ಮಂತ್ರಮುಗ್ಧರನ್ನಾಗಿಸುವ ಸಾಮರ್ಥ್ಯ ಹೊಂದಿರುತ್ತದೆ, ಗ್ರಾಹಕರನ್ನೂ ಆಕರ್ಷಿಸುವಲ್ಲಿ ಯಶಸ್ವಿಯಾಗುತ್ತದೆ.

**ಅಧ್ಯಾಯ : ಒಂದು – ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ**

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆ ಕುರಿತಾದ ವಿವರಣೆಯನ್ನು ಇಲ್ಲಿ ಮಾಡಲಾಗಿದೆ.

**ಅಧ್ಯಾಯ : ಎರಡು – ರಕ್ಷಾಪುಟ ಚಿತ್ರಕಲೆಯ ನೆಲೆ–ಹಿನ್ನೆಲೆ ಮತ್ತು ಬೆಳೆವಣಿಗೆ**

ಪ್ರಾಚೀನ ಕಾಲದಿಂದಲೂ ಋಷಿಮುನಿಗಳು ತಾವು ಬರೆದಿರುವ ಗ್ರಂಥಗಳನ್ನು ಜೋಪಾನವಾಗಿಡಲು ತಾಳೆಗರಿ ಅಥವಾ ಬಟ್ಟೆಯಿಂದ ಕಟ್ಟುತ್ತಿದ್ದರು/ಸುತ್ತುತ್ತಿದ್ದರು.ಇಂಥಹ ಪರಂಪರೆಯಿಂದ ಹುಟ್ಟಿಕೊಂಡ ಗ್ರಂಥರಚನೆ ಮತ್ತು ಮುಖಪುಟಚಿತ್ರಕಲೆಯ ಇತಿಹಾಸ ಅದರ ನೆಲೆ–ಹಿನ್ನೆಲೆ ಹಾಗೂ ಬೆಳವಣಿಗೆ ಇತ್ಯಾದಿ ಮಹತ್ವದ ಅಂಶಗಳು ಈ ಅಧ್ಯಾಯದಲ್ಲಿ ಬೆಳಕಿಗೆ ತರಲಾಗಿದೆ.

* ವಿವಿಧ ದೇಶಗಳಲ್ಲಿನ ಮುಖಪುಟದ ಪರಿಕಲ್ಪನೆ/ನೆಲೆ–ಹಿನ್ನೆಲೆ.
* ಭಾರತದಲ್ಲಿ ಮುಖಪುಟದ ಪರಿಕಲ್ಪನೆ ಮತ್ತು ವಿಕಾಸ.
* ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ (೧೮೦೦ ರಿಂದ ೧೯೫೦ರವರೆಗೆ) ರಕ್ಷಾಪುಟ ವಿನ್ಯಾಸ ಪರಿಕಲ್ಪನೆ ಮತ್ತು ಬೆಳವಣಿಗೆಯ ಸ್ಥೂಲನೋಟ.
* ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ (೧೯೫೧ ರಿಂದ)ಪುಸ್ತಕ ಮುಖಪುಟಗಳ ವಿನ್ಯಾಸ/ ರಚನೆ.
* ಪುಸ್ತಕ ಕಟ್ಟುಗ(ಬೈಂಡಿಂಗ್)ಳಲ್ಲಿ ವಿವಿಧ ಪ್ರಕಾರಗಳು.
* ವಿವಿಧ ಆಕಾರಗಳಲ್ಲಿ/ ನಮೂನೆಯಲ್ಲಿನ ರಕ್ಷಾಪುಟಗಳು.
* ಜಾಗತೀಕರಣದ ಮಾದರಿಯ ಪುಸ್ತಕ ಮುಖಪುಟಗಳು/ಕಟ್ಟುಗಳು .ಇತ್ಯಾದಿ ಅಂಶ ಇಲ್ಲಿ ಕಂಡುಕೊಳ್ಳಲಾಗಿದೆ.

**ಅಧ್ಯಾಯ : ಮೂರು – ಚಿತ್ರಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಚಿತ್ರಕಲೆ ಕ್ಷೇತ್ರಗಳಲ್ಲಿನ ದೃಶ್ಯಕಲಾ ಚಿಂಥನ–ಮಂಥನ, ದೃಶ್ಯಕಲಾ ವಿಚಾರ ಸಂಕಿರಣ, ದೃಶ್ಯಕಲಾ ಉಪನ್ಯಾಸ, ಚಿತ್ರಕಲಾ ಶಿಬಿರ, ದೃಶ್ಯಕಲಾ ಕಾರ್ಯಗಾರ, ಕಲಾಸಾಧನೆಗೈದ ಮಹನೀಯರುಗಳ ಜೀವನ ಮತ್ತು ಅವರ ಕಲಾಕೃತಿಗಳನ್ನು ರಾಜ್ಯದ ಕಲಾಭಿಮಾನಿಗಳಿಗೆ, ಕಲಾವಿದ್ಯಾರ್ಥಿಗಳಿಗೆ, ಪರಿಚಯಿಸುವ ಉದ್ದೇಶದಿಂದ ಇಂತಹ ಸಾಧನೆ ಗುರ್ತಿಸಿ ನಾಡಿನ ತಜ್ಞಕಲಾ ಬರಹಗಾರರುಗಳಿಂದ ಪುಸ್ತಕ ಬರೆಯಿಸಿ ಪ್ರಕಟಿಸುವ ಕಾರ್ಯವನ್ನು ಅನುಷ್ಠಾನಕ್ಕೆ ತಂದಿದ್ದು ಮಹತ್ತರ ಹೆಜ್ಜೆ. ಹೀಗೆ ಪ್ರಕಟಗೊಂಡ ಪುಸ್ತಕಗಳು

ರಾಜ್ಯದ ದೃಶ್ಯಕಲಾ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟವಾದ ಕೊಡುಗೆಗಳಾಗಿ ಪರಿಗಣಿಸಿಸಲ್ಪಟ್ಟಿರುವುದರ ಜೊತೆಗೆ, ಅವುಗಳ ಮುಖಪುಟವಿನ್ಯಾಸಗಾರಿಕೆಯೂ ಸಹ ಕಲಾಸಕ್ತರ ಗಮನ ಸೆಳೆದಿದ್ದುದು ಉಲ್ಲೇಖನೀಯ. ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಚಿತ್ರಕಲಾ ಗ್ರಂಥಗಳು ಅನೇಕ ಪ್ರಕಾರಗಳಲ್ಲಿ ಹಾಗೂ ನೂರಾರು ಸಂಖ್ಯೆಯಲ್ಲಿ ಪ್ರಕಟವಾಗಿವೆ. ಹಲವು ಪ್ರಾತಿನಿಧಿಕ ಗ್ರಂಥಗಳು ಆಯ್ಕೆಮಾಡಿಕೊಂಡು ದಶಕಗಳಾಗಿ (ಕಾಲಾವಧಿಯಪರದೆಯೊಳಗೆ) ವಿಂಗಡಿಸಿಕೊಂಡು ಅವುಗಳ ಮುಖಪುಟ ಚಿತ್ರಕಲೆಯಲ್ಲಿ ಬಳಸಲಾಗಿದ್ದ ಚಿಹ್ನೆ, ಚಿತ್ರ ಮತ್ತು ಸಂಕೇತಕ್ಕೆ ಪ್ರಾಮುಖ್ಯತೆಕೊಟ್ಟು ಅವುಗಳಲ್ಲಿರುವ ವಸ್ತು, ವಿಷಯ, ವರ್ಣವಿನ್ಯಾಸ, ಸಂಯೋಜನೆ ಇತ್ಯಾದಿ ವಿಷಯಗಳ ಬಗ್ಗೆ ಇಲ್ಲಿನ ಅಧ್ಯಾಯದಲ್ಲಿ ತಾತ್ವಿಕ ಮತ್ತು ತಾಂತ್ರಿಕ ಪರಿಕಲ್ಪನೆ ನೆಲೆಯಲ್ಲಿ ಚರ್ಚಿಸಲಾಗಿದ್ದು ೧೯೪೭ ರಿಂದ ೨೦೧೨ ರವರೆಗೆ ಪ್ರಕಟಗೊಂಡ ದೃಶ್ಯಕಲಾ ಗ್ರಂಥಗಳುನ್ನು ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಂಡು ಒಂದೆ ಕಡ್ಡೆ ಸೇರಿಸಿ/ಕ್ರೂಢೀಕರಿಸಿ ವಿವೇಚಿಸಿದ್ದಾಗ ಕಂಡುಕೊಂಡ ಅಂಶಗಳೆಂದರೆ.

**ಚಿತ್ರಕಲಾ ಪ್ರಕಾರಗಳಾದ:** ನೈಜಕಲೆ, ರೇಖಾಚಿತ್ರಕಲೆ, ಅಮೂರ್ತಕಲೆ, ಆಧುನಿಕ ಕಲೆ, ನಿಸರ್ಗಕಲೆ, ಭಾವಚಿತ್ರಕಲೆ, ಸ್ಥಿರಚಿತ್ರಣ ಕಲೆ, ಅಕ್ಷರ ಕಲೆ, ಅಲಂಕಾರಿಕ ಶೈಲಿ, ಸಂಜ್ಞೆ ಮತ್ತು ಸಂಕೇತಗಳು, ತಂತ್ರಜ್ಞಾನ ಕಲೆ ಮುಂತಾದ ಕಲೆಯು ಇಲ್ಲಿನ ಗ್ರಂಥಗಳ ರಕ್ಷಾಪುಟ ಚಿತ್ರಕ್ಕೆ ಬಳಸಿಕೊಂಡಿರುವುದು ಕಂಡುಬಂದಿದೆ.

**ಚಿತ್ರಕಲಾ ಮಾಧ್ಯಮಗಳಾದ:** ಜಲವರ್ಣ, ತೈಲವರ್ಣ, ಲೇಖನಿ ಮತ್ತು ಶಾಯಿ, ಮುದ್ರಣ ಮಾಧ್ಯಮ, ಛಾಯಚಿತ್ರ ಮಾಧ್ಯಮ, ಅಕ್ರಾಲಿಕ್ ಮಾಧ್ಯಮ. ತಂತ್ರಜ್ಞಾನ ಮಾಧ್ಯಮ. ಮತ್ತು ಮಿಶ್ರಣ ಮಾಧ್ಯಮಗಳನ್ನು ಉಪಯೋಗಿಸಿಕೊಂಡಿರುವುದರ ಜೊತೆಗೆ ಏಕವರ್ಣ, ದ್ವಿವರ್ಣ, ಬಹುವರ್ಣ, ಅರೆಛಾಯೆ, ಚಪ್ಪಟೆ ಲೇಪನ ಮುಂತಾದ ವಿಧಾನಗಳನ್ನು ಇಲ್ಲಿನ ರಕ್ಷಾಪುಟ ಚಿತ್ರಕ್ಕೆ ತಂತ್ರವಾಗಿ (Technique) ಬಳಸಿಕೊಂಡಿರುವುದು ತಿಳಿದುಬಂದಿದೆ. ತಾತ್ವಿಕ ಮತ್ತು ತಾಂತ್ರಿಕ ಕೌಶಲ್ಯತೆಯ ಸ್ಪರ್ಶದೊಂದಿಗೆ ಈ ರಕ್ಷಾಪುಟ ಚಿತ್ರ ನಿರ್ಮಾಣವಾಗಿರುವುದು ಕಾಣುತ್ತಿವೆ.

**ಅಧ್ಯಾಯ : ನಾಲ್ಕು – ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಶಿಲ್ಪಕಲಾ ಪುಸ್ತಕಗಳ ಮುಖಪುಟವಿನ್ಯಾಸ ರಾಜ್ಯದ ಗ್ರಂಥ ಪ್ರಕಟಣಾ ವ್ಯವಸಾಯದ ದೃಷ್ಟಿಯಿಂದ ಅದರಲ್ಲೂ ಮುಖ್ಯವಾಗಿ ಸರ್ಕಾರಿ ನಿಯಂತ್ರಣದಡಿಯಲ್ಲಿ ನಡೆಯುವ ಗ್ರಂಥ ಪ್ರಕಾಶನದ ದೃಷ್ಟಿಯಿಂದ ಒಂದು ಮಹತ್ವದ ಮೈಲಿಗಲ್ಲು ಎಂದು ಹೇಳಬಹುದು. ಯಾವ ಕಲಾವಿದರ ಕುರಿತು ಪುಸ್ತಕ ಬರೆಯಲಾಗಿದೆಯೋ ಆ ಪುಸ್ತಕದ ಮುಖಪುಟಕ್ಕೆ ಅದೆ ಕಲಾವಿದರ ಕಲಾಕೃತಿಯನ್ನೇ ಹೊಂದಿಸಿ ವಿನ್ಯಾಸಗೊಂಡಿರುವುದು ಅಥವಾ ಯಾವ ವಿಷಯ ಕುರಿತು ಬರೆಯಲಾಗಿದೆಯೋ ಆ ವಿಷಯದ ಚಿತ್ರವನ್ನೇ ಮುಖಪುಟಕ್ಕೆ ಬಳಸಿಕೊಂಡಿದು ಈ ರೀತಿಯ ಪುಸ್ತಕಗಳ ಮುಖಪುಟ ಒಂದು ಸಾಮಾನ್ಯ ಅಂಶ. ಪ್ರಸ್ತುತ ಅಧ್ಯಯನದ ಮಿತಿಗನುಗುಣವಾಗಿ ೧೯೭೫ ರಿಂದ ೨೦೧೫ ವರೆಗಿನ ಅವಧಿಯ ಶಿಲ್ಪಕಲಾ ವಿಷಯಕ್ಕೆ ಸಂಬಂಧಿಸಿದಂತೆ ಪ್ರಕಟಿತ ಪ್ರಾತಿನಿಧಿಕವಾಗಿ ಕೇಲವು ಗ್ರಂಥಗಳು ಅವಲೋಕಿಸಿದ್ದಾಗ

ಅವುಗಳ ರಕ್ಷಾಪುಟ ವಿನ್ಯಾಸಗಳಿಂದ ಕಂಡುಕೊಂಡ ಅಂಶಗಳೆಂದರೆ, ಕಲಾವಿದರಿಂದ ರಚಿತವಾದ ಶಿಲ್ಪಕೃತಿಯ ಛಾಯಾಚಿತ್ರವನ್ನು ಆಯಾ ಗ್ರಂಥಗಳ ಮುಖಪುಟವಿನ್ಯಾಸಕ್ಕೆ ಬಳಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ರಚನೆಗೊಂಡ ಕನ್ನಡ ಶಿಲ್ಪಕಲಾ ಗ್ರಂಥಗಳ ರಕ್ಷಾಪುಟ ಚಿತ್ರಕಲೆಯಲ್ಲಿ ವರ್ಣವಿನ್ಯಾಸ, ಸಂಯೋಜನಾದೃಷ್ಟಿ, ಸ್ಥಳಾವಕಾಶ ಇತ್ಯಾದಿ ಅಂಶಗಳನ್ನು ದೃಶ್ಯಾತ್ಮಕ ನೆಲೆಯಲ್ಲಿ ಉತ್ತಮವಾಗಿ ರಚನೆಗೊಂಡಿವೆ. ಇಲ್ಲಿ ಗ್ರಂಥಗಳ ರಕ್ಷಾಪುಟ ವಿನ್ಯಾಸಗೊಳಿಸಿದ ಅಥವಾ ಮುಖಪುಟ ವಿನ್ಯಾಸ ಮಾಡಿರುವ ಕಲಾವಿದರ ಹೆಸರು ಮತ್ತು ಅವರ ಕೆಲಸಕಾರ್ಯವು ಗ್ರಂಥಗಳ ಪ್ರಕಟಣೆ ಅಥವಾ ಪುಸ್ತಕ ಮುದ್ರಣದಂತಹ ಕೆಲಸಕಾರ್ಯಗಳಲ್ಲಿ ಗಂಭೀರವಾಗಿ ಪರಿಗಣಿಸಲಿಲ್ಲ ಎಂದು ಸ್ಪಷ್ಟವಾಗಿ ತಿಳಿದು ಬಂದ ಸಂಗತಿಯಾಗಿದೆ. ಮುಖಪುಟದಲ್ಲಿ ವಿವಿಧ ಮಾಧ್ಯಮದಲ್ಲಿ ರಚಿಸಿದ ಶಿಲ್ಪಗಳ, ಶಿಲ್ಪಿಗಳ ಭಾವ ಛಾಯಾಚಿತ್ರಗಳನ್ನು ಬಳಸಿಕೊಂಡಿರುವುದು ಅದರ ಪರಿಣಾಮಗಳು ಹಾಗೂ ಕಲಾತ್ಮಕ ಮೌಲ್ಯ ಇತ್ಯಾದಿ ವಿಷಯಗಳು ಉತ್ತಮವಾಗಿ ಮೂಡಿಬಂದಿವೆ.

**ಅಧ್ಯಾಯ : ಐದು – ನಾಟಕ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ನಾಟಕ ಗ್ರಂಥಗಳ ಮುಖಪುಟ ಚಿತ್ರಕಲೆ ಕರ್ನಾಟಕದಲ್ಲಿ ಹೇರಳವಾಗಿ ಲಭ್ಯವಿದೆ. ಕನ್ನಡ ನಾಟಕ ಗ್ರಂಥಗಳ ಮುಖಪುಟಚಿತ್ರಕಲೆ ಒಂದೆಡೆ ಸೇರಿಸಿ ಅವುಗಳನ್ನು ಒಂದೊಂದು ದಶಕದ ಕಾಲಾವಧಿಯ ಆಧಾರದ ಮೇಲೆ ವಿಂಗಡಿಸಿಕೊಂಡು. ವಿನ್ಯಾಸದ ಹಿನ್ನೆಲೆ ಉದ್ದೇಶ, ಅರ್ಥ,ತಾತ್ವಿಕ, ತಾಂತ್ರಿಕ ಬಗ್ಗೆ ಮತ್ತು ಸಮಕಾಲೀನತೆಗೆ ಅವುಗಳ ಮಹತ್ವ ಮತ್ತು ಸೂಕ್ತತೆ ಕುರಿತು ಮುಖಪುಟ ವಿನ್ಯಾಸದಲ್ಲಿನ ಚಿತ್ರಗಳನ್ನು ಶೋಧಿಸಿದ್ದಾಗ ಈ ಮುಂದಿನಂತೆ ಕಂಡು ಬಂದಿವೆ. ೧೯೦೯ರಿಂದ ೧೯೭೮ರವರಗೆ ಗ್ರಂಥಗಳ ಮುಖಪುಟದಲ್ಲಿ ಅಕ್ಷರಗಳೇ ಮಹತ್ತ್ವದಾಗಿವೆ. ಅಲ್ಲದೆ ೧೯೭೦ರಿಂದ ೨೦೧೫ರ ವರಗೆ ಗ್ರಂಥಗಳ ರಕ್ಷಾಪುಟ ವಿನ್ಯಾಸವು ನೈಜಕಲಾ ಶೈಲಿ ಮಾದರಿಯದಾಗಿವೆ. ೧೯೬೦ರಿಂದ ೧೯೭೦ ದಶಕದ ಅವಧಿಯ ಮುಖಪುಟ ವಿನ್ಯಾಸದಲ್ಲಿ ರೇಖಾಚಿತ್ರಗಳು ದ್ವಿವರ್ಣಗಳಲ್ಲಿ ಚಪ್ಪಟೆ ಲೇಪನ ಕ್ರಮಾನುಸರಿಸಿದ್ದು ಕಂಡುಬಂದಿದೆ ಮತ್ತು ೧೯೭೦ ನಂತರ ಕಾಲಘಟ್ಟದಿಂದ ರಕ್ಷಾಪುಟ ವಿನ್ಯಾಸದಲ್ಲಿಯೂ ನವ್ಯ ಮತ್ತು ಅಮೂರ್ತಕಲಾ ಶೈಲಿ ಮಾದರಿಯನ್ನು ಉಪಯೋಗಿಸಿದ್ದು ಅಧ್ಯಾಯದ ಅವಲೋಕನದಿಂದ ತಿಳಿದುಬಂದಿದೆ.

**ಅಧ್ಯಾಯ : ಆರು – ಜಾನಪದ ಮತ್ತು ಯಕ್ಷಗಾನ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಇಲ್ಲಿನ ವಿಶ್ಲೇಷಣೆಗೆ ಒಳಪಡಿಸಿಕೊಂಡ ಪ್ರಾತಿನಿಧಿಕ ಗ್ರಂಥಗಳ ಮುಖಪುಟವಿನ್ಯಾಸದಿಂದ ಬೆಳಕಿಗೆ ಬಂದ ಅತಿಮುಖ್ಯ ಅಂಶಗಳೆಂದರೆ. ಮುಖಪುಟ ವಿನ್ಯಾಸ ಸಂಯೋಜನಾ ವೈಖರಿ, ಶೀರ್ಷಿಕೆ ಅಕ್ಷರಗಳಲ್ಲಿ ಹೊಸತನ, ವರ್ಣಲೇಪನ ವಿಧಾನ ಹಾಗೂ ಚಿತ್ರಕಲೆಯ ಪ್ರಕಾರಗಳಾದ ರೇಖಾಚಿತ್ರ, ನಿಸರ್ಗಚಿತ್ರ, ನೈಜಚಿತ್ರಕಲೆ, ನವ್ಯ ಮತ್ತು ಅಮೂರ್ತಕಲೆ, ಭಾವಚಿತ್ರ, ಛಾಯಚಿತ್ರ, ಚಿನ್ಹೆ, ಸಂಕೇತಗಳು ಮತ್ತು ಎಪ್ಪತ್ತರ ದಶಕದಲ್ಲಿ ರಕ್ಷಾಪುಟ ವಿನ್ಯಾಸ ಪದ್ಧತಿಯಲ್ಲಾದ ಬದಲಾವಣೆಗಳನ್ನು ಇಲ್ಲಿ ಸ್ಪಷ್ಟವಾಗಿ ಕಂಡುಬಂದಿದೆ. ಇಲ್ಲಿಯೂ (ಶಿಲ್ಪಕಲಾ ಗ್ರಂಥಗಳ) ಸಹ ಕಲಾವಿದರ ಕೆಲಸ ಕಾರ್ಯ ಗ್ರಂಥ ಮುದ್ರಣದಂಥ ಕೆಲಸ

ಕಾರ್ಯಗಳಲ್ಲಿ ಗಂಭೀರವಾಗಿ ಪರಿಗಣಿಸದೆ (೩೯/೭೪=೫೨%) ನಿರ್ಲಕ್ಷಿಸಲಾಗಿದ್ದು ಬೆಳಕಿಗೆ ಬಂದ ಅಂಶಗಳಾಗಿವೆ.

**ಅಧ್ಯಾಯ : ಏಳು – ನೃತ್ಯ ಮತ್ತು ಸಂಗೀತ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ನೃತ್ಯ ಮತ್ತು ಸಂಗೀತ ಗ್ರಂಥಗಳು ಹತ್ತು ಹಲವು ಚಿತ್ರಕಲೆಯ ವಿವಿಧ ಪ್ರಕಾರಗಳನ್ನು ತನ್ನ ಮುಖಪುಟಕ್ಕೆ ಬಳಸಿಕೊಂಡಿದೆ. ಈ ಗ್ರಂಥಗಳ ಮುಖಪುಟದಲ್ಲಿ ಚಿತ್ರಕಲೆ ಬಳಸಿಕೊಂಡ ಉದ್ದೇಶ, ಅರ್ಥ, ಮಹತ್ವ ಮತ್ತು ಅದರ ಪರಿಣಾಮಗಳು ಹಾಗೂ ಅದೊಂದು ಕಲೆ ಹಿನ್ನೆಲೆಯಲ್ಲಿ ಆಯ್ಕೆ ಮಾಡಿಕೊಂಡು ಕಲಾ ಶೈಲಿ ವರ್ಣಗಾರಿಕೆ, ಸಂಯೋಜನೆ, ಕಲಾತ್ಮಕ ಮೌಲ್ಯ ಇತ್ಯಾದಿ ವಿಷಯಗಳು ವಿಮರ್ಶೆಗೆ ಒಳಪಡಿಸಿಕೊಂಡಿದ್ದು ಇವುಗಳಲ್ಲಿ ಒಂಬತ್ತು ಮುಖಪುಟಗಳು ರೇಖಾಚಿತ್ರ, ವರ್ಣರೇಖಾಚಿತ್ರಗಳಿಂದ ರಚಿಸಲ್ಪಟ್ಟಿವೆ, ಹದಿಮೂರು ಗ್ರಂಥಗಳಿಗೆ ಅಕ್ಷರಗಳನ್ನೇ ಪ್ರಧಾನವಾಗಿ ಬಳಸಿಕೊಂಡು ಮುಖಪುಟಗಳು ಮಾಡಿದ್ದಾರೆ, ಹನ್ನೊಂದು ಗ್ರಂಥಗಳಲ್ಲಿ ಪೆನ್ಸಿಲ್, ವರ್ಣ, ಛಾಯಚಿತ್ರಗಳ ಭಾವಚಿತ್ರಗಳು ಬಳಸಿಕೊಂಡಿದ್ದಾರೆ, ಏಳು ಗ್ರಂಥಗಳ ಮುಖಪುಟಗಳು ಸಂಕೇತ, ಚಿನ್ಹೆ, ಹೊಂದಿದ್ದು, ಇನ್ನು ಏಳು ಗ್ರಂಥಗಳ ಮುಖಪುಟಗಳಲ್ಲಿ ನೈಜಶೈಲಿಯ ಚಿತ್ರಗಳು ಕಾಣುತ್ತವೆ. ಹಾಗೂ ಒಂದು ರಕ್ಷಾಪುಟ ಚಿತ್ರಕಲೆಯಲ್ಲಿ ಪದ ಜೋಡಣೆ ಅಥವಾ ಅಕ್ಷರಗಳ ಜೋಡಣೆ, ಅದರ ಬಣ್ಣ, ಅಲಂಕರಣೆ, ಇವುಗಳ ಸಮತೋಲನೆ ಇಲ್ಲದೇ ಹೋದರೆ ಆ ರಕ್ಷಾಪುಟ ಚಿತ್ರಕಲೆ ಕಣ್ಣಿದ್ದೂ ಕಾಣದಂತೆ ವ್ಯರ್ಥವಾಗಿ ಬಿಡುತ್ತದೆ. ಅದೇ ರಕ್ಷಾಪುಟ ಚಿತ್ರಕಲೆಯಲ್ಲಿ ಈ ಎಲ್ಲಾ ಅಂಶಗಳು ಸರಿಯಾಗಿ ಸಮತೋಲನವಾಗಿ ಜೋಡಣೆಯಾದಲ್ಲಿ ನೋಡುಗರನ್ನು ಮಂತ್ರಮುಗ್ದರನ್ನಾಗಿಸುವ ಸಾಮರ್ಥ್ಯ ಹೊಂದಿರುತ್ತದೆ. ಈ ಎಲಾ ಅಂಶಗಳು ಇಲ್ಲಿನ ರಕ್ಷಾಪುಟ ಚಿತ್ರಕಲೆಯಲ್ಲಿ ಗೋಚರಿಸಿವೆ.

**ಅಧ್ಯಾಯ : ಎಂಟು – ಸಾಹಿತ್ಯ ಗ್ರಂಥಗಳ ರಕ್ಷಾಪುಟ ಚಿತ್ರಕಲೆ**

ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ ಗ್ರಂಥಕೃತಿಗಳ ಮುದ್ರಣಗಾರಿಕೆಯ ಕೆಲಸ ಸಮಾನ್ಯವಾಗಿತ್ತು. ಬರಹಗಾರರು,ಪ್ರಕಾಶಕರು, ಮುದ್ರಕವರ್ಗದವರಿಗೆಲ್ಲ ಗ್ರಂಥರಚನೆ ಮತ್ತು ಮುದ್ರಣದಲ್ಲಿ ಆಸಕ್ತಿವಿತ್ತು ವಿನಃ ಪುಸ್ತಕದ ರಕ್ಷಾಪುಟ/ ರಕ್ಷಾಕವಚ/ ಮುಖಪುಟಗಳಲ್ಲಿ ಕಲಾತ್ಮಕತೆಯ ತೋರ್ಪಡಿಕೆ ಮತ್ತು ಗ್ರಂಥಮುಖ ಸೌಂದರ್ಯದ ಕಡೆಗೆ ವಿಶೇಷವಾಗಿ ನೋಡುವ ದೃಷ್ಟಿಕೋನ ಬೆಳೆಯಲ್ಲಿಲ. ಈ ಕಾರಣದಿಂದ ಆ ಕಾಲಘಟದಲ್ಲಿ ಮುದ್ರಣಗೊಂಡ ಪ್ರಾತಿನಿಧಿಕ ಗ್ರಂಥಗಳ ಅವಲೋಕನದಿಂದ ಅವುಗಳ ರಕ್ಷಾಪುಟವಿನ್ಯಾಸವು ಸಾಮಾನ್ಯಶೈಲಿ ಅಥವಾ ಮಾದರಿಯಲ್ಲಿ ನಿರ್ಮಾಣಗೊಂಡಿವೆ. ೧೯೨೫ ರಿಂದ ೧೯೫೦ರ ಅವಧಿಯ ಮುಖಪುಟ ವಿನ್ಯಾಸಗಳಲ್ಲಿ ಗಣನೀಯ ಬದಲಾವಣೆ ಕಂಡುಬರುತ್ತದೆ. ಸ್ವಾತಂತ್ರ್ಯತ್ತೋರ ಕರ್ನಾಟದಲ್ಲಿ ಗ್ರಂಥಗಳ ಮುದ್ರಣ, ಪ್ರಕಾಶನ, ಪ್ರಚಾರ ಇತ್ಯಾದಿ ಸಾಹಿತ್ಯ ಚಟುವಟಿಕೆ ಹೊಸ ಹುರುಪುನಿಂದ ಬೆಳೆಯಲಾರಂಬಿಸಿತ್ತು. ಹೊಸ ಹೊಸ ಮುದ್ರಣ ಯಂತ್ರಗಳು ಬಳಕೆಗೆಬಂದವು. ಇದರಿಂದದಾಗಿ ಮುಖಪುಟ ಚಿತ್ರಕಾರರ, ವಿನ್ಯಾಸಕಾರರ ಸಂಖ್ಯೆ ಹೆಚ್ಚಾಯಿತು. ಸಾಹಿತ್ಯ ಕೃತಿಗಳ ಮುಖಪುಟ/ರಕ್ಷಾಪುಟ ರಚನೆಯಲ್ಲಿ

ಹೊಸ ಮಾದರಿಯ ಕಲೆಗಳು ಹೊರಹೊಮ್ಮಿದವು. ಮತ್ತು ವರ್ಣಗಳ ಬಳಕೆಯಲ್ಲಿ, ತಂತ್ರಗಾರಿಕೆಯಲ್ಲಿ, ಅಕ್ಷರ ಆಕಾರಗಳಲಿ ಹಾಗೂ ಕೃತಿಯ ಅಳತೆ, ಆಕಾರಗಳಲ್ಲಿ ಬದಲಾವಣೆಗಳನ್ನು ಸ್ಪಷ್ಟವಾಗಿ ಮೂಡಲಾರಂಭಿಸಿದ್ದು ಇಲ್ಲಿ ಕಾಣಲಾಗಿದೆ.

**ಅಧ್ಯಾಯ : ಒಂಬತ್ತು – ಸಮಾರೋಪ**

ಪ್ರಸ್ತುತ ಎಲ್ಲಾ ಒಂಬತ್ತು ಅಧ್ಯಾಯಗಳ ಫಲಿತಗಳ ಸಂಕ್ಷಿಪ್ತ ಸಮೀಕ್ಷೆಯನ್ನು ಇಲ್ಲಿ ಮಾಡಲಾಗುವುದು. ಪ್ರತಿಯೊಂದು ಅಧ್ಯಾಯದಲ್ಲಿ ನಡೆದ ಅಧ್ಯಯನದ ಸಾಧಕ–ಬಾಧಕಗಳ ಬಗ್ಗೆ ಈ ಅಧ್ಯಾಯದಲ್ಲಿ ಮತ್ತೊಮ್ಮೆ ಕಾಣಲಾಗಿದ್ದು ಹಾಗೂ ಪ್ರಬಂಧದ ಒಟ್ಟಾರೆ ಫಲಿತಗಳನ್ನು ಇಲ್ಲಿ ಕ್ರೂಢೀಕರಿಸಿ ಸಾರಾಂಶರೂಪದಲ್ಲಿ ತಿಳಿಸಲಾಗಿದೆ.

**ಅಧ್ಯಯನದ ಒಟ್ಟು ಫಲಿತಗಳು**

ರಕ್ಷಾಪುಟ ಚಿತ್ರಕಲೆಯ ವಿನ್ಯಾಸದಲ್ಲಿ ಮೂಲಭೂತ ಅಂಶಗಳು/ವಿನ್ಯಾಸದ ತತ್ವಗಳು ಹೊಂದಿರುವುದು ಅದರ ಸಹಜ ಲಕ್ಷಣವಾಗಿದೆ. ಒಟ್ಟಾರೆ ಇಲ್ಲಿ ಖಚಿತಪಡಿಸಿ ಕೊಳ್ಳಬೇಕಾದದ್ದು ಮುಖಪುಟವಿನ್ಯಾಸದ ಮೂಲಭೂತ ಅಂಶಗಳು/ವಿನ್ಯಾಸದ ತತ್ವಗಳು. ವಿಶೇಷವಾಗಿ ಮುಖಪುಟ ಕಲಾವಿದನು ನೋಡಗರನ್ನು ಹೆಚ್ಚು ಗಲಿಬಿಲಿ ಉಂಟುಮಾಡದೆ; ಗ್ರಂಥದ ಮುಖಪುಟ ವಿನ್ಯಾಸವು ಮೂಲ ತತ್ವಗಳನ್ನು ಅನುಸರಿಸಿಕೊಂಡು ವಿನ್ಯಾಸವನ್ನು ತಯಾರಿಸಬೇಕು. ವಿನ್ಯಾಸದ ತತ್ವಗಳನ್ನೇ ರಕ್ಷಾಪುಟ ವಿನ್ಯಾಸದ ತತ್ವಗಳು ಎಂದು ಈ ಹಿನ್ನೆಲೆಯಲ್ಲಿ ಪರಿಗಣಿಸಬೇಕು ಮತ್ತು ಈ ಅಧ್ಯಯನದಿಂದ ಒಟ್ಟು ಬೆಳಕಿಗೆ ಬಂದ ಅಂಶವು/ಕಂಡುಕೊಂಡ ಸತ್ಯವು ಅದೇಯಾಗಿದೆ. ರಕ್ಷಾಪುಟ ಚಿತ್ರಕಲೆಯ ವಿನ್ಯಾಸದಲ್ಲಿ ಅನುಸರಿಸಿದ ವಿನ್ಯಾಸದ ತತ್ವಗಳು ಇಲ್ಲಿವೆ: ೧. ಐಕ್ಯತೆ/ಒಗ್ಗಟ್ಟು (Unity), ೨. ಸಮಭಾಗ (Proportion), ೩. ಆವರಣ (Layout), ೪. ಅಳತೆ (Scale), ೫. ಸಂಬಂಧ (Relation), ೬. ಸಾಮರಸ್ಯ (Harmony), ೭. ವಿರೋಧ (Discord), ೮. ಭಿನ್ನಭಾವ (Contrast), ೯. ಸ್ಪಷ್ಟತೆ (Emphasis), ೧೦. ಅಧೀನತೆ (Subordination), ೧೧. ವೈವಿಧ್ಯತೆ (Variety), ೧೨. ಸಮತೋಲನ (Balance), ೧೩. ಲಯಬದ್ಧತೆ (Rhythm), ೧೪. ದ್ವೈತಸ್ಥಿತಿ (Duality).

**೧. ಐಕ್ಯತೆ / ಒಗ್ಗಟ್ಟು: (Unity)** : ರಕ್ಷಾಪುಟಚಿತ್ರಕಲೆಯ ಆವರಣದಲ್ಲಿ ಹೊಂದಿಸಲಾದ ಎಲ್ಲಾ ಅಂಗಗಳು ಉತ್ತಮವಾಗಿ ಹೊಂದಿಸಿದರೆ ಅದು ಒಂದು ಒಳ್ಳೆಯ ಪರಿಣಾಮಕಾರಿಯಾದ ವಿನ್ಯಾಸವನ್ನು ರೂಪಿಸಲು ಅನುವಾಗುತ್ತದೆ. ಹಾಗೂ ಒಗ್ಗಟು ಮುಂದುವರಿಕೆಯಿಂದ ಐಕ್ಯಮತವನ್ನೂ ಸಾಧಿಸುತ್ತದೆ. ತುಂಬಾ ವಿಸ್ತೀರ್ಣವಾಗಿ ಹೊಂದಿಸಿದ ಒಗ್ಗಟ್ಟು ಮತ್ತು ತುಂಬಾ ಹತ್ತಿರ ಹೊಂದಿಸಿದ ಒಗ್ಗಟ್ಟು, ಐಕ್ಯತೆಗೆ ಅಡ್ಡಿ ಬರುತ್ತದೆ. ಅವು ರಕ್ಷಾಪುಟ ಚಿತ್ರಕಲೆಯ ವಿನ್ಯಾಸದ ಆವರಣದ ಶೋಭೆಗೆ ದಕ್ಕೆತರುತ್ತದೆ. ರಕ್ಷಾಪುಟಚಿತ್ರಕಲೆಯ ಆವರಣದಲ್ಲಿನ ಪ್ರತಿಯೊಂದು ಭಾಗವು ಇನ್ನೊಂದು ಭಾಗಕ್ಕೆ ಆಧಾರವಾಗಿರುತ್ತದೆ/ ಅಧಾರವಾಗಿರಬೇಕು. ಆಗ ಒಗ್ಗಟ್ಟುನಲ್ಲಿನ ಎಲ್ಲಾ ಅಂಶಗಳು/ಅಂಗಗಳು ಸುಂದರ ಸಂಯೋಜನೆಯ ವಿನ್ಯಾಸವು ಹುಟ್ಟಿಕೊಳ್ಳಲು ಕಾರಣವಾಗುತ್ತದೆ.

ಅಧ್ಯಾಯ-೩ ರಲ್ಲಿನ ಡ್ರಾಯಿಂಗ್ ಶಿಕ್ಷಕ, ಎಸ್.ಜಿ.ವಾಸುದೇವ, ಮಧುಗಿರಿ ರಾಮು ಪುಸ್ತಕಗಳ ಮುಖಪುಟವು ಐಕ್ಯತೆಯ ನಿಯಮ ಹೊಂದಿವೆ. ಹಾಗೂ ಅಧ್ಯಾಯ-೪ ರಲ್ಲಿನ ಸಾತ್ವಿಕ ಶಿಲ್ಪಿ ನಾಗೇಂದ್ರ ಸ್ಥಪತಿ, ಮತ್ತು ಅಧ್ಯಾಯ-೫ ರಲ್ಲಿನ ನಾಲ್ಕು ಏಕಾಂಕ ನಾಟಕಗಳು, ರಾಣಿ ರತ್ನಾಜಿ, ಮಹಾಶಿಲ್ಪಿ, ಗ್ರಾಮ ಸುಧಾರಣೆ, ಮಕ್ಕಳ ಮೂರು ನಾಟಕಗಳು ಎಂಬ ಕೃತಿಯ ಮುಖಪುಟ ಸಹ ಐಕ್ಯತೆ (Unity) ಯನ್ನು ಹೊಂದಿವೆ. ಅಧ್ಯಾಯ-೬ ರಲ್ಲಿನ ಮುಖಪುಟ ವಿನ್ಯಾಸದಲ್ಲಿಯೂ ಈ ನಿಯಮ ಅನುಸರಿಸಿದ್ದಾರೆ. ಇಲ್ಲಿನ ಗ್ರಂಥಗಳಾದ ಬಟ್ಟಲ ತುಂಬಾ ಬಾರೀಕಾಯಿ, ಬಂಗಾರ ಕೂದಲ ಜೈರಾಣಿ, ಗಾದೆಯ ಕಥೆಗಳು, ಮಹಿಳಾ ಜಾನಪದ, ಜಾನಪದ ಅನ್ವಯಿಕತೆ ಪುಸ್ತಕಗಳಲ್ಲಿ ಇದನ್ನು ಕಾಣಬಹುದು. ಅಧ್ಯಾಯ-೭ ರಲ್ಲಿ ದಶರೂಪಕ, ಕನಕದಾಸ ಕೀರ್ತನ ಸರಾವಳಿ, ವಿಜಯದಾಸರ ಹಾಡುಗಳು, ಸಂಗೀತ ವಾದ್ಯಗಳು, ಸಂಗ್ರಹ ಚೂಡಾಮಣಿ, ನಾದ ವಿಜ್ಞಾನ ಸಂಪದ ಈ ಗ್ರಂಥಗಳ ಮುಖಪುಟದಲ್ಲಿ ಹಾಗೂಅಧ್ಯಾಯ-೮ ರಲ್ಲಿನ ಕ್ರಾಂತಿಯ ದೀಪ, ಕನ್ನಡ ಸಾಹಿತ್ಯ ಚಿತ್ರಗಳು, ಆಜಾದ್ ಹಿಂದ್, ಜೋಗದ ಝೋಕು, ಗ್ರೀಕ್ ವೀರರು, ನಾವು ನಮ್ಮ ರಾಜ್ಯಾಡಳಿತ, ಶ್ರೀ ಗೋಕರ್ಣ ಮಹಿಮಾದರ್ಶ, ಬೇಟೆ ನೆನಪು, ನೆಲದ ತಳಮಳ ಈ ಎಲ್ಲ ರಕ್ಷಾಪುಟವಿನ್ಯಾಸಗಳು ಐಕ್ಯತೆಯ (Unity) ಅಂಶಗಳನ್ನು ಅನುಸರಿಸಿ ಸುಂದರವಾಗಿ ಸಂಯೋಜನೆಯ ಹೊಂದಿರುವುದು ಕಂಡುಬಂದಿದೆ.

೨. ಸಮಭಾಗ: (**Proportion**) : ಸಾಧಾರಣವಾಗಿ ಮುಖಪುಟ ಸಮಚತುಷ್ಕೋನವಾದ ಸ್ಥಳದಲ್ಲಿ ಜೋಡಿಸಲಾಗುತ್ತದೆ, ಸಮಾನವಿಲ್ಲದ ಕಡೆಯಿಂದ ನೋಡಿದರೂ ಸಮಚತುಷ್ಕೋನದ ಆಕೃತಿಯು ಮೆಚ್ಚಿಸುವುದು ಈ ಸ್ವಭಾವದ ಉದ್ದೇಶ. ಈ ಪದ್ಧತಿಯು ಆಕಾರಗಳು ಸಾಕಷ್ಟು ಪುಸ್ತಕಗಳು, ಲೆಟರ್ ಹೆಡ್‌ಗಳು ಮತ್ತು ಮ್ಯಾಗಜೀನ್‌ಗಳು, ಸುದ್ದಿ ಪತ್ರಿಕೆಗಳು ಬಹಳಷ್ಟು ಚಿತ್ರಗಳಲ್ಲಿ ಮತ್ತು ಉಪ ಪದಗಳಲ್ಲಿ ಸಾಮಾನ್ಯವಾಗಿ ಬಳಕೆಯಾಗುತ್ತದೆ. ನಾವು ಒಂದು ಅಡ್ಡ ಮತ್ತು ಲಂಬ ರೇಖೆಯನ್ನು ಸರಿಯಾಗಿ ಒಂದೇ ಸಮ ಇರುವ ಅಳತೆಯನ್ನು ಮತ್ತು ಸ್ಥಳವನ್ನು ಒಂದುಗೂಡಿಸಿದರೆ, ಲಂಬ ರೇಖೆಯು ತುಂಬಾ ದೊಡ್ಡದಾಗಿ ಗೋಚರಿಸುತ್ತದೆ ಯಥಾವತ್ತಾದ ಚೌಕವು ಅಗಲವಾದ ಮತ್ತು ಪೂರ್ಣ ಚಚ್ಚೌಕದ ಸರಿಯಾಗಿ ಮಧ್ಯದಲ್ಲಿ ಎತ್ತರವಾಗಿ ಗೋಚರಿಸುತ್ತದೆ. ಈ ರೀತಿ ರಕ್ಷಾಪುಟಚಿತ್ರಕಲೆಯ ಆವರಣದಲ್ಲಿ ಉಪಯೋಗಿಸಿದ ಎಲ್ಲ ಅಂಗಗಳು (Elements) ದೃಷ್ಟಿಗೆ ತಕ್ಕಂತೆ ಸಮವಾಗಿರುವಂತೆ ವಿನ್ಯಾಸಮಾಡಿರುತ್ತಾರೆ.

ಈ ಮೇಲಿನ ಅಂಶವು ಅಧ್ಯಾಯ-೩ ರಲ್ಲಿನ ಕರ್ನಾಟಕದ ಚಿತ್ರಕಲೆ, ಎಸ್.ಎನ್ ಸ್ವಾಮಿ, ಪಾವೆಂಜೆ ಗೋಪಾಲಕೃಷ್ಣಯ್ಯ, ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಬಾನಯ್ಯ ಗರುಡಾದ್ರಿ, ಎಫ್ ಎಂ ಸೂಫಿ. ಮತ್ತು ಅಧ್ಯಾಯ-೪ ರಲ್ಲಿನ ಹೆಚ್. ವೆಂಕಪ್ಪ, ಶಿಲ್ಪಿ ಸಿಂಗಣ್ಣಾಚಾರ್ಯ, ದೇವಲಕುಂದ ವಾದಿರಾಜ್, ಹಾಗೂ ಅಧ್ಯಾಯ-೫ ರಲ್ಲಿನ ಬಾಲ ಕಬೀರ, ಮುಕ್ತದ್ವಾರ, ಜಾನಕಿ ಪರಿಣಯ ನಾಟಕಂ ಮತ್ತು ಅಧ್ಯಾಯ-೬ ರಲ್ಲಿನ ಕೌಜಲಗಿ ನಿಂಗವ್ವ, ಗಾದೆಯ ಕಥೆಗಳು, ದೇವುಡು, ಗಾದೆಗಳು, ಅಂಚೆ ಜಾನಪದ. ಹಾಗೂ ಅಧ್ಯಾಯ-೭ ರಲ್ಲಿನ ಗಾನಶಾಸ್ತ್ರ ಪ್ರಕಾಶಿಕೆ, ಪುರಂದರದಾಸರ ನವರತ್ನ ಮಾಲೆ, ಗಮಕ ಕಲೆ, ತತ್ತ್ವತೀರ್ಥ, ಸ್ವರಜತಿ, ಸಂಗ್ರಹ ಚೂಡಾಮಣಿ, ಮೈಸೂರು ಸದಾಶಿವರಾಯ, ಕರ್ನಾಟಕ

ನೃತ್ಯರಂಗ ನೃತ್ಯಶಿಲ್ಪಗಳು, ಮೈಸೂರು ಅನಂತಸ್ವಾಮಿ, ಗಮಕ ದಿಗ್ಗಜಗಳು, ಕರ್ನಾಟಕ ಕಲಾವಿದರ ಮಾಲಿಕೆಯ ಮುಖಪುಟಗಳು ಮತ್ತು ಅಧ್ಯಾಯ-೮ ರಲ್ಲಿನ ಕೋನಯ್ಯ ವಿರಚಿತ ಗಯಚರಿತ್ರೆ, ಅಕ್ಬರ್ ಚಕ್ರವರ್ತಿಯ ಚರಿತ್ರೆ, ಆರೋಗ್ಯ ಭಾಗ್ಯಕ್ಕೆ ವ್ಯಾಯಾಮ, ಬುದ್ಧನ ನಾಡಿನಲ್ಲಿ ಎಂಬ ಕೃತಿಗಳ ರಕ್ಷಾಪುಟಚಿತ್ರಕಲೆಯ ವಿನ್ಯಾಸವು ಸಮಭಾಗ (Proportion) ನಿಯಮದ ಹಿನ್ನೆಲೆಯಲ್ಲಿ ರಚನೆಗೊಂಡಿದ್ದು ಸ್ಪಷ್ಟವಾಗಿ ಕಂಡುಬಂದಿದೆ.

೩. **ಆವರಣ (Layout)** : ಒಂದು ಪರಿಪೂರ್ಣ ರಕ್ಷಾಪುಟಚಿತ್ರದ ಮೇಲೆ ಚಿನ್ಹೆ ಅಥವಾ ಅಕ್ಷರಗಳ ಒಗ್ಗಟ್ಟಿನಿಂದ ಜೋಡಿಸಿ ಹೊಂದಿಸಿದಾಗ ರಕ್ಷಾಪುಟಚಿತ್ರ ಎಷ್ಟು ಸಾಧ್ಯವೋ ಅಷ್ಟು ಪರಿಣಾಮ ಅಪೇಕ್ಷಿಸಿದಂತೆ ಪ್ರತಿಫಲವು ಗೋಚರಿಸುತ್ತದೆ. ರಕ್ಷಾಪುಟಚಿತ್ರ ಅಗತ್ಯವಾಗಿ ತುಂಬಾ ಸರಳವಾಗಿ ಕಾಣಲು ಅಥವಾ ಆ ಕೃತಿ ಹೆಸರು ಓದುಗರ ಮನಸ್ಸಿನಲ್ಲಿ ಉಳಿಯಲು ದೃಷ್ಟಾಂತದಲ್ಲಿ ಸ್ಪಷ್ಟತೆಯು ಮತ್ತು ಸಂಕ್ಷಿಪ್ತ ವಿವರಣೆ ಇರುವಂತೆ ಕಲಾವಿದ ನೋಡಿಕೊಳ್ಳುತ್ತಾನೆ. ಕೊನೆಯಲ್ಲಿ ನೆನಪಿಡಬೇಕಾದ ವಿಷಯ ಮುಖಪುಟದ ಕಟ್ಟಕಡೆಯ ಸಂಕಲ್ಪವೇನೆಂದರೆ ಮಾರಾಟಮಾಡುವುದು.

ಅಧ್ಯಾಯ-೩ ರಲ್ಲಿ ಕಲಾವಿದರ ವಿಳಾಸ ಕೈಪಿಡಿ, ಮತ್ತು ಅಧ್ಯಾಯ-೪ ರಲ್ಲಿ ಶಿಲ್ಪಬ್ರಹ್ಮ ಸಿ.ಪರಮೇಶ್ವರಾಚಾರ್ಯ, ಶ್ರೀ ತಿಪ್ಪಾಜಿ ಚಿತ್ರಗಾರ ರೇಖಾಚಿತ್ರಗಳು ಹಾಗೂ ಅಧ್ಯಾಯ-೫ ರಲ್ಲಿ ಸಮಾಧಿ, ವಿ ಟಿ ಯಲ್ಲಿ ಪ್ರಣಯಿಗಳು, ತಿರುಗು ಮುರುಗು, ಒಂದು ಲೋಕಕಥೆ, ಘೋಟೋ ಅವಾಂತರ, ಅಗೋಚರ ಮೀರಿದ ಮಡದಿ, ಗಾಂಧಾರಿ ಮತ್ತು ಅಧ್ಯಾಯ-೬ ರಲ್ಲಿ ಲಂಬಾಣಿ ಜನಪದ ಕಥೆಗಳು, ಲಾವಣಿಕಾರರು, ಯಕ್ಷಗಾನ, ಜನಪದ ವರ್ಷ, ಮನದಾಳದ ಕನಸುಗಳು, ಬೆಲ್ಲದಾರಿತಿಯ ಬೆಳೆಗೇನು, ಕೃಷಿ ಜಾನಪದ ಮತ್ತು ಮಹಿಳೆ, ಜನಪದ ಕಲಾವಿದರು ಹಾಗೂ ಅಧ್ಯಾಯ-೭ ರಲ್ಲಿ ದಶರೂಪಕ, ಕರ್ನಾಟಕ ಸಂಗೀತ ರತ್ನಗಳು, ಮಕ್ಕಳಿಗೆ ನೃತ್ಯಕಲೆ, ನಾಟ್ಯಕವಿರಾಜ, ಸಂಗೀತ ವಾದ್ಯಗಳು, ಗಾನಯೋಗಿ ಪಂಚಾಕ್ಷರಿ ಗವಾಯಿಗಳು, ಕಥಕ್ ಪ್ರವೇಶಿಕ, ನೃತ್ಯ ದರ್ಪಣ ಮತ್ತು ಅಧ್ಯಾಯ-೮ ರಲ್ಲಿ ಚೀನಾ ದೇಶದ ಬೌದ್ಧ ಯಾತ್ರಿಕರು, ತುಟಿ ಮೀರಿದುದು, ಹಳ್ಳಿಯ ಹಾಡುಗಳು, ಕಡಲ ಕರೆಯ ಚಿತ್ರಗಳು, ಚಂದ್ರಲೋಕ ಯಾತ್ರೆ ದೇವರು. ಈ ಎಲ್ಲ ರಕ್ಷಾಪುಟವಿನ್ಯಾಸಗಳು ಆವರಣ (Layout) ಅಂಶಗಳನ್ನು ಅನುಸರಿಸಿ ಎಷ್ಟು ಸಾಧ್ಯವೋ ಅಷ್ಟು ಪರಿಣಾಮ ಅಪೇಕ್ಷಿಸಿದಂತೆ ಪ್ರತಿಫಲವು ಇಲ್ಲಿ ಗೋಚರಿಸುತ್ತದೆ.

೪. **ಅಳತೆ (Scale)** : ಅಳತೆ ಎಂದರೆ ಏರು ಪೇರು ಅಂದರೆ ಮೇಲೆ, ಕೆಳಗೆ, ಅಗಲ, ಉದ್ದದ ಸರಾಸರಿಯಾಗಿ ಪ್ರಮಾಣ ದೃಶ್ಯವನ್ನು ನೋಡುವ ಒಂದು ಆಕಾರದಲ್ಲಿ ಇರಬೇಕಾದ ಅಂಶ. ರಕ್ಷಾಪುಟಚಿತ್ರವು ಅದರ ಅಳತೆ ಚಿಕ್ಕದು ಮತ್ತು ದೊಡ್ಡದು ಮಾಡಬೇಕಾಗುವುದು. ನಾವು ನೋಡುವ ಮುಖಪುಟದಲ್ಲಿ ಅದರ ಚಿತ್ರ ರೂಪಿಸಿದಾಗ ಅದಕ್ಕೆ ಸಂಬಂಧಿಸಿದಂತೆ ಬೇಕಾಗುವ ಸೂಕ್ತ ಅಳತೆ ಬಹಳ ಮುಖ್ಯವಾಗಿರುತ್ತದೆ. ಮುಖಪುಟದ ವಿನ್ಯಾಸವನ್ನು ನೋಡುವಾಗ ವಸ್ತುಗಳು ಅಥವಾ ಅವಕಾಶ / ಸ್ಥಳ ಎಂಬುದರಲ್ಲಿ ಬದಲಾವಣೆಯಾಗಬಹುದು ಮತ್ತು ಬಣ್ಣಗಳ ಸಹಾಯದಿಂದ ಬೇಕಾದ ಅಳತೆಯಲ್ಲಿ ವಿನ್ಯಾಸವು ರಚನೆ ಮಾಡಲಾಗುತ್ತದೆ. ಅಳತೆ/ಪ್ರಮಾಣ ಈ ನಿಯಮದಡಿಯಲ್ಲಿ ರಚನೆಗೊಂಡ ರಕ್ಷಾಪುಟ ವಿನ್ಯಾಸಗಳೆಂದರೆ:

ಅಧ್ಯಾಯ-೩ ರಲ್ಲಿ ಎಂ ವಿ ಮಿಣಜಿಗಿ, ಎ.ಸಿ.ಹೆಚ್ ಆಚಾರ್ಯ, ಪಿ. ಸುಬ್ಬರಾವ್, ಎಂ ಆರ್ ಬಾಳೆಕಾಯಿ, ಸಿ ಚಂದ್ರಶೇಖರ್, ಮುಖಗಳೊಂದಿಗೆ ಮುಖಾಮುಖಿ, ಮತ್ತು ಅಧ್ಯಾಯ-೪ ರಲ್ಲಿ ಶಿಲ್ಪಕಲಾ ಆರಾಧಕರು, ಹಾಗೂ ಅಧ್ಯಾಯ-೫ ರಲ್ಲಿ ಕ್ಷ-ಕಿರಣ, ಚಾರ್ವಾಕ, ವಾಸನಾಕಾಂಡ, ಪ್ರಶಸ್ತಿ, ಮತ್ತು ಅಧ್ಯಾಯ-೬ ರಲ್ಲಿ ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು, ಪ್ರಶಸ್ತಿ ಪಡೆದ ಮಹನೀಯರು, ಸಾಲು ಸಂಪಿಗೆ ನೆರಳು, ಜನಪದ ನಾಯಕತ್ವ, ಜಾಗತೀಕರಣ ಮತ್ತು ಜನಪದ. ಹಾಗೂ ಅಧ್ಯಾಯ-೭ ರಲ್ಲಿ ಭರತಾರ್ಥ ದರ್ಶನ, ಕಥಾ ಕೀರ್ತನ ಕಲೆ, ಸುಗಮ ಸಂಗೀತ ಒಂದು ಸಿಂಹಾವಲೋಕನ, ಭರತನ ಸಂಗೀತ ಸಿದ್ಧಾಂತ. ಮತ್ತು ಅಧ್ಯಾಯ-೮ ರಲ್ಲಿ ಕಾನೂರು ಸುಬ್ಬಮ್ಮ ಹೆಗ್ಗಡಿತಿ, ಚಂದ್ರನನ್ನು ತಂದರು, ದಕ್ಷಿಣ ಭಾರತದ ದೇವಾಲಯಗಳು, ನಾನು ಕಂಡ ರಶಿಯಾ, ಮನದ ತೆರೆಯ ಮೇಲೆ, ಎಂದು ಸೂಚಿಸಿಬಹುದು.

**೫. ಸಂಬಂಧ (Relation) :** ಒಂದು ಒಳ್ಳೆಯ ರಕ್ಷಾಪುಟ ಚಿತ್ರವಿನ್ಯಾಸದ ಸಂಬಂಧವು ಯಾವಾಗಲೂ ಸುಂದರವಾಗಿ ಕಲೆಯ ಜೊತೆಗೆ ಪ್ರಮಾಣವಾಗಿರುತ್ತದೆ. ಎಲ್ಲಾ ವಸ್ತುಗಳು ಅಥವಾ ಚಿತ್ರಗಳಿಗೆ ಈ ವಿನ್ಯಾಸ ಐಕ್ಯತೆಯಾಗಿ ಸಂಬಂಧಿಸಿದಂತೆ ಹೋಲುತ್ತದೆ. ರಕ್ಷಾಪುಟ ಚಿತ್ರ ಆವರಣದಲ್ಲಿನ ಪ್ರತಿಯೊಂದು ಅಂಶವು/ಭಾಗವು (ಶೀರ್ಷಿಕೆ, ಲೇಖಕರ ಹೆಸರು, ಪ್ರಕಾಶಕರು, ಮುದ್ರಕರು, ಮುದ್ರಣ ವರ್ಷ ಇತ್ಯಾದಿ) ವಿನ್ಯಾಸಕ್ಕೆ ಸ್ಪಷ್ಟ ಸಂಬಂಧ ಇಟ್ಟುಕೊಳ್ಳುವುದರಿಂದ ಇದೊಂದು ಸುಂದರವಾದ ಕುಟುಂಬದಂತೆ ಈ ರಕ್ಷಾಪುಟ ಚಿತ್ರವಿನ್ಯಾಸವು ಗೋಚರಿಸುತ್ತದೆ.

ಅವುಗಳೆಂದರೆ ಅಧ್ಯಾಯ-೩ ರಲ್ಲಿ ಜನಪದ ಕಲೆ, ಅಬ್‌ಸ್ಟ್ರಾಕ್ಟ್ ಕಲೆ, ನೋಟ ಪಲ್ಲಟ, ಬಿದಿರಿ ಚಿತ್ರಕಲೆ, ನಾಗಾರಾಧನೆ ಮತ್ತು ಚಿತ್ರಕಲೆ, ಶೀಗಿ ಚಿತ್ರಕಲೆ, ಮುಖಗಳೊಂದಿಗೆ ಮುಖಾಮುಖಿ, ಚಿತ್ರಕಲಾ ಪ್ರವೇಶ ಹಾಗೂ ಅಧ್ಯಾಯ-೪ ರಲ್ಲಿ ಜಕಣಾಚಾರ್ಯ, ಸುವರ್ಣ ಕರ್ನಾಟಕ ಶಿಲ್ಪಕಲಾ ಮಾಲೆಯ ಮುಖಪುಟಗಳು, ಮತ್ತು ಅಧ್ಯಾಯ-೫ ರಲ್ಲಿ ಗ್ರಾಮ ಸುಧಾರಣೆ, ಅಕ್ಕಮಹಾದೇವಿ, ನಾಲ್ಕೆ ನಾಲ್ಕು, ತಿರುಗುಮುರುಗು, ಮಿಲನ, ಹರಕೆಯ ಕುರಿ, ಮಕ್ಕಳ ರಂಗಭೂಮಿ, ರಂಗಭೂಮಿ ಮತ್ತು ಮಹಿಳೆ ಹಾಗೂ ಅಧ್ಯಾಯ-೬ ರಲ್ಲಿ ಭಾರತದ ಜಾನಪದ ಕಥೆಗಳು, ಜಾಂಬವತಿ ಕಲ್ಯಾಣ, ಜಾನಪದ ತಂತ್ರಜ್ಞಾನ, ಹತ್ತು ಮಂದ್ಯಾಗ ಹಾಡೇನ, ಮತ್ತು ಅಧ್ಯಾಯ-೭ ರಲ್ಲಿ ಕರ್ನಾಟಕ ಸಂಗೀತ ದರ್ಪಣ, ವಾದ್ಯಾಲಾಪ, ಬೆಳ್ಳಿ ಗೆರೆ, ಕನ್ನಡದ ನೃತ್ಯ ನಾಟಕಗಳು ಹಾಗೂ ಅಧ್ಯಾಯ-೮ ರಲ್ಲಿ ನೀನೂ ವಿಜ್ಞಾನಿಯಾಗು, ಜನತಾ ಸರ್ಕಾರ, ಮಹಾಶ್ವೇತ, ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ಮಹಿಳಾ ಆತ್ಮ ಕಥೆಗಳು:ಅನುಸಂಧಾನ ಎಂಬ ಇತ್ಯಾದಿ ಗ್ರಂಥಗಳನ್ನು ಉಲ್ಲೇಖಿಸಲಾಗಿದೆ.

**೬. ಸಾಮರಸ್ಯ (Harmony) :** ಒಂದು ರಕ್ಷಾಪುಟಚಿತ್ರ ಕೃತಿಯಲ್ಲಿನ ಎಲ್ಲಾ ರೀತಿಯ ಆಕಾರಗಳ ಸಂಬಂಧಗಳು ತುಂಬಾ ಫಲಪ್ರದವಾಗಿ ಮತ್ತು ನೆಮ್ಮದಿಯ ವಾತಾವರಣವನ್ನು ಉಂಟುಮಾಡುವುದಕ್ಕೆ ಸಾಮರಸ್ಯ ಎನ್ನುತ್ತೇವೆ. ಈ ಬೆಳವಣಿಗೆಯು ಆಕಾರ, ಬಣ್ಣ, ಅಳತೆ ಮತ್ತು ವೈವಿಧ್ಯತೆಯು ಮುಖಪುಟ ರಚನೆಯಲ್ಲಿ ಅಡಗಿರುತ್ತದೆ. ಈ ಎಲ್ಲವನ್ನೂ ಸಾಮರಸ್ಯವಾಗಿ ಜೋಡಿಸಿದಾಗ ಮಾತ್ರವೇ ಒಂದು ರಕ್ಷಾಪುಟಚಿತ್ರ

ರಚನೆಯು ಫಲಪ್ರಧಾನವಾಗುತ್ತದೆ. ಅಲ್ಲದೇ ಇಂತಹ ರಕ್ಷಾಪುಟಚಿತ್ರ ವಿನ್ಯಾಸವು ಆ ಕೃತಿಯನ್ನು ವೈವಿಧ್ಯತೆ ಮತ್ತು ಪ್ರಧಾನತೆ ಕಡೆಗೆ ಕೊಂಡೊಯ್ಯುತ್ತದೆ.

ಇವುಗಳನ್ನು ಅಧ್ಯಾಯ-೩ ರಲ್ಲಿ ಚಿತ್ರಕಲೆ ಮತ್ತು ಸಂವಹನ, ಎಸ್.ಎಸ್. ಕುಕ್ಕೆ, ಜಿ.ಎಸ್.ಶೆಣೈ, ಶಂಕರಗೌಡ ಬೆಟ್ಟದೂರ, ಎಂ.ಟಿ ಭೋಪಲೆ ಮತ್ತು ಅಧ್ಯಾಯ-೪ ರಲ್ಲಿ ವರಶಿಲ್ಪಿ ಗುಂಡಪ್ಪ ಮಾಯಾಚಾರ್ಯ, ಲೋಹಶಿಲ್ಪಿ, ಎನ್ ಪಿ ಶ್ರೀನಿವಾಸಚಾರ್ಯ ಹಾಗೂ ಅಧ್ಯಾಯ-೫ ರಲ್ಲಿ ಅಮೃತ ವರ್ಷ, ಬಣ್ಣದ ಪ್ರಪಂಚ, ತಿರುಕನ ಕನಸು, ಸಂಪನ್ನ ಸಮಾಜ, ಒಗ್ಗಾಟಾದಳು ಹೆಣ್ಣು, ದಾಹ ನಾಟಕ. ಮತ್ತು ಅಧ್ಯಾಯ-೬ ರಲ್ಲಿ ಎಂ.ಎಸ್. ಸುಂಕಾಪುರ, ಜಾನಪದ-೧೯೯೩, ಕಲಚ್ಚಿನ ಗಾದೆಗಳು, ಪುರದ ಪುಣ್ಯ, ಜಾನಪದ ಸಮಾಚಾರ, ನಮ್ಮ ಮುಸ್ಲಿಂ ಹಿನ್ನೆಲೆಯ ಜಾನಪದ ಕಥೆಗಳು, ಹಾಗೂ ಅಧ್ಯಾಯ-೭ ರಲ್ಲಿ ಕರ್ನಾಟಕದ ಸಂಗೀತ ರತ್ನಗಳು, ಕರ್ನಾಟಕದ ಸಂಗೀತ ದರ್ಪಣ, ಸಂಗೀತ ದರ್ಪಣ, ನಾದ ಲಹರಿ ಮತ್ತು ಅಧ್ಯಾಯ-೮ ರಲ್ಲಿ ಗಣೇಶನ ಮದುವೆ, ಕನ್ನಡ ಸಾಹಿತ್ಯದಲ್ಲಿ ಕಾಳಿದಾಸ, ಮಕ್ಕಳ ಸಾಹಿತ್ಯ ಕಥೆಗಳು, ಮಧುರಚೆನ್ನ ಬದುಕು-ಬರಹ-ಚಿಂತನೆ, ಹಾ.ಮಾ.ನಾ. ಈ ಗ್ರಂಥಗಳ ಮುಖಪುಟಗಳಲ್ಲಿ ಕಂಡುಕೊಳ್ಳಲಾಗಿದೆ.

**೭. ವಿರೋಧ (Discord)** : ಮುಖಪುಟ ಆವರಣದಲ್ಲಿ ಜೋಡಿಸಲಾದ ಪ್ರತಿಯೊಂದು ಅಂಶಗಳು/ಅಂಗಗಳು ತನ್ನದೇ ಆದ ಅಸ್ಥಿತ್ವವನ್ನು ಹೊಂದಿರಬೇಕು ಇಲ್ಲವಾದಲ್ಲಿ ಆ ಮುಖಪುಟ ಆವರಣವು ನೋಡುಗರನ್ನು ಗೋಂದಲಕ್ಕೀಡು ಮಾಡಬಹುದಾದ ಸಾಧ್ಯತೆಗಳಿವೆ. ಆದ್ದರಿಂದ ಮುಖಪುಟ ಅವರಣದಲ್ಲಿನ ತಲೆಬರಹವೇ ಆಗಿರಬಹುದು, ಲೇಖಕರ ಹೆಸರು ಅಥವಾ ಮುದ್ರಕರ ಹೆಸರಾಗಿರಬಹುದು ಇದು ಒಂದಕ್ಕಿಂತ ಒಂದು ಭಿನ್ನವಾಗಿದ್ದಾಗ ಮಾತ್ರ ಅವುಗಳಿಗೆ ಸಂದಬೇಕಾದ ಬೆಲೆ/ಮಹತ್ವ ಸಲ್ಲುತ್ತದೆ.

ಈ ಆಧಾರದ ಮೇಲೆ ರಚನೆಗೊಂಡ ರಕ್ಷಾಪುಟಗಳು ಅಧ್ಯಾಯ-೩ ರಲ್ಲಿ ವೈ ಸುಬ್ರಹ್ಮಣ್ಯರಾಜು, ಯೂಸೂಫ್ ಅರಕ್ಕಲ್, ಕೆ.ಟಿ.ಶಿವಪ್ರಸಾದ, ಎಂ.ಬಿ.ಪಾಟೀಲ್, ಜಿ.ವೈ.ಹುಬ್ಬೀಕರ್ ಮತ್ತು ಅಧ್ಯಾಯ-೪ ರಲ್ಲಿ ಭಾರತೀಯ ಶಿಲ್ಪಕಲೆ, ಆರ್.ಎಸ್.ಎನ್, ನಮ್ಮ ಧ್ವನಿ ಹಾಗೂ ಅಧ್ಯಾಯ-೫ ರಲ್ಲಿ ಬೆಳ್ಳಿ ಭರಣಿ, ಪ್ರೇಮವೆಂದರೆ, ಧರ್ಮಭೂಮಿ, ನಿರ್ಧಾರ, ಮತ್ತು ಅಧ್ಯಾಯ-೬ ರಲ್ಲಿ ಜಾನಪದ ವೈದ್ಯ, ಜಾನಪದ ಸಿದ್ದಾಂತಗಳು, ಹಾಗೂ ಅಧ್ಯಾಯ-೭ ರಲ್ಲಿ ಸಂಗೀತಶಾಸ್ತ್ರ ಪರಿಚಯ, ಸುಗಮ ಸಂಗೀತ ಮತ್ತು ಅಧ್ಯಾಯ-೮ ರಲ್ಲಿ ಜೀವದಾತ ಸೂರ್ಯ, ಜೀವಂತ ಭೂಮಿ, ಉದಯ ರಾಗ ಇತ್ಯಾದಿ ಗ್ರಂಥಗಳಲ್ಲಿ ಕಂಡುಕೊಳ್ಳಲಾಗಿದೆ.

**೮. ಭಿನ್ನಭಾವ (Contrast)** : ರಕ್ಷಾಪುಟಚಿತ್ರಕಲೆಯ ರಚನೆಯಲ್ಲಿ ಭಿನ್ನಭಾವದ ಪ್ರಭಾವವು ಕೂಡ ಇರಬೇಕಾಗುತ್ತದೆ. ಕಾರಣ ಒಂದು ಮುಖಪುಟವಿನ್ಯಾಸದಲ್ಲಿ ಅಥವಾ ಕೃತಿಯಲ್ಲಿ ವೈವಿಧ್ಯತೆಯನ್ನು ತೋರಿಸಲು ಈ ಭಿನ್ನಭಾವದ ಅವಶ್ಯಕತೆ ತುಂಬಾ ಇರುತ್ತದೆ. ಏಕೆಂದರೆ ಎರಡು ಗುಣಗಳನ್ನು ತೋರಿಸಲು ಅಥವಾ ಎರಡು ಛಾಯೆಗಳನ್ನು ತೋರಿಸಲು ಹಾಗೂ ಒಂದು ಮುಖಪುಟ ವಿನ್ಯಾಸದಲ್ಲಿ ಒಗ್ಗಟ್ಟು ಮತ್ತು ಸಾಮರಸ್ಯವನ್ನು ತರಲು ಈ ಭಿನ್ನಭಾವದ ಗುಣಗಳನ್ನು ತೋರಿಸುವುದು ಅನಿವಾರ್ಯವಾಗಿರುತ್ತದೆ.

